ಸ್ವಸ್ತಿಶ್ರೀ ೧೦೮ ಅತಿಬಲ ಗ್ರಂಥಮಾಲಾ ಪುಷ್ಪ ೭೪

ಶ್ರೀ ಯೋಗೀಂದುದೇವ ವಿರಚಿತ

# ಯೋಗಸಾರ



ಹಿಂದೀಭಾಷಾ ಟೀಕಾಕಾರರು :

ಶ್ರೀ ಪೂಜ್ಯ ಬ್ರಹ್ಮಚಾರಿ ಶೀತಲಪ್ರಸಾದ್‌ಜೀಯವರು

ಕನ್ನಡ ಅನುವಾದಕರು :

ಶ್ರೀ ಶ್ರೀಕಾಂತ ಭುಜಬಲಿ ಶಾಸ್ತ್ರಿಗಳು

ಪ್ರಕಾಶಕರು :

ಶ್ರೀ ಬ್ರಹ್ಮಚಾರಿ ನೇಮುಗೊಂಡಾ ನಿಂಗೊಂಡಾ ಪಾಟೀಲರು

1969

ಸ್ವಸ್ತಿಶ್ರೀ ೧೦೫ ಅತಿಬಲ ಗ್ರಂಥಮಾಲಾ ಪುಷ್ಪ ೭೪

ಶ್ರೀ ಯೋಗೀಂದುದೇವ ವಿರಚಿತ

# ಯೋಗಸಾರ

ಹಿಂದೀಭಾಷಾ ಟೀಕಾಕಾರರು :

ಶ್ರೀಮಾನ್ ಬ್ರಹ್ಮಚಾರಿ ಶೀತಲಪ್ರಸಾದ್‌ಜೀಯುವರು

ಕನ್ನಡ ಅನುವಾದಕರು :

ನ್ಯಾಯತೀರ್ಥ ಮತ್ತು ಕಾವ್ಯತೀರ್ಥ

ಶ್ರೀ ಶ್ರೀಕಾಂತ ಭುಜಬಲಿಶಾಸ್ತ್ರಿಗಳು

ವೈನಾಡು



ಪ್ರಕಾಶಕರು :

ಶ್ರೀ ಬ್ರಹ್ಮಚಾರಿ ನೇಮಗೊಂಡಾ ನಿಂಗೊಂಡಾ ಪಾಟೀಲರು

ಆಲಗೂರು

(ಜಮಖಂಡಿ ತಾಲ್ಲೂಕು, ವಿಜಾಪುರ ಜಿಲ್ಲಾ)

1969

ಪ್ರತಿ : 1000

ಬೆಲೆ : ಸದುಪಯೋಗ

# ವಿಷಯ ಸೂಚಿ




ಸ್ವಸ್ತಿಶ್ರೀ ಚಾರಿತ್ರ ಚಕ್ರವರ್ತಿ
೧೦೮ ಆಚಾರ್ಯವರ್ಯ ಶಾಂತಿಸಾಗರ ಮುನಿಮಹಾರಾಜರು

[illegible]

[illegible]

[illegible]

9-12-69

ಶಾಂತಮೂರ್ತಿ ಪೂಜ್ಯ ನಿರ್ಗ್ರಂಥ

ಶ್ರೀ ೧೦೮ ಮಹಾಬಲ ಮಹಾರಾಜರವರ

ಕರಕಮಲಗಳಲ್ಲಿ

ಈ ಗ್ರಂಥ ಕುಸುಮವನ್ನು ಭಕ್ತಿಯಿಂದ

ಸಮರ್ಪಿಸುತ್ತೇನೆ.

ನೇಮಗೊಂಡಾ ನಿಂಗೊಂಡಾ ಪಾಟೀಲ್

# ವಂಶಾವಳಿ.

೧ ಕೋನಗೊಂಡಾ ಪಾಟೀಲ

೧ ಕೃಷ್ಣಗೊಂಡಾ ೨ ನಿಂಗೊಂಡಾ

೧ ಆವಗೊಂಡಾ ೧ ಗಿರಿಗೊಂಡಾ ೨ ಜಿನಗೊಂಡಾ ೩ ನೇಮಗೊಂಡಾ

೧ ನಿಂಗೊಂಡಾ

೧ ನೇಮಗೊಂಡಾ

೧ ಸೋಮನಾಥ ೨ ಜಿನಗೊಂಡಾ ೩ ಆದಗೊಂಡಾ

೧ ಶೀತಲನಾಥ ೧ ಮಹಾವೀರ ೨ ನಿರ್ಮಲಕುಮಾರ



ಶ್ರೀ ಬ್ರಹ್ಮಚಾರಿ ನೇಮಗೊಂಡಾ ನಿಂಗೊಂಡಾ ಪಾಟೀಲರು

ಬಿಜಾಪುರ ಡಿಸ್ಟ್ರಿಕ್ ಜಮಖಂಡಿ ತಾಲ್ಲೂಕು ಆಲಗೂರಿನ ಬ್ರಹ್ಮಚಾರಿ

# ಶ್ರೀ ನೇಮಗೊಂಡಾ ನಿಂಗೊಂಡಾ ಪಾಟೀಲ್

## ಇವರ ಜೀವನಚರಿತ್ರೆ

ಶ್ರೀ ನೇಮಗೊಂಡಾ ನಿಂಗೊಂಡಾ ಪಾಟೀಲರು ಶ್ರೀಮನ್ನೃಪ ಶಾಲೀವಾಹನ ಶಕ 1820 ವಿಲಂಬಿನಾಮ ಸಂವತ್ಸರದ ಆಶ್ವಯುಜ ಮಾಸ ಕೃಷ್ಣ ಪಕ್ಷ ಏಕಾದಶಿ ಗುರುವಾರ ಹಸ್ತ ನಕ್ಷತ್ರದಲ್ಲಿ ಜನಿಸಿದರು. ಶಕ 1825 ರಲ್ಲಿ ಶ್ರೀ 108 ಪರಮಪೂಜ್ಯ ಮಲ್ಲಿಸಾಗರ ಮಹಾರಾಜರು ಆಲಗೂರಿನಲ್ಲಿ ಚಾತುರ್ಮಾಸಮಾಡಿದರು. ಆ ಸಮಯದಲ್ಲಿ ನೇಮಗೊಂಡಾ ನಿಂಗೊಂಡಾ ಪಾಟೀಲರು 108 ಮಲ್ಲಿಸಾಗರ ಮಹಾರಾಜರವರ ಉಪದೇಶದಿಂದ ದೇವಪೂಜೆ, ಗುರೂಪಾಸ್ತಿ, ಸ್ವಾಧ್ಯಾಯ, ಸಂಯಮ, ತಪ, ಧ್ಯಾನ ಈ ಷಟ್ಕರ್ಮ ವ್ರತಗಳನ್ನು ಅಂಗೀಕರಿಸಿದರು. ಅವರು ಧರ್ಮಾಚರಣೆಯನ್ನು ಮಾಡುತ್ತಿದ್ದರು. ಹೀಗಿರುವಾಗ ಅವರಿಗೆ ಸೋಮನಾಥನೆಂಬ ಪುತ್ರ ಜನಿಸಿದನು.

ಶ್ರೀ ಸೋಮನಾಥರು ವಿದ್ಯಾಭ್ಯಾಸಮಾಡುತ್ತಾ ಜಮಖಂಡಿ ಹೈಸ್ಕೂಲಿನಲ್ಲಿ ಮೆಟ್ರಿಕ್ ಪರೀಕ್ಷೆಯಲ್ಲಿ ಪ್ರಥಮ ಸ್ಥಾನದಲ್ಲಿ ತೇರ್ಗಡೆಯಾಗಿ, ನಂತರ ಧಾರವಾಡ ಕಾಲೇಜಿನಲ್ಲಿ ತತ್ವಜ್ಞಾನ ತೆಗೆದುಕೊಂಡು ಎಂ.ಎ. ಪರೀಕ್ಷೆಯಲ್ಲಿ ಪ್ರಥಮಸ್ಥಾನದಲ್ಲಿ ತೇರ್ಗಡೆಹೊಂದಿ ಕೊಲ್ಲಾಪುರ ರಾಜಾರಾಮ್ ಕಾಲೇಜಿನಲ್ಲಿ ಪ್ರೊಫೆಸರ್ ಆಗಿದ್ದಾರೆ.

ಎರಡನೇ ಪುತ್ರ ಶ್ರೀ ಜಿನಗೊಂಡಾರವರು ಮೆಟ್ರಿಕ್ ಪಾಸ್‌ಮಾಡಿ ಶಾಲಾ ಮಾಸ್ಟರ್ ಆಗಿದ್ದಾರೆ.

ಮೂರನೇ ಪುತ್ರಿ ಶ್ರೀಮತಿ ಪದ್ಮಾವತಿಯುವರು ನಾಲ್ಕನೇ ಈಯತ್ತೆ ಪಾಸ್ ಆಗಿದ್ದಾರೆ.

ನಾಲ್ಕನೇ ಪುತ್ರಿ ಶ್ರೀಮತಿ ಲಕ್ಷ್ಮೀಬಾಯಿಯುವರು ನಾಲ್ಕನೇ ಈಯತ್ತೆ ಪಾಸ್ ಆಗಿದ್ದಾರೆ.

ಐದನೇ ಪುತ್ರಿ ಶ್ರೀಮತಿ ಜಿನಬಾಯಿಯವರು ಮುಲಕಿ ಪರೀಕ್ಷೆ ಪಾಸ್ ಆಗಿದ್ದಾರೆ.

ಆರನೇ ಪುತ್ರ ಶ್ರೀ ಆದಗೊಂಡಾರವರು ಮುಲಕಿ ಪರೀಕ್ಷೆ ಪಾಸ್ ಆಗಿದ್ದಾರೆ. ಇವರು ವಿದ್ಯಾಭ್ಯಾಸ ಬಿಟ್ಟು ಒಕ್ಕಲತನಮಾಡುತ್ತಿದ್ದಾರೆ.

ಮುಂದೆ ಶ್ರೀ 108 ಪೂಜ್ಯ ಆದಿಸಾಗರ ಮುನಿಮಹಾರಾಜರು ನಸಲಾಪುರದಲ್ಲಿ ಚಾತುರ್ಮಾಸಮಾಡಿದಾಗ ಇವರ ಸಮ್ಮುಖದಲ್ಲಿ ಶ್ರೀ ನೇಮಗೊಂಡಾ ನಿಂಗೊಂಡಾ ಪಾಟೀಲರು ಶ್ರಾವಕರ ಒಂದನೇ ಮತ್ತು ಎರಡನೇ ಪ್ರತಿಮಾಧಾರಿ ವ್ರತವನ್ನು ಕೈಗೊಂಡರು.

ನಂತರ 1948 ರಲ್ಲಿ ಶ್ರೀ ಆಚಾರ್ಯ ಮಹಾವೀರಕೀರ್ತಿಯವರ ಪ್ರೇರಣೆಯಿಂದ ಶ್ರೀ ನೇಮಗೊಂಡಾ ನಿಂಗೊಂಡಾ ಪಾಟೀಲರು ಶ್ರೀ ಸಮ್ಮೇದಗಿರಿ, ಗಿರಿನಾರ್ ವಗೈರೆ ಯಾತ್ರೆಯನ್ನು ಎರಡುಬಾರಿಮಾಡಿ ದರ್ಶನಲಾಭವನ್ನು ಪಡೆದಿರುತ್ತಾರೆ.

ಆಮೇಲೆ 1952 ರಲ್ಲಿ ಶ್ರೀ 108 ಆಚಾರ್ಯ ಪಾಯಸಾಗರಮುನಿಮಹಾರಾಜರು ಸ್ತವನಿಧಿ ಕ್ಷೇತ್ರದಲ್ಲಿ ಚಾತುರ್ಮಾಸಮಾಡಿದಾಗ ಇವರಿಂದ ಶ್ರೀ ನೇಮಗೊಂಡಾ ನಿಂಗೊಂಡಾ ಪಾಟೀಲರು ಬ್ರಹ್ಮಚರ್ಯ ವ್ರತವನ್ನು ತೆಗೆದುಕೊಂಡರು.

ನಂತರ 1966 ರಲ್ಲಿ ಶ್ರೀ 108 ಪೂಜ್ಯ ಮಹಾಬಲಮುನಿಮಹಾರಾಜರು ತೇರದಾಳದಲ್ಲಿ ಚಾತುರ್ಮಾಸಮಾಡಿದಾಗ ಇವರಿಂದ ಶ್ರೀ ಬ್ರಹ್ಮಚಾರಿ ನೇಮಗೊಂಡಾ ನಿಂಗೊಂಡಾ ಪಾಟೀಲರು ಶ್ರಾವಕರ ಮೂರು ಮತ್ತು ನಾಲ್ಕು ಪ್ರತಿಮಾಧಾರಿ ವ್ರತವನ್ನು ತೆಗೆದುಕೊಂಡರು.

ಆಮೇಲೆ 1967 ರಲ್ಲಿ ಶ್ರೀ ಪೂಜ್ಯ 108 ಮಹಾಬಲಮುನಿಮಹಾರಾಜರು ತೇರದಾಳದಲ್ಲಿ ಚಾತುರ್ಮಾಸಮಾಡಿದಾಗ ಇವರ ಪ್ರೇರಣೆಯಿಂದ ಶ್ರೀ ಬ್ರ. ನೇಮಗೊಂಡಾ ನಿಂಗೊಂಡಾ ಪಾಟೀಲರು ಹಿಂದಿ ಯೋಗಸಾರ ಗ್ರಂಥವನ್ನು ಕನ್ನಡದಲ್ಲಿ 1000 ಪ್ರತಿಗಳನ್ನು ಮಾಡಿಸಿ ದಾನಕೊಡುವಂತೆ ಒಪ್ಪಿದರು

ಆಮೇಲೆ 1968 ರಲ್ಲಿ ಪೂಜ್ಯ ಶ್ರೀ 108 ಮಹಾಬಲಮುನಿಮಹಾರಾಜರು ತೇರದಾಳದಲ್ಲಿ ಚಾತುರ್ಮಾಸಮಾಡಿದಾಗ ಇವರ ಸಮ್ಮುಖದಲ್ಲಿ ಶ್ರೀ ಬ್ರಹ್ಮಚಾರಿ ನೇಮಗೊಂಡಾ ನಿಂಗೊಂಡಾ ಪಾಟೀಲರು ಶ್ರಾವಕರ ಐದು ಮತ್ತು ಆರನೇ ಪ್ರತಿಮಾಧಾರಿ ವ್ರತವನ್ನು ತೆಗೆದುಕೊಂಡರು.

# ಪ್ರಸ್ತಾವನೆ

ದಿಗಂಬರ ಜೈನ ಸಂಪ್ರದಾಯದ ಆಚಾರ್ಯರುಗಳಲ್ಲಿ ಯೋಗೀಂದು ದೇವರ ಸ್ಥಾನವು ಬಹಳ ಉನ್ನತವಾಗಿದೆ. ಯೋಗೀಂದುದೇವರು ಉನ್ನತ ಸಾಹಿತ್ಯ ರಚನೆಮಾಡುವಾಗ ಸಂಸ್ಕೃತ ಪ್ರಾಕೃತಗಳನ್ನು ಬಿಟ್ಟು ಆ ಕಾಲ ದಲ್ಲಿ ಪ್ರಚಲಿತವಾಗಿದ್ದ ಅಪಭ್ರಂಶ ಭಾಷೆಯಲ್ಲಿ ತನ್ನ ಉನ್ನತ ಗ್ರಂಥವನ್ನು ಬರೆದಿರುವರು. ಶ್ರೀ ಕುಂದಕುಂದಾಚಾರ್ಯರ ಮತ್ತು ಶ್ರೀ ಪೂಜ್ಯಪಾದಾ ಚಾರ್ಯರ ಬಹುಭಾಗ ವಿಷಯವನ್ನು ಉಪಯೋಗಿಸಿಕೊಂಡಿರುವರು.

ಶ್ರೀ ಯೋಗೀಂದುದೇವರು ತನ್ನ ಪರಿಚಯವನ್ನು ಎಲ್ಲೂ ಹೇಳಿಕೊಂಡಿಲ್ಲ; ಮಹೋನ್ನತ ಗ್ರಂಥವನ್ನು ಬರೆದಿರುವರು. ಈ ಮಹಾರ್ಘ ವ್ಯಕ್ತಿಯ ವಿಶೇಷ ಪರಿಚಯ ದೊರಕದಿರುವುದು ದುಃಖದಾಯಕವಾದ ವಿಷಯ. ಅವರು ಆಧ್ಯಾತ್ಮಿಕ ರಾಜ್ಯದಲ್ಲಿ ಉನ್ನತ ಸಿಂಹಾಸನದಲ್ಲಿ ವಿರಾಜಮಾನವಾದ ಶಕ್ತಿ ಶಾಲಿ ಆತ್ಮಸ್ವರೂಪರಾಗಿದ್ದರು. ಅವರು ಆಧ್ಯಾತ್ಮಿಕ ವಿಷಯದಲ್ಲಿ ಉತ್ಸಾಹ ವುಳ್ಳವರಾಗಿ ಬಹಳ ಉನ್ನತಸ್ಥಾನದಲ್ಲಿದ್ದರು.

ಶ್ರೀ ಯೋಗೀಂದುದೇವರ ಪರಮಾತ್ಮ ಪ್ರಕಾಶಕ್ಕೆ ಶ್ರೀ ಜಯಸೇನರು, ಶ್ರೀ ಬ್ರಹ್ಮದೇವರು ಮತ್ತು ಶ್ರೀ ಶ್ರುತಸಾಗರರು ಸಂಸ್ಕೃತ ಟೀಕೆಯನ್ನು ಬರೆದು ಇವರನ್ನು ಪ್ರಶಂಸಿಸಿದ್ದಾರೆ. ಶ್ರೀ ಯೋಗೀಂದುದೇವರು 1) ಪರ ಮಾತ್ಮ ಪ್ರಕಾಶ, 2) ನೌಕಾರ ಶ್ರಾವಕಾಚಾರ, 3) ಯೋಗಸಾರ, 4) ಆಧ್ಯಾತ್ಮಸಂದೇಶ, 5) ಸುಭಾಷಿತತಂತ್ರ, 6) ತತ್ವಾರ್ಥಟೀಕೆ, 7) ದೋಹ ಪಾವುಡ, 8) ಅಮೃತಾಶೀತಿ, 9) ನಿಜಾತ್ಮಾಷ್ಟಕ ಗ್ರಂಥಗಳನ್ನು ಬರೆ ದಿರುವರು.

ಯೋಗಸಾರ ಗ್ರಂಥದ ಮುಖ್ಯ ವಿಷಯವು ಪರಮಾತ್ಮಪ್ರಕಾಶದ ವಿಷ ಯವೇ ಆಗಿದೆ. ಇದರಲ್ಲಿ ಸಂಸಾರದ ಪ್ರತ್ಯೇಕ ವಸ್ತುವಿನಿಂದ ಆತ್ಮನು ಸರ್ವಥಾ ಬೇರೆಯಾಗಿ ಅನುಭವಮಾಡಿಕೊಳ್ಳಲು ಉಪದೇಶಮಾಡಿದ್ದಾರೆ. ಸಂಸಾರದಿಂದ ಭಯಭೀತರೂ, ಮೋಕ್ಷಾಭಿಲಾಷಿಗಳೂ ಆದ ಪ್ರಾಣಿಗಳಿಗೆ ಗ್ರಂಥಕಾರರು ಎಚ್ಚರಕೊಟ್ಟಿರುತ್ತಾರೆ. ಗ್ರಂಥಕಾರರ ಪ್ರತಿಯೊಂದು ಗಾಥೆಯೂ ಉಪಯುಕ್ತವಾಗಿದೆ. ಮಲಿನನಾದ ಆತ್ಮನು ತನ್ನ ಸ್ವರೂಪದಲ್ಲಿ

ನೆಲಸುವ ಉಪಾಯಮಾರ್ಗವನ್ನು ತಿಳಿಸಿರುತ್ತಾರೆ. ಮಾನವನಾದವನಿಗೆ ಈ ಗ್ರಂಥವು ಅಮೃತ ಸಂಜೀವನಿಯಂತಿದೆ. "ನಾಯಮಾತ್ಮಾ ಬಲಹೀನೇ ನ ಲಭ್ಯಃ" ಬಲಹೀನನಾದವನು ಈ ಆತ್ಮನನ್ನು ರಕ್ಷಿಸಿಕೊಳ್ಳಲಾರನು. ಪ್ರತಿಯೊಂದು ಆತ್ಮನು ತನ್ನ ಸ್ವಸ್ವರೂಪವನ್ನು ಕಂಡು ಶಾಶ್ವತಸುಖದಲ್ಲಿರುವುದೇ ಈ ಗ್ರಂಥಕಾರರ ಅಭಿಪ್ರಾಯವಾಗಿದೆ.

ತಪೋನಿಷ್ಠರಾದ ಸ್ವಸ್ತಿಶ್ರೀ 108 ಮಹಾಬಲ ಮುನಿಮಹಾರಾಜರ ಮತ್ತು ಸ್ವಸ್ತಿಶ್ರೀ 105 ಅತಿಬಲಮಹಾರಾಜರ ಪ್ರೇರಣೆಯಿಂದ ಹಿಂದಿಯಲ್ಲಿದ್ದ ಯೋಗಸಾರಗ್ರಂಥದ ಟೀಕೆಯನ್ನು ಕನ್ನಡಕ್ಕೆ ನನ್ನ ಯೋಗ್ಯತಾನುಸಾರ ಅನುವಾದಮಾಡಿದ್ದೇನೆ.

ಶ್ರೀ ಬ್ರಹ್ಮಚಾರಿ ನೇಮಗೊಂಡಾ ನಿಂಗೊಂಡಾ ಪಾಟೀಲರು ಶ್ರೀ ಬಾಹುಬಲಿ ಆಶ್ರಮಕ್ಕೆ ರೂ. 101, ಆಲಗೂರಿನ ಜಿನಮಂದಿರದ ಗರ್ಭಗುಡಿಗೆ ರೂ.2000, ಪೇಟಾಬೀಳಗಿ ಜಿನಮಂದಿರದ ಜೀರ್ಣೋದ್ಧಾರಕ್ಕೆ ರೂ. 101, ಆಲಗೂರಿನ ಜಿನಮಂದಿರದ ಶಿಖರದಲ್ಲಿ ಶ್ರೀ 1008 ಮಹಾವೀರ ಭಗವಾನರ ಸ್ಥಾಪನೆಗೆ ರೂ. 1001, ಯೋಗಸಾರ ಗ್ರಂಥಕ್ಕೆ ರೂ. 2500. ಹೀಗೆ ಇನ್ನೂ ಅನೇಕ ವಿಧವಾಗಿ ದಾನಮಾಡಿರುತ್ತಾರೆ. ಮುಂದೆಯೂ ಹೀಗೆಯೇ ಅನೇಕ ದಾನಧರ್ಮಕಾರ್ಯಗಳನ್ನು ಮಾಡುತ್ತಾರೆಂದು ನಂಬಿದ್ದೇನೆ. ಇವರು ಈಗಾಗಲೇ ಶ್ರಾವಕರ 7 ನೇ ಪ್ರತಿಮಾಧಾರಿಯಾಗಿದ್ದಾರೆ. ಇವರು ಇನ್ನೂ ಹೆಚ್ಚಿನ ಶ್ರಾವಕರ ಪ್ರತಿಮೆಹೊಂದಲೆಂದು ಆಶಿಸುತ್ತೇನೆ. ಇವರ ಮಾರ್ಗವನ್ನು ಇತರರು ಅನುಸರಿಸಿದ್ದೇ ಆದರೆ ದೇಶದಲ್ಲಿ ಧರ್ಮ ಬೆಳಗುತ್ತದೆಂದು ನನ್ನ ನಂಬಿಕೆಯಾಗಿದೆ.

ಈ ಗ್ರಂಥವನ್ನು ಸುಂದರವಾಗಿ ಪ್ರಿಂಟುಮಾಡಿದ ಶ್ರೀಮಾನ್ ಟಿ. ಸಿ. ಬ್ರಹ್ಮಸೂರಯ್ಯನವರಿಗೂ ಮುದ್ರಣಕಾರ್ಯದಲ್ಲಿ ಕರಡುಪ್ರತಿ ತಿದ್ದಿಕೊಟ್ಟು ಸಹಾಯಮಾಡಿದ ನ್ಯಾಯತೀರ್ಥ ಎಂ. ಸಿ. ಪದ್ಮನಾಭಶರ್ಮರವರಿಗೂ ಅಭಿನಂದನೆಗಳು.

ಶ್ರೀಕಾಂತ ಭುಜಬಲಿಶಾಸ್ತ್ರಿ

# ಒಂದೆರಡು ಮಾತು

ಈ ಕಾಲದಲ್ಲಿ ಅರ್ಹಂತರನ್ನು (ದೇವರನ್ನು) ನೋಡುವಂತಿಲ್ಲ. ಗುರುಗಳನ್ನು ಎಲ್ಲಾ ವೇಳೆಯಲ್ಲೂ ಎಲ್ಲಾ ಸ್ಥಳಗಳಲ್ಲೂ ಕಾಣುವಂತಿಲ್ಲ. ಆದರೆ ಶಾಸ್ತ್ರದಿಂದ ಅರ್ಹಂತರವಾಣಿ ಗುರುಗಳಬೋಧನೆ ದೊರಕುತ್ತದೆ. ಆದ್ದರಿಂದ ಶಾಸ್ತ್ರವೇ ದೇವರು, ಶಾಸ್ತ್ರವೇ ಗುರು ಎಂದು ತಿಳಿಯತಕ್ಕದ್ದು.

ಈ ಯೋಗಸಾರ ಗ್ರಂಥವು ಆಧ್ಯಾತ್ಮವಿಷಯುಗಳನ್ನೊಳಗೊಂಡಿದೆ. ಈ ಗ್ರಂಥದ ಜ್ಞಾನ ಉಂಟಾಗಬೇಕಾದರೆ ರತ್ನಕರಂಡಕಶ್ರಾವಕಾಚಾರ, ದ್ರವ್ಯ ಸಂಗ್ರಹ, ಸಾಗಾರಧರ್ಮಾಮೃತ, ಅರವತ್ಮೂರು ಶಲಾಕಾಪುರುಷರ ಚರಿತ್ರೆ ಮೊದಲಾದ ಗ್ರಂಥಗಳನ್ನು ಓದಿರಬೇಕು. ಪ್ರತಿದಿನವೂ ಶಾಸ್ತ್ರ ಓದುವುದರ ಅಭ್ಯಾಸವುಳ್ಳವರಾಗಿರಬೇಕು. ಮಿಥ್ಯಾತ್ವವನ್ನು ತ್ಯಾಗಮಾಡಿದವರಾಗಿರಬೇಕು. ಪಂಚಾಣುವ್ರತಗಳನ್ನು ಪಾಲಿಸಿದವರಾಗಿರಬೇಕು. ಅಭಕ್ಷ್ಯ ವಸ್ತುಗಳನ್ನು ಬಿಟ್ಟಿರುವವರಾಗಿರಬೇಕು. ಶಾಸ್ತ್ರವನ್ನು ದೇವಗುರುಗಳಿಗೆ ಸರಿಸಮಾನವೆಂದು ಭಾವಿಸಿದವರಾಗಬೇಕು.

ವೈನಾಡಿನ ಶ್ರೀ ಶ್ರೀಕಾಂತಭುಜಬಲಿಶಾಸ್ತ್ರಿಗಳವರು ಬಹಳ ಶ್ರಮ ವಹಿಸಿ ಶ್ರೀವರ್ಮ ಬ್ರಹ್ಮಚಾರಿ ಶೀತಲಪ್ರಸಾದ್‌ಜಿಯವರು ಹಿಂದಿಯಲ್ಲಿ ಮಾಡಿದ್ದ ಯೋಗಸಾರ ಟೀಕೆಯನ್ನು ಕನ್ನಡಕ್ಕೆ ಅನುವಾದಿಸಿ ಕನ್ನಡನಾಡಿನ ಜನರಿಗೆ ಆಧ್ಯಾತ್ಮ ರಸದೌತಣವನ್ನು ಉಣಬಡಿಸಿರುತ್ತಾರೆ. ಇವರ ಉಪಕಾರ ಎಷ್ಟೆಂದು ಹೇಳಿದರೂ ಸಾಲದು.

ಆಹಾರದಾನ, ಅಭಯದಾನ, ಭೈಷಜ್ಯದಾನ ಮತ್ತು ಶಾಸ್ತ್ರದಾನಗಳೆಂಬ ನಾಲ್ಕು ವಿಧ ದಾನಗಳಲ್ಲಿ ಶಾಸ್ತ್ರದಾನವೇ ಶ್ರೇಷ್ಠವಾದುದು. ಶಾಸ್ತ್ರದಾನದಿಂದ ಪಾತ್ರನಿಗೆ ಜನ್ಮಪರ್ಯಂತ ತೃಪ್ತಿಯುಂಟಾಗುತ್ತದೆ ಮತ್ತು ಆತ್ಮ ಕಲ್ಯಾಣವಾಗುತ್ತದೆ. ದಾನಿಗಾದರೋ ಭವಾಂತರದಲ್ಲಿ ಉತ್ತಮ ಜ್ಞಾನ ಉಂಟಾಗುತ್ತದೆ. ಈ ವೈಶಿಷ್ಟ್ಯ ಇತರ ದಾನಗಳಿಗೆ ಸಲ್ಲದು.

ಯೋಗಸಾರ ಗ್ರಂಥವನ್ನು ಕನ್ನಡಿಗರಿಗೆ ದೊರಕಿಸಿಕೊಟ್ಟು ಶಾಸ್ತ್ರದಾನ ಮಾಡಿದ ಆಲಗೂರಿನ ಶ್ರೀ ಬ್ರ. ನೇಮಗೊಂಡಾ ನಿಂಗೊಂಡಾ ಪಾಟೀಲರಿಗೆ

ನನ್ನ ಧನ್ಯವಾದಗಳು. ಈ ಗ್ರಂಥಕ್ಕೆ ಪ್ರೇರಕರಾದ ಪೂಜ್ಯ ಶ್ರೀ 108 ಮಹಾಬಲ ಮುನಿಮಹಾರಾಜರಿಗೂ ಮತ್ತು ಶ್ರೀ 105 ಆತಿಬಲಮಹಾರಾಜ ರಿಗೂ ನನ್ನ ಸಾಷ್ಟಾಂಗ ನಮಸ್ಕಾರಗಳು.

ಈ ಶ್ರೇಷ್ಠವಾದ ಯೋಗಸಾರ ಗ್ರಂಥವನ್ನು ದಾನತೆಗೆದುಕೊಂಡವರು ಗೆದ್ದಲು, ಹುಳು, ಇಲಿ ಮೊದಲಾದವುಗಳಿಗೆ ಆಹುತಿಮಾಡಿದರೆ ಅಥವಾ ಮಕ್ಕಳಿಗೆ ಸಿಗುವಂತಾಗಿ, ಅವರು ಹಾಳೆಗಳನ್ನು ಹರಿದುಹಾಕಿ, ಕೊನೆಗೆ ಅಂಗಡಿಗೆ ಸಾಮಾನನ್ನು ಕಟ್ಟುವುದಕ್ಕೆ ಉಪಯೋಗವಾಗುವಂತೆ ಮಾಡಿದರೆ ಶಾಸ್ತ್ರಕ್ಕೆ ಅವಿನಯ ಮಾಡಿದಂತಾಗುತ್ತದೆ ಮತ್ತು ಸಮ್ಯಕ್ತ್ವ ನಷ್ಟವಾಗುತ್ತದೆ. ಆದ್ದರಿಂದ ಈ ಉತ್ತಮವಾದ ಯೋಗಸಾರಗ್ರಂಥವನ್ನು ಪಡೆದವರು ಪ್ರತಿದಿವಸವೂ ಭಕ್ತಿಯಿಂದ ಪೂಜಿಸಿ, ಸ್ವಾಧ್ಯಾಯಮಾಡಿ, ಶಾಸ್ತ್ರಲಿಪಿಬದ್ಧವಾದ ಜ್ಯೇಷ್ಠ ಶುದ್ಧ ಪಂಚಮಿಯಲ್ಲಿ ಈ ಗ್ರಂಥಕ್ಕೆ ವಿಶೇಷ ಪೂಜೆಯನ್ನು ಸಲ್ಲಿಸಿ, ಈ ಗ್ರಂಥದಲ್ಲಿನ ವಿಶೇಷಜ್ಞಾನವನ್ನು ಹೊಂದಿ ಮೋಕ್ಷಮಾರ್ಗಿಯಾಗಲೆಂದು ನನ್ನ ಹಾರೈಕೆ.

ಜೈ ಹಿಂದ್ ಪ್ರೆಸ್
ಮೈಸೂರು

ತುಮಕೂರು ಚಂದ್ರಪ್ಪ ಬ್ರಹ್ಮಸೂರಯ್ಯ

# ಶುದ್ಧಾಶುದ್ಧ

| ಪುಟ | ಸಾಲು | ಅಶುದ್ಧ | ಶುದ್ಧ |
|---|---|---|---|
| ೧೬ | ೨೪ | ಸಂಸಾರಸಾಯಕಿ | ಸಂಸಾರ ಸಾಯರೆ |
| ೧೭ | ೯ | ಕಾಯರ್ೂಮರ್ತಿ | ಕಾಯರ್ೂಮತಿ |
| ೧೯ | ೧೨ | ರ್ಶನಶರಣಾಃ | ದರ್ಶನಶರಣಾಃ |
| ೨೦ | ೨ | ಕಾಲು ಅಣಾಇ | ಕಾಲು ಅಣಾಇ ಅಣಾಇ |
| ೨೧ | ೨೨ | ಈ ಪ್ರಕೃತಿಗಳ | ಈ ಪಂಚ ಪ್ರಕೃತಿಗಳ |
| ೨೫ | ೧೨ | ಸರ್ವಮಯಾನಾಂ | ಸರ್ವಸಮಯಾನಾಂ |
| ೨೯ | ೮ | ಶರೀವು | ಶರೀರವು |
| ೩೧ | ೧೨ | ಸಂಹಣಾಣಂ | ಸಂಹಣಣಂ |
| ೩೨ | ೨೨ | ಕತೃರ್ಭಾನಾಂ | ಕತೃರ್ಭಾವಂ |
| ೩೩ | ೧೨ | ೫೭/೧೦ | ೪೭/೧೦ |
| ೩೮ | ೮ | ಉಪಾಯದಿಂದ ಲೇಪರ | ಉಪಾಯದಿಂದಲೇ ಪರ |
| ೪೦ | ೨ | ಪಶಂ | ಪರಂ |
| ೪೪ | ೧೧ | ಉಓಇಟ್ಠಂ | ಉಬಇಟ್ಠಂ |
| ೪೫ | ೧ | ತಮ | ತವಂ |
| ೪೮ | ೧೪ | ಸಂವುತ್ತಂ | ಸಂಜುತ್ತಂ |
| ೫೧ | ೧೬ | ವ್ಭೋ | ವ್ವೋ |
| ೫೨ | ೮ | ವ್ಯೆಕಂ | ವೆಕಂ |
| ೫೨ | ೧೩ | ಸಮಯಸಾರ | ಸಾರ |
| ೫೩ | ೧ | ಸುದ್ದು | ಸುದ್ಧ |
| ೫೩ | ೧೦ | ಸೋ ಅಪ್ಪಾ | ಸೋ ಪರಮಪ್ಪಾ |
| ೫೭ | ೯ | ಮೋಲ್ಲವಿ | ಮೋಲ್ಲಿವಿ |
| ೫೭ | ೧೩ | ವರಮಪ್ಪ | ಪರಮಪ್ಪ |
| ೫೮ | ೧೯ | ಭರ್ವಾ ಮಮಾಪಿ | ಭರ್ವಾ ಭವತು ಮಮಾಪಿ |

| | | | |
|---|---|---|---|
| ೫೯ | ೯ | ಪರಿ | ಪರ |
| ೫೯ | ೧೧ | ಪರಿ | ಪರ |
| ೬೨ | ೯ | ವೇದ | ವೇದನೀಯ |
| ೬೩ | ೨ | ವರೆವಿಗೂ | ವರೆಗೂ |
| ೬೪ | ೨೨ | ತುಹು | ತುಹುಂ |
| ೬೫ | ೮ | ವ್ರತಗಳಿಂದಲೂ | ದ್ರವ್ಯಗಳಿಂದಲೂ |
| ೬೭ | ೧೬ | ಜ್ಞಾತ್ರಾ | ಜ್ಞಾತಾ |
| ೬೭ | ೨೬ | ಮಜ್ಜಭಾವೋ | ಮಜ್ಜಭಾವೋ ಜಾಣಗ ಭಾವೋ |
| ೬೯ | ೧೩ | ಚಿದಹ | ಚಿದಹಂ |
| ೬೯ | ೧೪ | ಮಾರ್ತಃ | ಮೂರ್ತಃ |
| | | ೧೫೭ | ೧೫೩ |
| ೮೦ | ೯ | ಭಾವ | ಭಾವಕರ್ಮ |
| ೮೦ | ೨೦ | ಪಕ್ವ | ಪಕ್ವಂ |
| ೮೦ | ೨೨ | ಪಾಪ್ತಿ | ಪ್ರಾಪ್ತಿ |
| ೮೧ | ೧೯ | ತುಹು | ತುಹುಂ |
| ೮೨ | ೧ | ತುಹು | ತುಹುಂ |
| ೮೩ | ೮ | ಚಿಂತೆಗಳ | ಚಿಂತೆಗಳಲ್ಲಿ |
| ೮೫ | ೯ | ಮತ್ಥುದೋ | ವತ್ಥುದೋ |
| ೮೬ | ೧೪ | ದೇಹಿ | ದೇಹಿಂ |
| ೮೬ | ೧೪ | ಸಹಾವೆಂ | ಸಹಾವಂ |
| ೯೩ | ೬ | ಕಿಂ | ಕಿಂ ಪಿ |
| ೯೬ | ೯ | ಛಿತ್ತಜ್ವೋ | ಛಿತ್ತವ್ವೋ |
| ೯೬ | ೧೮ | ಣಿದ್ಧದೋ | ಣಿದ್ದಂದೋ |
| ೯೭ | ೩ | ಸದ್ದವ್ವಂ | ಸದವ್ವಂ |
| ೧೦೨ | ೧೪ | ಕಹಂ | ಕಹಿಂ |
| ೧೦೩ | ೯ | ದೂರಂ | ದೂರ |

| | | | |
|---|---|---|---|
| ೧೦೫ | ೧೯ | ಭವ್ವ | ಬವ್ವಾ |
| ೧೧೫ | ೨೩ | ಣಾಂತಾ | ಣಂತಾ |
| ೧೧೮ | ೨೧ | ಸ್ಥಾನಂ | ಸ್ಥಾಣಾಂ |
| ೧೩೩ | ೨ | ಬೇಉ | ಭೇಉ |
| ೧೩೩ | ೮ | ನರಕಮೂಃ | ನರಭೂಃ |
| ೧೩೩ | ೯ | ನಾಂಗನಾ | ನಂಗನಾ |
| ೧೪೧ | ೨೨ | ವಾಗಿದ್ತರೂ | ವಾಗಿದ್ದರೂ |
| ೧೫೮ | ೨ | ಹೇಗೆ | ಹೀಗೆ |
| ೧೬೫ | ೧೬ | ಸಾಗರಣಗಾರಿ | ಸಾಗಾರಣಗಾರಿ |
| ೧೭೦ | ೫ | ಸಂಬಧವಾದ ದುಃಖ | ಸಂಬಂಧವಾದ ಸುಖದುಃಖ |
| ೧೭೦ | ೮ | ಪಾಪಕರ್ಮಗಳ | ಕರ್ಮಗಳ |
| ೧೭೦ | ೧೩ | ಕಷಾಯಭಾವನೆಗಳು | ಕಷಾಯಭಾವವೊಂದೇ |
| ೧೭೫ | ೧೯ | ಕರ್ಮಗಳಿಂದಲೂ | ಎಲ್ಲಾ ಕರ್ಮಗಳಿಂದಲೂ |
| ೧೭೬ | ೪ | ಪರೀಷಹಗಳು | ಪ್ರಾರಂಭದಲ್ಲಿಪರೀಷಹಗಳು |
| ೧೭೬ | ೬ | ಪೂರ್ಣರೀತ್ಯಾ | ಸಾಧಕನು ಪೂರ್ಣರೀತ್ಯಾ |
| ೧೭೬ | ೧೧ | ಯೇನಾತ್ಮಾ | ಯೇನಾತ್ಮ |
| ೧೭೬ | ೧೨ | ಬಹು | ಬಹುಃ |
| ೧೭೬ | ೧೭ | ಯೋಗ್ಯವಾದ ಪರದ್ರವ್ಯ | ಯೋಗ್ಯವಾದ ಪರಭಾವ ಪರದ್ರವ್ಯ |
| ೧೭೭ | ೧೫ | ನಯದಿಂದ ಆತ್ಮಾನುಭವವು | ನಯದಿಂದ ಆತ್ಮದರ್ಶನ ಅಥವಾ ಆತ್ಮಾನುಭವವು |
| ೧೭೯ | ೧೩ | ಅನಂತ | ಅನಂತಾನಂತ |
| ೧೭೯ | ೧೫ | ಸೂಕ್ಷ್ಮಪೃಥ್ವಿ | ಸೂಕ್ಷ್ಮಜೀವ ಪೃಥ್ವಿ |
| ೧೮೫ | ೧೨ | ಸಿರ್ಮಲ ಚಾರಿತ್ರದ | ನಿರ್ಮಲ ಸಮ್ಯಗ್ದರ್ಶನದ |
| ೧೮೫ | ೧೫ | ಆತ್ಮ ಸ್ವಭಾವವೇ | ಆತ್ಮನ ಸಮಭಾವವೇ |
| ೧೮೭ | ೨೦ | ಆವನನ್ನು ಶುದ್ಧಾತ್ಮನ | ಆವನನ್ನು ಸಮಯಸಾರ ಶುದ್ಧಾತ್ಮನ |

| | | | |
|---|---|---|---|
| ೧೮೮ | ೨ | ಅಂತರಂಗಚಾರಿತ್ರವಿಲ್ಲ ದವರಾಗಿ ಇರುವರೋ | ಅಂತರಂಗ ಚಾರಿತ್ರವಿಲ್ಲದವ ರಾಗಿ ಸ್ವಚಾರಿತ್ರದಿಂದ ಭ್ರಷ್ಟರಾಗುತ್ತಾ ಇರುವರೋ |
| ೧೯೭ | ೧೬ | ಪಡಮು | ಪದಮು |
| ೨೦೫ | ೧೫ | ಕೇವನ | ಕೇವಲ |
| ೨೦೫ | ೧೬ | ಶಕ್ತಿ | ಭಕ್ತಿ |
| ೨೪೦ | ೨೧ | ಪಡ್ಡ್ರವ್ಯ | ಷಡ್ದ್ರವ್ಯ |
| ೨೪೨ | ೮ | ವಿಷಯನ್ನೇ | ವಿಷಯವನ್ನೇ |
| ೨೪೮ | ೨೬ | ಅಸದ್ಖೂತ | ಅಸದ್ಭೂತ |
| ೨೫೬ | ೮ | ದ್ವೇಹ | ದ್ವೇಷ |
| ೨೫೬ | ೯ | ಪರಣಮಣ | ಪರಿಣಮನ |
| ೨೬೨ | ೨೦ | ಸ್ವರ್ಶ | ಸ್ಪರ್ಶ |
| ೨೬೩ | ೧೦ | ಮಹೋಪಾಯನಾಗಿರುಶ್ತದೆ | ಮಹೋಪಾಯವಾಗಿರುತ್ತದೆ |
| ೨೬೩ | ೧೭ | ಮಹಾಸ್ಪಾದಿಷ್ಟ | ಮಹಾಸ್ವಾದಿಷ್ಟ |
| ೨೬೩ | ೧೮ | ಆತ್ಮಸ್ಪಾದದ | ಆತ್ಮಸ್ವಾದದ |
| ೨೬೩ | ೧೯ | ಅನ್ಮಾತ್ಮದೊಡನೆ | ಆನ್ಮಾತ್ಮನೊಡನೆ |
| ೨೬೮ | ೫ | ದೋಹದಿಂದ | ಮೋಹದಿಂದ |
| ೨೬೯ | ೬ | ಕರಗಿಹೋಗುವುಡು | ಕರಗಿಹೋಗುವುದು |
| ೨೮೪ | ೬ | ಜೀವಜೀವಾಗಳ | ಜೀವಾಜೀವಗಳ |
| ೨೮೭ | ೧೬ | ಸುಖಭೋಗ | ಸುಖಭೋಗ |
| ೨೯೨ | ೨೩ | ಏಕತ್ಪಾನುಪ್ರೇಕ್ಷೆಯನ್ನು | ಏಕತ್ವಾನುಪ್ರೇಕ್ಷೆಯನ್ನು |
| ೨೯೬ | ೨ | ಚೇತನಾಚೇತನ | ಚೇತನಾಚೇತನಾ |
| ೨೯೬ | ೧೫ | ಯತ್ನಿಸಬೆಂಕು | ಯತ್ನಿಸಬೇಕು |
| ೩೧೧ | ೭ | ಅಥವಾ | ಅಥವಾ |
| ೩೧೩ | ೨೧ | ಆತ್ಮಶತ್ವವನ್ನು | ಆತ್ಮತತ್ವವನ್ನು |
| ೩೫೬ | ೧೧ | ಸಮ್ಯಗ್ದೃಷ್ಟಿ | ಸಮ್ಯಗ್ದೃಷ್ಟಿ |

ಓಂ



ಶ್ರೀ ಯೋಗಿಂದ್ರ ಚಂದ್ರಾಯಕೃತ

# ಯೋಗಸಾರ ಟೀಕೆ

## ಸಿದ್ಧ ಪರಮೇಷ್ಠಿಗಳಿಗೆ ನಮಸ್ಕಾರವು

**ಣಿಮ್ಮಲ ಝಾಣ ಪರಿಟ್ಠಿಯಾ ಕಮ್ಮ ಕಲಂಕ ಡಹೇವಿ।**
**ಅಪ್ಪಾ ಲದ್ಧಉ ಜೇಣ ಪರು ತೇ ಪರಮಪ್ಪ ಣವೇವಿ ॥೧॥**

**ಅನ್ವಯಾರ್ಥ:** ಜೇಣ-ಯಾವ, ಣಿಮ್ಮಲ ಝಾಣ ಪರಿಟ್ಠಿಯಾ-ಪರಿಶುದ್ಧವಾದ ಧ್ಯಾನಮಗ್ನರೂ, ಕಮ್ಮ ಕಲಂಕ ಡಹೇವಿ-ಕರ್ಮ ಮಲವನ್ನು ನಾಶಮಾಡಿದವರೂ, ಪರು ಅಪ್ಪಾ ಲದ್ಧಉ-ಪರಮೋತ್ಕೃಷ್ಟವಾದ ಸ್ಥಾನವನ್ನು ಪಡೆದವರೂ ಆದ, ತೇ ಪರಮಪ್ಪ ಣವೇವಿ-ಪವಿತ್ರ ಆತ್ಮರಾದ ಸಿದ್ಧಪರಮೇಷ್ಠಿಗಳನ್ನು ವಂದಿಸುತ್ತೇನೆ.

**ಭಾವಾರ್ಥ:** ಪೂಜ್ಯ ಗ್ರಂಥ ಕರ್ತೃಗಳು ಪ್ರಥಮದಲ್ಲಿ ಮಂಗಲಾಚರಣ ರೂಪವಾಗಿ ಸಿದ್ಧಪರಮೇಷ್ಠಿಗಳಿಗೆ ವಂದಿಸಿರುತ್ತಾರೆ. ಶ್ರೀ ಸಿದ್ಧಪರಮೇಷ್ಠಿಗಳ ಪದವು ಪರಿಶುದ್ಧವಾದ ಆತ್ಮ ಸ್ಥಾನವೂ, ಸದಾ ನಿಜ ಸ್ವಭಾವದಲ್ಲಿ ತತ್ಪರವೂ, ಆಕಾಶದಂತೆ ನಿರ್ಮಲವೂ, ಸಕಲಗುಣಗಳಿಂದ ಪ್ರಕಾಶಿಸತವೂ, ಸಂಪೂರ್ಣ ಜ್ಞಾನಮಯವೂ ಆಗಿರುತ್ತದೆ.

ಆ ಸಿದ್ಧರು ಪರಮ ವೀತರಾಗಿಯೂ, ಅತೀಂದ್ರಿಯ ಸುಖದ ನಿಧಿಯೂ, **ಅಮೂರ್ತಿಯೂ,** ಅನಂತವೀರ್ಯನೂ, ಪುದ್ಗಲ ಸಂಬಂಧವಿಲ್ಲದ ಅಮೂರ್ತಿಯೂ, ಸಕಲ ಕರ್ಮಕಲಂಕಗಳಿಂದ ರಹಿತರಾಗಿ ಪರಮ ನಿರ್ಮಲರಾಗಿರುತ್ತಾರೆ; ಸ್ವಾಭಾವಿಕ ಪರಿಣತಿಯ ಕರ್ತೃಗಳೂ, ಪರಮಾನಂದಮಯ

ವಾದ ಆನಂದ ಭೋಕ್ತ್ಯವೂ, ಪರಮ ಕೃತಕೃತ್ಯರೂ, ಸಮಸ್ತ ಇಚ್ಛೆಗಳಿಂದ ರಹಿತರೂ, ಪುರುಷಾಕಾರರೂ ಆಗಿರುತ್ತಾರೆ. ಯಾವ ಶರೀರದಿಂದ ಸಿದ್ಧ ಪದವಿಯನ್ನು ಪಡೆದಿರುವವರೋ, ಆಶರೀರದ ಆಕಾರವುಳ್ಳವರೂ, ಸಂಕೋಚ ವಿಸ್ತಾರವಿಲ್ಲದೆ ಆ ಸ್ಥಾನದಲ್ಲಿರುವವರೂ, ಪ್ರದೇಶಗಳ ಅಪೇಕ್ಷೆಯಿಂದ ವಿಚಾರಿಸುವುದಾದರೆ ಅಸಂಖ್ಯಾತ ಪ್ರದೇಶವುಳ್ಳವರಾಗಿರುತ್ತಾರೆ. ಅವರಿಗೆ ಪರಮಾತ್ಮ, ಶಿವ, ಪರಮೇಶ್ವರ, ಪರಮದೇವರೆಂದೂ ಹೇಳುತ್ತಾರೆ. ಅವರು ಮೂಲದಲ್ಲಿ ಏಕಾಕೀ ಆತ್ಮ ದ್ರವ್ಯವಿರುವಂತೆ ಸಿದ್ಧರಿರುತ್ತಾರೆ. ಅನಂತ ಸಿದ್ಧಾತ್ಮರನ್ನು ಸಕಲ ಸಂಸಾರಿ ಜೀವಗಳು ಧ್ಯಾನಿಸುತ್ತ ಸರ್ವ ಬಾಹ್ಯಾಭ್ಯಂತರ ಪರಿಗ್ರಹಗಳನ್ನು ತ್ಯಜಿಸಿ, ಬಾಹ್ಯದಲ್ಲಿಯೂ ಅಂತರಂಗದಲ್ಲಿಯೂ ನಿರ್ಗ್ರಂಥರಾಗಿ ಧರ್ಮಧ್ಯಾನವನ್ನು ಮಾಡುತ್ತ, ಕ್ರಮವಾಗಿ ಶುಕ್ಲಧ್ಯಾನಿಯಾಗಬೇಕು. ಅದರ ಪ್ರಭಾವದಿಂದಲೇ ಅರಹಂತ ಪದವಿಯನ್ನು ಸಾಧಿಸಿ, ಕ್ರಮದಿಂದ ಉಳಿದ ನಾಲ್ಕು ಅಘಾತಿ ಕರ್ಮ ಮಲವನ್ನು ನಾಶಮಾಡಿ ಸಿದ್ಧಾತ್ಮರಾಗಿ, ಊರ್ಧ್ವಗಮನ ಸ್ವಭಾವದಿಂದ ಲೋಕಾಗ್ರಭಾಗದ ಸಿದ್ಧ ಶಿಲೆಯಲ್ಲಿ ವಿರಾಜಮಾನರಾಗುವರು. ಅಲ್ಲಿಂದ ಮುಂದಕ್ಕೆ (ಅಲೋಕಾಕಾಶದಲ್ಲಿ) ಧರ್ಮ ದ್ರವ್ಯದ ಅಸ್ತಿತ್ವವು ಇಲ್ಲದಿರುವುದರಿಂದ ಗಮನವಿಲ್ಲವೆಂದು ತಿಳಿಯಬೇಕು. ಆ ಸಿದ್ಧ ಕ್ಷೇತ್ರದಲ್ಲಿ ಸಿದ್ಧಾತ್ಮರುಗಳು ತಮ್ಮ ತಮ್ಮ ಅಸ್ತಿತ್ವವನ್ನು ಭಿನ್ನ ಭಿನ್ನವಾಗಿಯೇ ಇಟ್ಟುಕೊಂಡು ಪರಿಪೂರ್ಣ ವೀತರಾಗಾವಸ್ಥೆಯಲ್ಲೇ ವಿರಾಜಮಾನರಾಗಿರುತ್ತಾರೆ; ಅತಃ ಕರ್ಮಬಂಧನದಿಂದ ರಹಿತರಾಗಿರುತ್ತಾರೆ. ಆದುದರಿಂದಲೇ ಅವರು ಸಂಸಾರಾವಸ್ಥೆಗೆ ಹಿಂದಿರುಗಿ ಬರದೆಯೂ, ಸಂಸಾರ ಕಷ್ಟ ಕಾರ್ಪಣ್ಯಾದಿಗಳಿಂದ ನಿರ್ಮುಕ್ತರಾಗಿ ನಿರ್ವಾಣ ಪದವಿಯನ್ನು ಪಡೆಯುತ್ತಾರೆ. ಆದ್ದರಿಂದ ಯಾವ ಮೋಕ್ಷಾಭಿಲಾಷಿಯು ತನ್ನಾತ್ಮನನ್ನು ನಿಶ್ಚಯ ನಯದಿಂದ ಶುದ್ಧವೂ, ಪರಿಶುದ್ಧವೂ ಆದ ಆತ್ಮ ದ್ರವ್ಯವೆಂದು ಭಾವಿಸುತ್ತ, ರಾಗದ್ವೇಷಗಳನ್ನು ಬಿಟ್ಟು ನಿಜ ಸ್ವರೂಪದಲ್ಲಿ ಮಗ್ನನಾಗಿರುವನೋ, ಅವನೇ ಶುದ್ಧಾತ್ಮನಾಗುವನು.

ಗ್ರಂಥ ಕರ್ತೃಗಳು ಪ್ರಥಮದಲ್ಲಿ ಸಿದ್ಧಾತ್ಮರನ್ನು ವಂದಿಸಲು ಕಾರಣ ವೇನೆಂದರೆ, ಭಾವದಲ್ಲಿ ಶುದ್ಧತೆಯೂ, ವೀತರಾಗತೆಯೂ ಉದ್ಭವಿಸುವುದ

ಕ್ಕಾಗಿಯೂ, ಶುದ್ಧೋಪಯೋಗ ಮಿಶ್ರಿತವಾದ ಶುಭಭಾವವುಂಟಾಗಿ ವಿಘ್ನಕಾರಕಗಳಾದ ಕರ್ಮಗಳ ನಾಶವಾಗಿ ಪುಣ್ಯಬಂಧವಾಗುವುದಕ್ಕಾಗಿಯೇ ಮಾಡಿರುತ್ತಾರೆ. ಇದಕ್ಕೇನೆ "ಮಂಗಲ" ವೆಂದು ಎಂದರೆ, ಪಾಪವು ನಾಶವಾಗಿ ಪುಣ್ಯಪ್ರಾಪ್ತಿಯಾಗುವುದೆಂದು ಭಾವವು. ಈ ಪ್ರಕಾರದ ಮಂಗಲಾಚರಣೆಯಿಂದಲೇ ಶುದ್ಧಾತ್ಮರಿಗೆ ವಿನಯವನ್ನೆಸಗಿದಂತಾಗುವುದು. ಕಷಾಯಗಳು ನಾಶವಾಗಿ ಪರಿಣಾಮವು ಕೋಮಲವಾಗಿ ಸುಖ ಶಾಂತಿಯು ಪ್ರಕಾಶಿಸುವುದು.

ಇದು ಅಧ್ಯಾತ್ಮ ಗ್ರಂಥವು. ಆತ್ಮ ಸಾಕ್ಷಾತ್ಕಾರಕ್ಕಾಗಿ ಶರೀರದಲ್ಲಿರುವ ಪರಮಾತ್ಮದೇವನ ದರ್ಶನಗೈಯುವುದಕ್ಕಾಗಿರುತ್ತದೆ. ಇದರ ಮುಖ್ಯೋದ್ದೇಶವು ಪರವಸ್ತುವಿನ ಇಚ್ಛೆಯಿಂದಲ್ಲವು; ಕಿಂತು ಸಿದ್ಧಪದವಿಯ ಪ್ರಾಪ್ತಿಗಾಗಿಯೇ ಆಗಿರುತ್ತದೆ. ಅರ್ಥಾತ್ ಇದೇ ಈ ಗ್ರಂಥ ರಚನೆಯ ಮುಖ್ಯ ಉದ್ದೇಶ್ಯವೆಂದು ಭಾವಿಸಬೇಕು.

ಪರಮಯೋಗಿ ವರ್ಯರಾದ ಕುಂದಕುಂದಾಚಾರ್ಯರೂ ಕೂಡಾ ಸಮಯಸಾರ ಗ್ರಂಥದ ಆದಿಯಲ್ಲಿ ಸಿದ್ಧಾತ್ಮರನ್ನೇ ಸ್ಮರಿಸಿರುತ್ತಾರೆ, ವಂದಿಸಿರುತ್ತಾರೆ. ಅವರು ಹೇಳುತ್ತಾರೆ:—

**ವಂದಿತ್ತು ಸವ್ವಸಿದ್ಧೇ ಧುವ ಮಮಲ ಮಣೋವಮಂ-**
**ಗದಿಂಪತ್ತೇ।**
**ವೋಚ್ಛಾಮಿ ಸಮಯ ಪಾಹುಡ ಮಿಣಮೋ**
**ಸುದಕೇವಲಿಭಣಿದಂ ॥೧॥**

**ಭಾವಾರ್ಥ** : ನಿತ್ಯವೂ, ಶುದ್ಧವೂ, ಅನುಪಮವೂ ಆದ ಸಿದ್ಧಗತಿಯನ್ನು ಪಡೆದ ಸಿದ್ಧಾತ್ಮರಿಗೆ ವಂದಿಸಿ, ಶ್ರುತಕೇವಲಿಗಳಿಂದ ಪ್ರಣೀತ ಸಮಯ ಪ್ರಾಭೃತವನ್ನು ವರ್ಣಿಸುವೆನು.

ಯೋಗೀಂದ್ರಾಚಾರ್ಯರು ಪರಮಾತ್ಮ ಪ್ರಕಾಶ ಗ್ರಂಥದ ಪ್ರಥಮದಲ್ಲಿಯು ಸಿದ್ಧಾತ್ಮರಿಗೇನೇ ವಂದಿಸಿರುವರು.

**ಜೇ ಜಾಯಾ ಝಾಣಗ್ಗಿ ಯುಏ ಕಮ್ಮಕಲಂಕ ಡಹೇವಿ।**
**ಣಿಚ್ಚ ಣಿರಂಜನ ಣಾಣಮಯು ತೇ ಪರಮಪ್ಪ ಣವೇವಿ ॥೧॥**

**ಭಾವಾರ್ಥ :** ಯಾರು ಧ್ಯಾನರೂಪವಾದ ಅಗ್ನಿಯಿಂದ ಕರ್ಮಕಲಂಕ ವನ್ನು ನಾಶಮಾಡಿ, ನಿತ್ಯವೂ ನಿರಂಜನ ಮತ್ತು ಜ್ಞಾನರೂಪಮಯವಾದ ಸಿದ್ಧಾವಸ್ಥೆಯನ್ನು ಹೊಂದಿರುವರೋ, ಅಂತಹ ಸಿದ್ಧಾತ್ಮರನ್ನು ನಮಸ್ಕರಿ ಸುತ್ತೇನೆ.

ಶ್ರೀ ಪೂಜ್ಯಪಾದ ಸ್ವಾಮಿಯವರೂ ಕೂಡಾ ಸಮಾಧಿ ಶತಕ ಗ್ರಂಥ ವನ್ನು ಪ್ರಾರಂಭಿಸಿ ಪ್ರಥಮದಲ್ಲಿಯೇ ಸಿದ್ಧಪರಮಾತ್ಮರುಗಳಿಗೇನೇ ವಂದಿಸಿ ರುತ್ತಾರೆ.

**ಯೇನಾತ್ಮ ಬುಧ್ಯತಾತ್ಮೈವ, ಪರತ್ವೇನೈವ ಚಾಪರಮ್ ।**
**ಅಕ್ಷಯಾನಂತಬೋಧಾಯ, ತಸ್ಮೈ ಸಿದ್ಧಾತ್ಮನೇ ನಮಃ ॥**

**ಭಾವಾರ್ಥ :** ಯಾರು ತನ್ನಾತ್ಮನನ್ನು ಆತ್ಮಸ್ವರೂಪನಾಗಿಯೂ, ಪರವಸ್ತುಗಳನ್ನು ಪರಸ್ವರೂಪವಾಗಿಯೂ ತಿಳಿದು, ಭೇದವಿಜ್ಞಾನದ ಬಲ ದಿಂದ ಅಕ್ಷಯವೂ, ಅನಂತವೂ ಆದ ಕೇವಲಜ್ಞಾನವನ್ನು ಪಡೆದರೋ, ಅಂತಹ ಸಿದ್ಧ ಪರಮಾತ್ಮರನ್ನೇ ವಂದಿಸುತ್ತೇನೆ.

ಶ್ರೀ ದೇವಸೇನಾಚಾರ್ಯರು ಕೂಡಾ ತತ್ವಸಾರ ಗ್ರಂಥದ ಪ್ರಾರಂಭ ದಲ್ಲಿ ಸಿದ್ಧಾತ್ಮರನ್ನೇ ವಂದಿಸಿರುತ್ತಾರೆ.

**ಝಾಣಗ್ಗಿ ದಡ್ಢಕಮ್ಮೇ ಣಿಮ್ಮಲವಿಸುದ್ಧಲದ್ಧ ಸಬ್ಭಾವೇ ।**
**ಣಮಿ ಊಣ ಪರಮಸಿದ್ಧೇ ಸು ತಚ್ಚಸಾರಂ ಪವೋಚ್ಛಾಮಿ॥**

ಭಾವಾರ್ಥ : ಧ್ಯಾನ್ಯಾಗ್ನಿಯಿಂದ ಕರ್ಮಮಲವನ್ನು ನಾಶಮಾಡಿ ದವರೂ, ನಿರ್ಮಲವೂ, ಪರಿಶುದ್ಧವೂ ಆದ ನಿಜ ಸ್ವಭಾವವನ್ನು ಪಡೆದ ಸಿದ್ಧ ಪರಮೇಷ್ಠಿಗಳನ್ನು ವಂದಿಸಿ ತತ್ವಸಾರ ಗ್ರಂಥವನ್ನು ರಚಿಸುವೆನು.

ಶ್ರೀ ಪೂಜ್ಯಪಾದರು ಇಷ್ಟೋಪದೇಶದ ಆದಿಯಲ್ಲಿ ಸಿದ್ಧರನ್ನೇ ವಂದಿ ಸಿರುತ್ತಾರೆ.

ಯಸ್ಯ ಸ್ವಯಂ ಸ್ವಭಾವಾಪ್ತಿರಭಾವೇ ಕೃತ್ಸ್ನಕರ್ಮಣಃ ।
ತಸ್ಮೈ ಸಂಜ್ಞಾನರೂಪಾಯ ನಮೋಽಸ್ತು ಪರಮಾತ್ಮನೇ ॥

**ಭಾವಾರ್ಥ :** ಸಕಲ ಕರ್ಮಗಳನ್ನು ನಾಶಗೈದು ಸ್ವಸ್ವರೂಪವನ್ನು ಪ್ರಕಾಶಗೊಳಿಸಿ ಸಮ್ಯಗ್ದರ್ಶನ, ಸಮ್ಯಜ್ಞಾನ, ಸಮ್ಯಕ್ಚಾರಿತ್ರ ಸ್ವರೂಪ ಮತ್ತಾಗಿರುವ ಸಿದ್ಧ ಪರಮೇಷ್ಠಿಗಳನ್ನು ನಮಸ್ಕರಿಸುತ್ತೇನೆ ಈ ನಮಸ್ಕಾರವು ಭಾವ ನಮಸ್ಕಾರವೆಂದೂ, ದ್ರವ್ಯ ನಮಸ್ಕಾರವೆಂದೂ ಎರಡು ವಿಧವು. ನಾವು ಯಾರನ್ನು ವಂದಿಸುತ್ತೇವೆಯೋ ಅವರ ಗುಣಗಳನ್ನು ಮನಸ್ಸಿನಲ್ಲಿ ಧಾರಣೆ ಮಾಡಿಕೊಳ್ಳುವುದೇ ಭಾವನಮಸ್ಕಾರವು. ವಚನಗಳ ಮೂಲಕವೂ ಶಾರೀರಕ ಮೂಲಕವಾಗಿ ಅಂತರಂಗವನ್ನು ಪ್ರಕಾಶಪಡಿಸುವುದೇ ದ್ರವ್ಯ ನಮಸ್ಕಾರವು. ಭಾವದಿಂದ್ಯುಕ್ತವಾದ ದ್ರವ್ಯ ನಮಸ್ಕಾರವೇ ಕಾರ್ಯಕಾರಿಯಾಗಿರುವುದು.



## ಅರಹಂತರಿಗೆ ನಮಸ್ಕಾರವು

ಘಾಇಚಉಕ್ಕಹ ಕಿಉ ವಿಲಉ ಅಣಂತ ಚಉಕ್ಕ ಪದಿಟ್ಠು ।
ತಹಿಂ ಜಿಣ ಇಂದಹಂ ಪಯ ಣವಿವಿ ಅಕ್ಖವಿಮಿ ಕಬ್ಬು
ಸುಇಟ್ಠು ॥ ೧ ॥

**ಅನ್ವಯಾರ್ಥ :** ಘಾಇಚಉಕ್ಕಹಂ ವಿಲಉ ಕಿಉ–ಜ್ಞಾನಾವರಣ ಮೊದಲಾದ ನಾಲ್ಕು ಘಾತಿಕರ್ಮಗಳನ್ನು ನಾಶಮಾಡಿ, ಅಣಂತ ಚಉಕ್ಕ ಪದಿಟ್ಠು–ಅನಂತ ಜ್ಞಾನಾದಿ ಅನಂತ ಚತುಷ್ಟಯವನ್ನು ಪಡೆದ, ತಹಿ ಜಿಣ ಇಂದಹಂ ಪಯು–ಜಿನದೇವನ ಚರಣ ಕಮಲಗಳಿಗೆ, ಣವಿವಿ–ನಮಸ್ಕರಿಸಿ, ಸುಇಟ್ಟು ಕಬ್ಬು–ಸುಂದರವೂ ಪ್ರಿಯವೂ ಆದ ಕಾವ್ಯವನ್ನು, ಅಕ್ಖವಿ–ವರ್ಣಿಸುತ್ತೇನೆ.

**ಭಾವಾರ್ಥ :** ಹದಿಮೂರನೆಯ ಗುಣಸ್ಥಾನವರ್ತಿಗಳಾದ ಸಯೋಗ ಕೇವಲಿ (ಅರಹಂತ) ಗಳಾಗಲಿ ಅಥವಾ ಅಯೋಗ ಕೇವಲಿಗಳಾಗಲಿ ಜಿನೇಂ

ದ್ರರೇ ಆಗಿರುತ್ತಾರೆ. ಯಾವಾಗ ಈ ಅಜ್ಞಾನಿ ಜೀವಗಳು ತತ್ವಜ್ಞಾನ ಚಿಂತಕರಾಗಿ, ಮಿಥ್ಯಾತ್ವ, ಸಮ್ಯಗ್ಮಿಥ್ಯಾತ್ವ ಮತ್ತು ಸಮ್ಯಕ್ತ್ವ ಪ್ರಕೃತಿ ಈ ಮೂರು ದರ್ಶನ ಮೋಹನೀಯ ಕರ್ಮಗಳನ್ನೂ, ತಥಾ ಅನಂತಾನುಬಂಧೀ ನಾಲ್ಕು ಕಷಾಯಗಳ ಉಪಶಮ, ಕ್ಷಯೋಪಶಮ ಅಥವಾ ಕ್ಷಯವನ್ನೂ ಮಾಡಿದೊಡನೆ, ನಾಲ್ಕನೆಯ ಅವಿರತ ಸಮ್ಯಕ್ತ್ವ ಗುಣಸ್ಥಾನವನ್ನು ಪಡೆದು ಏಕದೇಶ ಜಿನನೆಂದು ಹೇಳಿಸಿಕೊಳ್ಳುವನು. ಯಾಕೆಂದರೆ ಆತನು ಚತುರ್ಗತಿ ಭ್ರಮಣಕ್ಕೆ ಕಾರಣಗಳಾದ ಮಿಥ್ಯಾತ್ವವನ್ನು ಮತ್ತು ಮಿಥ್ಯಾತ್ವ ಸಹಿತವಾದ ರಾಗದ್ವೇಷಾದಿ ವಿಕಾರಗಳನ್ನು ಜಯಿಸಿ, ಸಂಸಾರದಿಂದ ವೈರಾಗ್ಯ ಭಾವನೆಯುಳ್ಳವನಾಗಿ ಪರಮಪಾವನ ಮೋಕ್ಷ ಸುಖದ ಅಭಿರುಚಿಯುಳ್ಳವನಾಗಿರುತ್ತಾನೆ; ಅರ್ಥಾತ್ ನಿರ್ವಾಣಪದಪ್ರಾಪ್ತಿಯ ತೀವ್ರವಾದ ಅಭಿರುಚಿಯುಳ್ಳವನಾಗಿರುತ್ತಾನೆ. ಕ್ಷಾಯಿಕ ಸಮ್ಯಕ್ತ್ವ ಜೀವನು ಶ್ರಾವಕನಾಗಿರಲಿ ಅಥವಾ ಮುನಿಯಾಗಿರಲಿ ಏಳನೆಯ ಗುಣಸ್ಥಾನವಾದ ಅಪ್ರಮತ್ತ ಗುಣಸ್ಥಾನವವರೆಗೆ ಧರ್ಮಧ್ಯಾನಾಭ್ಯಾಸವನ್ನು ಪೂರ್ಣಗೊಳಿಸಿ ಕ್ಷಪಕಶ್ರೇಣಿಯಲ್ಲಿ ಏರುತ್ತ (ಆರೂಢನಾಗಿ) ಹತ್ತನೆಯ ಸೂಕ್ಷ್ಮ ಮೋಹ ಗುಣಸ್ಥಾನದ ಅಂತ್ಯದಲ್ಲಿ ಚಾರಿತ್ರ ಮೋಹನೀಯ ಕರ್ಮವನ್ನು ಸರ್ವವಿಧದಿಂದ ನಾಶಗೊಳಿಸಿ, ಹನ್ನೆರಡನೆಯ ಗುಣಸ್ಥಾನದಲ್ಲಿ ಕ್ಷೀಣ ಮೋಹ ಜಿನನಾಗುತ್ತಾನೆ. (ಜಿನರೆಂಬ ಸಂಜ್ಞೆ ಇರುತ್ತದೆ.)

ನಾಲ್ಕನೆಯ ಅವಿರತ ಸಮ್ಯಕ್ತ್ವ ಗುಣಸ್ಥಾನದಿಂದ ಹನ್ನೆರಡನೆಯ ಗುಣಸ್ಥಾನದವರೆಗೆ ಜಿನನೆಂಬ ಸಂಜ್ಞೆ ಇರುತ್ತದೆ. ಮತ್ತೆ ಹನ್ನೆರಡನೆಯ ಗುಣಸ್ಥಾನದಲ್ಲಿ ಬಾಕಿ ಉಳಿದ ಜ್ಞಾನಾವರಣ, ದರ್ಶನಾವರಣ ಮತ್ತು ಅಂತರಾಯವೆಂಬ ಮೂರು ಕರ್ಮಗಳನ್ನು ಕ್ಷಯ (ನಾಶ) ಮಾಡಿ ಸಯೋಗ ಕೇವಲಿ ಎಂಬ ಹದಿಮೂರನೆಯ ಗುಣಸ್ಥಾನವು ಪ್ರಾಪ್ತವಾದೊಡನೆ ಜಿನೇಂದ್ರ ದೇವ (ಅರಹಂತ) ನೆಂದು ಹೇಳಿಸಿಕೊಳ್ಳುತ್ತಾರೆ. ಈ ಗುಣಸ್ಥಾನದಲ್ಲಿ ನಾಲ್ಕು ಘಾತಿಕರ್ಮಗಳ ಅಭಾವದಿಂದ (ಘಾತಿಕರ್ಮಗಳ ನಾಶದಿಂದ) ಅನಂತಜ್ಞಾನ, ಅನಂತದರ್ಶನ, ಅನಂತಸುಖ, ಅನಂತವೀರ್ಯ, ಕ್ಷಾಯಿಕ ಸಮ್ಯಕ್ತ್ವ, ಕ್ಷಾಯಿಕದಾನ, ಕ್ಷಾಯಿಕಲಾಭ, ಕ್ಷಾಯಿಕಭೋಗ, ಕ್ಷಾಯಿಕ

ಉಪಭೋಗ ಈ ಒಂಭತ್ತು ಕೇವಲ ಲಬ್ಧಿಗಳು ಪ್ರಾಪ್ತವಾಗುತ್ತವೆ. ಈ ಒಂಭತ್ತು ವಿಶೇಷಣಗಳು ಅನಂತ ಚತುಷ್ಟಯಗಳಲ್ಲಿಯೇ ಗರ್ಭಿತವಾಗಿವೆ. ಯಾಕೆಂದರೆ ಮೇಲೆ ಹೇಳಿದ ಗುಣಗಳಿಲ್ಲದೆ ಅನಂತಸುಖವುಂಟಾಗಲಾರದು. ಅನಂತದಾನಾದಿ ನಾಲ್ಕನ್ನು ಅನಂತವೀರ್ಯದಲ್ಲಿಯೇ ಅಡಗಿಸಿರುತ್ತಾರೆ. ಅವು ಅದರ ಪರಿಣತಿಯಾಗಿರುತ್ತವೆ. ಹೀಗೆ ಅನಂತ ಚತುಷ್ಟಯಗಳಲ್ಲಿಯೇ ಒಂಭತ್ತು ಗುಣಗಳು ಗರ್ಭಿತವಾಗಿರುತ್ತವೆ. ಸಯೋಗ ಕೇವಲಿ ಅವಸ್ಥೆಯಲ್ಲಿಯೇ ಅರಹಂತ ಪರಮದೇವನು ಧರ್ಮೋಪದೇಶವನ್ನು ಗೈಯುತ್ತಾನೆ. ಅವರ ಅದ್ಭುತ ದಿವ್ಯವಾಣಿಯ ಪ್ರಭಾವವು ಅಲ್ಲಿ ಸೇರಿರುವ ದೇವತೆಗಳಿಗೂ. ಮನುಷ್ಯರಿಗೂ, ಪಶುಗಳಿಗೂ ಕಲ್ಯಾಣಕಾರಿಯಾಗಿರುತ್ತದೆ. (ಅವರ ವಚನದ ಭಾವವನ್ನು ಅರಿತು ನಿರ್ಮಲವೂ, ಆನಂದಮಯವೂ ಆದ ಸಂತೋಷವನ್ನು ಹೊಂದುತ್ತಾರೆ.)

ಆ ಸರ್ವಭಾಷಾಮಹಿ ಭಾಷೆಯಾದ ದಿವ್ಯವಾಣಿಯನ್ನು ನಾಲ್ಕು ಜ್ಞಾನಧಾರಿಗಳಾದ ಗಣಧರರು ಧರಿಸಿ ದ್ವಾದಶಾಂಗ ರೂಪವಾಗಿ ರಚಿಸಿದರು. ಅವುಗಳನ್ನು ಗುರು ಪರಂಪರೆಯು ತಮ್ಮ ತಮ್ಮ ಜ್ಞಾನಶಕ್ತಿಗನುಸಾರವಾಗಿ ತಿಳಿದು ಅನ್ಯ ಗ್ರಂಥಗಳನ್ನು ರಚಿಸಿದರು. ಅಂತಹ ಪವಿತ್ರವಾದ ಗ್ರಂಥಗಳಿಂದಲೇ ಸತ್ಯ ಧರ್ಮದ ಪ್ರಚಾರ ಆಯಿತು. ಆ ಜಿನವಾಣಿಯಿಂದಲೇ ಸಿದ್ಧಪರಮೇಷ್ಠಿಗಳ ಸ್ವರೂಪ ಜ್ಞಾನವೂ, ಧರ್ಮ ಮತ್ತು ಅದರ ಭೇದ ಪ್ರಭೇದ ಜ್ಞಾನವೂ ಆಗುತ್ತದೆ. ಪವಿತ್ರ ವಾಣಿಯ ಮೂಲ ಕರ್ತೃಗಳಾದ ಅರಹಂತ ದೇವನೇ ಸಕಲ ಜೀವಗಳ ಮಹೋಪಕಾರಿಗಳೆಂದು ತಿಳಿದು ಅನಾದಿ ಮೂಲ ಮಹಾ ಮಂತ್ರವಾದ ಣಮೋಕಾರ ಮಂತ್ರದ ಮೊದಲಲ್ಲಿ ಅರಹಂತರಿಗೇನೇ ನಮಸ್ಕಾರವನ್ನು ಸಲ್ಲಿಸಿರುವರು. ಆಮೇಲೆ ಸಿದ್ಧಪರಮೇಷ್ಠಿಗಳನ್ನು ವಂದಿಸಿದರು. ಯಾವ ಮಹಾತ್ಮರು ದರ್ಶನ ವಿಶುದ್ಧ್ಯಾದಿ ಷೋಡಶ ಕಾರಣ ಭಾವನೆಗಳನ್ನು ಉತ್ತಮ ರೀತಿಯಿಂದ ಭಾವಿಸಿ, ತೀರ್ಥಂಕರ ನಾಮ ಕರ್ಮವನ್ನು ಬಂಧಿಸಿಕೊಂಡಿರುತ್ತಾರೆಯೋ, ಅವರೇ ತೀರ್ಥಂಕರ ಕೇವಲಿಗಳು. ತೀರ್ಥಂಕರ ಪರಮದೇವರು ಭರತಕ್ಷೇತ್ರ ಮತ್ತು ಐರಾವತ ಕ್ಷೇತ್ರಗಳಲ್ಲಿ ಇಪ್ಪತ್ತನಾಲ್ಕು ಇಪ್ಪತ್ತನಾಲ್ಕರಂತೆ ಜನಿಸುತ್ತಾರೆ. ವಿದೇಹ ಕ್ಷೇತ್ರದಲ್ಲಿ ಸದಾಕಾಲದಲ್ಲೂ

ತೀರ್ಥಂಕರ ಪರಮದೇವರ ಉತ್ಪತ್ತಿಯು ಆಗಿತ್ತಿರುತ್ತದೆ. ಅಲ್ಲಿ ಕಡಿಮೆಯಿಂದ ಕಡಿಮೆ ಇಪ್ಪತ್ತು ಜನರು ಮತ್ತು ಹೆಚ್ಚೆಂದೆಚ್ಚು ನೂರರವತ್ತು ಜನ ತೀರ್ಥಂಕರರು ಆಗುತ್ತಾರೆ. ಭರತ, ಐರಾವತ ಕ್ಷೇತ್ರಗಳ ತೀರ್ಥಂಕರರಿಗೆ ಗರ್ಭ, ಜನ್ಮ, ದೀಕ್ಷೆ, ಕೇವಲ, ಮೋಕ್ಷಗಳೆಂಬ ಪಂಚಕಲ್ಯಾಣ ಸಂಬಂಧವಾದ ಮಹಾ ಮಹೋತ್ಸವಗಳನ್ನು ದೇವೇಂದ್ರಾದಿ ದೇವತೆಗಳು ಅತಿ ವೈಭವದಿಂದ ಮಾಡುತ್ತಾರೆ. ಕಾರಣ ಅವರು ಮೊದಲು ತೀರ್ಥಂಕರ ನಾಮ ಕರ್ಮ ಬಂಧಿಸಿಕೊಂಡದ್ದರಿಂದಲೇ ಪಂಚಕಲ್ಯಾಣಗಳಿಗೆ ಅಧಿಪತಿಗಳಾಗುತ್ತಾರೆ. ವಿದೇಹ ಕ್ಷೇತ್ರದಲ್ಲಿ ಕೆಲವರು ಮಹಾತ್ಮರು ಶ್ರಾವಕಪದವಿಯಲ್ಲಿದ್ದು, ಇನ್ನೂ ಕೆಲವರು ಮುನಿಪದವಿಯಲ್ಲಿದ್ದು, ತೀರ್ಥಂಕರ ಕರ್ಮವನ್ನು ಬಂಧಿಸಿಕೊಂಡದ್ದರಿಂದ, ಕೆಲವರು ದೀಕ್ಷೆ, ಕೇವಲ, ನಿರ್ವಾಣಗಳೆಂಬ ಮೂರುಕಲ್ಯಾಣಗಳಿಗೂ, ಮತ್ತೆ ಕೆಲವರು ಕೇವಲ, ನಿರ್ವಾಣಗಳೆಂಬೆರಡು ಕಲ್ಯಾಣಗಳಿಗೂ ಅಧಿಕಾರಿಗಳಾಗುತ್ತಾರೆ.

ತೀರ್ಥಂಕರ ದೇವರ ವಿಶೇಷ ಪುಣ್ಯ ಕರ್ಮದ ವಿಪಾಕದಿಂದ ಸಮವಸರಣ ಮಹಾಸಭೆಯ ರಚನೆಯಾಗುತ್ತದೆ. ಆ ಶ್ರೀಮಂಟಪದಲ್ಲಿ ಭಗವಂತನ ಗಂಧಕುಟಿಯ ನಾಲ್ಕು ಕಡೆಗಳಲ್ಲಿಯೂ ಹನ್ನೆರಡು ಸಭೆಗಳಿರುತ್ತವೆ. ಅವುಗಳಲ್ಲಿ ಹನ್ನೆರಡು ವಿಧದ ಜೀವಗಳು ಬಂದು ಕುಳಿತುಕೊಳ್ಳುತ್ತಾರೆ.

ಸಮವಸರಣ ಸ್ತೋತ್ರದಲ್ಲಿ ವಿಷ್ಣುಸೇನ ಮುನಿಗಳು ಇಂತು ಬಣ್ಣಿಸಿರುವರು:

**ಋಷಿಕಲ್ಪಜವನಿತಾರ್ಯ ಜ್ಯೋತಿರ್ವನ ಭವನ**
**ಯುವತಿ ಭಾವನಜಾಃ।**
**ಜ್ಯೋತಿಷ್ಕ ಕಲ್ಪದೇವಾ ನರತಿರ್ಯಂಚೋ ವಸಂತಿ**
**ತೇಷ್ವನುಪೂರ್ವಂ ॥ ೧೯ ॥**

**ಭಾವಾರ್ಥ:** ಈ ಹನ್ನೆರಡು ಸಭೆಗಳಲ್ಲಿ ಕ್ರಮವಾಗಿ ೧) ಋಷಿಸಮೂಹವು, ೨) ಸ್ವರ್ಗವಾಸಿದೇವಿಯರು, ೩) ಸಾಧ್ವಿಗಳಾದ ಆರ್ಜಿಕೆಯರು ಮತ್ತು ಮನುಷ್ಯ ಸ್ತ್ರೀಯರು, ೪) ಜ್ಯೋತಿಷ್ಕದೇವಿಯರು, ೫) ವ್ಯಂತರದೇವಿಯರು, ೬) ಭವನವಾಸಿ ದೇವಿಯರು, ೭) ಭವನವಾಸಿ ದೇವತೆ

ಗಳು, ೮) ವ್ಯಂತರ ದೇವತೆಗಳು, ೯) ಜ್ಯೋತಿಷ್ಕ ದೇವತೆಗಳು, ೧೦) ಸ್ವರ್ಗವಾಸಿ ದೇವತೆಗಳು, ೧೧) ಮನುಷ್ಯರು, ೧೨) ತಿರ್ಯಂಚಗಳು ಕುಳಿತುಕೊಳ್ಳುತ್ತಾರೆ.

ಸಾಮಾನ್ಯ ಕೇವಲಿಗಳಿಗೆ ಗಂಧಕುಂಟಿಯು ಮಾತ್ರ ಇರುತ್ತದೆ. ಎಲ್ಲ ಅರಹಂತ ಪರಮೇಷ್ಠಿಗಳು ಕ್ಷುಧಾ ತೃಷಾದಿ ಹದಿನೆಂಟು ದೋಷಗಳನ್ನು ನಾಶಮಾಡಿದವರೂ, ಪರಮೌದಾರಿಕ ದಿವ್ಯದೇಹಧಾರಿಗಳೂ, ಸಪ್ತಧಾತು ರಹಿತವಾದ ಶುದ್ಧ ಸ್ಫಟಿಕದಂತೆ ನಿರ್ಮಲರೂ ಆಗಿರುತ್ತಾರೆ; ಆ ಪವಿತ್ರ ಶರೀರವು ಯೋಗಗಳ ಬಲದಿಂದ ಆಕರ್ಷಿಸಲ್ಪಟ್ಟ ಆಹಾರಕ ವರ್ಗಣೆಯಿಂದ ಪರಿಪುಷ್ಟಕವಲಾಹಾರದಿಂದ ರಹಿತರೂ ಆಗಿರುತ್ತಾರೆ. ಉದಾ :-ವೃಕ್ಷಾದಿಗಳ ಪುಷ್ಟಿಯು ಲೇಪಾಹಾರದಿಂದಾಗುವಂತೆ ನೋ ಕರ್ಮ ಆಹಾರದಿಂದಲೇ ವೃದ್ಧಿ ಹೊಂದುವುದು. ನಖಕೇಶಾದಿಗಳು ಬೆಳೆಯದೆ ಸಮವಾಗಿರುವಿಕೆಯು, ಶರೀರದ ನೆರಳು ಬೀಳದಿರುವಿಕೆಯು ಮೊದಲಾದ ವಿಶೇಷಗಳಾಗಿರುತ್ತವೆ.

ಪರಮಾತ್ಮನ ಸ್ವರೂಪವನ್ನು ಇಂತು ಬಣ್ಣಿಸಿದ್ದಾರೆ.

ನಷ್ಟಂ ಛದ್ಮಸ್ಥ ವಿಜ್ಞಾನಂ ನಷ್ಟಂ ಕೇಶಾದಿ ವರ್ಧನಂ।
ನಷ್ಟಂ ದೇಹಮಲಂ ಕೃತ್ಸ್ನಂ ನಷ್ಟೇ ಘಾತಿ ಚತುಷ್ಟಯೇ ॥೮॥

ನಷ್ಟಂ ಮರ್ಯಾದ ವಿಜ್ಞಾನಂ ನಷ್ಟಂ ಮಾನಸಗೋಚರಂ।
ನಷ್ಟಂ ಕರ್ಮಮಲಂ ದುಷ್ಟ ನಷ್ಟೋ ವರ್ಣಾತ್ಮಕೋ ಧ್ವನಿಃ ॥೯॥

ನಷ್ಟಾಃ ಕ್ಷುತ್ತೃಡ್ ಭಯಸ್ವೇದಾ ನಷ್ಟಂ ಪ್ರತ್ಯೇಕ ಬೋಧನಂ।
ನಷ್ಟಂ ಭೂಮಿಗತಂ ಸ್ಪರ್ಶಂ ನಷ್ಟಂ ಚೇಂದ್ರಿಯಜಂ ಸುಖಂ ॥೧೦॥

ನಷ್ಟಾ ಸದೇಹಜಾ ಛಾಯಾ ನಷ್ಟಾ ಚೇಂದ್ರಿಯಜಾ ಪ್ರಭಾ।
ನಷ್ಟಾ ಸೂರ್ಯಪ್ರಭಾ ತತ್ರ ಸೋತೇಽನಂತಚತುಷ್ಟಯೇ ॥೧೧॥

ತದಾ ಸ್ಫಟಿಕಸಂಕಾಶಂ ತೇಜೋ ಮೂರ್ತಿಮಯಂ ವಪುಃ।
ಜಾಯತೇ ಕ್ಷೀಣದೋಷಸ್ಯ ಸಪ್ತಧಾತು ವಿವರ್ಜಿತಂ ॥೧೨॥

ಕ್ಷುಧಾತೃಷಾಭಯಂ ದ್ವೇಷೋ ರಾಗೋ ಮೋಹಸ್ಯ ಚಿಂತನಂ ।
ಜರಾರುಜಾ ಚ ಮೃತ್ಯುಶ್ಚ ಸ್ವೇದಃ ಖೇದೋಮದೋರತಿಃ ॥ ೧೩ ॥
ವಿಸ್ಮಯೋ ಜನನಂ ನಿದ್ರಾ ವಿಷಾದೋಽಷ್ಟಾದಶ ಧ್ರುವಾಃ ।
ತ್ರಿಜಗತ್ಸರ್ವಭೂತಾನಾಂ ದೋಷಾಃ ಸಾಧಾರಣಾ ಇಮೇ ॥ ೧೪ ॥
ಏತೈರ್ದೋಷೈರ್ವಿನಿರ್ಮುಕ್ತಃ ಸೋಽಯಮಾಪ್ತೋ ನಿರಂಜನಃ ।
ವಿದ್ಯಂತೇ ಯೇಷು ತೇ ನಿತ್ಯಂ ಸೋಽತ್ರ ಸಂಸಾರಿಣಃ
ಸ್ಮೃತಾಃ ॥ ೧೫ ॥

**ಭಾವಾರ್ಥ :** ಜ್ಞಾನಾವರಣ, ದರ್ಶನಾವರಣ, ಮೋಹನೀಯ ಮತ್ತು ಅಂತರಾಯಗಳೆಂಬ ಘಾತಿಕರ್ಮಗಳ ಸಂಪೂರ್ಣ ನಾಶದಿಂದ, ಅಲ್ಪ ಜ್ಞಾನಿಗಳಂತೆ ಜ್ಞಾನವಿರುವುದಿಲ್ಲವು, ನಖಕೇಶಗಳು ಬೆಳೆಯುವುದಿಲ್ಲವು, ಶರೀರ ಸಂಬಂಧವಾದ ಮಲವು ಇರುವುದಿಲ್ಲವು, ಸಂಪೂರ್ಣ ಜ್ಞಾನವು ಪ್ರಕಾಶಿಸುವುದು, ಮಾನಸಿಕ ಸಂಕಲ್ಪ ವಿಕಲ್ಪಗಳು ನಾಶವಾಗುವುವು, ಕರ್ಮಕಲಂಕಗಳು ಮಾಯವಾಗುವುವು, ಮೇಘ ಗರ್ಜನೆಯಂತೆ ನಿರಕ್ಷರ ದಿವ್ಯ ಧ್ವನಿಯು ಪ್ರಾದುರ್ಭವಿಸುವುವು, ಹೊಟ್ಟೆ ಹಸಿವೆ, ಬಾಯಾರಿಕೆ, ಭಯ, ಬೆವರು ಮೊದಲಾದ ದೋಷಗಳಿರುವುದಿಲ್ಲವು, ಪ್ರತಿಯೊಂದು ಪ್ರಾಣಿಗೂ ತಿಳಿಸುವ ಕ್ರಿಯೆಯಿಲ್ಲದಿರುವಿಕೆಯು, ಸಾಧಾರಣ ಧ್ವನಿಯು ಹೊರಡುವುದು, ಭೂಮಿಯನ್ನು ಸ್ಪರ್ಶಿಸದಿರುವಿಕೆಯು, ಇಂದ್ರಿಯ ಸುಖವು ಇಲ್ಲದಿರುವಿಕೆಯು, ಅತೀಂದ್ರಿಯ ಸ್ವಾಧೀನ ಸುಖವುಂಟಾಗುವಿಕೆಯು, ಶರೀರದ ನೆರಳು ಬೀಳದಿರುವಿಕೆಯು, ಇಂದ್ರಿಯಗಳ ಪ್ರತಿಭೆಯು ಇಲ್ಲದಿರುವಿಕೆಯು, ಸಂತಾಪಕಾರಿ ಸೂರ್ಯನ ಪ್ರತಿಭೆಯಂತಿರುವಂತೆ ಪ್ರತಿಭೆ ಇಲ್ಲದಿರುವಿಕೆಯು—ಹೀಗೆ ಅನಂತ ಚತುಷ್ಟಯಗಳು ಪ್ರಕಟವಾಗುತ್ತವೆ. ಆಗ ಶುದ್ಧ ಸ್ಪಟಿಕದಂತೆ ತೇಜಃಪುಂಜವಾದ ಶರೀರಮಯವಾಗುವುದು. ಸಪ್ತಧಾತುಗಳಿಲ್ಲದಿರುವವರೇ ಮತ್ತು ೧) ಹಸಿವೆ. ೨) ಬಾಯಾರಿಕೆ. ೩) ಭಯ. ೪) ರಾಗ. ೫) ದ್ವೇಷ. ೬) ಮೋಹ. ೭) ಚಿಂತೆ. ೮) ಮುಪ್ಪು. ೯) ರೋಗ. ೧೦) ಮರಣ. ೧೧) ಬೆವರು. ೧೨) ಖೇದ. ೧೩) ಮದ. ೧೪) ರತಿ. ೧೫)

ಆಶ್ಚರ್ಯ. ೧೬) ಜನನ. ೧೭) ನಿದ್ರೆ. ೧೮) ವಿಷಾದಗಳೆಂಬ ಈ ಹದಿನೆಂಟು ದೋಷಗಳನ್ನು ಸಂಪೂರ್ಣವಾಗಿ ನಾಶಗೊಳಿಸಿದವರೇ ನಿತ್ಯ ನಿರಂಜನರಾದ ಅರಹಂತ ಪರಮೇಷ್ಠಿಗಳೆಂದು ತಿಳಿಯತಕ್ಕದ್ದು. ಅದನ್ನೇ ಸಮವಸರಣ ಸ್ತೋತ್ರದಲ್ಲಿ ಹೇಳಿರುತ್ತಾರೆ:

**ಪುವ್ವಣ್ಹೇ ಮಜ್ಝಣ್ಹೇ ಅವರಣ್ಹೇ ಮಜ್ಝಿಮಾಯ ರತ್ತೀಏ।**
**ಛಹ ಛಹ ಘಡಿಯೋಣಿಗ್ಗಯದಿವಜ್ಝುಣೀ ಕಹಇ ಸುತ್ತತ್ಥೇ ॥೧॥**

**ಭಾವಾರ್ಥ:** ಸಮವಸರಣ ಮಹಾ ಸಭೆಯಲ್ಲಿ ವಿರಾಜಮಾನರಾದ ಶ್ರೀ ತೀರ್ಥಂಕರ ಪರಮದೇವರ ಮುಖ ಕಮಲದಿಂದ ನಿರ್ಗತ ದಿವ್ಯಧ್ವನಿಯು ಪ್ರಾತಃಕಾಲ, ಮಧ್ಯಾಹ್ನ, ಸಾಯಂಕಾಲ ಮತ್ತು ಮಧ್ಯರಾತ್ರಿಯ ಸಮಯ ಗಳಲ್ಲಿ ಆರಾರು ಘಳಿಗೆಯವರೆಗೆ ಸೂತ್ರಾರ್ಥವನ್ನು ಪ್ರಕಟಪಡಿಸುತ್ತ ಹೊರಡು ತ್ತದೆ.

ಯೋಗಶಕ್ತಿಯ ಪರಿಣಮನದಿಂದ ಎಲ್ಲ ಕರ್ಮ, ನೋಕರ್ಮಗಳ ಗ್ರಹಣೆ ಯಾಗುತ್ತದೆ. ಆದರಿಂದ ಆತ್ಮ ಪ್ರದೇಶದಲ್ಲಿ ಚಲನೆಯಾಗುತ್ತದೆ. ಆ ಚಲ ನೆಯ ನಿಮಿತ್ತದಿಂದಲೇ ಸತ್ಯ ಮನೋಯೋಗ, ಅನುಭಯ ಮನೋಯೋಗ ಸತ್ಯವಚನಯೋಗ, ಅನುಭಯ ವಚನಯೋಗ, ಔದಾರಿಕ ಕಾಯಯೋಗ ಕೇವಲೀ ಸಮುದ್ಘಾತದಲ್ಲುಂಟಾಗುವ ಔದಾರಿಕ ಮಿಶ್ರಕಾಯಯೋಗ ಮತ್ತು ಕಾರ್ಮಣ ಕಾಯಯೋಗ ಹೀಗೆ ಏಳು ಪ್ರಕಾರ ಯೋಗಗಳುಂಟಾಗುತ್ತವೆ. ಯಾಕೆಂದರೆ ಶ್ರುತಜ್ಞಾನ ಅಥವಾ ಚಿಂತೆ ಅಥವಾ ತರ್ಕ ಮೊದಲಾದ ಕಾರ ಗಳಿರುವುದಿಲ್ಲವು. ಮನೋವರ್ಗಣೆಯನ್ನು ಗ್ರಹಣ ಮಾಡುವುದರಿಂದ ದ್ರವ್ಯ ಮನಸ್ಸಿನಲ್ಲಿ ಪರಿಣಮನವು ಆಗುತ್ತದೆಂಬ ಅಪೇಕ್ಷೆಯಿಂದಲೇ ಮನೋವರ್ಗಣೆ ಯನ್ನು ಹೇಳಲಾಗಿದೆ. ದಿವ್ಯವಾಣಿಯು ಹೊರಡುತ್ತದೆ. ಶ್ರೀವಿಹಾರವು ಜರಗುತ್ತದೆ. ಕೇವಲೀ ಸಮುದ್ಘಾತದಲ್ಲಿ ಲೋಕಾಕಾಶದ ಪ್ರಮಾಣದಷ್ಟು ಆತ್ಮಪ್ರದೇಶಗಳು ವ್ಯಾಪಿಸುತ್ತವೆ. ಆದ್ದರಿಂದ ಈ ಹದಿಮೂರನೆಯ ಗುಣ ಸ್ಥಾನವು ಆಯುಷ್ಯ ಪರ್ಯಂತರವಿರುವುದು. ಯಾವಾಗ ಇಷ್ಟು ಕಾಲ ಆಯುಷ್ಯವು ಶೇಷವಿರುವಾಗ ಅಂದರೆ ಅ, ಇ, ಉ, ಋ, ಲೃ ಇವೈದು ಅಕ್ಷರಗಳ

ಉಚ್ಚಾರಣೆಯಾಗುವ ಸಮಯದಲ್ಲಿ ಅಯೋಗ ಕೇವಲಿ ಜಿನನಾಗುವನು. ಅಂತ್ಯದ ಎರಡು ಸಮಯದಲ್ಲಿ ಉಳಿದ ನಾಲ್ಕು ಅಘಾತಿಕರ್ಮಗಳ ೮೫ ಪ್ರಕೃತಿಗಳನ್ನು ನಾಶಮಾಡಿ ಅಶರೀರಿಯಾಗಿ ಲೋಕಾಗ್ರ ಭಾಗದ ಸಿದ್ಧಶಿಲೆಯಲ್ಲಿ ವಿರಾಜಮಾನರಾಗುತ್ತಾರೆ. ಹದಿಮೂರನೆಯ ಸಯೋಗ ಕೇವಲೀ ಗುಣಸ್ಥಾನದಲ್ಲಿ ೧೪೮ ಕರ್ಮ ಪ್ರಕೃತಿಗಳ ಪೈಕಿ ೬೩ ಕರ್ಮಪ್ರಕೃತಿಗಳ ನಾಶವಾಗಿರುತ್ತವೆ. ಅವು ಜ್ಞಾನಾವರಣ ೫ + ದರ್ಶನಾವರಣ ೯ + ಮೋಹನೀಯ ೨೮ + ಅಂತರಾಯ ೫ ಹೀಗೆ ಘಾತಿಕರ್ಮಗಳ ೪೭ ಪ್ರಕೃತಿಗಳು. ನರಕ, ತಿರ್ಯಂಚ, ದೇವಾಯು ೩ + ನರಕಗತಿ + ನರಕಗತ್ಯಾನುಪೂರ್ವಿ + ತಿರ್ಯಂಚಗತಿ + ತಿರ್ಯಂಚಗತ್ಯಾನುಪೂರ್ವಿ + ಏಕೇಂದ್ರಿಯ, ದ್ವೀಂದ್ರಿಯ, ತ್ರೀಂದ್ರಿಯ, ಚತುರಿಂದ್ರಿಯ ಜಾತಿ ೪ + ಉದ್ಯೋತ + ಆತಪ + ಸಾಧಾರಣ + ಸೂಕ್ಷ್ಮ + ಸ್ಥಾವರ ಹೀಗೆ ಅಘಾತಿ ಕರ್ಮಗಳ ೧೬ ಪ್ರಕೃತಿಗಳು. ಒಟ್ಟು ೪೭ + ೧೬ = ೬೩ ಕರ್ಮ ಪ್ರಕೃತಿಗಳು.

ಗ್ರಂಥ ಕರ್ತೃಗಳು ತಮ್ಮ ಗ್ರಂಥದ ಮೂಲ ಸ್ತೋತ್ರದಲ್ಲಿ ಅರಹಂತ ಜಿನದೇವನು ಮಹೋಪಕಾರಿಯೆಂದು ಭಾವಿಸಿ ಪ್ರಥಮದಲ್ಲಿ ಅರಹಂತರಿಗೆ ವಂದಿಸಿ, ಈ ಗ್ರಂಥವನ್ನು ಪ್ರಾರಂಭಿಸಲು ಪ್ರತಿಜ್ಞೆ ಗೈಯ್ಯುತ್ತಾರೆ.



## ಗ್ರಂಥ ರಚನೆಯ ನಿಮಿತ್ತ ಮತ್ತು ಪ್ರಯೋಜನ

**ಸಂಸಾರಹಂ ಭಯಭೀಯಾಹಂ ಮೋಕ್ಖಹಂ ಲಾಲಸಿಯಾಹಂ।**
**ಅಪ್ಪಾ ಸಂಬೋಹಣಕಯಇ ಕಯ ದೋಹಾ ಎಕ್ಕಮಣಾಹಂ ॥ ೩ ॥**

**ಅನ್ವಯಾರ್ಥ :** ಸಂಸಾರಹಂ ಭಯಭೀಯಾಹಂ – ಸಂಸಾರದಿಂದ ಭಯ ಪಡುವವರಿಗೂ, ಮೋಕ್ಖಹಂ ಲಾಲಸಿಯಾಂ – ಮೋಕ್ಷಾಭಿಲಾಷೆಯುಳ್ಳವರಿಗೂ, ಅಪ್ಪಾ ಸಂಬೋಹಣಕಯಇ – ಆತ್ಮಸ್ವರೂಪದ ತಿಳುವಳಿಕೆಯ ಪ್ರಯೋಜನದಿಂದ, ಎಕ್ಕಮಣಾಹಂ – ಏಕಾಗ್ರತೆಯಿಂದ, ದೋಹಾಕಯ – ಶ್ಲೋಕಗಳನ್ನು ರಚಿಸಿರುತ್ತದೆ.

**ಭಾವಾರ್ಥ :** ಅನಾದಿ ಕಾಲದಿಂದ ಜೀವಕೋಟಿಯು ಯಾವ ಚತುರ್ಗತಿಗಳಲ್ಲಿ ಭ್ರಮಿಸುತ್ತಿರುತ್ತವೆಯೋ ಅದಕ್ಕೆ ಸಂಸಾರವೆಂದು ಹೇಳುತ್ತಾರೆ. ನಾಲ್ಕುಗತಿಗಳಲ್ಲಿ ಕರ್ಮಗಳುದಯದಿಂದ ಶಾರೀರಕವೂ ಮತ್ತು ಮಾನಸಿಕವೂ ಆದ ದುಃಖ, ಕ್ಲೇಶ ಮತ್ತು ಚಿಂತೆಗಳನ್ನು ಅನುಭವಿಸಬೇಕಾಗುವುದು. ಇದು ಮಹಾ ದುಃಖದಿಂದ ಭರಿತವಾಗಿದೆ. ನರಕಗತಿ–ಆಗಮದ ಆಧಾರದಿಂದ ಶಾರೀರಕವೂ ಮಾನಸಿಕವೂ ಆದ ದುಃಖವನ್ನು ಹಗಲಿರುಳೆನ್ನದೆ ನಾರಕೀ ಜೀವಗಳು ಪರಸ್ಪರ ನಾನಾ ಪ್ರಕಾರದ ಅಪೃಥಕ ವಿಕ್ರಿಯದ ಬಲದಿಂದ ಪಶುಗಳ ಮತ್ತು ಅಸ್ತ್ರಶಸ್ತ್ರಾದಿಗಳನ್ನು ರಚಿಸಿಕೊಂಡು ದುಃಖವನ್ನುಂಟುಮಾಡಿಕೊಳುತ್ತಾರೆ, ಮಾಡುತ್ತಾರೆ. ಅಲ್ಲಿ ಸಂಕ್ಲೇಶ ಪರಿಣಾಮಧಾರಿಗಳಾದ ಅಂಬಾವರೀಶ ಜಾತಿಯ ಅಸುರಕುಮಾರ ದೇವತೆಗಳು ಮೂರನೆಯ ವಾಲುಕಾಪ್ರಭಾ ನರಕಗಳವರೆಗೆ ಹೋಗಿ ಅವರಲ್ಲಿ ಪರಸ್ಪರ ಹೊಡೆದಾಡಿಸಿ ದುಃಖವನ್ನುಂಟುಮಾಡುತ್ತಾರೆ. ವೈಕ್ರಿಯಕ ಶರೀರವಾದುದರಿಂದ ಪಾರಜರಸದಂತೆ ಕರಗಿ ಪುನಃ ಸೇರಿಕೊಳ್ಳುವಂತೆ ಸೇರಿಕೊಳ್ಳುತ್ತಾರೆ. ಹೊಟ್ಟೆ ಹಸಿವೆ, ಬಾಯಾರಿಕೆಯ ವೇದನೆಯನ್ನು ಸಹಿಸುತ್ತಾರೆ. ಆದ್ದರಿಂದಲೇ ಆ ಸ್ಥಾನವು ನರಕ ಅಥವಾ ನರತವೆಂದು ಹೇಳಿಸಿಕೊಳ್ಳಲ್ಪಡುತ್ತದೆ.

**ತಿರ್ಯಂಚಗತಿ :** ಏಕೇಂದ್ರಿಯ ಸ್ಥಾವರಗಳಾದ ಪೃಥ್ವೀ, ಜಲ, ಅಗ್ನಿ ವಾಯು, ವನಸ್ಪತಿ ಮೊದಲಾದ ಜೀವಗಳಿಗೆ ತಮ್ಮ ಪರಾಧೀನತೆಯಿಂದಲೂ, ನಿರ್ಬಲತೆಯಿಂದಲೂ ಘೋರವಾದ ದುಃಖ ಕಷ್ಟಗಳನ್ನು ಸಹಿಸುತ್ತವೆ. ಅವು ಬಾರಿಬಾರಿಗೂ ಜನನ ಮರಣ ದುಃಖವನ್ನು ಹೊಂದುತ್ತಿರುತ್ತವೆ. ದ್ವೀಂದ್ರಿಯ ಕ್ರಿಮಿ, ತೀಂದ್ರಿಯ ಇರುವೆ, ತಿಗಣೆ, ಚತುರಿಂದ್ರಿಯ ಭ್ರಮರ, ನೊಣ, ಪತಂಗದ ಹುಳು ಈ ಮೂರು ವಿಧದ ವಿಕಲತ್ರಯ ಜೀವಗಳು ತಮ್ಮ ಘೋರ ದುಃಖದಲ್ಲಿಯೇ ಕಾಲವನ್ನು ಕಳೆಯುತ್ತವೆ. ವಿಶೇಷವಾಗಿ ಮಾನವರಿಂದಲೂ ಮತ್ತು ಪಶುಗಳ ವ್ಯವಹಾರಗಳಿಂದಲೂ ಈ ಜೀವಗಳ ಜನನ ಮರಣಾದಿಗಳು ಸಂಭವಿಸುತ್ತದೆ. ಪಂಚೇಂದ್ರಿಯ ತಿರ್ಯಂಚಗಳಾದ ದನ, ಎಮ್ಮೆ ಮೊದಲಾದ ಸ್ಥಲಚರಜೀವಗಳು, ಮೀನು, ಮೊಸಳೆ, ಏಡಿ ಮೊದಲಾದ ಜಲಚರಜೀವಗಳು, ಕಾಗೆ, ಗಿಳಿ, ಪಾರಿವಾಳ ಮೊದಲಾದ ನಭಚರಜೀವಗಳು

ಎಷ್ಟು ಮತ್ತು ಎಂಥಹ ಘೋರ ದುಃಖಗಳನ್ನು ಅನುಭವಿಸುತ್ತಿರುವವೆಂದು ಪ್ರತ್ಯಕ್ಷ ತಿಳಿದ ವಿಷಯವಾಗಿದೆ. ಮನುಷ್ಯರ ಅತ್ಯಾಚಾರಗಳಿಂದ ಅನೇಕ ಪಶುಪಕ್ಷಿಗಳು ಹೊಡೆಯಲ್ಪಡುತ್ತವೆ. ಅಧಿಕ ಭಾರವನ್ನು ಹೊರಿಸಲ್ಪಡುತ್ತವೆ. ಉಷ್ಣ, ಶೀತ, ಮಳೆಗಾಳಿಯೆನ್ನದೆ ಅತ್ಯಂತ ದುಃಖಗಳನ್ನು ಸಹಿಸುತ್ತವೆ. ಅರ್ಥಾತ್ ತಿರ್ಯಂಚಗತಿಯ ದುಃಖವು ವರ್ಣಾತೀತವಾಗಿರುತ್ತದೆಂದು ಭಾವವು.

**ಮನುಷ್ಯಗತಿ :** ಈ ಗತಿಯಲ್ಲಿಯು ಇಷ್ಟ ವಿಯೋಗ, ಅನಿಷ್ಟ ಸಂಯೋಗ, ರೋಗ, ದಾರಿದ್ರ್ಯ ಮತ್ತು ಅಪಮಾನ ಸಂಬಂಧವಾದ ಶಾರೀರಕವೂ, ಮಾನಸಿಕವೂ ಆದ ದುಃಖ ಕಷ್ಟಗಳನ್ನು ಸಹಿಸುತ್ತಿರುವುದು ಪ್ರತ್ಯಕ್ಷವಾಗಿರುತ್ತದೆ. ಇದು ಅನುಭವಸಿದ್ಧವಾಗಿದೆ.

**ದೇವಗತಿ :** ಈ ಗತಿಯಲ್ಲಿಯೂ ಮಾನಸಿಕ ದುಃಖವು ಅಪಾರವಾಗಿದೆ. ಕೆಳದರ್ಜೆಯ ದೇವತೆಗಳು ತಮಗಿಂತ ಮೇಲಿನ ದರ್ಜೆಯಲ್ಲಿರುವ ದೇವತೆಗಳ ವೈಭವ, ಸಂಪತ್ತನ್ನು ನೋಡಿ ಅಸೂಯೆಪಡುವುದು, ಅಲ್ಪ ಆಯುಷ್ಯವುಳ್ಳ ದೇವಿಯರ ವಿಯೋಗದಿಂದ ದೇವತೆಗಳು ಘೋರ ವೇದನೆಯನ್ನು ಅನುಭವಿಸುವಿಕೆಯು ಮತ್ತು ತಮ್ಮ ಮರಣವು ಸಮೀಪಿಸಿದೊಡನೆಯೇ ಅತಿ ದುಃಖಿತರಾಗುವಿಕೆಯು ಇವೇ ಮೊದಲಾದ ದುಃಖಶೋಕಗಳನ್ನು ಅನುಭವಿಸುತ್ತಾರೆ. ಹೀಗೆ ನಾಲ್ಕು ಗತಿಗಳಲ್ಲಿಯ ಪಾರಾವಾರವಿಲ್ಲದ ದುಃಖವು ದೃಷ್ಟಿಗೋಚರವಾಗುತ್ತದೆ.

ಈ ಸಂಸಾರದಲ್ಲಿ ಮಹಾ ದುಃಖವೆಂದರೆ ಆಶೆಯು. ಇದರಿಂದಲೇ ಇಂದ್ರಿಯಗಳ ಭೋಗಲಾಲಸೆಯು. ಅವು ದೊರೆತಂತೆಲ್ಲಾ ಆಶೆಯು ವೃದ್ಧಿ ಹೊಂದುತ್ತಾಹೋಗುವುದು. ಅಜ್ಞಾನಿಗಳಾದ ಸಂಸಾರೀ ಜೀವಗಳು ಆಶಾಗ್ನಿಯಿಂದ ಹಗಲಿರುಳು ದಹಿಸಲ್ಪಡುತ್ತವೆ; ವೃದ್ಧಾಪ್ಯವು ತಲೆದೋರಿದರೂ, ವಿಷಯ ಭೋಗಗಳನ್ನು ಅನುಭವಿಸಲು ಶಕ್ತಿಸಾಮರ್ಥ್ಯಗಳಿಲ್ಲದಿದ್ದರೂ ಕೂಡ ಭೋಗವಾಸನೆಯು ಅಧಿಕವಾಗುವುದಲ್ಲದೆ ಕಡಿಮೆಯಾಗಲಾರದು ಮಾತ್ರವಲ್ಲದೆ, ಭೋಗವಸ್ತುಗಳ ಪ್ರಾಪ್ತಿಯಾಗದಿದ್ದರೂ ಕೂಡಾ ಘೋರ ಕಷ್ಟವನ್ನೇ

ಅನುಭವಿಸುತ್ತವೆ. ಆದರಲ್ಲಿಯು ಇಷ್ಟವಸ್ತುಗಳ ವಿಯೋಗವಾದೊಡನೇ ಕೇಳಬೇಕೇ ವೇದನೆಯ ಉದ್ರೇಕವನ್ನು? ಸಂಸಾರಾಸಕ್ತ ವಿಥ್ಯಾದೃಷ್ಟೀ ಜೀವಗಳು ಸಂಸಾರ ಸಾಗರದಲ್ಲಿ ಮುಳಿಗೇಳುತ್ತಿರುತ್ತವೆ. ಅರ್ಥಾತ್ ಮಹಾ ದುಃಖವನ್ನೇ ಅನುಭವಿಸುವವೆಂದು ಭಾವವು. ಸಂಸಾರ ಪರಿಭ್ರಮಣೆಯಿಂದ ಉದಾಸೀನರಾಗಿ ಮೋಕ್ಷಪ್ರೇಮಿಗಳಾದ ಸಮ್ಯಗ್ದೃಷ್ಟಿ ಜೀವಗಳಿಗೆ ಸಂಸಾರ ಸಂಬಂಧವಾದ ಕ್ಲೇಶ ದುಃಖಾದಿಗಳು ಕಡಿಮೆಯೆಂದೇ ಹೇಳಬೇಕು. ಯಾಕೆಂದರೆ ತೃಷ್ಣೆಯನ್ನು ಜಯಿಸಿದವರಾಗಿರುತ್ತಾರೆ. ತದ್ವಿರುದ್ಧವಾಗಿ ತೃಷ್ಣಾ ರೂಪರೋಗದಿಂದ ಪೀಡಿತ ಸಕಲ ಅಜ್ಞಾನಿ ಜೀವಗಳಿಗೆ ಘೋರ ದುಃಖಾದಿಗಳು ಒಂದರ ಮೇಲೊಂದರಂತೆ ಉಂಟಾಗುತ್ತಿರುತ್ತವೆ. ಆದುದರಿಂದ ವಿಚಾರ ಶೀಲರು ತಮ್ಮತಮ್ಮ ಆತ್ಮರುಗಳಲ್ಲಿ ಕರುಣಾಭಾವನನ್ನಿಟ್ಟುಕೊಂಡು ನಮ್ಮ ಆತ್ಮರು ಸಂಸಾರದುಃಖವನ್ನನುಭವಿಸಬಾರದು, ಭವಾರಣ್ಯದಲ್ಲಿ ಭ್ರಮಿಸಬಾರದು, ಸಂಸಾರಸಾಗರದಲ್ಲಿ ಮುಳುಗಬಾರದು ಮತ್ತು ಜನನ ಮರಣ ರೂಪವಾದ ಸಂಕಷ್ಟಗಳನ್ನು ಸಹಿಸಬಾರದು ಎಂಬ ವಿಚಾರವನ್ನು ಸದಾ ನೆನಪಿನಲ್ಲಿಡಬೇಕು.

ಶ್ರೀ ಪದ್ಮನಂದಿಮುನಿಗಳು ಧರ್ಮರಸಾಯನ ಗ್ರಂಥದಲ್ಲಿ ಇಂತು ವರ್ಣಿಸಿರುವರು: —

**ಉಪ್ಪಣ್ಣ ಸಮಯ ಪಹುದಿ ಆಮರಣಂತಂ ಸಹಂತಿ ದುಕ್ಖಾಇಂ।**
**ಅಚ್ಛಿಣಿ ಮಿಾಲಯ ಮೋತ್ತಂ ಸೋಕ್ಖಂ ಣ ಲಹಂತಿ**
**ಣೇರಇಯಾ ॥ ೭೨ ॥**

**ಭಾವಾರ್ಥ:** ನರಕಗತಿಯಲ್ಲಿ ನಾರಕಿಯರು ಜನನಾರಭ್ಯ ಮರಣ ಪರ್ಯಂತರ ಮಹಾದುಃಖವನ್ನೇ ಅನುಭವಿಸುತ್ತಿರುತ್ತಾರೆ. ಒಂದು ಸಮಯವು ಸುಖದ ಭಾಸವಾಗಲಾರದು.

**ಏ ಇಂದಿ ಏಸು ಪಂಚಸು ಅಣೇಯ ಜೋಣೀಸು**
**ವಿರಿಯ ವಿಹೂಣೋ।**
**ಭುಂಜಂತೋ ಪಾವಫಲಂ ಚಿರಕಾಲಂ ಹಿಂಡ ಏ ಜೀವೋ ॥ ೭೮ ॥**

**ಭಾವಾರ್ಥ :** ತಿರ್ಯಂಚಗತಿಯಲ್ಲಿ ಏಕೇಂದ್ರಿಯ ಮೊದಲುಗೊಂಡು ಪಂಚೇಂದ್ರಿಯಗಳವರೆಗಿರುವ ಅನೇಕ ಯೋನಿಗಳಲ್ಲಿ ಜನ್ಮ ತಾಳಿದ ಶಕ್ತಿಯು ಹೀನರಾದ ಜೀವಗಳು ಪಾಪದ ಫಲವಾದ ದುಃಖವನ್ನು ಅನುಭವಿಸುತ್ತ ಬಹು ಕಾಲ ಭ್ರಮಿಸುತ್ತ ಭ್ರಮಿಸುತ್ತ ಅನಂತ ಕಾಲದವರೆಗೆ ಏಕೇಂದ್ರಿಯ ವನಸ್ಪತಿ ನಿಗೋದದಲ್ಲಿ ಭ್ರಮಿಸಬೇಕಾಗುವುದು.

**ಬಹುವೇಯಣಾ ಉಲಾಏ ತಿರಿಯಗಈ ಏ ಭಮಿತ್ತು ಚಿರಕಾಲಂ।**
**ಮಾಣುಸಹವೇ ವಿ ಪಾವಇ ಪಾವಸ್ಸ ಫಲಾಇಂ ದುಕ್ಖಾಇಂ ॥೮೦॥**

**ಧಣು ಬಂಧ ವಿಪ್ಪಹೀಣೋ ಭಿಕ್ಖಂ ಭವಿಊಣ ಭುಂಜ ಏ ಣಿಚ್ಚಂ।**
**ಪುವ್ವಕೆಯಪಾವಕಮ್ಮೋ ಸುಯಣೋ ವಿ ಣ ಯಚ್ಛ ಏ**
**ಸೋಕ್ಖಂ ॥೮೧॥**

**ಭಾವಾರ್ಥ :** ಹೀಗೆ ಈ ಜೀವನು ತಿರ್ಯಂಚಗತಿಯಲ್ಲಿ ಚಿರಕಾಲ ಪರ್ಯಂತರ ಘೋರ ದುಃಖವನ್ನು ಸಹಿಸುತ್ತಾ ಮತ್ತು ಭ್ರಮಿಸುತ್ತಾ, ಮನುಷ್ಯ ಜನ್ಮವನ್ನು ಪಡೆದು, ಪಾಪದ ಫಲದಿಂದ ಈ ಪ್ರಾಣಿಯು ವೇದನೆಯನ್ನು ಅನುಭವಿಸುತ್ತಾನೆ. ಈ ಮನುಷ್ಯನು ಪೂರ್ವ ಜನ್ಮದ ಪಾಪ ಕರ್ಮದ ಉದಯದಿಂದ ದರಿದ್ರರಾಗಿಯೂ, ಕುಟುಂಬರಹಿತರಾಗಿಯೂ, ಸದಾ ಭಿಕ್ಷಾವೃತ್ತಿಯಿಂದ ಜೀವಿಸುವವರಾಗಿಯೂ, ಬಂಧುಬಾಂಧವರಿಂದ ವರ್ಜಿಸಲ್ಪಟ್ಟವರಾಗಿಯೂ ಆಗುತ್ತಾರೆ.

**ಛಮ್ಮಾಸಾ ಉಗಸೇಸೆ ಮಿಲಾಇ ಮಾಲಾ ವಿಣ್ಣಸ್ಸಏ ಛಾಏ।**
**ಕಂಪಂತಿ ಕಪ್ಪರುಕ್ಖಾ ಹೋಇ ವಿರಾಗೋ ಯ ಭೋಯಾಣಂ ॥೯೦॥**

**ಭಾವಾರ್ಥ :** ದೇವಗತಿಯಲ್ಲಿ ತಮ್ಮ ಆಯುಷ್ಯವು ಆರು ತಿಂಗಳು ಬಾಕಿ ಇರುವಾಗ ಅವರ ಕೊರಳಿನಲ್ಲಿರುವ ಮಾಲೆಯು ಬಾಡಿಹೋಗುತ್ತದೆ, ಶರೀರದ ಕಾಂತಿಯು ಕುಂದುತ್ತದೆ, ಕಲ್ಪವೃಕ್ಷಗಳು ಕಂಪಿಸುತ್ತವೆ ಮತ್ತು ಭೋಗಾದಿಗಳಲ್ಲಿ ಉದಾಸೀನತೆಯು ತಲೆದೋರುವುದು

**ಏವಂ ಅಣಾಇ ಕಾಲೇ ಜೀವೋ ಸಂಸಾರಸಾಯರೆ ಘೋರೇ।**
**ಪರಿಹಿಂಡಏ ಅಲಹಂತೋ ಧಮ್ಮಂ ಸವ್ವಣ್ಹು ಪಣ್ಣತ್ತಂ ॥೯೧॥**

ಭಾವಾರ್ಥ : ಹೀಗೆ ಜೀವನು ಅನಾದಿಕಾಲದಿಂದ ಸರ್ವಜ್ಞ ಜಿನದೇವ ನಿಂದುಪದೇಶಿಸಲ್ಪಟ್ಟ ಸದ್ಧರ್ಮಾಮೃತವನ್ನು ಪಾನಮಾಡದೆ ಭಯಂಕರವಾದ ಸಂಸಾರಸಾಗರದಲ್ಲಿ ಮುಳುಗೇಳುತ್ತಿರುತ್ತಾನೆ.

ಶ್ರೀ ಅಮಿತಗತಿ ಆಚಾರ್ಯರು ಬೃಹತ್ ಸಾಮಾಯಿಕ ಪಾಠದಲ್ಲಿ ಹೇಳಿರುತ್ತಾರೆ :–

**ಶ್ವಭ್ರಾಣಾಮವಿಸಹ್ಯಮಂತರಹಿತಂ ದುರ್ಜಲ್ಪಮನ್ಯೋನ್ಯಜಂ**
**ದಾಹಚ್ಛೇದ ವಿಭೇದನಾದಿಜನಿತಂ ದುಃಖಂ ತಿರಶ್ಚಾಂ ಪರಂ|**
**ನೃಣಾಂ ರೋಗ ವಿಯೋಗ ಜನ್ಮಮರಣಂ ಸ್ವರ್ಗೌಕಸಾಂ ಮಾನಸಂ,**
**ವಿಶ್ವಂ ವೀಕ್ಷ್ಯ ಸದೇತಿ ಕಷ್ಟಕಲಿತಂ ಕಾರ್ಯಾಮತಿರ್**
**ಮುಕ್ತಯೇ ||೭೯||**

ಭಾವಾರ್ಥ : ನಾರಕಿಯರು ಅಸಹನೀಯವು, ಪರಸ್ಪರ (ಒಬ್ಬರಿಗೊಬ್ಬ) ರಿಂದುಟಾದ ಅನಂತ ದುಃಖವನ್ನು ಸಹಿಸುತ್ತಿರುವುದನ್ನೂ, ತಿರ್ಯಂಚ ಪ್ರಾಣಿಗಳ ಛೇದನ, ಭೇದನ, ತಾಡನ ಮೊದಲಾದವುಗಳಿಂದುಂಟಾದ ಘೋರ ದುಃಖ ವೇದನೆಯನ್ನೂ, ಮಾನವರ ರೋಗ, ಶೋಕ, ಇಷ್ಟವಿಯೋಗ, ಅನಿಷ್ಟ ಸಂಯೋಗ ರೂಪವೂ ಆದ ಜನ್ಮ ಮರಣ ಸಂಬಂಧವಾದ ಅತ್ಯಂತ ವೇದನೆಯನ್ನೂ ಮತ್ತು ದೇವತೆಗಳ ಮಾನಸಿಕ ಸಂಕ್ಲೇಶವನ್ನೂ ಹೀಗೆ ಸರ್ವ ಪ್ರಪಂಚದ ಪ್ರಾಣಿಗಳು ಸದಾ ವೇದನಾದಿಗಳಿಂದ ತೃಪ್ತರಾಗುತ್ತಿರುವುದನ್ನೂ ವರ್ಣಿಸುವುದು ಅಶಕ್ಯವಾಗಿದೆ. ಆದ್ದರಿಂದ ಬುದ್ಧಿವಂತರು ಈ ಘೋರ ಚತುರ್ಗತಿ ಸಂಸಾರದಿಂದ ಬಿಡುಗಡೆಯಾಗಿ ಮೋಕ್ಷಸುಖವನ್ನು ಪಡೆಯಲೋಸುಗ ಸತತವು ಪ್ರಯತ್ನಿಸುವುದು ಸರ್ವಶ್ರೇಷ್ಠವಾಗಿದೆ.

ಸಂಸಾರದಲ್ಲಿ ಆಶೆಗಿಂತ ಬೇರೆ ರೋಗವೇ ಇಲ್ಲವೆನ್ನಬೇಕು. ಯಾಕೆಂದರೆ ಚಕ್ರವರ್ತಿಗಳು, ಅರ್ಧಚಕ್ರಿಗಳು ಮೊದಲಾದವರು ಇಚ್ಛಿತ ಭೋಗಗಳನ್ನು ಅನುಭವಿಸುತ್ತಿದ್ದರೂ, ಅವನ್ನು ಕಡಿಮೆಮಾಡಬೇಕೆಂದು ಪ್ರಯತ್ನಿಸದೆ ಶರೀರವನ್ನು ಬಿಟ್ಟು ಹೋಗುವ ಸಮಯದವರೆವಿಗೂ ಅಧಿಕಮಾಡುತ್ತಾ ಹೋಗುವವರಲ್ಲವೆ ? ತೃಷ್ಣಾ ರೋಗವು ಜೀವವರ್ಗವನ್ನು ದುರ್ಗತಿಯ ಹಳ್ಳಕ್ಕೆ ತಳ್ಳುತ್ತಿದೆ.

ಆದ್ದರಿಂದ ಶ್ರೀ ಸ್ವಾಮಿ ಸಮಂತಭದ್ರಾಚಾರ್ಯರು ಸ್ವಯಂಭು ಸ್ತೋತ್ರದಲ್ಲಿ ವರ್ಣಿಸಿರುವುದು ಅಕ್ಷರಶಃ ಸತ್ಯವಾಗಿದೆ.

**ಸ್ವಾಸ್ಥ್ಯಂ ಯದಾತ್ಯಂತಿಕಮೇಷ ಪುಂಸಾಂ ಸ್ವಾರ್ಥೋ ನ**
**ಭೋಗ ಪರಿಭಂಗುರಾತ್ಮಾ।**
**ತೃಷೋಽನುಷಂಗಾನ್ನ ಚ ತಾಪಶಾಂತಿರಿತೀದಮಾಖ್ಯದ್**
**ಭಗವಾನ್ ಸುಪಾರ್ಶ್ವಃ ॥೩೧॥**

ಭಾವಾರ್ಥ : ಎಲೈ ಸುಪಾರ್ಶ್ವನಾಥಸ್ವಾಮಿಯೇ! ತಮ್ಮಿಂದುಪದೇಶಿಸಲ್ಪಟ್ಟಿರುವ ಧರ್ಮವು ಪ್ರಾಣಿಗಳಿಗೆ ಅನಂತ ಕಾಲದವರೆವಿಗೂ ಸುಖದಲ್ಲಿರಿಸುವುದಾಗಿದೆ. ಅದು ಆತ್ಮಭೋಗವು ಆಗಿರುತ್ತದೆ. ಇಂದ್ರಿಯ ಸಂಬಂಧವಾದ ವಿಷಯಭೋಗಾದಿಗಳು ಅಸತ್ಯವೂ, ಕ್ಷಣಭಂಗುರವೂ, ನಾಶಶೀಲವೂ ಆಗಿರುತ್ತದೆ; ಮಾತ್ರವಲ್ಲ ತೃಷ್ಣಾದಿಗಳನ್ನು ಹೆಚ್ಚಿಸುವವುಗಳಾಗಿವೆ. ಇವುಗಳನ್ನು ಎಷ್ಟು ಭೋಗಿಸಿದರೂ ದಾಹವು ಹೆಚ್ಚಾಗುವುದಲ್ಲದೆ ಶಾಂತವಾಗಲಾರದು.

ಆದ್ದರಿಂದ ಜ್ಞಾನಿಗಳು ಈ ದುಃಖಮಯವಾದ ಸಂಸಾರದಿಂದ ಉದಾಸೀನರಾಗಿ ಎಲ್ಲ ಸಂಸಾರಿಕ ದುಃಖಗಳಿಂದ ರಹಿತವೂ, ರಾಗದ್ವೇಷ ಮೋಹಾದಿಗಳ ಸಂಬಂಧವಿಲ್ಲದದೂ, ಪುಣ್ಯಪಾಪಗಳಿಂದ ರಹಿತವೂ ಆದ ಮೋಕ್ಷ ಪದವಿಯನ್ನು ಪಡೆಯಲು ಉತ್ಕಂಠಿತರಾಗಬೇಕು. ಇದಕ್ಕೇನೇ ನಿರ್ವಾಣ ಪದವಿಯೆಂದು ಸಾರಿರುವರು. ಮೋಕ್ಷದಲ್ಲಿ ತನ್ನ ಅಸ್ತಿತ್ವದಲ್ಲಿ ಅಶರೀರಿಯಾಗಿಯೂ, ಜನ್ಮ, ಜರಾ, ಮರಣರೂಪ ತಾಪತ್ರಯಗಳಿಂದ ರಹಿತನಾಗಿ ಸ್ವಾತ್ಮೀಕ ಆನಂದವನ್ನು ಅನುಭವಿಸುತ್ತಾನೆ.

ಶ್ರೀ ಅಮೃತಚಂದ್ರಾರ್ಯರು ಪುರುಷಾರ್ಥಸಿದ್ಧ್ಯುಪಾಯ ಗ್ರಂಥದಲ್ಲಿ ಇಂತು ವರ್ಣಿಸಿರುವರು :–

**ನಿತ್ಯಮಪಿ ನಿರುಪಲೇಪಃ ಸ್ವರೂಪ ಸಮವಸ್ಥಿತೋ ನಿರುಪಘಾತಃ।**
**ಗಗನಮಿವ ಪರಮಪುರುಷಃ ಪರಮಪದೇ ಸ್ಫುರತಿ ವಿಶದ**
**ತಮಃ ॥೨೨೩॥**

**ಕೃತಕೃತ್ಯಃ ಪರಮುಪದೇ ಪರಮಾತ್ಮಾ ಸಕಲ ವಿಷಯ ವಿಷಯೊತ್ಮಾ!**
**ಪರಮಾನಂದ ನಿಮಗ್ನೋ ಜ್ಞಾನಮಯೋ ನಂದತಿ ಸದೈವ ॥ ೨೯ ॥**

**ಭಾವಾರ್ಥ :** ಪರಮ ಪುರುಷರೂ ಮೋಕ್ಷಸ್ಥಾನದಲ್ಲಿ ಸದಾಕಾಲವು ಕರ್ಮಮಲರಹಿತರಾಗಿಯೂ, ಯಾವ ವಿಧದ ಬಾಧೆಯಿಲ್ಲದವರಾಗಿಯೂ ತಮ್ಮ ನೈಜವಾದ ಸ್ವರೂಪದಲ್ಲಿ ಸ್ಥಿರರಾಗಿ ಆಕಾಶದಂತೆ ಪರಮ ನಿರ್ಮಲರಾಗಿ ಪ್ರಕಾಶಿಸುತ್ತಾರೆ. ಕೃತಕೃತ್ಯರಾಗಿ, ಜ್ಞಾನಾನಂದ ಸಾಗರದ ಮಹಾನಂದ ದಲ್ಲಿ ಮಗ್ನರಾಗಿ ಆನಂದ ವಿಭೋರರಾಗಿರುತ್ತಾರೆ.

ಆದನ್ನೇ ಆಚಾರ್ಯ ಶ್ರೇಷ್ಠರಾದ ಸ್ವಾಮಿ ಸಮಂತಭದ್ರಾಚಾರ್ಯರು ರತ್ನಕರಂಡಕಶ್ರಾವಕಾಚಾರದಲ್ಲಿ ಹೇಳಿರುತ್ತಾರೆ :-

**ಶಿವಮಜರಮರುಜಮಕ್ಷಯಮವ್ಯಾಬಾಧಂ ವಿಶೋಕ ಭಯಶಂಕಂ।**
**ಕಾಷ್ಠಾಗತ ಸುಖವಿದ್ಯಾವಿಭವಂ ವಿಮಲಂ ಭಜಂತಿ**
**ದರ್ಶನಶರಣಾಃ ॥ ೪೦ ॥**

**ಭಾವಾರ್ಥ :** ಮಹಾತ್ಮರಾದ ಸಮ್ಯಗ್ದೃಷ್ಟಿಗಳು ಮುಪ್ಪು, ರೋಗ. ಮರಣ, ಕ್ಷುಧಾದಿಬಾಧೆ, ಶೋಕ, ಭಯ, ಸಂಶಯಾದಿಗಳಿಂದ ರಹಿತವೂ, ಪರಮಾನಂದಮಯವೂ ಆದ ಮೋಕ್ಷ (ಶಿವಪದ) ವನ್ನು ಪಡೆಯುವರು.

ಶ್ರೀ ಯೋಗೀಂದ್ರಾಚಾರ್ಯರು ಸಂಸಾರದುಃಖದಿಂದ ಭಯಭೀತರಾಗಿ ಮೋಕ್ಷಪ್ರಾಪ್ತಿಯ ಇಚ್ಛೆಯುಳ್ಳ ಜೀವಿಗಳಿಗೆ ಮೋಕ್ಷೋಪಾಯವಾದ ಆತ್ಮಾನುಭವಕ್ಕೆ ಕಾರಣವಾದ ಆತ್ಮಸ್ವಭಾವವನ್ನು ವರ್ಣಿಸಿರುವರು. ಯಾಕೆಂದರೆ ಆತ್ಮಜ್ಞಾನದಿಂದ ಆತ್ಮಾನುಭವವಾಗುವುದೇ ಮೋಕ್ಷೋಪಾಯವು ಆಗಿರುತ್ತದೆ.



# ಮಿಥ್ಯಾದರ್ಶನವು ಸಂಸಾರಕ್ಕೆ ಕಾರಣವು

**ಕಾಲು ಅಣಾಇ ಜೀಉ ಭವಸಾಯರು ಜಿ ಅಣಂತು ।**
**ಮಿಚ್ಛಾ ದಂಸಣ ಮೋಹಿಯಉ ಣ ವಿ ಸುಹ ದುಕ್ಖ ಜಿ ಪತ್ತು ॥೪॥**

**ಅನ್ವಯಾರ್ಥ :** ಕಾಲು ಅಣಾಇ-ಕಾಲವು ಅನಾದಿ, ಜೀಉ ಅಣಾಇ -ಸಂಸಾರಿ ಜೀವವು ಅನಾದಿಯು, ಭವಸಾಯರು ಜಿ ಅಣಂತು-ಸಂಸಾರ ಸಮುದ್ರವು ಕೂಡಾ ಅನಾದಿಯೂ ಅನಂತವೂ ಆಗಿರುತ್ತದೆ. ಮಿಚ್ಛಾ ದಂಸಣ ಮೋಹಿಯ ಉ-ಮಿಥ್ಯಾದರ್ಶನ ಕರ್ಮದ ನಿಮಿತ್ತದಿಂದ ಮೋಹಿಯಾಗುತ್ತಿರುವ ಜೀವನು, ಸುಹ ಣ ವಿ ದುಕ್ಖ ಜಿ ಪತ್ತು-ಸುಖವನ್ನು ಪಡೆಯದೆ ದುಃಖವನ್ನೇ ಪಡೆಯುತ್ತಾನೆ.

**ಭಾವಾರ್ಥ :** ಕಾಲಚಕ್ರವು ಅನಾದಿಕಾಲದಿಂದ ಸುತ್ತಿಕೊಂಡು ಬರುತ್ತಿರುವುದು. ಪ್ರತಿಯೊಂದು ಸಮಯವು ಭೂತ, ಭವಿಷ್ಯತ್, ವರ್ತಮಾನ ಕಾಲಗಳಾಗಿ ಕಂಡು ಬರುತ್ತವೆ. ಎಂದೆಂದಿಗೂ ಪರಿವರ್ತನೆ (ಕಾಲ) ಯು ಇಲ್ಲವೆಂದು ಹೇಳಲಾಗುವುದಿಲ್ಲವು. ಕಾಲದ್ರವ್ಯವು ಅನಾದಿಯೆಂದು ಸಿದ್ಧವಾಯಿತೋ, ಆಗ ಅದರಲ್ಲಿ ಕಾರ್ಯವನ್ನೆಸಗುತ್ತಿರುವ ಸಂಸಾರೀ ಜೀವಗಳೂ ಕೂಡಾ ಅನಾದಿಯೆಂದು ತೀರ್ಮಾನಿಸಿಕೊಳುವುದರಿಂದ, ಜೀವಗಳು ನೂತನವಾಗಿ ಉಂಟಾಗದೆ ಪ್ರವಾಹ ರೂಪವಾಗಿ ಭ್ರಮಿಸುತ್ತಾ ಬರುತ್ತಿವೆ. ನಿಜವಾಗಿಯೂ ಈ ಜಗತ್ತು ಜೀವ, ಪುದ್ಗಲ, ಧರ್ಮಾಸ್ತಿಕಾಯ, ಅಧರ್ಮಾಸ್ತಿಕಾಯ, ಆಕಾಶ ಮತ್ತು ಕಾಲಗಳೆಂಬ ಆರು ದ್ರವ್ಯಗಳ ಸಮುದಾಯವಾಗಿದೆ. ಈ ಆರು ದ್ರವ್ಯಗಳು ಅನಾದಿಯಾಗಿರುವಾಗ ಜಗತ್ತು ಕೂಡಾ ಅನಾದಿಯೆಂದೇ ನಿಶ್ಚಯಿಸಬೇಕು. ಲೋಕದಲ್ಲಿ ಪ್ರತ್ಯಕ್ಷವಾಗಿ ಯಾವ ವಸ್ತುವಿನ ಅವಸ್ಥೆಗಳನ್ನು ಬೇರೆ ಯಾವ ವಸ್ತುಗಳೂ ಕೆಡಿಸಲಾರವು. ಆದರೆ ಯಾವುದರಲ್ಲಿ ಯಾವ ಯಾವ ಅವಸ್ಥೆಗಳಿರುತ್ತವೆಯೋ ಅವು ಇದ್ದೇ ಇರುತ್ತವೆ. ಉದಾ: ಸುವರ್ಣ ಗಟ್ಟಿಯನ್ನು ಕರಗಿಸಿ ಕಂಕಣವನ್ನು ಮಾಡಿಸಿತೆಂದು ವಿಚಾರಿಸೋಣ ಅದರಲ್ಲಿ ಮೊದಲಿದ್ದ ಗಟ್ಟಿಯು ನಾಶವಾಗಿ ಕಂಕಣದ ಅವಸ್ಥೆಯುಂಟಾಯಿತು. ಆದರೆ ಸುವರ್ಣವು ಇದ್ದೇ ಇರುವುದು.

ಆದು ಎಂದೆಂದಿಗೂ ಲೋಪವಾಗಲಾರದು. ಸುವರ್ಣ (ಚಿನ್ನ) ವು ಪುದ್ಗಲ ಪರಮಾಣುಗಳ ಸಮೂಹ ಸ್ವರೂಪವಾಗಿರುತ್ತದೆ. ಆದ್ದರಿಂದ ಪರಮಾಣು ಗಳು ಅನಾದಿಯಾಗಿವೆಯೆಂದು ತಿಳಿಯಬಹುದು.

ಸಂಸಾರಿಜೀವಗಳು ಅನಾದಿಕಾಲದಿಂದ ಪುಣ್ಯಪಾಪಗಳ ಫಲವಾದ ಸುಖದುಃಖಗಳನ್ನು ಅನುಭವಿಸುತ್ತಾ ಭ್ರಮಿಸುತ್ತಿರುವವು. ಪ್ರಥಮದಲ್ಲಿ ಶುದ್ಧವಾಗಿದ್ದು ಮತ್ತೆ ಅಶುದ್ಧಗಳಾಗಿರುವೆಂದು ಭಾವಿಸಬಾರದು. ಅನಾದಿ ಕಾಲದಿಂದಲೇ ತೈಜಸ್ಸು ಮತ್ತು ಕಾರ್ಮಣ ಶರೀರಗಳ ಸಂಯೋಗ ಇರುತ್ತದೆ. ಯದ್ಯಪಿ ಅವುಗಳಲ್ಲಿ ನೂತನ ಸ್ಕಂಧಗಳು ಬಂದು ಸೇರುತ್ತವೆ. ಹಳೇ ಸ್ಕಂಧ ಗಳು ಬಿಟ್ಟು ಹೋಗುತ್ತವೆ. ಆದುದರಿಂದ ಸಂಸಾರೀ ಜೀವಗಳ ಭ್ರಮಣ ರೂಪ ಭವವು ಕೂಡಾ ಅನಾದಿಯಾಗಿರುತ್ತದೆ. ಹಾಗೆ ಈ ಜೀವನು ಕರ್ಮ ಬಂಧನ ಬದ್ಧನಾಗಿ ಭ್ರಮಿಸಿಕೊಂಡಿರುವುದಾದರೆ, ಭವ ಸಮುದ್ರವು ಮೋಹೀ ಅಜ್ಞಾನಿಗೆ ಅನಂತಕಾಲದವರೆಗೆ ಭ್ರಮಿಸಬೇಕಾಗಿ ಬರುವುದು, ಬರಬಹುದು. ಮಿಥ್ಯಾದರ್ಶನ ನಾಮಕರ್ಮದ ಉದಯದಿಂದ ಈ ಜೀವನು ತನ್ನಾತ್ಮನ ಸತ್ಯ ಸ್ವರೂಪವನ್ನು ಮರೆತಿರುವುದರಿಂದಲೇ ಯಥಾರ್ಥವಾದ ಸುಖದಿಂದ ವಂಚಿತನಾಗಿ ಕೇವಲ ಇಂದ್ರಿಯಗಳ ಮೂಲಕ ಉಂಟಾಗುವ ಸುಖದುಃಖಾದಿ ಗಳನ್ನು ಅನುಭವಿಸಿಕೊಂಡಿರುವನು. ಆ ಸುಖವಾದರೋ ಆಕುಲತೆಗೂ, ತೃಷ್ಣಾ ವರ್ಧನೆಗೂ ಕಾರಣವಾದುದರಿಂದ ದುಃಖದಾಯಕವೆಂದೇ ನಿಶ್ಚಯಿಸಬೇಕು.

ಮೋಹನೀಯ ಕರ್ಮವು ದರ್ಶನಮೋಹನೀಯವೆಂದೂ, ಚಾರಿತ್ರ ಮೋಹನೀಯವೆಂದೂ ಎರಡು ವಿಧಗಳು. ದರ್ಶನ ಮೋಹನೀಯದಲ್ಲಿ ಮಿಥ್ಯಾ ತ್ವವು ಒಂದಾಗಿದೆ. ಚಾರಿತ್ರದಲ್ಲಿ ಅನಂತಾನುಬಂಧಿ ಕಷಾಯ ಚತುಷ್ಟಯ ಗಳಿರುತ್ತವೆ. ಈ ಪ್ರಕೃತಿಗಳ ಉದಯ ಅಥವಾ ಫಲಗಳ ನಿಮಿತ್ತದಿಂದ ಸಂಸಾರೀ ಜೀವಗಳು ಮೋಹಿಯಾಗಿಯೂ, ಮೂಢರಾಗಿಯೂ, ಬಹಿರಾತ್ಮ ರಾಗಿಯೂ, ಅಜ್ಞಾನಿಯಾಗಿಯೂ, ಸಂಸಾರಾಸಕ್ತರಾಗಿಯೂ ಮತ್ತು ಮಿಥ್ಯಾ ದೃಷ್ಟಿಯಾಗಿಯೂ ಆಗುತ್ತಿರುವವು. ಮಿಥ್ಯಾತ್ವ ಅಂಧಾಕಾರದಿಂದ ಸಮ್ಯಕ್ತ್ವ ಪ್ರಕಾಶದ ತಡೆಯು ಆಗುತ್ತಿರುವುದು. ಅಂತಹ ಮಿಥ್ಯಾತ್ವಭಾವವು ಅಗ್ರ

ಹೀತ ಮಿಥ್ಯಾತ್ವ, ಗ್ರಹೀತ ಮಿಥ್ಯಾತ್ವವೆಂದು ಎರಡುವಿಧವಾಗಿವೆ. ಅಗ್ರಹೀತ ಮಿಥ್ಯಾತ್ವಿಯು ಪ್ರಮಾದದಿಂದುಂಟಾದ ವಿಭಾವ ಪರಿಣಾಮಗಳಿಂದ ತನ್ನ ಶರೀರದ ಉತ್ಪತ್ತಿಯನ್ನು ತನ್ನ ಉತ್ಪತ್ತಿಯೆಂದೂ, ತನ್ನ ಶರೀರದ ನಾಶ ವನ್ನು ತನ್ನ ನಾಶವೆಂದೂ ತಿಳಿಯುತ್ತಿರುತ್ತಾನೆ. ಅಲ್ಲದೆ ಶರೀರದಿಂದ ಭಿನ್ನ ವಾದ ಚೈತನ್ಯಮಯಯ ಆತ್ಮನಿರುವನೆಂಬ ಬೋಧವೇ ಇರುವುದಿಲ್ಲ ಕರ್ಮ ಗಳ ಉದಯದಿಂದ ಭಾವಗಳಲ್ಲಿ ಕ್ರೋಧ, ಮಾನ, ಮಾಯಾ, ಲೋಭ ಗಳಾಗಲೀ ಅಥವಾ ರಾಗದ್ವೇಷಮೋಹಗಳಾಗಲೀ ಉಂಟಾಗುತ್ತವೆಯೋ ಆ ಭಾವಗಳನ್ನೆಲ್ಲವನ್ನು ತನ್ನ ಭಾವಗಳೆಂದು ಭಾವಿಸುತ್ತಾನೆ. ನಾನು ಕ್ರೋಧಿಯೆಂದೂ, ನಾನು ಮಾಯಾವಿಯೆಂದೂ, ನಾನು ಲೋಭಿಯೆಂದೂ ಮಹಾರಾಗಿಯೆಂದೂ, ದ್ವೇಷಿಯೆಂದೂ, ಮೋಹಿಯೆಂದೂ ಮೊದಲಾಗಿಯೂ ಮತ್ತು ಪುಣ್ಯಪಾಪಗಳ ಉದಯದಿಂದ ಶರೀರದ ಒಳ್ಳೆಯ ಕೆಟ್ಟ ಯಾವ ಅವಸ್ಥೆಗಳುಂಟಾಗುತ್ತವೆಯೋ ಅವುಗಳನ್ನು ತನ್ನ ಅವಸ್ಥೆಗಳೆಂದೂ ಭಾವಿ ಸುತ್ತಾನೆ. ಅಷ್ಟೇ ಅಲ್ಲ ಧನ, ಮನೆ, ಮಠ, ಕುಟುಂಬ, ವಸ್ತ್ರ, ಭೂಷಣಾದಿ ಪರವಸ್ತುಗಳನ್ನೆಲ್ಲವನ್ನು ತನ್ನವೆಂದೇ ಭಾವಿಸುತ್ತಿರುತ್ತಾನೆ. ನಾಶಶೀಲ ಗಳಾದ ಬಾಹ್ಯಾಭ್ಯಂತರ ಅವಸ್ಥೆಗಳಾದ ಅಹಂಕಾರ, ಮಮಕಾರಾದಿಗಳನ್ನು ಮಾಡಿಕೊಳ್ಳುತ್ತಿರುತ್ತಾನೆ.

ತನ್ನ ಸ್ವಭಾವದಲ್ಲಿ ಅಹಂಕಾರ ಬುದ್ಧಿಯು ಇರುವುದಲ್ಲದೆ, ತನ್ನ ನಿಜ ಗುಣಗಳಲ್ಲಿ ಮಮತಾ ಬುದ್ಧಿಯು ಇರುವುದಿಲ್ಲವು. ಹೇಗೆಂದರೆ ಮದ್ಯವನ್ನು ಕುಡಿದು ಮದೋನ್ಮತ್ತನಾದವನು ತನ್ನ ಹೆಸರನ್ನೂ ತನ್ನ ಮನೆ ಮೊದಲಾದವು ಗಳನ್ನೂ ಮರೆಯುವಂತೆ ಈ ಮೋಹಿ ಪ್ರಾಣಿಯು ತನ್ನ ನಿಜವಾದ ಸ್ವರೂಪ ವನ್ನು ಕೂಡಾ ಮರೆಯುತ್ತಾನೆ. ಚತುರ್ಗತಿಗಳಲ್ಲಿ ಯಾವ ಪರ್ಯಾಯ ವನ್ನು ಹೊಂದುವನೋ, ಆ ಪರ್ಯಾಯವನ್ನೇ ತಾನೆಂದು ವಿಚಾರಿಸುತ್ತಾನೆ. ಇದೇ ಅಗ್ರಹೀತ ಅಥವಾ ನೈಸರ್ಗಿಕವಾದ ಮಿಥ್ಯಾತ್ವವಾಗಿರುತ್ತದೆ. ಈ ಮಿಥ್ಯಾತ್ವಕರ್ಮದ ಉದಯದಿಂದ ತತ್ವಶ್ರದ್ಧಾನಾದಿಗಳುಂಟಾಗಲಾರವು.

ಶ್ರೀ ಪೂಜ್ಯಪಾದಸ್ವಾಮಿಯವರು ಸರ್ವಾರ್ಥಸಿದ್ಧಿಯಲ್ಲಿ ಹೇಳಿರುತ್ತಾನೆ.

**ಮಿಥ್ಯಾದರ್ಶನಂ ದ್ವಿವಿಧಂ ನೈಸರ್ಗಿಕಂ ಪರೋಪದೇಶ ಪೂರ್ವಕಂ ಚ।**
**ತತ್ರ ಪರೋಪದೇಶಮಂತರೇಣ ಮಿಥ್ಯಾತ್ವಕರ್ಮೋದಯ ವಶಾತ್ ಆವಿರ್ಭವತಿ ತತ್ವಾರ್ಥಾಶ್ರದ್ಧಾನ ಲಕ್ಷಣಂ ನೈಸರ್ಗಿಕಂ॥**

**ಭಾವಾರ್ಥ:** ಮಿಥ್ಯಾದರ್ಶನವು ನೈಸರ್ಗಿಕ (ಅಗ್ರಹೀತ) ವೆಂದೂ ಅಧಿಗಮ (ಪರೋಪದೇಶಪೂರ್ವಕ) ವೆಂದೂ ಎರಡು ವಿಧವಾಗಿದೆ. ಯಾವ ಮಿಥ್ಯಾದರ್ಶನವು, ಪರೋಪದೇಶವಿಲ್ಲದೆ ಮಿಥ್ಯಾತ್ವ ಕರ್ಮೋದಯದಿಂದ ಜೀವಾಜೀವಾದಿ ತತ್ವಗಳಲ್ಲಿ ಅಶ್ರದ್ಧೆಯನ್ನು ಉಂಟುಮಾಡುವುದೋ, ಅದು ನೈಸರ್ಗಿಕ. ಇದು ಏಕೇಂದ್ರಿಯ ಮೊದಲುಗೊಂಡು ಪಂಚೇಂದ್ರಿಯವರೆಗಿನ ಜೀವಗಳಲ್ಲಿ ಕಂಡುಬರುತ್ತದೆ. ಈ ಮಿಥ್ಯಾತ್ವಭಾವವು ನಾಶವಾಗುವವರೆಗೆ ಇದು ಇದ್ದೇ ಇರುತ್ತದೆ. ಅಧಿಗಮ ಮಿಥ್ಯಾದರ್ಶನವು ಏಕಾಂತ, ವಿಪರೀತ, ಸಂಶಯ, ವಿನಯ ಮತ್ತು ಅಜ್ಞಾನಗಳೆಂದು ಐದು ವಿಧವಾಗಿರುತ್ತದೆ. ಇವು ಸಂಜ್ಞೀ ಜೀವಗಳಿಗೆ ಪರೋಪದೇಶಗಳಿಂದುಂಟಾಗುತ್ತವೆ. ಇದು ಪೂರ್ವ ಸಂಸ್ಕಾರದ ಬಲದಿಂದ ಅಸಂಜ್ಞಿಜೀವಗಳಲ್ಲಿಯೂ ಇರುತ್ತದೆ. ಇವುಗಳ ಸ್ವರೂಪವನ್ನು ವರ್ಣಿಸಲಾಗುವುದು :–

**೧) " ತತ್ರ ಇದಮೇವ ಇತ್ಥಮೇವೇತಿ ಧರ್ಮಿಧರ್ಮಯೋರಭಿನಿವೇಶ ಏಕಾಂತಃ**
**ಪುರುಷ ಏವೇದಂ ಸರ್ವಮಿತಿ ವಾ ನಿತ್ಯಮೇವೇತಿ। "**

**ಭಾವಾರ್ಥ:** ಧರ್ಮಿ (ದ್ರವ್ಯ) ಧರ್ಮ (ಸ್ವಭಾವ) ಗಳನ್ನು ಸರಿಯಾಗಿ ತಿಳಿಯದೆ ಇದು ಹೀಗೆಯೇ ಇರುತ್ತದೆ. ಇದೇ ಇರುತ್ತದೆಂಬ ಹಟ (ದುರಾಗ್ರಹ) ಹಿಡಿಯುವುದು. ಪ್ರತಿಯೊಂದು ವಸ್ತುಗಳು ಅನೇಕ ಸ್ವಭಾವ ರೂಪಗಳಾದ ಅನೇಕಾಂತಮಯವಾಗಿದ್ದರೂ ಕೂಡ, ಅವುಗಳನ್ನು ಒಂದೇ ಸ್ವಭಾವವುಳ್ಳವೆಂದು ಅಂದರೆ ಏಕಾಂತರೂಪವಾಗಿ ತಿಳಿಯುವುದೇ ಏಕಾಂತ ಮಿಥ್ಯಾತ್ವವಾಗಿರುತ್ತದೆ. ಉದಾ :– ಈ ಲೋಕವು ಆರು ದ್ರವ್ಯಮಯವಾಗಿದ್ದರೂ ಅದರಂತೆ ಒಪ್ಪಿಕೊಳ್ಳದೆ ಇದು ಏಕ ಬ್ರಹ್ಮಸ್ವರೂಪವಾಗಿದೆಯೆಂದು

ತಿಳಿಯುವುದು. ಆದರೆ ಪ್ರತಿಯೊಂದು ವಸ್ತುವು ದ್ರವ್ಯದ ಅಪೇಕ್ಷೆಯಿಂದ ಅನಿತ್ಯವೆಂದೂ ತಿಳಿಯದೆ, ಕೇವಲ ನಿತ್ಯವೆಂದೂ ಅಥವಾ ಕೇವಲ ಅನಿತ್ಯ ವೆಂದೂ ತಿಳಿಯುವುದು, ವಿಚಾರಿಸುವುದು ಏಕಾಂತ ಮಿಥ್ಯಾತ್ವವಾಗಿದೆ.

**"ಸಂಗ್ರಂಥೋ ನಿರ್ಗ್ರಂಥಃ, ಕೇವಲಿಗಳು ಕವಲಾಹಾರಿ ಗಳಾಗಿಯೂ, ಸ್ತ್ರೀಸಿದ್ಧ್ಯತೀತ್ಯೇವಮಾದಿಃ ವಿಪರ್ಯಯಃ।**

**ಭಾವಾರ್ಥ:** ಯಾವ ವಿಷಯವು ಅಸಂಭವವಾಗಿದೆಯೋ, ವಿಪರೀತ ವಾಗಿರುವುದೋ ಅದನ್ನು ಸತ್ಯವೆಂದು ಭಾವಿಸುವುದು ವಿಪರೀತ ಮಿಥ್ಯಾತ್ವ ವಾಗಿರುತ್ತದೆ. ಉದಾ :- ಪರಿಗ್ರಹಧಾರಿಗಳಾದ ಸಾಧುಗಳನ್ನು ನಿರ್ಗ್ರಂಥ ರೆಂದೂ, ಕೇವಲಿಗಳಾದ ಅರ್ಹತ್ಪರಮೇಷ್ಠಿಗಳನ್ನು ಮನುಷ್ಯರು ಭೋಜನ ಗೈಯುವಂತೆ ಆಹಾರ ಮಾಡುವರೆಂದೂ. ಸ್ತ್ರೀಪರ್ಯಾಯದಿಂದ ಸಿದ್ಧಪದವಿ ಯನ್ನು ಪಡೆಯುವರೆಂದೂ, ಹಿಂಸಾದಿಕಾರ್ಯಗಳನ್ನು ಧರ್ಮಕಾರ್ಯವೆಂದೂ, ಇವೇ ಮೊದಲಾದವು ವಿಪರೀತ ಮಿಥ್ಯಾತ್ವಗಳಾಗಿವೆ. ಯಥಾರ್ಥವಾಗಿಯೂ ಬಾಹ್ಯಪರಿಗ್ರಹಗಳಾದ ವಸ್ತ್ರಾದಿಗಳಿಂದಲೂ, ಅಂತರಂಗ ಪರಿಗ್ರಹಗಳಾದ ಕ್ರೋಧಾದಿಕಷಾಯಗಳಿಂದಲೂ ರಹಿತನಾದವನೇ ನಿರ್ಗ್ರಂಥನಾಗಲು ಸಾಧ್ಯ ವಿದೆ. ಅನಂತವೀರ್ಯಸಂಪನ್ನರೂ, ಸಪ್ತಧಾತುಗಳಿಂದ ರಹಿತವಾದ ಪರಮೌ ದಾರಿಕ ದಿವ್ಯದೇಹಧಾರಿಗಳಾದ ಕೇವಲಿಗಳು ಮೋಹನೀಯ ಕರ್ಮವನ್ನು ನಾಶ ಮಾಡಿದುದರಿಂದ ಹೊಟ್ಟೆ ಹಸಿವೆಯಾಗಲೀ, ಇನ್ನಿತರ ಇಚ್ಛೆಗಳಾಗಲಿ, ಭಿಕ್ಷಾ ವೃತ್ತಿಯಿಂದ ಭೋಜನಗೈಯುವುದಾಗಲೀ ಸಂಭವಿಸುವುದಿಲ್ಲವು. ಅವರು ಪರಮಾತ್ಮಸ್ಥಾನದಲ್ಲಿಯೇ ಪರಮಾನಂದಮಯ ಆತ್ಮಾನಂದಾಮೃತವನ್ನು ಪಾನಮಾಡಿಕೊಂಡಿರುತ್ತಾರಲ್ಲದೆ, ಇಂದ್ರಿಯ ಸಂಬಂಧವಾದ ಯಾವ ಇಚ್ಛೆ ಗಳಿರುವುದಿಲ್ಲವು.

ಕರ್ಮಭೂಮಿಯಲ್ಲಿ ಜನಿಸಿದ ಸ್ತ್ರೀಗೆ ವಜ್ರ ವೃಷಭ ನಾರಾಚ ಸಂಹನನ ಇಲ್ಲದೆ ಅಂದರೆ ಹೀನ ಸಂಹನನವುಳ್ಳವಳಾಗಿರುವುದರಿಂದ, ಅತ್ಯಂತ ಮಹಾ ಪಾಪವನ್ನಾಗಲೀ, ಮೋಕ್ಷಪ್ರಾಪ್ತಿಗೆ ಯೋಗ್ಯವಾದ ಉನ್ನತ ಮಟ್ಟದ ಧ್ಯಾನ ವನ್ನಾಗಲೀ ಮಾಡಲು ಸಾಧ್ಯವಾಗದಿರುವುದರಿಂದಲೇ ಅವರು ಮರಣ (ಸತ್ತು)

ಹೊಂದಿ ಹದಿನಾರನೆಯ ಸ್ವರ್ಗಕ್ಕಿಂತ ಮೇಲಿರುವ ಕಲ್ಪಗಳಲ್ಲಾಗಲಿ, ಆರನೆಯ ನರಕಕ್ಕಿಂತ ಕೆಳಗಣ ಅಂದರೆ ಏಳನೆಯ ನರಕದಲ್ಲಾಗಲೀ ಜನಿಸುವುದಿಲ್ಲವು. ಹಿಂಸಾದಿ ಪರಪೀಡೆಗಳಿಂದ ಪಾಪಬಂಧವಾಗುವುದಲ್ಲದೆ, ಪುಣ್ಯಬಂಧವು ಎಂದೆಂದಿಗೂ ಆಗಲಾರದು. ಇದಕ್ಕೆ ವಿಪರೀತವಾಗಿ ತಿಳಿಯುವುದೇ ವಿಪರೀತ ಮಿಥ್ಯಾತ್ವವು.

"ಸಮ್ಯಗ್ದರ್ಶನಜ್ಞಾನಚಾರಿತ್ರಾಣಿ ಕಿಂ ಮೋಕ್ಷಮಾರ್ಗಃ
ಸ್ಯಾದ್ವಾನ ವೇತ್ಯನ್ಯತರಪಕ್ಷಾಪೇಕ್ಷಾ ಪರಿಗ್ರಹಃ ಸಂಶಯಃ"

ಸಮ್ಯಗ್ದರ್ಶನ, ಸಮ್ಯಗ್ಜ್ಞಾನ, ಸಮ್ಯಕ್ಚಾರಿತ್ರಗಳೆಂಬೀ ರತ್ನತ್ರಯಗಳು ಮೋಕ್ಷಮಾರ್ಗಗಳಾಗಿರುವವೋ ಅಥವಾ ಇಲ್ಲವೋ ಎಂಬ ವಿಕಲ್ಪದಲ್ಲಿದ್ದು ಯಾವ ಪಕ್ಷವನ್ನು ಗ್ರಹಣೆ ಮಾಡದೆ ಇರುವುದೇ ಸಂಶಯ ಮಿಥ್ಯಾತ್ವವಾಗಿರುತ್ತದೆ.

"ಸರ್ವ ದೇವತಾನಾಂ ಸರ್ವಮಯಾನಾಂ ಚ ಸಮದರ್ಶನಂ ವೈನಯಿಕಂ"

ಸಕಲ ದೇವತೆಗಳನ್ನು, ಎಲ್ಲಾ ದರ್ಶನ ಶಾಸ್ತ್ರಗಳನ್ನು ಮತ್ತು ಸರ್ವ ಆಗಮಗಳ ಸ್ವರೂಪವನ್ನರಿಯದೆ ಎಲ್ಲವೂ ಒಂದೇ ಎಂದು ನಂಬುವುದು ವೈನೆಯಿಕ ಮಿಥ್ಯಾದರ್ಶನವಾಗಿರುತ್ತದೆ.

"ಹಿತಾಹಿತ ಪರೀಕ್ಷಾ ವಿರಹೋಽಜ್ಞಾನಿಕತ್ವಂ"

ಹಿತಾಹಿತವಿವೇಚನೆಯಿಲ್ಲದೆ ಪರೀಕ್ಷೆ ಇಲ್ಲದೆ ಕಂಡ ಕಂಡ ಧರ್ಮಗಳನ್ನು ನಂಬುವುದು ಅ ಜ್ಞಾ ನ ಮಿಥ್ಯಾದರ್ಶನವಾಗಿರುತ್ತದೆ. ಸಮ್ಯಗ್ದರ್ಶನವು ತನ್ನ ಶುದ್ಧಾತ್ಮನ ಪ್ರತೀಕವಾಗಿರುತ್ತದೆ. ಆದರ ಜ್ಞಾನವಾಗದಿರುವುದೇ ಮಿಥ್ಯಾದರ್ಶನವಾಗಿದೆ.

ಜೀವ, ಅಜೀವ, ಆಸ್ರವ, ಬಂಧ, ಸಂವರ, ನಿರ್ಜರ ಮತ್ತು ಮೋಕ್ಷಗಳೆಂಬ ಏಳು ತತ್ವಗಳಲ್ಲಿ, ಸತ್ಯದೇವ, ಶಾಸ್ತ್ರ, ಗುರುಗಳಲ್ಲಿ ನಂಬಿಕೆಯುಂಟಾಗದಿರುವುದೇ ವ್ಯವಹಾರ ಮಿಥ್ಯಾದರ್ಶನವಾಗಿರುತ್ತದೆ. ಇವೆಲ್ಲವು ಗ್ರಹೀತ (ಅಧಿಗಮ) ಅಥವಾ ಪರೋಪದೇಶಪೂರ್ವಕ ಮಿಥ್ಯಾದರ್ಶನವಾಗಿರುತ್ತದೆ.

ತನ್ನನ್ನೇ ಶರೀರ ರೂಪವಾಗಿ ತಿಳಿದುಕೊಳ್ಳುವುದು ಅಗ್ರಹೀತ ( ನಿಸರ್ಗಜ ) ಮಿಥ್ಯಾದರ್ಶನವಾಗಿರುತ್ತದೆ. ಈ ಮಿಥ್ಯಾದರ್ಶನದಿಂದ ಜೀವನಿಗೆ ಯಥಾರ್ಥವಾದ ಆತ್ಮೀಕ ಜ್ಞಾನವು ಶ್ರದ್ಧೆಯುಂಟಾಗುವುದಿಲ್ಲವು. ಈತನ ಬುದ್ಧಿಯು ಮೋಹನೀಯಕರ್ಮ (ವಂಶಗತವಾಗಿಯು) ದಿಂದ ಆಚ್ಛಾದಿಸುವುದರಿಂದಲೂ. ಮಿಥ್ಯಾದರ್ಶನ ನಿಮಿತ್ತದಿಂದಲೂ, ಸತ್ಯ ಶುದ್ಧಾತ್ಮ ಸ್ವಭಾವದ ತಿಳುವಳಿಕೆಯಾಗದಿರುವುದರಿಂದಲೂ ವಿಷಯ ಭೋಗಭಾಗ್ಯಾದಿ ಸುಖಗಳನ್ನು ತನ್ನ ಸುಖವೆಂದು ಭಾವಿಸುತ್ತಾ, ಪ್ರತಿನಿತ್ಯವೂ, ಪ್ರತಿಸಮಯವೂ ಅವುಗಳ ಪ್ರಾಪ್ತಿಯ ಕಾರ್ಯದಲ್ಲಿಯೇ ಪ್ರಯತ್ನಶೀಲನಾಗಿರುತ್ತಾನೆ; ಮಾತ್ರವಲ್ಲ ಪರರಿಗೆ ಪೀಡೆಯನ್ನುಂಟುಮಾಡಿಯಾದರೂ ಸ್ವಾರ್ಥಸಾಧನೆಯ ಸಿದ್ಧತೆಯಲ್ಲಿ ಮಗ್ನನಾಗಿ, ಪಾಪಬಂಧವನ್ನು ಮಾಡಿಕೊಳ್ಳುತ್ತಾನೆ. ಅದರ ಫಲವಾಗಿ, ಭವಭವಗಳಲ್ಲಿ ಅನೇಕ ಘೋರದುಃಖಗಳನ್ನು ಅನುಭವಿಸುತ್ತಾನೆ. " ಮಿಥ್ಯಾದರ್ಶನದಂತಹ ಶತೃವು ಮತ್ತು ಮಹಾ ಪಾಪವು ಮತ್ತೊಂದಿಲ್ಲವು. ಇದಕ್ಕೆ " ಸಂಸಾರದ ಬೀಜ " ಎಂದು ಹೇಳುತ್ತಾರೆ.

ಶ್ರೀ ಪೂಜ್ಯಪಾದರು ಸಮಾಧಿ ಶತಕದಲ್ಲಿ ಹೀಗೆ ವರ್ಣಿಸಿರುತ್ತಾರೆ :–

**ನ ತದಸ್ತೀಂದ್ರಿಯಾರ್ಥೇಷು ಯತ್ ಕ್ಷೇಮಂಕರಮಾತ್ಮನಃ।**
**ತಥಾಪಿ ರಮತೇ ಬಾಲಸ್ತತ್ರೈವಾಜ್ಞಾನಭಾವನಾತ್ ॥೫೫॥**

ಭಾವಾರ್ಥ : ಇಂದ್ರಿಯ ಭೋಗಗಳಿಂದ ಆತ್ಮನಿಗೆ ಹಿತವಾಗದಿದ್ದರೂ ಕೂಡ, ಮಿಥ್ಯಾದೃಷ್ಟಿಯಾದ ಅಜ್ಞಾನೀ ಜೀವನು ತನ್ನ ಅಜ್ಞಾನದಿಂದಲೇ ಅವು ( ಭೋಗಾದಿ ) ಗಳಲ್ಲಿಯೇ ಮಗ್ನನಾಗುತ್ತಾನೆ.

**ಚಿರಂ ಸುಷುಪ್ತಾಸ್ತಮಸಿ ಮೂಢಾತ್ಮಾನಃ ಕುಯೋನಿಷು ।**
**ಅನಾತ್ಮೀಯಾತ್ಮಭೂತೇಷು ಮಮಾಹಮಿತಿ ಜಾಗ್ರತಿ ॥ ೫೬ ॥**

ಭಾವಾರ್ಥ : ಈ ಮೂಢಾತ್ಮನು ಅನಾದಿಕಾಲದಿಂದ ತನ್ನಾತ್ಮನ ಸ್ವರೂಪವನ್ನರಿಯದೇ ಕುಯೋನಿಗಳಲ್ಲಿ ಭ್ರಮಿಸುತ್ತಾ, ಸ್ತ್ರೀಪುತ್ರಾದಿ ಪರವಸ್ತುಗಳನ್ನು, ತನ್ನ ದೇಹವನ್ನು ಮತ್ತು ರಾಗಾದಿಗಳನ್ನು ತನ್ನ ಸ್ವಭಾವವೆಂದು ತಿಳಿದು ನಿದ್ರೆ ಹೋಗುತ್ತಿರುವನು.

**ದೇಹಾಂತರ್ಗತೇರ್ಬೀಜಂ ದೇಹೇಸ್ಮಿನ್ನಾತ್ಮಭಾವನಾ ।**
**ಬೀಜಂ ವಿದೇಹ ನಿಷ್ಪತ್ತೇ ರಾತ್ಮನ್ಯೇವಾತ್ಮಭಾವನಾ ॥೭೪॥**

**ಭಾವಾರ್ಥ :** ಈ ಶರೀರದಲ್ಲಿ ಮಮತ್ವಬುದ್ಧಿಯನ್ನಿಡುವುದೇ, ಪುನಃ ಪುನಃ ಶರೀರ ಗ್ರಹಣ ಮಾಡುವ ಬೀಜವನ್ನು ಸಂಪಾದಿಸುವಂತೆಯೇ ಸರಿ. ತನ್ನಲ್ಲಿ ತನ್ನಾತ್ಮಬುದ್ಧಿಯನ್ನಿಟ್ಟುಕೊಳ್ಳುವುದೇ, ದೇಹದಿಂದ ಬಿಡುಗಡೆಯಾಗುವ ಮಹದುಪಾಯವಾಗಿರುತ್ತದೆ.

ಶ್ರೀ ಕುಂದಕುಂದಾಚಾರ್ಯರು ಸಾರಸಮುಚ್ಚಯದಲ್ಲಿ ಹೇಳಿರುತ್ತಾರೆ :

**ಮಿಥ್ಯಾತ್ವಂ ಪರಮಂ ಬೀಜಂ ಸಂಸಾರಸ್ಯ ದುರಾತ್ಮನಃ ।**
**ತಸ್ಮಾತ್ತದೇವ ಮೋಕ್ತವ್ಯಂ ಮೋಕ್ಷಸೌಖ್ಯಂ ಜಿಘೃಕ್ಷುಣಾ ॥೫೨॥**

**ಭಾವಾರ್ಥ :** ಈ ದುಷ್ಟಸಂಸಾರದ ಮೂಲ ಬೀಜವು ಮಿಥ್ಯಾದರ್ಶನವಾಗಿರುವುದರಿಂದ, ಮೋಕ್ಷಾಭಿಲಾಷಿಗಳು ಮಿಥ್ಯಾದರ್ಶನದಿಂದ ಬಿಡುಗಡೆಯಾಗುವುದುಚಿತವಾಗಿರುತ್ತದೆ.

**ಸಮ್ಯಕ್ತ್ವೇನ ಹಿ ಯುಕ್ತಸ್ಯ ಧ್ರುವಂ ನಿರ್ವಾಣಸಂಗಮಃ ।**
**ಮಿಥ್ಯಾದೃಶೋಽಸ್ಯ ಜೀವಸ್ಯ ಸಂಸಾರೇ ಭ್ರಮಣಂಸದಾ ॥೪೧॥**

**ಭಾವಾರ್ಥ :** ಸಮ್ಯಗ್ದೃಷ್ಟಿ ಜೀವನು ನಿಃಸಂದೇಹವಾಗಿಯು ಮೋಕ್ಷಲಕ್ಷ್ಮಿಯನ್ನು ಪಡೆಯುವನು. ಮಿಥ್ಯಾದೃಷ್ಟಿಯು ಸದಾಕಾಲ ಸಂಸಾರದಲ್ಲಿಯೇ ಭ್ರಮಿಸಿಕೊಂಡಿರುತ್ತಾನೆ.

ಅನಾದಿ ಕಾಲದಿಂದ ಈ ಜೀವನು ಮಿಥ್ಯಾದರ್ಶನದ ಬಲದಿಂದಲೇ ಅಂಧನಾಗಿ ಭ್ರಮಿಸಿಕೊಂಡಿರುವಾಗ, ಅದನ್ನೇಕೆ ತ್ಯಜಿಸಲು ಪ್ರಯತ್ನಪಡಬಾರದು ? (ತ್ಯಜಿಸುವುದು ಅತ್ಯಾವಶ್ಯಕವಾಗಿರುತ್ತದೆಂದು ಭಾವವು.)



## ಆತ್ಮಧ್ಯಾನವು ಮೋಕ್ಷಸುಖಕ್ಕೆ ಕಾರಣವು

**ಜಇ ವೀಹಉ ಚಉಗಇಗಮಣು ತಉ ಪರಭಾವ ಚಏವಿ।**
**ಅಪ್ಪಾ ಝಾಯಹಿ ಣಿಮ್ಮಲಉ ಜಿಮ ಸಿವಸುಕ್ಖ ಲಹೇವಿ ॥೫॥**

**ಅನ್ವಯಾರ್ಥ :** ಜಇ–ಒಂದು ವೇಳೆ, ಚಉಗಇಗಮಣು ವೀಹಉ ತಹು – ಚತುರ್ಗತಿಭ್ರಮಣದಿಂದ ಭಯಭೀತನಾದರೆ, ಪರಭಾವಚಏವಿ–ಪರ ಭಾವಗಳನ್ನು ಬಿಟ್ಟು, ಣಿಮ್ಮಲಉ ಅಪ್ಪಾ ಝಾಯಹಿ–ನಿರ್ಮಲಾತ್ಮನನ್ನು ಧ್ಯಾನಿಸು, ಜಿಮ–ಆದರಿಂದ, ಸಿವಸುಕ್ಖ ಲಹೇವಿ–ಮೋಕ್ಷಸುಖವನ್ನು ಪಡೆಯುವಿ.

**ಭಾವಾರ್ಥ :** ಈ ಮೊದಲು ಚತುರ್ಗತಿಭ್ರಮಣರೂಪ ಸಂಸಾರದ ಶಾರೀರಕವೂ, ಮಾನಸಿಕವೂ ಆದ ದುಃಖವನ್ನು ವರ್ಣಿಸಿರುತ್ತದೆ. ಇನ್ನು ಸ್ವಾಭಾವಿಕವೂ ಸುಖಕಾರಿಯೂ ಆದ ನಿಜ ಸುಖವು ಪಂಚಮಗತಿಯಾದ ಮೋಕ್ಷದಲ್ಲಿಯೇ ಪ್ರಾಪ್ತವಾಗುವುದು. ಅಲ್ಲಿ ಆತ್ಮನ ನಿಶ್ಚಲವೂ, ಪರಮಾ ನಂದಮಯವೂ, ಅನುಪಮಸುಖವೂ ಇರುತ್ತದೆ. ಆದ್ದರಿಂದ ಮನಸ್ಸುಳ್ಳ ಪ್ರಾಣಿಯು ತನ್ನ ಹಿತಾಹಿತವನ್ನು ವಿಚಾರಿಸಬೇಕು. ಒಂದು ವೇಳೆ ತನ್ನಾ ತ್ಮನ ಮೇಲೆ ದಯೆ ಇದ್ದರೆ ಭವಸಾಗರದಲ್ಲಿ ತಳ್ಳದೆ, ಆದರಿಂದ ರಕ್ಷಣೆ ಹೊಂದಲು ಪ್ರಯತ್ನಮಾಡಬೇಕು. ಆದಷ್ಟು ಬೇಗನೆ ಮೋಕ್ಷದ ನಿರಾಕುಲ ವಾದ ಭಾವದತ್ತ ಕೊಂಡಯ್ಯಬೇಕು. ಸದ್ಗುರುಗಳು ಅದಕ್ಕೆ ತನ್ನ ಶುದ್ಧಾತ್ಮ ಧ್ಯಾನವೇ ಮಹೋಪಾಯವೆಂದು ಅಪ್ಪಣೆ ಇತ್ತಿರುವರು.

ಭೇದ ವಿಜ್ಞಾನದ ಪ್ರಬಲ ಶಕ್ತಿಸಾಮರ್ಥ್ಯದಿಂದ ತನ್ನ ಆತ್ಮದೊಡನೆ ಯಾವ ಯಾವ ಪರವಸ್ತುಗಳ ಸಂಯೋಗವಿರುವುದೋ, ಅವೆಲ್ಲವುಗಳನ್ನು ಪ್ರತಿ ನಿತ್ಯವು ಚಿಂತಿಸುತ್ತಾ, ಮೋಹವನ್ನು ತೊರೆಯಲು ಸತತವೂ ಪ್ರಯತ್ನಿಸ ಬೇಕು. ಮೋಕ್ಷವೇ ತನ್ನಾತ್ಮನ ಶುದ್ಧ ಸ್ವಭಾವವಾಗಿರುತ್ತದೆ. ಶುದ್ಧಾತ್ಮ ಚಿಂತನೆಯೇ ಮಹಾ ದೊಡ್ಡ ಉಪಾಯವಾಗಿರುತ್ತದೆ. " ಜೈಸಾ ಧ್ಯಾವೇ ವೈಸಾ ಹೋ ಜಾಯೇ" ಹೇಗೆ ಚಿಂತಿಸುವನೋ ಹಾಗೆಯೇ ಆಗುತ್ತದೆ.

ಒಂದು ವೇಳೆ ಮನುಷ್ಯನ ಆತ್ಮನ ವಿಷಯವಾಗಿ ಭೇದ ವಿಜ್ಞಾನದಿಂದ ವಿಚಾರಿಸುತ್ತಿದ್ದರೆ, ಆಗ ತಿಳುವಳಿಕೆಯುಂಟಾಗುವುದು. ಈ ಜೀವನು ತೈಜಸ, ಕಾರ್ಮಣ ಮತ್ತು ಔದಾರಿಕ ಈ ಮೂರು ಶರೀರಗಳೊಡಗೂಡಿರುವನು. ಇವು ಮೂರು ಶರೀರಗಳು ಪುದ್ಗಲ ದ್ರವ್ಯದ ರಚನಾ ವಿಶೇಷಗಳಾಗಿವೆ. ಆತ್ಮ ಸ್ವಭಾವದಿಂದ ಶೀರಾ ಭಿನ್ನಗಳಾಗಿವೆಂದು, ವಿಪರೀತಗಳಾಗಿರುವೆಂದು ತೋರುವುದು.

ಮಾತಾಪಿತೃಗಳ ರಜೋವೀರ್ಯಗಳ ಸಂಬಂಧದಿಂದುತ್ಪನ್ನವಾದ ಔದಾರಿಕ ಶರೀವು ಮತ್ತು ಪ್ರವಾಹರೂಪವಾಗಿ ಅನಾದಿಕಾಲದಿಂದ ಜೀವದೊಡನೆ ಸಂಬಂಧವನ್ನಿಟ್ಟುಕೊಂಡಿರುವ ತೈಜಸ ಮತ್ತು ಕಾರ್ಮಣ ಶರೀರಗಳೆರಡು, ಎಂಟು ಕರ್ಮಮಯವಾದ ಕಾರ್ಮಣ ಶರೀರದ ವಿಪಾಕದಿಂದ, ಯಾವ ಯಾವ ಫಲಗಳು ಮತ್ತು ಅವಸ್ಥೆಗಳು ಅಥವಾ ವಿಕಾರಗಳು ಆತ್ಮನ ಪರಿಣತಿಯಲ್ಲಿ ಆಗುತ್ತಿರುತ್ತವೆಯೋ, ಅವೆಲ್ಲವೂ ಆತ್ಮರುಗಳ ಸ್ವಭಾವದಿಂದ ಭಿನ್ನಗಳಾಗಿವೆ. ಜ್ಞಾನಾವರಣಾದಿ ನಾಲ್ಕು ಘಾತಿಕರ್ಮಗಳ ನಿಮಿತ್ತದಿಂದ ಅಜ್ಞಾನ, ರಾಗ, ದ್ವೇಷ, ಮೋಹಾದಿ ಭಾವಕರ್ಮಗಳುಂಟಾಗುತ್ತವೆ. ಹಾಗೆಯೇ ಅಘಾತಿಕರ್ಮಗಳಿಗೆ ಕಾರಣಗಳಾದ ಶರೀರ, ಚೇತನ, ಅಚೇತನ ಪದಾರ್ಥಗಳ ಸಂಬಂಧವು ಆಗುತ್ತವೆ. ಅವುಗಳೂ ಕೂಡ ಭಿನ್ನಗಳಾಗಿವೆ. ಈ ಜೀವಗಳ ಉನ್ನತಿಯ ಮಾರ್ಗಕ್ಕೇಳೆಯಲು ಹದಿನಾಲ್ಕು ಸೋಪಾನ (ಮೆಟ್ಟಲು)ಗಳಿರುತ್ತವೆ. ಅವುಗಳಿಗೆ ಗುಣಸ್ಥಾನಗಳೆಂದು ಹೇಳುತ್ತಾರೆ. ಅವು ಶುದ್ಧಾತ್ಮನಿಂದ ಪೂರ್ಣ ಭಿನ್ನಗಳಾಗಿವೆ.

ಗತಿ, ಇಂದ್ರಿಯ, ಕಾಯ, ಯೋಗ, ವೇದ, ಕಷಾಯ, ಜ್ಞಾನ, ಸಂಯಮ, ದರ್ಶನ, ಲೇಶ್ಯೆ, ಭವ್ಯತ್ವ, ಸಮ್ಯಕ್ತ್ವ, ಸಂಜ್ಞಿತ್ವ, ಆಹಾರಗಳೆಂದು ಮಾರ್ಗಣಾಸ್ಥಾನಗಳು ಹದಿನಾಲ್ಕು. ಇವು ಕೂಡ ಶುದ್ಧಾತ್ಮನ ಸ್ವಭಾವವಲ್ಲವು. ಈ ಶುದ್ಧ ಜೀವನು ಅಖಂಡನೂ, ಅಭೇದನೂ, ಸಹಜಜ್ಞಾನ, ದರ್ಶನ, ವೀರ್ಯ ಮತ್ತು ಸುಖಮಯನೂ ಆಗಿರುತ್ತಾನೆ. ಸಕಲ ಸುಸಾರಿತ–ಅವಸ್ಥೆಗಳು ಶುದ್ಧಾತ್ಮನಿಂದ ಭಿನ್ನವೇ ಆಗಿರುತ್ತವೆ. ಇಂದ್ರನ ಪದವಿಯಾಗಲಿ, ಚಕ್ರವರ್ತಿಯ ಪದವಿಯಾಗಲಿ, ತೀರ್ಥಂಕರ ಪರಮದೇವರ ಅವಸ್ಥೆ

ಗಳಾಗಲಿ ಎಲ್ಲವೂ ಕರ್ಮಕೃತ ಉಪಾಧಿಗಳಾಗಿರುತ್ತವೆ ಇವುಗಳಿಂದ ಆತ್ಮನು ಭಿನ್ನನಾದ ನಿತ್ಯನಿರಂಜನ ಪ್ರಭುವೇ ಆಗಿರುತ್ತಾನೆ.

ತತ್ವಾರ್ಥ ಸೂತ್ರದಲ್ಲಿ ವರ್ಣಿಸಿದ ಜೀವನ ಔಪಶಮಿಕಾದಿ ಭಾವಗಳು ಮತ್ತು ಅವುಗಳ ಭೇದಗಳಾದ ಐವತ್ತಮೂರು ಭಾವಗಳಿಂದ ಶುದ್ಧಾತ್ಮನಿಗೆ ಕೇವಲ ಕ್ಷಾಯಿಕಭಾವವು ಮತ್ತು ಪಾರಿಣಾಮಿಕ ಭಾವಗಳಿರುತ್ತವಲ್ಲದೆ ಉಳಿದ ಮೂರು ಭಾವ (ಔಪಶಮಿಕ. ಕ್ಷಾಯೋಪಶಮಿಕ ಮತ್ತು ಔದಯಿಕ) ಗಳು ಇರುವುದಿಲ್ಲವು. ಈ ಐದು ಭಾವಗಳ ಉಪಭೇದಗಳಾದ ಐವತ್ತಮೂರು ಭೇದಗಳಲ್ಲಿ ಅಂದರೆ ನವಲಬ್ಧಿಗಳು ಮತ್ತು ಜೀವತ್ವ ಪಾರಿಣಾಮಿಕಭಾವ ಒಂದು ಹೀಗೆ ಹತ್ತು ಭಾವಗಳಿರುತ್ತವಲ್ಲದೆ ಉಳಿದ ನಲವತ್ತಮೂರು ಭಾವ ಗಳಿರುವುದಿಲ್ಲವು.

ಆತ್ಮನನ್ನು ಸಿದ್ಧಪರಮಾತ್ಮನಂತೆ ಚಿಂತಿಸಬೇಕು. ಭೇದ ವಿಜ್ಞಾನದ ಪ್ರಭಾವದಿಂದ ಧ್ಯಾನಿಸುವವನು ತನ್ನಲ್ಲಿಯೇ ಪರಮಾತ್ಮ ಸ್ವರೂಪವನ್ನು ನೋಡುವನು. ಉದಾ: ಬೆರೆತುಕೊಂಡಿರುವ ಹಾಲು ಮತ್ತು ನೀರನ್ನು ಅದರಲ್ಲಿ ಎರಡು ಭಿನ್ನ ಭಿನ್ನವಾಗಿಯೂ, ಬಿಸಿನೀರಿನಲ್ಲಿ ಉಷ್ಣತ್ವ ಮತ್ತು ನೀರು ಇವುಗಳ ಸ್ವಭಾವಗಳನ್ನು ಭಿನ್ನ ಭಿನ್ನವಾಗಿಯೂ, ವ್ಯಂಜನ (ತರ್ಕಾರಿ ಗಳಿಂದ ಮಾಡಿದ ಪದಾರ್ಥ) ಗಳಲ್ಲಿ ಮಿಶ್ರವಾದ ಲವಣ ಮತ್ತು ತರ್ಕಾರಿಗಳ ರುಚಿಯನ್ನು ಬೇರೆ ಬೇರೆಯಾಗಿ ರುಚಿಯು ಸ್ವಾದವು ಇರುವಂತೆಯೂ, ಕೆಂಪು ವರ್ಣದಿಂದ ಮಿಶ್ರವಾದ ಕೆಂಪು ನೀರಿನಲ್ಲಿ ನೀರು ಮತ್ತು ಕೆಂಪು ಬಣ್ಣಗಳ ಸ್ವಭಾವವು ಬೇರೆ ಬೇರೆಯಂತೆ ತೋರುವಂತೆಯೂ, ತಿಲ (ಎಳ್ಳು) ದಲ್ಲಿ ಹಿಂಡಿ ಮತ್ತು ತೈಲ (ಎಣ್ಣೆ) ಬೇರೆ ಬೇರೆಯಾಗಿರುವಂತೆಯೂ, ಬತ್ತದಲ್ಲಿ ತೌಡು ಮತ್ತು ಅಕ್ಕಿಯು ಬೇರೆ ಬೇರೆಯಾಗಿರುವಂತೆಯೂ, ಜ್ಞಾನಿಯಾದ ವನು ತನ್ನಾತ್ಮನನ್ನು ಮತ್ತು ರಾಗಾದಿ ಭಾವ ಕರ್ಮಗಳಿಂದಲೂ, ಜ್ಞಾನಾ ವರಣಾದಿ ದ್ರವ್ಯಕರ್ಮಗಳಿಂದಲೂ, ಶರೀರಾದಿ ನೋಕರ್ಮಗಳಿಂದಲೂ, ಸಕಲ ಪರವಸ್ತುಗಳಿಂದಲೂ ಭಿನ್ನನೆಂದೇ ತಿಳಿಯುತ್ತಾನೆ. ಇಷ್ಟೇ ಅಲ್ಲ ಪ್ರತಿ ಯೊಂದು ಸಂಸಾರೀ ಜೀವವು ಎಲ್ಲ ಪರಭಾವಗಳಿಂದ ಭಿನ್ನನೆಂದೇ ತೋರು ತ್ತದೆ.

ಜ್ಞಾನಿಯ ದೃಷ್ಟಿಯಲ್ಲಿ ಸಕಲ ಸಂಸಾರೀ ಜೀವಗಳು ಮತ್ತು ಸಿದ್ಧರು ಒಂದೇ ವಿಧವಾಗಿ ಪರಮ ನಿರ್ಮಲತ್ವವೂ, ವೀತರಾಗತ್ವವೂ, ಜ್ಞಾನಾನಂದ ಮಯುವೂ ಆಗಿವೆಯೆಂದು ತೋರುವುದು. ಈ ದೃಷ್ಟಿಗೇನೇ ನಿರ್ಮಲದೃಷ್ಟಿ ಕೋಣವೆಂದು ಹೇಳುತ್ತಾರೆ. ಹೀಗೆ ಅಭ್ಯಾಸುವವನ ಭಾವದಲ್ಲಿ ಸಮಭಾವದ ಸಾಮ್ರಾಜ್ಯವೇ ನೆಲೆ ನಿಲ್ಲುವುದು. ರಾಗ ದ್ವೇಷಾದಿ ವಿಕಾರಗಳು ದೂರವಾಗುವುವು.

ಈ ಸಮಭಾವದಲ್ಲಿ ಏಕಾಗ್ರಮನಸ್ಕನಾಗುವುದೇ ಧ್ಯಾನವು. ಇಂಥಹ ಧ್ಯಾನಾಗ್ನಿಯಿಂದ ಕರ್ಮಬಂಧನವು ದೂರವಾಗಿ ಶೀಘ್ರವೇ ಮೋಕ್ಷ-ಲಕ್ಷ್ಮಿಯನ್ನು ಪಡೆಯುವನು.

ಶ್ರೀ ಕುಂದ ಕುಂದಾಚಾರ್ಯರು ಸಮಯ ಪಾಹುಡದಲ್ಲಿ ಹೇಳುತ್ತಾರೆ:

ಜೀವಸ್ಸ ಣತ್ಥಿ ವಣ್ಣೋ ಣವಿ ಗಂಧೋರಸೋ ಣವಿಯ ಫಾಸೋ ।
ಣವಿ ರೂವಂ ಣ ಸರೀರಂ ಣವಿ ಸಂಠಾಣಂ ಣ ಸಂಹಣಾಣಂ ॥೫೫॥

ಜೀವಸ್ಸ ಣತ್ಥಿ ರಾಗೋ ಣವಿ ದೋಸೋ ಣೇವ ವಿಜ್ಜದೇ ಮೋಹೋ ।
ಣೋ ಪಚ್ಚಯಾ ಣ ಕಮ್ಮಂ ಣೋ ಕಮ್ಮಂ ಚಾವಿ ಸೇ ಣತ್ಥಿ ॥೫೬॥

ಜೀವಸ್ಸ ಣತ್ಥಿ ವಗ್ಗೋ ಣ ವಗ್ಗಣಾ ಣೇವ ಕಡ್ಢಯಾ ಕೇ ಈ ।
ಣೋ ಅಜ್ಝಪ್ಪಟ್ಠಾಣಾ ಣ ವಯ ಅಣುಭಾಯಠಾಣಾಣಿ ॥೫೭॥

ಜಿವಸ್ಸ ಣತ್ಥಿ ಕೇ ಈ ಜೋಯಟ್ಠಾಣಾ ಣ ಬಂಧ ಠಾಣಾ ವಾ ।
ಣೇ ವಯುದುದಯಟ್ಠಾಣಾ ಣ ಮಗ್ಗಣಟ್ಠಾಣ ಯಾ ಕೇ ಈ ॥೫೮॥

ಣೋ ಸಿಧಿ ಬಂಧಟ್ಠಾಣಾ ಜೀವಸ್ಸಣ ಸಂಕಿಲೇಶ ಠಾಣಾ ವಾ ।
ಣೇವ ವಿಸೋಹಿಟ್ಠಾಣಾ ಣೋ ಸಂಗಮ ಲದ್ಧಿ ಠಾಣಾ ವಾ ॥೫೯॥

ಣೇ ವಯ ಜೀವಟ್ಠಾಣಾ ಣ ಗುಣಟ್ಠಾಣಾಯ ಅತ್ಮ ಜೀವಸ್ಸ ।
ಜೇಣ ದು ಏದೇ ಸವ್ವೇಪುಗ್ಗಲದವ್ವಸ್ಸ ಪರಿಣಾಮಾ ॥೬೦॥

ಭಾವಾರ್ಥ : ಜೀವನು ನಿಶ್ಚಯನಯದಿಂದ ವರ್ಣ, ರಸ, ಗಂಧ, ಸ್ಪರ್ಶಗಳಿಲ್ಲದವನೂ, ಶರೀರರಹಿತನೂ, ಆರು ಸಂಸ್ಥಾನಗಳಲ್ಲಿ ಯಾವುದೊಂದು

ಸಂಸ್ಥಾನವಿಲ್ಲದವನೂ, ಆರು ಸಂಹನನಗಳಲ್ಲಿ ಒಂದು ಸಂಹನನವಿಲ್ಲದವನೂ, ರಾಗ ದ್ವೇಷ ಮೋಹಗಳಿಲ್ಲದವನೂ ಆಗಿರುತ್ತಾನೆ. ಐದು ಮಿಥ್ಯಾತ್ವಗಳಿಂದ ರಹಿತನೂ, ಹನ್ನೆರಡು ಅವಿರತಿಗಳಿಲ್ಲದವನೂ, ಇಪ್ಪತ್ತೈದು ಕಷಾಯ, ಹದಿನೈದು ಯೋಗಗಳಿಂದ ರಹಿತನೂ ಆಗಿರುತ್ತಾನೆ. ಅರ್ಥಾತ್ : ಹೀಗೆ ೫೭ ವಿಧದ ಆಸ್ರವ, ಜ್ಞಾನಾವರಣಾದಿ ಎಂಟು ಕರ್ಮ, ಆಹಾರಕ ತೈಜಸ ಮೊದಲಾದ ನೋ ಕಷಾಯುಗಳು, ಅವಿಭಾಗ ಪ್ರತಿಚ್ಛೇದ ಶಕ್ತಿಯು ರೂಪ ವರ್ಣವು, ವರ್ಗಣಾ ಸಮೂಹ ರೂಪವರ್ಗಣೆಯೂ, ಶುಭಾಶುಭ ವಿಕಲ್ಪರೂಪ ಅಧ್ಯಾತ್ಮಸ್ಥಾನವೂ, ಸುಖದುಃಖಫಲರೂಪವಾದ ಅನುಭಾಗ ಸ್ಥಾನವೂ, ಆತ್ಮ ಪ್ರದೇಶವ ಹಲನ ಚಲನ ರೂಪ ಯೋಗ ಶಕ್ತಿಯ ಅಶುದ್ಧ ಪರಿಣಮನ ರೂಪವಾದ ಯೋಗಸ್ಥಾನವೂ, ಪ್ರಕೃತಿ ಸ್ಥಿತಿ ಮೊದಲಾದ ನಾಲ್ಕು ಬಂಧಸ್ಥಾನಗಳೂ, ಕರ್ಮಗಳ ಉದಯಸ್ಥಾನವೂ, ಹದಿನಾಲ್ಕು ಗುಣಸ್ಥಾನ, ಹದಿನಾಲ್ಕು ಮಾರ್ಗಣಾಸ್ಥಾನಗಳೂ, ಅಶುಭ ಭಾವರೂಪ ಸಂಕ್ಲೇಶಸ್ಥಾನವೂ, ಶುಭ ಭಾವ ರೂಪ ವಿಶುದ್ಧಿಯ ಸ್ಥಾನವೂ, ಸಂಯಮದ ವೃದ್ಧಿರೂಪ ಸಂಯಮ ಸ್ಥಾನವೂ, ಏಕೇಂದ್ರಿಯ ಮೊದಲಾದ ಹದಿನಾಲ್ಕು ಜೀವಸಮಾಸಗಳೂ ಯಾವುದೂ ಇರುವುದಿಲ್ಲವು. ಯಾಕೆಂದರೆ ಇವೆಲ್ಲವು ಪುದ್ಗಲ ದ್ರವ್ಯದ ಸಂಯೋಗ ಮತ್ತು ನಿಮಿತ್ತದಿಂದುಂಟಾಗುವ ಪರಿಣಾಮಗಳಾಗಿರುತ್ತವೆ.

ಶ್ರೀ ಅಮೃತಚಂದ್ರಾಚಾರ್ಯರು ಸಮಯಸಾರ ಕಲಶದಲ್ಲಿ ಹೇಳಿರುತ್ತಾರೆ.

**ಜ್ಞಾನಾದೇವ ಜ್ವಲನಪಯಸೋರೌಷ್ಣ್ಯಶೈತ್ಯವ್ಯವಸ್ಥಾ**
**ಜ್ಞಾನಾದೇವೋಲ್ಲಸತಿ ಲವಣಸ್ವಾದಭೇದವ್ಯುದಾಸಃ ।**
**ಜ್ಞಾನಾದೇವ ಸ್ವರಸವಿಕಸನ್ನಿತ್ಯ ಚೈತನ್ಯಧಾತೋಃ**
**ಕ್ರೋಧಾದೇಶ್ಚ ಪ್ರಭವತಿ ಭಿದಾ ಭಿದಂತೀ ಕರ್ತೃಭಾನಾಂ ॥ ೧೫-೩ ॥**

ಭಾವಾರ್ಥ : ಭೇದವಿಜ್ಞಾನದ ಬಲದಿಂದ ಜ್ಞಾನಿಯು ಉಷ್ಣಜಲ (ಬಿಸಿನೀರು) ದಲ್ಲಿ ಅಗ್ನಿಯ ಉಷ್ಣತ್ವವೂ, ನೀರಿನ ಶೈತ್ಯತ್ವವೂ ಭಿನ್ನಭಿನ್ನವಾಗಿಯೂ, ತರ್ಕಾರಿಗಳಿಂದ ರಚಿತವಾದ ವ್ಯಂಜನದಲ್ಲಿಟ್ಟ ಲವಣ ಮತ್ತು ತರಕಾರಿಯ ರುಚಿಯು ಭಿನ್ನಭಿನ್ನವಾಗಿ ತೋರುವಂತೆಯೂ, ಈ ಆತ್ಮನು

ಆತ್ಮೀಕ ರಸದಲ್ಲಿ ಭರಿತವಾಗಿರುವಂತೆಯೂ, ನಿತ್ಯಚೈತನ್ಯಮಯನೆಂದೂ, ವೀತರಾಗನೆಂದೂ ತಿಳಿಯುತ್ತಾನೆ. ಇವನು ಕ್ರೋಧಾದಿ ಕಷಾಯ ವಿಕಾರಗಳ ಕರ್ತೃವು ಅಲ್ಲವು. ಅವು ಆತ್ಮನಿಂದ ಬೇರೆಯೇ ಎಂದು ತಿಳಿಯುತ್ತಾನೆ.

ಸಮಯಸಾರ ಕಲಶದಲ್ಲಿ ಪುನಃ ಹೇಳಿದ್ದಾರೆ.

**ದರ್ಶನಜ್ಞಾನಚಾರಿತ್ರತ್ರಯಾತ್ಮಾ ತತ್ತ್ವಮಾತ್ಮನಃ ।**<br>
**ಏಕಏವ ಸದಾ ಸೇವ್ಯೋ ಮೋಕ್ಷಮಾರ್ಗೋ ಮುಮುಕ್ಷುಣಾ**<br>
**॥೪೬-೧೦॥**

**ಏಕೋ ಮೋಕ್ಷಪಥೋ ಯ ಏಷ ನಿಯತೋ ದೃಗ್ಜ್ಞಪ್ತಿ ವೃತ್ತ್ಯಾತ್ಮಕ**<br>
**ಸ್ತತ್ರೈವಸ್ಥಿತಿಮೇತಿ ಯಸ್ತಮನಿಶಂ ಧ್ಯಾಯೇಚ್ಚ ತಂ ಚೇತತಿ ।**<br>
**ತಸ್ಮಿನ್ನೇವ ನಿರಂತರಂ ವಿರಹತಿ ದ್ರವ್ಯಾಂತರಾಣ್ಯಸ್ಪೃಶನ್**<br>
**ಸೋಽವಶ್ಯಂ ಸಮಯಸ್ಯ ಸಾರಮಚಿರಾನ್ನಿತ್ಯೋದಯಂ ವಿಂದತಿ**<br>
**॥೫೭-೧೦॥**

ಭಾವಾರ್ಥ: ಸಮ್ಯಗ್ದರ್ಶನಜ್ಞಾನಚಾರಿತ್ರಗಳೇ ಮೋಕ್ಷಮಾರ್ಗಗಳಾಗಿರುತ್ತದೆ. ಆದ್ದರಿಂದ ಮೋಕ್ಷಾಭಿಲಾಷಿಯು ಇವುಗಳನ್ನು ಆರಾಧಿಸುಸುವುದು ಅತ್ಯಾವಶ್ಯಕವಾಗಿರುತ್ತದೆ. ನಿಶ್ಚಯ ನಯದಿಂದ ಸಮ್ಯಗ್ದರ್ಶನಜ್ಞಾನಚಾರಿತ್ರಮಯನಾದ ಆತ್ಮನು ಮೋಕ್ಷಮಾರ್ಗ ಸ್ವರೂಪನಾಗಿರುತ್ತಾನೆ. ಸದಾಕಾಲದಲ್ಲಿ ರಾತ್ರಿಹಗಲೆನ್ನದೆ ಆದರ ಅನುಭವಾಮೃತವನ್ನೇ ಪಾನಮಾಡಿಕೊಂಡಿರುತ್ತಾನೆ. ಅದರಲ್ಲಿಯೇ ವಿಹರಿಸುತ್ತಾನೆ. ತನ್ನ ಆತ್ಮನಲ್ಲದೆ ಇನ್ನಿತರ ಆತ್ಮರುಗಳನ್ನೂ, ಸಕಲ ಪುದ್ಗಲಗಳನ್ನೂ, ಧರ್ಮ ಅಧರ್ಮ ಆಕಾಶ ಕಾಲಗಳೆಂಬ ನಾಲ್ಕು ಅಮೂರ್ತಿ ದ್ರವ್ಯಗಳನ್ನೂ ಮತ್ತು ಎಲ್ಲಾ ಪರಭಾವಗಳನ್ನೂ ಸ್ಪರ್ಶಿಸದವನೇ ನಿತ್ಯ ಉದಯ ರೂಪವಾದ ಪರಮಾತ್ಮ ರುಚಿಯನ್ನನುಭವಿಸುವನು. ಯಥಾರ್ಥವಾಗಿಯು ಈ ಆತ್ಮಾನುಭವವೇ ಸಾಕ್ಷಾತ್ ಮೋಕ್ಷಮಾರ್ಗವಾಗಿರುತ್ತದೆ.



# ಮೂರು ವಿಧದ ಆತ್ಮರುಗಳು

**ತಿ ಪಯಾರೋ ಅಪ್ಪಾ ಮುಣಹಿ ಪರು ಅಂತರು ಬಹಿರಪ್ಪು ।**
**ಪರ ಝಾಯಹಿ ಅಂತರ ಸಹಿಉ ಬಾಹಿರು ಚಯಹಿ ಣಿಭಂತು ॥ ೬ ॥**

**ಅನ್ವಯಾರ್ಥ :** ಅಪ್ಪಾ ತಿ ಪಯಾರೋ ಮುಣಹಿ–ಆತ್ಮರು ಮೂರು ವಿಧವೆಂದು ತಿಳಿ, ಪರು–ಪರಮಾತ್ಮನೆಂದೂ, ಅಂತರು–ಅಂತರಾತ್ಮನೆಂದೂ, ಬಹಿರಪ್ಪು–ಬಹಿರಾತ್ಮರೆಂದೂ, ಣಿಭಂತು–ಸಂಶಯವಿಲ್ಲದೆ, ಬಾಹಿರು ಚಯುಹಿ –ಬಹಿರಾತ್ಮತ್ವವನ್ನು ಬಿಟ್ಟು, ಅಂತರ ಸಹಿಉ–ಅಂತರಾತ್ಮನಾಗಿ, ಪರ ಝಾಯಹಿ–ಪರಮಾತ್ಮನನ್ನು ಧ್ಯಾನಿಸು.

**ಭಾವಾರ್ಥ :** ಶುದ್ಧ ನಿಶ್ಚಯ ನಯದಿಂದ ಎಲ್ಲ ಆತ್ಮರುಗಳು ಸರಿ ಸಮಾನರೇ. ಶುದ್ಧ ಬುದ್ಧ ಪರಮಾತ್ಮರು ಜ್ಞಾನಾನಂದಮಯರಾಗಿರುವುದರಿಂದ ಅವರಲ್ಲಿ ಭೇದವಿಲ್ಲವು. ದ್ರವ್ಯವು ಸತ್‌ಸ್ವರೂಪವಾಗಿರುವುದರಿಂದ ಉತ್ಪಾದ, ವ್ಯಯ, ಧ್ರೌವ್ಯ ಸ್ವರೂಪವಾಗಿರುತ್ತದೆ. ಎಲ್ಲ ದ್ರವ್ಯಗಳು ಸಾಮಾನ್ಯ ಮತ್ತು ವಿಶೇಷ ಗುಣಗಳಿಂದೊಡಗೂಡಿರುವುದರಿಂದ ಅವುಗಳಲ್ಲಿ ಯಾವ ಗುಣವೂ ನ್ಯೂನಾಧಿಕವಾಗಲಾರವು. ಆದುದರಿಂದ ದ್ರವ್ಯವು ನಿತ್ಯವಾಗಿದೆ. ಪ್ರತಿಯೊಂದು ಗುಣಗಳು ಪರಿಣಮನಶೀಲವಾಗಿರುತ್ತವೆ. ಕೂಟಸ್ಥ ನಿತ್ಯವಲ್ಲವು. ಒಂದು ವೇಳೆ ಕೂಟಸ್ಥ ನಿತ್ಯವೆಂದು ಹೇಳುವುದಾದರೆ ಯಾವ ಕಾರ್ಯಗಳು ನಡೆಯಲಿಕ್ಕಿಲ್ಲವು. ಗುಣಗಳ ಪರಿಣಮನದಿಂದ ಕ್ಷಣಕ್ಷಣಕ್ಕೂ ಒಂದೊಂದು ಅವಸ್ಥೆಗಳಾಗುತ್ತಿರುತ್ತವೆ. ಅವು ಆ ಗುಣದ ಪರ್ಯಾಯಗಳಾಗಿರುತ್ತವೆ.

ಒಂದೊಂದು ಗುಣಗಳಲ್ಲಿ ಪ್ರತಿ ಸಮಯದಲ್ಲಿಯೂ ಬದಲಾವಣೆಗಳಾಗುತ್ತಿರುವ ಅನಂತ ಪರ್ಯಾಯಗಳಾಗುತ್ತಿರುತ್ತವೆ. ಒಂದು ಪರ್ಯಾಯದ ಉತ್ಪತ್ತಿಯಾಗುವುದಾದರೆ ಮೊದಲಿದ್ದ ಪರ್ಯಾಯದ ನಾಶವಾಗಬೇಕು. ಪರ್ಯಾಯದ ದೃಷ್ಟಿಯಿಂದ ದ್ರವ್ಯವು ಸದಾಕಾಲದಲ್ಲಿ ಉತ್ಪಾದ. ವ್ಯಯ, ಧ್ರೌವ್ಯ ಸ್ವರೂಪಗಳಾಗಿವೆ. ಅರ್ಥಾತ್ : ಮೊದಲಿದ್ದ ಪರ್ಯಾಯವನ್ನು

ನಾಶಗೊಳಿಸಿ (ಕೆಡಿಸಿ) ಹೊಸ ಪರ್ಯಾಯದ ಉತ್ಪತ್ತಿಯಾಗುತ್ತಿದ್ದರೂ, ದ್ರವ್ಯವು ತನ್ನ ಗುಣಗಳ ಶಕ್ತಿಯನ್ನು ಇಟ್ಟುಕೊಂಡಿರುತ್ತದೆ. ಆದ್ದರಿಂದಲೇ ದ್ರವ್ಯದ ಸ್ವರೂಪವನ್ನು "ಗುಣಪರ್ಯಯವತ್ ದ್ರವ್ಯಂ" ಗುಣ ಪರ್ಯಾಯ ಗಳುಳ್ಳದ್ದೇ ದ್ರವ್ಯವು ಎಂದು ಹೇಳಿರುತ್ತಾರೆ.

ಪ್ರತಿಯೊಂದು ದ್ರವ್ಯದಲ್ಲಿ ಎಷ್ಟು ಪರ್ಯಾಯಗಳುಂಟಾವ ಸಂಭವ ವಿದೆಯೋ ಅವೆಲ್ಲವು ಶಕ್ತಿಯಿಂದೊಡಗೂಡಿರುತ್ತವೆ. ಆದರೆ ಒಂದೊಂದು ಸಮಯದಲ್ಲಿ ಒಂದೊಂದೇ ಪರ್ಯಾಯಗಳು ಪ್ರಕಟವಾಗುತ್ತವೆ. ಉದಾ: ಮಣ್ಣಿನ ಹೆಂಟೆಯಲ್ಲಿ ಅನೇಕ ವಿಧದ ಪಾತ್ರೆಗಳು, ಬೊಂಬೆಗಳು, ಮನೆ ಮೊದಲಾದವುಗಳಾಗುವ ಶಕ್ತಿಯಿರುವುದೋ ಅವೆಲ್ಲವೂ ಪರ್ಯಾಯ ಶಕ್ತಿ ಯಿಂದೊಳಗೊಂಡಿರುತ್ತದೆ. ಅದು ಪ್ರಕಟಕ್ಕೆ ಬರಬೇಕಾದರೆ ಒಂದೊಂದು ಸಮಯದಲ್ಲಿ ಒಂದೊಂದೇ ಪರ್ಯಾಯವುಂಟಾಗುತ್ತದೆ. ಹೇಗೆಂದರೆ ಮಣ್ಣಿ ನಿಂದ ಕೊಡವನ್ನು ಮಾಡಿತು. ಅದನ್ನು ನಾಶಮಾಡಿ (ಒಡೆದು) ಗ್ಲಾಸನ್ನು ಮಾಡಲಾಯಿತು. ಪುನಃ ಆ ಗ್ಲಾಸನ್ನು ಒಡೆದು ಹಾಕಿ ಬೊಂಬೆಯನ್ನು ತಯಾರು ಮಾಡಿತು. ಹೀಗೆ ಪ್ರತಿಯೊಂದು ಪರ್ಯಾಯದಲ್ಲಿ ಮಣ್ಣು ಇದ್ದೇ ಇರುತ್ತದೆ. ಮಣ್ಣಿನ ಸಕಲ ಗುಣಗಳು ಕೂಡ ಇರುತ್ತದೆ. ಸ್ಪರ್ಶ, ರಸ, ಗಂಧ ವರ್ಣಯುಕ್ತವಾದ ಮಣ್ಣು ಸಿಕ್ಕೇಸಿಗುವುದು.

ಲೋಕದಲ್ಲಿ ಆರು ದ್ರವ್ಯಗಳಿವೆ. ಅವುಗಳಲ್ಲಿ ಧರ್ಮ, ಅಧರ್ಮ, ಆಕಾಶ ಮತ್ತು ಕಾಲ ಈ ನಾಲ್ಕು ದ್ರವ್ಯಗಳಲ್ಲಿ ಸದೃಶ (ಸಮಾನ) ವಾದ ಸ್ವಭಾವಗಳೇ ಇರುತ್ತವೆ. ಅವುಗಳಲ್ಲಿ ಪರವಸ್ತುಗಳ ನಿಮಿತ್ತದಿಂದ ವಿಭಾವ ಪರ್ಯಾಯಗಳುಂಟಾಗಲಾರವು. ಅವು ಸದಾ ಉದಾಸೀನವಾಗಿರುತ್ತವೆ.

ಸಿದ್ಧಾತ್ಮರಲ್ಲಿಯೂ ಸದೃಶ ಸ್ವಭಾವ ಪರ್ಯಾಯಗಳೇ ಇರುತ್ತವೆ. ಅವುಗಳ ಮೇಲೆ ಪರದ್ರವ್ಯಗಳ ಪ್ರಭಾವವು ಬೀಳಲಾರದು. ಅವರು ಮುಕ್ತರು. ಸಂಸಾರಿ ಜೀವಗಳಲ್ಲಿ ಕರ್ಮಗಳ ಸಂಯೋಗ ಮತ್ತು ಉದಯಾ ದಿಗಳಾಗುವುದರಿಂದ ವಿಭಾವ ಪರ್ಯಾಯಗಳು ಅಶುದ್ಧ ಪರ್ಯಾಗಳಾಗು ತ್ತಿರುತ್ತವೆ. ಜಘನ್ಯದಿಂದ ಸ್ನಿಗ್ಧ ಮತ್ತು ರೂಕ್ಷ ಗುಣಯುಕ್ತ ಪರಮಾಣು ಗಳು ಯಾವ ವಸ್ತುವಿನೊಡನೆ ಬಂಧವನ್ನಿಟ್ಟುಕೊಳ್ಳುವುದಿಲ್ಲವು. ಅದರಲ್ಲಿ

ಸ್ವಭಾವ ಸದೃಶ ಪರ್ಯಾಯಗಳಿರುತ್ತವೆ. ಯಾವಾಗ ಸ್ನಿಗ್ಧ ಮತ್ತು ರೂಕ್ಷ ಗುಣಗಳನ್ನು ಹೆಚ್ಚಿಸುವುದರಿಂದ ಅನ್ಯ ಪರಮಾಣುಗಳೊಡನೆ ಬಂಧಯೋಗ ವಾಗುವುದು. ಆಗ ಅವುಗಳಲ್ಲಿ ವಿಭಾವ ಪರ್ಯಾಯಗಳಾಗುತ್ತವೆ.

ಆ ಪರ್ಯಾಯವು ಅರ್ಥಪರ್ಯಾಯವೆಂದೂ, ವ್ಯಂಜನಪರ್ಯಾಯ ವೆಂದೂ ಎರಡು ವಿಧವುಳ್ಳದ್ದಾಗಿದೆ. ಪ್ರದೇಶ ಗುಣ ಅಥವಾ ಆಕಾರಗಳ ಪರಿವರ್ತನೆಗೆ ವ್ಯಂಜನಪರ್ಯಾಯವೆಂದೂ, ಅನ್ಯ ಸರ್ವಗುಣಗಳ ಪರಿ ಣಮನಕ್ಕೆ ಅರ್ಥಪರ್ಯಾಯವೆಂದೂ ಹೇಳುತ್ತಾರೆ. ಶುದ್ಧದ್ರವ್ಯಗಳಲ್ಲಿ ವ್ಯಂಜನ ಮತ್ತು ಅರ್ಥಪರ್ಯಾಯಗಳು ಸಮಾನ ರೂಪವಾಗಿ ಶುದ್ಧವೇ ಆಗಿರುತ್ತವೆ. ಅಶುದ್ಧದಿಂದ ಅಶುದ್ಧ ಅರ್ಥಪರ್ಯಾಯ ಅಥವಾ ಆಕಾರದ ಪರಿವರ್ತನೆಯ ರೂಪ ಅಶುದ್ಧ ಅಥವಾ ವಿಭಾವ ವ್ಯಂಜನಪರ್ಯಾಯ ವುಂಟಾಗುತ್ತದೆ. ಸಂಸಾರೀ ಆತ್ಮರುಗಳು ಅಶುದ್ಧವಾಗಿದ್ದರೂ ಕೂಡ ಪ್ರತಿ ಯೊಂದು ಆತ್ಮದಲ್ಲಿ ತನ್ನ ಶುದ್ಧಾಶುದ್ಧ ಪರಿಣಮನ ಶಕ್ತಿಯು ಅಡಗಿಕೊಂಡಿ ರುತ್ತದೆ. ಎಷ್ಟರವರೆಗೆ ಅಶುದ್ಧ ಪರ್ಯಾಯಗಳಿರುತ್ತವೆಯೋ ಅಷ್ಟರವರೆಗೆ ಅಶುದ್ಧ ಪರ್ಯಾಯಗಳೇ ಪ್ರಕಟವಾಗುತ್ತವೆ. ಯಾಕೆಂದರೆ ಅಲ್ಲಿ ಅಶುದ್ಧ ಪರ್ಯಾಯಗಳುಂಟಾಗಲು ಪುದ್ಗಲಗಳ ಯಾವ ನಿಮಿತ್ತವು ದೊರೆಯುವುದಿ ಲ್ಲವು. ಹೇಗೆಂದರೆ ಒಂದು ಪರಮಾಣುವಿನಲ್ಲಿ ಸಕಲ ಸಂಭವಿತ ಪರ್ಯಾಯ ಗಳುಂಟಾಗುವ ಶಕ್ತಿಯಿರುವಂತೆ, ಒಬ್ಬಾತ್ಮನಲ್ಲಿ ನಿಗೋದ ಪರ್ಯಾಯ ಮೊದಲುಗೊಂಡು ಸಿದ್ಧ ಪರ್ಯಾಯದವರೆವಿಗೂ ಸರ್ವ ಪರ್ಯ್ಯಾಯಗಳುಂಟಾ ಗುವ ಶಕ್ತಿಯು ಇದ್ದೇ ಇರುತ್ತದೆ. ಇದು ವಸ್ತು ಸ್ವಭಾವವು.

ಸಿದ್ಧಾತ್ಮರಲ್ಲಿ ಬಹಿರಾತ್ಮ, ಅಂತರಾತ್ಮ ಮತ್ತು ಪರಮಾತ್ಮ ಈ ಮೂರು ಪರ್ಯಾಯಗಳುಂಟಾಗುವ ಶಕ್ತಿಯು ಇದ್ದರೂ ಅವರಲ್ಲಿ ಪರಮಾತ್ಮತ್ವ ಶಕ್ತಿಯು ಮಾತ್ರ ಪ್ರಕಟವಾಗುತ್ತದೆ. ಬಾಕಿ ಉಳಿದ ಎರಡು ಶಕ್ತಿಯು ಅಪ್ರಕಟರೂಪದಲ್ಲಿರುತ್ತದೆ. ಹೀಗೆ ಸಂಸಾರೀ ಆತ್ಮರುಗಳಲ್ಲಿ ಯಾವವು ಬಹಿ ರಾತ್ಮರಿರುತ್ತಾರೆಯೋ ಅವರಲ್ಲಿ ಬಹಿರಾತ್ಮ ಪರ್ಯಾಯಗಳೇ ಪ್ರಕಟವಾಗು ವಾಗ ಅಂತರಾತ್ಮ ಮತ್ತು ಪರಮಾತ್ಮ ಪರ್ಯಾಯಗಳು ಶಕ್ತಿರೂಪದಿಂದ

ಅಪ್ರಕಟ ರೂಪದಿಂದಿರುತ್ತವೆ. ಈ ಮೂರು ಶಕ್ತಿಗಳು ಜೊತೆಯಲ್ಲಿಯೇ ಇದ್ದರೇನು ಮಾಡುವುದು?

ಅಂತರಾತ್ಮನಲ್ಲಿ ಅಂತರಾತ್ಮನ ಪರ್ಯಾಯ ಶಕ್ತಿಯು ಪ್ರಕಟವಾಗಿರುವ ಅವಸ್ಥೆಯಲ್ಲಿ ಬಹಿರಾತ್ಮ ಮತ್ತು ಪರಮಾತ್ಮ ಪರ್ಯಾಯಗಳು ಶಕ್ತಿರೂಪವಾಗಿ ಅಪ್ರಕಟವಾಗಿರುತ್ತವೆ. ಯಥಾರ್ಥವಾಗಿಯು ದ್ರವ್ಯವು ಶಕ್ತಿಯ ಅಪೇಕ್ಷೆಯಿಂದ ಪ್ರತಿಯೊಂದು ಆತ್ಮನಲ್ಲಿ – ಬಹಿರಾತ್ಮ, ಅಂತರಾತ್ಮ ಮತ್ತು ಪರಮಾತ್ಮ ಈ ಮೂರು ಆತ್ಮರುಗಳಲ್ಲಿ ಅಡಗಿರುತ್ತವೆ. ಅವುಗಳಲ್ಲಿ ಯಾವುದಾದರೊಂದು ಶಕ್ತಿಯು ಪ್ರಕಟಾವಸ್ಥೆಯಲ್ಲಿರುವಾಗ ಉಳಿದ ಶಕ್ತಿಗಳೆರಡು ಪ್ರಕಟಕ್ಕೆ ಬರುವುದಿಲ್ಲವು. ಹೇಗೆಂದರೆ ನೀರಿನಲ್ಲಿ ಬಿಸಿಯಾಗುವ, ಕೆಂಪಾಗುವ, ಹಳದಿಯಾಗುವ ನಿರ್ಮಲವಾಗುವ ಶೀತಲವಾಗುವ ಮೊದಲಾದ ಅನೇಕ ಶಕ್ತಿಗಳು ಇದ್ದೇ ಇರುತ್ತವೆ. ಎಷ್ಟರವರೆಗೆ ಪರವಸ್ತುಗಳ ನಿಮಿತ್ತಕಾರಣಗಳೇ ಒದಗುವುದಿಲ್ಲವೋ ಅಷ್ಟರವರೆಗೆ ನೀರಿನಲ್ಲಿ ನಿರ್ಮಲವು, ಶೈತ್ಯ ಗುಣಗಳೇ ಪ್ರಕಟವಾಗುತ್ತಿರುತ್ತವೆ. ಅದೇ ನೀರು ಅಗ್ನಿಯ ಸಂಸರ್ಗವಾದೊಡನೆ ಬಿಸಿಯಾಗುವುದು. ಆಗ ಉಷ್ಣತ್ವಾವಸ್ಥೆಯು ವ್ಯಕ್ತವಾಗುವುದು. ಶೈತ್ಯ ಗುಣವು ಮರೆಯಾಗುವುದು. (ಅಪ್ರಕಟವಾಗುವುದು.) ಕೆಂಪು ವರ್ಣದ ನಿಮಿತ್ತವು ಪ್ರಾಪ್ತವಾದೊಡನೆ ರಕ್ತವರ್ಣ ಉಳ್ಳದ್ದಾಗಿಯೂ, ಹಳದಿ ಬಣ್ಣದ ನಿಮಿತ್ತದಿಂದ ಹಳದಿ ವರ್ಣವುಳ್ಳದ್ದಾಗಿಯೂ ಆಗುವಾಗ ನಿರ್ಮಲತ್ವ ಗುಣ ಶಕ್ತಿರೂಪವಾಗಿ ಇದ್ದೇ ಇರುವುದು.

ಯಾವ ನೀರಿಗೆ ಪರವಸ್ತುಗಳ ನಿಮಿತ್ತವು ಸಿಕ್ಕದಿದ್ದರೆ ಅದು ಸದಾ ನಿರ್ಮಲವೂ, ಶೈತ್ಯವಾಗಿಯೂ ಇರುವುದು. ಆದರೆ ಆಗ ಆ ನೀರಿನಲ್ಲಿ ಉಷ್ಣತ್ವ, ಮಲಿನತ್ವ, ವರ್ಣ ಪರಿಣಮತ್ವಗಳ ಶಕ್ತಿಯ ಅಭಾವವಾಗಲಾರದು ಸಿದ್ಧ ಪರಮಾತ್ಮರಲ್ಲಿ ಕರ್ಮಗಳ ಉದಯರೂಪ ನಿಮಿತ್ತಗಳೊದಗುತ್ತಿರುವುದರಿಂದ ಅವರು ಎಂದೆಂದಿಗೂ ಅಂತರಾತ್ಮ ಮತ್ತು ಬಹಿರಾತ್ಮರಾಗಿ ಆಗುವುದಿಲ್ಲವು. ಆದರೆ ಆ ಶಕ್ತಿಗಳ ಅಭಾವವಾಗಲಾರದು. ಅಭವ್ಯ ಜೀವಗಳು ಎಂದೆಂದಿಗೂ ಅಂತರಾತ್ಮ ಮತ್ತು ಪರಮಾತ್ಮರಾಗುವುದಿಲ್ಲವು. ಕಿಂತು ಬಹಿರಾತ್ಮರಾಗಿಯೇ

ಇದ್ದು ಬಿಟ್ಟರೂ ಕೂಡಾ ಅವರಲ್ಲಿ ಅಂತರಾತ್ಮ ಮತ್ತು ಪರಮಾತ್ಮರ ಶಕ್ತಿಯು ಅಭಾವವಾಗಲಾರದು. ಆದ್ದರಿಂದ

ಶ್ರೀ ಪೂಜ್ಯಪಾದಸ್ವಾಮಿಯವರು ಸಮಾಧಿ ಶತಕದಲ್ಲಿ ವರ್ಣಿಸಿದ್ದಾರೆ :

**ಬಹಿರಂತಃ ಪರಶ್ಚೇತಿ ತ್ರಿಧಾತ್ಮಾ ಸರ್ವದೇಹಿಷು।**
**ಉಪೇಯಾತ್ತತ್ರ ಪರಮಂ ಮಧ್ಯೋಪಾಯಾದ್ಬಹಿಸ್ತ್ಯಜೇತ್ ॥೪॥**

**ಭಾವಾರ್ಥ** : ಸಕಲಪ್ರಾಣಿಗಳಲ್ಲಿ ಬಹಿರಾತ್ಮ, ಅಂತರಾತ್ಮ ಮತ್ತು ಪರಮಾತ್ಮ ಈ ಮೂರು ವಿಧತ್ವವು ಇದ್ದೇ ಇರುತ್ತದೆ. ಅವುಗಳ ಪೈಕಿ ಬಹಿರಾತ್ಮತ್ವವನ್ನು ಬಿಟ್ಟು ಅಂತರಾತ್ಮ ಪ್ರಾಪ್ತಿಯ ಉಪಾಯದಿಂದ ಲೇಪರಮಾತ್ಮತ್ವವನ್ನು ಸಿದ್ಧಿಸಿಕೊಳ್ಳಬೇಕು. ಇದನ್ನೇ

ಶ್ರೀ ಯೋಗೀಂದ್ರಾಚಾರ್ಯರು ಪರಮಾತ್ಮಪ್ರಕಾಶವೆಂಬ ಗ್ರಂಥದಲ್ಲಿ ಹೇಳುತ್ತಾರೆ :

**ಅಪ್ಪಾ ತಿವಿಹು ಮುಣೇವಿ ಬಹು ಮೂಢಉ ಮೆಲ್ಲಹಿ ಭಾಉ।**
**ಮುಣಿ ಸಣ್ಣಾಣೆ ಣಾಣಮಉ ಜೋ ಪರಮಪ್ಪ ಸಹಾಉ ॥೧೨॥**

**ಭಾವಾರ್ಥ** : ಆತ್ಮರು ಮೂರುವಿಧವೆಂದು ತಿಳಿದು ಬಹಿರಾತ್ಮ ಸ್ವರೂಪಭಾವವನ್ನು ಬೇಗನೆಬಿಟ್ಟು ಪರಮಾತ್ಮನಾಗುವ ಸ್ವಭಾವದವನೆಂದು ಸ್ವಸಂವೇದನ ಜ್ಞಾನದಿಂದ ಅಂತರಾತ್ಮನಾಗುವನೆಂದು ತಿಳಿ. ಆ ಸ್ವಭಾವವೇ ಕೇವಲಜ್ಞಾನದಿಂದ ಪರಿಪೂರ್ಣವಾಗಿರುತ್ತದೆ.

ಮಿಥ್ಯಾದರ್ಶನ ಮೊದಲಾದ ಹದಿನಾಲ್ಕು ಗುಣಸ್ಥಾನಗಳ ಶಕ್ತಿಯ ಪ್ರಾದುರ್ಭಾವವು ಎಲ್ಲಾ ಆತ್ಮರುಗಳಲ್ಲಿರುತ್ತವೆ. ಒಂದು ಸಂಸಾರೀ ಜೀವನಿಗೆ ಒಂದು ಸಮಯದಲ್ಲಿ ಒಂದೇ ಗುಣಸ್ಥಾನದ ಶಕ್ತಿಯು ಪ್ರಕಟವಾಗುವುದು. ಈ ಅವಸ್ಥೆಗಳು ಸಂಸಾರೀ ಜೀವಗಳಿಗಲ್ಲದೆ ಸಿದ್ಧಾತ್ಮರಿಗಿಲ್ಲವು. ಆದ್ದರಿಂದ ಸಂಸಾರೀ ಜೀವಗಳನ್ನು ಬಹಿರಾತ್ಮ, ಅಂತರಾತ್ಮ ಮತ್ತು ಪರಮಾತ್ಮಗಳೆಂಬ ಈ ಮೂರು ಅವಸ್ಥೆಗಳಲ್ಲಿಯೇ ವಿಂಗಡಿಸಬಹುದು. ಯಾರು ತನ್ನ ಆತ್ಮ ಸ್ವರೂಪವನ್ನು ನಂಬದೆ ಇರುವವನೇ ಬಹಿರಾತ್ಮನು. (೧) ಮಿಥ್ಯಾತ್ವ,

(೨) ಸಾಸಾದನ ಮತ್ತು (೩) ಮಿಶ್ರಗುಣಸ್ಥಾನ ಈ ಮೂರು ಗುಣಸ್ಥಾನದ ಜೀವರು ಬಹಿರಾತ್ಮರುಗಳೇ. ಯಾವ ಜೀವಗಳು ತನ್ನಾತ್ಮನ ಗುಣಗಳಿದ್ದಂತೆ ನಂಬಿಕೆಯನ್ನಿಡುವುದು, ತಿಳಿಯುವುದು, ಸಂತೋಷವನ್ನು ಅನುಭವಿಸುವುದು ಅಂತರಾತ್ಮನ ಲಕ್ಷಣವಾಗಿದೆ. ಎಷ್ಟರವರೆಗೆ ಕೇವಲಜ್ಞಾನೋತ್ಪತ್ತಿಯಿಲ್ಲವೋ ಅಲ್ಲಿಯವರೆಗೆ ಅಂದರೆ (೪) ಅವಿರತ ಸಮ್ಯಕ್ತ್ವ ಗುಣಸ್ಥಾನದಿಂದ (೫) ದೇಶ ವಿರತ, (೬) ಪ್ರಮತ್ತ ವಿರತ, (೭) ಅಪ್ರಮತ್ತ ವಿರತ, (೮) ಅಪೂರ್ವಕರಣ, (೯) ಅನಿವೃತ್ತಿಕರಣ, (೧೦) ಸೂಕ್ಷ್ಮಲೋಭ. (೧೧) ಉಪಶಾಂತಮೋಹ, (೧೨) ಕ್ಷೀಣಮೋಹಗುಣಸ್ಥಾನದವರೆಗಿರುವ ಸಕಲ ಜೀವಗಳು ಅಂತರಾತ್ಮ ಸಮ್ಯಗ್ದೃಷ್ಟಿಗಳಾಗಿರುತ್ತವೆ. (೧೩) ಸಯೋಗಕೇವಲಿ ಮತ್ತು (೧೪) ಅಯೋಗಕೇವಲಿ ಗುಣಸ್ಥಾನಗಳೆರಡರ ಆತ್ಮರು ಪರಮಾತ್ಮರುಗಳಾಗಿ ರುತ್ತಾರೆ.

ಈ ಎರಡು ಗುಣಸ್ಥಾನದವರಿಗೂ ಸಂಸಾರಿಗಳೆಂದು ಹೇಳಲು ಕಾರಣ ವೇನೆಂದರೆ ಅವರಿಗೆ ಆಯುಷ್ಯ, ನಾಮ, ಗೋತ್ರ ಮತ್ತು ವೇದನೀಯಗಳೆಂಬ ನಾಲ್ಕು ಅಘಾತಿ ಕರ್ಮಗಳು ಕ್ಷಯವಾಗಿರುವುದಿಲ್ಲವು ಕಿಂತು ಉದಯದಲ್ಲಿರು ತ್ತವೆ. ಯಥಾರ್ಥವಾಗಿಯು ಸಿದ್ಧಾತ್ಮರೇ ಶರೀರ ರಹಿತರಾದ ಪರಮಾತ್ಮರು. ಅರಹಂತರು ಶರೀರ ಸಹಿತರಾದ ಪರಮಾತ್ಮರು. ಇದೇ ಅಂತರವಿದೆ. ಇದೆಲ್ಲ ವನ್ನು ಹೇಳುವ ಪ್ರಯೋಜನವೆಂದರೆ, ಬಹಿರಾತ್ಮತ್ವವನ್ನು ತ್ಯಜಿಸುವುದಕ್ಕೆ ಯೋಗ್ಯವಾಗಿರುತ್ತದೆ. ಈ ಅವಸ್ಥೆಯಲ್ಲಿ ತನ್ನಾತ್ಮಸ್ವರೂಪದ ಶ್ರದ್ಧಾನ, ಜ್ಞಾನ ಮತ್ತು ಚಾರಿತ್ರಗಳುಂಟಾಗಲಾರವು. ಉಪಯೋಗವು ಮಲಿನವಾಗಿ ರುತ್ತದೆ; ಹಾಗೆಯೇ ಆತ್ಮಜ್ಞಾನಿಯಾಗಿ ಅಂತರಾತ್ಮಾವಸ್ಥೆಯಲ್ಲಿ ಪರಮಾತ್ಮ ನನ್ನು ಧ್ಯಾನಿಸುತ್ತ, ಅರ್ಥಾತ್ ತನ್ನಾತ್ಮನನ್ನು ಪರಮಾತ್ಮ ಸ್ವರೂಪನೆಂದು ಧ್ಯಾನಿಸುತ್ತ, ಕರ್ಮಗಳನ್ನು ನಾಶಮಾಡಿ ಪರಮಾತ್ಮನಾಗುವುದು ಯೋಗ್ಯ ವಾಗಿರುತ್ತದೆ. ಧರ್ಮಸಾಧನೆಯಲ್ಲಿ ಎಂದೆಂದಿಗೂ ಪ್ರಮಾದವನ್ನು ಮಾಡ ಬಾರದು.

ಶ್ರೀ ಕುಲಭದ್ರಾಚಾರ್ಯರು ಸಾರಸಮುಚ್ಚಯದಲ್ಲಿ ಹೇಳುತ್ತಾರೆ :

**ಧರ್ಮಾಮೃತಂ ಸದಾ ಪೇಯಂ ದುಃಖಾತಂಕವಿನಾಶನಂ |**
**ಯಸ್ಮಿನ್ ಪೀತೆ ಪರಂ ಸೌಖ್ಯಂ ಜೀವಾನಾಂ ಜಾಯತೇ ಸದಾ ||೩೩||**

**ಭಾವಾರ್ಥ:** ದುಃಖರೂಪವಾದ ರೋಗವನ್ನು ನಾಶಗೊಳಿಸುವ ಧರ್ಮಾಮೃತರೂಪ ದಿವ್ಯ ಔಷಧಿಯನ್ನು ಯಾವಾಗಲು ಕುಡಿಯುತ್ತಿರಬೇಕು. ಅದು ಪರಮಾನಂದವನ್ನುಂಟುಮಾಡುತ್ತದೆ.



## ಬಹಿರಾತ್ಮನ ಲಕ್ಷಣ

**ಮಿಚ್ಛಾದಂಸಣ ಮೋಹಿಯಉ ಪರು ಅಪ್ಪಾಣ ಮುಣೇಇ |**
**ಸೋ ಬಹಿರಪ್ಪಾ ಜಿಣ ಭಣಿಉ ಪುಣ ಸಂಸಾರು ಭಮೇಇ ||೭||**

**ಅನ್ವಯಾರ್ಥ:** ಮಿಚ್ಛಾದಂಸಣ ಮೋಹಿಯಉ–ಮಿಥ್ಯಾದರ್ಶನದಿಂದ್ಯುಕ್ತನಾದ ಮೋಹೀ ಜೀವನು, ಪರು ಅಪ್ಪಾಣ ಮುಣೇಇ–ಪರಮಾತ್ಮಸ್ವರೂಪವನ್ನು ತಿಳಿಯುವುದಿಲ್ಲವೋ, ಸೋ ಬಹಿರಾತ್ಮಾ–ಇವನೇ ಬಹಿರಾತ್ಮನು, ಪುಣ ಸಂಸಾರು ಭಮೇಇ–ಪುನಃ ಪುನಃ ಸಂಸಾರದಲ್ಲಿ ಭ್ರಮಿಸುವನೆಂದು, ಜಿಣ ಭಣಿಉ-ಜಿನೇಶ್ವರರುಪದೇಶಿಸಿರುತ್ತಾರೆ.

**ಭಾವಾರ್ಥ:** ಹೆಂಡವನ್ನು ಕುಡಿದು ಮದೋನ್ಮತ್ತನಾಗಿ ತನ್ನನ್ನು, ತನ್ನ ಮನೆ ಮೊದಲಾದವುಗಳನ್ನು ಮರೆತುಬಿಡುವಂತೆ, ಮಿಥ್ಯಾ ಕರ್ಮೋದಯದಿಂದ ಮೋಹಿತನಾದವನು ತನ್ನ ಆತ್ಮ ಸ್ವರೂಪವನ್ನೇ ಮರೆತು ತನ್ನನ್ನೇ ಶರೀರವೆಂದು ಭಾವಿಸುತ್ತಾ, ಕರ್ಮೋದಯದಿಂದುಂಟಾಗುವ ಎಲ್ಲ ಅವಸ್ಥೆಗಳನ್ನು ತನ್ನ ಸ್ವರೂಪವೆಂದು ಭಾವಿಸುತ್ತಾನೆ.

ಆತ್ಮನ ನಿಜವಾದ ಸ್ವಭಾವವು ಸಿದ್ಧಪರಮಾತ್ಮನಂತೆ ಪರಮ ವಿಶುದ್ಧವೂ, ನಿರ್ವಿಕಾರವೂ, ನಿರಂಜನವೂ, ಕೃತಕೃತ್ಯನೂ, ಇಚ್ಛಾರಹಿತವೂ, ಶರೀರವಿಲ್ಲದವನೂ, ವಚನ ರಹಿತನೂ, ಸಂಕಲ್ಪ ವಿಕಲ್ಪಗಳಿಲ್ಲದವನೂ, ಅಮೂರ್ತಿಯೂ, ಅವಿನಾಶಿಯೂ ಆಗಿರುತ್ತಾನೆಂಬ ವಿಷಯವನ್ನು ತಿಳಿಯದೆ

ತನ್ನ ಸ್ವಭಾವವಲ್ಲದವುಗಳನ್ನು ತನ್ನ ಗುಣವೆಂದು ಪರಿಭಾವಿಸುವವನಿಗೆ ಬಹಿರಾತ್ಮನೆಂದು ಹೇಳಿರುತ್ತಾರೆ.

ಅವನು ತನ್ನ ಆತ್ಮನ ಅಸ್ತಿತ್ವವನ್ನು ಸಕಲ ಆತ್ಮರುಗಳಿಂದಲೂ, ಎಲ್ಲ ಪುದ್ಗಲಗಳಿಂದಲೂ, ಧರ್ಮ, ಅಧರ್ಮ, ಆಕಾಶ ಮತ್ತು ಕಾಲ ದ್ರವ್ಯಗಳಿಂದಲೂ ಭಿನ್ನನಾಗಿರುವನೆಂದು ಭಾವಿಸದೆ, ಇಂದ್ರಿಯಗಳ ಸಂಬಂಧವಾದ ಸುಖವನ್ನೇ ನಿಜವಾದ ಸುಖವೆಂದು ಪರಿಭಾವಿಸುತ್ತಾನೆ. ಆತನ ಉದ್ದೇಶವು ಕೇವಲ ವಿಷಯವಾಸನಾದಿ ಭೋಗ ವಸ್ತುಗಳನ್ನು ಬೆಳಸುವುದರಲ್ಲಿಯೇ ಇರುತ್ತದೆ. ಅವನು ಯಾವ ಶುಭ ಧಾರ್ಮಿಕ ಕ್ರಿಯೆಗಳನ್ನೆಸಗುತ್ತಿದ್ದರೂ ಅಂದರೆ ದಾನ, ದೇವ, ಪೂಜೆ, ಪರೋಪಕಾರ, ಶ್ರಾವಕರ ವ್ರತ ಮತ್ತು ಮುನಿಗಳ ವ್ರತ ಮೊದ ಲಾದವುಗಳ ಕರ್ತೃವಾಗಿರುವೆನೆಂದೂ. ಯದಿ ಅಶುಭ ಕ್ರಿಯೆಗಳನ್ನು ಮಾಡುತ್ತಿ ದ್ದರೂ ಅಂದರೆ ಹಿಂಸೆ, ಸುಳ್ಳು, ಕಳ್ಳತನ, ದುರಾಚಾರ ಮೊದಲಾದ ಹಾನಿ ಕಾರಕ ಕೆಲಸಗಳನ್ನು ಮಾಡುವುದರಲ್ಲಿಯೂ ಮಹಾ ಮಹಾ ಸಮರ್ಥಗಾರ ನೆಂದೂ, ಚತುರನೆಂದೂ ಅಭಿಮಾನದಿಂದ ಮೂರ್ಛಿತನಾಗುತ್ತಿರುತ್ತಾನೆ. ಯಥಾರ್ಥವಾಗಿ ಆತ್ಮನ ಸ್ವಭಾವವಾದರೋ ಪರಕಾರ್ಯಗಳಾದ ಶುಭಾಶುಭ ಗಳ ಕರ್ತೃವಲ್ಲದಿದ್ದರೂ, ಬಹಿರಾತ್ಮನು ಮಾತ್ರ ಅವೆಲ್ಲ ಕಾರ್ಯಗಳ ಕರ್ತೃ ವೆಂದೇ ಭಾವಿಸುತ್ತಿರುತ್ತಾನೆ.

ಈ ಅಜ್ಞಾನೀ ಬಹಿರಾತ್ಮನು ಪುಣ್ಯದ ಫಲಗಳಾದ ಸುಖಸಂಪತ್ತಾದಿ ಗಳ ಭೋಗಿಯೆಂದೂ, ಪಂಚೇಂದ್ರಿಯ ಭೋಗಗಳನ್ನು ಭೋಗಿಸುವವನೆಂದೂ, ಇವೇ ಮೊದಲಾಗಿ ಪರವಸ್ತುಗಳ ಭೋಕ್ತೃವೆಂದು ತಿಳಿಯುವುದಲ್ಲದೆ, ಆತ್ಮನ ನೈಜಗುಣವನ್ನು ತಿಳಿಯದೆ ಪರವಸ್ತುಗಳಲ್ಲೇ ಮಗ್ನನಾಗಿರುತ್ತಾನೆ.

ಪುದ್ಗಲಗಳ ವಿಕಾರಿಗಳಾದ ಮನ, ವಚನ, ಕಾಯಗಳ ಕ್ರಿಯೆಗಳು ಕರ್ಮ ಉದಯದಿಂದಾಗುವುವೆಂದು ತಿಳಿಯದೆ ಅವೆಲ್ಲವುಗಳನ್ನು ತನ್ನ ಕ್ರಿಯೆಗಳೆಂದೆ ಪರಿಭಾವಿಸುತ್ತಾನೆ. ಅನೇಕ ಶಾಸ್ತ್ರ ಗ್ರಂಥಗಳನ್ನು ಓದಿ ಪಂಡಿತನಾಗಿರು ತ್ತೇನೆಂಬ ದುರಭಿಮಾನದಿಂದ ಮದೋದ್ಧತನಾಗಿ ಪರರನ್ನು ತಿರಸ್ಕರಿಸುತ್ತ, ಸಂತೋಷಪಡುವವನೇ ಬಹಿರಾತ್ಮನು. ಇದೇ ಆತನ ಲಕ್ಷಣವಾಗಿರುತ್ತದೆ. ಇಷ್ಟೇ ಅಲ್ಲ, ನಾನೊಬ್ಬ ಪ್ರಸಿದ್ಧ ವಂಶದಲ್ಲಿ ಜನಿಸಿದವನೆಂದು, ಮಹಾ ಉಚ್ಚ

ನೆಂದು, ಅತಿ ರೂಪವಂತನೆಂದು, ಮಹಾ ಬಲಶಾಲಿಯೆಂದು, ಐಶ್ವರ್ಯಶಾಲಿ ಯೆಂದು, ಪ್ರಕಾಂಡ ವಿದ್ವಾಂಸನೆಂದು, ಉಗ್ರ ತಪಸ್ವಿಯೆಂದು, ದೊಡ್ಡ ಅಧಿ ಕಾರಿಯೆಂದು, ನಾನು ಇಚ್ಛಿಸಿದರೆ (ಮನಸ್ಸು ಮಾಡಿದರೆ) ಅನೇಕರನ್ನು ಭಿಕ್ಷೆ ಬೇಡುವವರನ್ನಾಗಿ ಮಾಡಬಹುದೆಂದು ಅಥವಾ ಅನುಕೂಲರನ್ನಾಗಿ ಮಾಡ ಬಹುದೆಂದು ತಿಳಿಯುತ್ತಾ ದುರಹಂಕಾರದಿಂದ ಮಲಿನನಾಗುತ್ತಿರುವವನೇ ಬಹಿ ರಾತ್ಮನಾಗಿರುತ್ತಾನೆ.

ಈ ಬಹಿರಾತ್ಮನ ದೃಷ್ಟಿಯು ಕುರುಡನಂತಿರುತ್ತದೆ. ಹೇಗೆಂದರೆ ಜಿನ ದೇವನ ಮೂರ್ತಿಯಲ್ಲಿ ತನ್ನ ಅನುಭವ ರೂಪವಾದ ಜಿನೇಂದ್ರನ ಆತ್ಮನನ್ನು ಗುರುತಿಸದೆ, ಛತ್ರ ಚಾಮರಾದಿ ವಿಭೂತಿಗಳಿಂದ್ಯುಕ್ತವಾದ ಶರೀರ ರಚನಾದಿ ವಿಷಯಗಳನ್ನೇ ಅರಹಂತನೆಂದು ಭಾವಿಸುತ್ತಾನೆ. ಗುರು ಪೂಜೆಯೇ ಗುರು ಭಕ್ತಿಯೆಂದು, ಗುರುಗಳು ಮಹಾ ವಾಗ್ಮಿಯೆಂದು, ಮಹಾ ಪ್ರಭಾವಶಾಲಿ ಯೆಂದು, ವಿದ್ವಾಂಸನೆಂದು, ಅನೇಕ ಶಾಸ್ತ್ರ ಗ್ರಂಥಗಳ ಮರ್ಮಜ್ಞನೆಂದು-ಹೀಗೆ ಗುರುಮಹಿಮೆಯತ್ತ ಲಕ್ಷ್ಯವಿಡುವವನಲ್ಲದೆ, ಗುರುವಿನ ಆತ್ಮನು ಆತ್ಮಜ್ಞಾ ನಿಯೋ ಅಥವಾ ಇಲ್ಲವೋ ಮೊದಲಾದ ವಿಷಯಗಳ ವಿಚಾರವಿಲ್ಲದೆ ಕೇವಲ ಬಾಹ್ಯತತ್ವಗಳಲ್ಲಿಯೇ ಲಕ್ಷ್ಯವಿಡುವನು.

ಈ ಶಾಸ್ತ್ರದ ರಚನೆಯು ಉತ್ತಮವಾಗಿರುತ್ತದೆಂದೂ, ವರ್ಣಿಸಿರುವವಿಷ ಯವು ಮನೋಹರವಾಗಿದೆಯೆಂದೂ, ತರ್ಕಕೋಟಿಯಿಂದ ಭೇದಿಸಲು ಅಸಾಧ್ಯವಾಗಿದೆಯೆಂದೂ, ಅನೇಕ ರಸಗಳಿಂದ್ಯುಕ್ತವಾಗಿದೆಯೆಂದೂ ತಿಳಿಯುವು ದಲ್ಲದೆ, ಆ ಶಾಸ್ತ್ರಗಳಲ್ಲಿ ವರ್ಣಿಸಿರುವ ಅಧ್ಯಾತ್ಮ ವಿಷಯದ ರಸಾಮೃತವನ್ನು ಅನ್ವೇಷಿಸುವುದೂ ಇಲ್ಲವು, ಗ್ರಹಣೆಮಾಡುವುದೂ ಇಲ್ಲವು. ಇಂತಹ ವಿಚಾರ ದಲ್ಲಿ ಮಗ್ನನಾದ ಬಹಿರಾತ್ಮನ ಜೀವನು ವಿಷಯ ಕಷಾಯಗಳ ಸಂಗ್ರಹದತ್ತ ಮನಸ್ಸು ಹರಿಸುತ್ತಾನೆ. ಮಾತ್ರವಲ್ಲ, ಸತ್ತರೂ ಕೂಡ ವಿಷಯ ಸುಖಗಳ ಸಾಮಗ್ರಿಗಳನ್ನೇ ಇಚ್ಛಿಸುತ್ತಿರುತ್ತಾನೆ. ಇದಕ್ಕಾಗಿ ಭಾರೀ ತ್ಸಪಸ್ಸನ್ನು ಗೈಯುತ್ತಿರುತ್ತಾನೆ.

ಸದಾಕಾಲದಲ್ಲಿ ಪರಿಶುದ್ಧವಾದ ಸುಖವನ್ನು ಅನುಭವಿಸಬೇಕೆಂಬ ಭಾವನೆಯಿಲ್ಲದಿರುವ ಬಹಿರಾತ್ಮನ ಮಿಥ್ಯಾತ್ವ ಕರ್ಮದ ಉದಯದಿಂದ ಯಥಾರ್ಥ

ತತ್ವಗಳು ದೃಷ್ಟಿಗೆ ಬೀಳಲಾರವು. ಆತನು ಅನೇಕ ದರ್ಶನ ಶಾಸ್ತ್ರಗಳನ್ನು ಓದಿ ತಿಳಿದವನಾಗಿದ್ದರೂ ಕೂಡ, ಜಿನಪ್ರಣೀತ ತತ್ವಗಳಲ್ಲಿ ಶ್ರದ್ಧೆಯನ್ನಿಡುವುದಿಲ್ಲವು. ಈ ಲೋಕವು ಜೀವಾಜೀವಾದಿ ಆರು ದ್ರವ್ಯಗಳಿಂದ ಭರಿತವಾಗಿದ್ದರೂ ಕೂಡ, ಕೇವಲ ಬ್ರಹ್ಮಮಯವೆಂದೂ, ಪರಮಾತ್ಮನಾದ ಈಶ್ವರನಲ್ಲದೆ ಬೇರೆ ಯಾವ ವಸ್ತುಗಳಿಲ್ಲವೆಂದೂ, ಸಕಲವೂ ಆತ್ಮನ ರಚನೆಯೆಂದೂ, ರೂಪಾಂತರಗಳೆಂದೂ, ಮಾಯೆಯೆಂದೂ ತಿಳಿಯುತ್ತಾನೆ ಮತ್ತು ಪರಮಾತ್ಮನು ಸೃಷ್ಟಿಕರ್ತನೆಂದೂ, ಸಕಲ ಜೀವಗಳಿಗೆ ಸುಖ ದುಃಖ ಫಲವನ್ನುಂಟುಮಾಡುವವನೆಂದೂ ಭಾವಿಸುತ್ತಿರುತ್ತಾನೆ.

ದ್ರವ್ಯಗಳ ಸ್ವಭಾವವು ನಿತ್ಯವಾಗಿದ್ದೂ ಪರಿಣಮಣಶೀಲಗಳಾಗಿವೆ. ಯದಿ ಹಾಗಿಲ್ಲದಿದ್ದರೆ, ಜಗತ್ತಿನಲ್ಲಿ ಯಾವ ಕಾರ್ಯಗಳು ನಡೆಯುವುದಿಲ್ಲವೆಂದು ಒಪ್ಪಿಕೊಳ್ಳದೆ ವಸ್ತುವು ಸರ್ವಥಾ ನಿತ್ಯವೆಂದೂ, ಪರಿಣಮತೆಯನ್ನು ಹೊಂದುವುದಿಲ್ಲವೆಂದೂ ತಿಳಿಯುತ್ತಾನೆ ಅಥವಾ ವಸ್ತುವು ಸರ್ವಥಾ ಅನಿತ್ಯವೆಂದೂ, ಪರಿಣಮನಶೀಲವೆಂದೂ ಭಾವಿಸುತ್ತಾನೆ. ಇಷ್ಟೇ ಎಂದು ಭಾವಿಸಬಾರದು ಈ ಬಹಿರಾತ್ಮನು ಹಿಂಸಾದಿಕಾರ್ಯಗಳನ್ನು ಧರ್ಮವೆಂದು ಬಗೆದು, ಯಜ್ಞಯಾಗಾದಿಗಳಲ್ಲಿ ಪಶುಗಳನ್ನರ್ಪಿಸುವುದೂ, ರಾತ್ರಿ ಭೋಜನವು ಸುಖಕರವೆಂದೂ, ನದಿಸಮುದ್ರಾದಿಗಳಲ್ಲಿ ಸ್ನಾನಮಾಡುವುದರಿಂದ ಸ್ವರ್ಗ ಪ್ರಾಪ್ತಿಯಾಗುವುದೆಂದೂ, ವೀತರಾಗತೆಯನ್ನು ಪೂಜಿಸದೆ ಶೃಂಗಾರ, ಅಸ್ತ್ರ ಶಸ್ತ್ರಧಾರಿಗಳಾದ ದೇವಿಯರನ್ನು ಪೂಜಿಸುವುದರಿಂದ ಪುಣ್ಯಪ್ರಾಪ್ತಿಯಾಗುವುದೆಂದೂ, ಮೋಕ್ಷಪ್ರಾಪ್ತಿಯಾಗುವುದೆಂದೂ ನಂಬುತ್ತಾನೆ. ಇನ್ನು ಕೆಲವು ಬಹಿರಾತ್ಮರು ಆತ್ಮನ ವಿಶಿಷ್ಟತೆಯನ್ನು ನಂಬದೆ, ಅದನ್ನು ಪೃಥ್ವಿ, ಜಲ, ಅಗ್ನಿ, ವಾಯುಗಳೆಂಬ ಭೂತಚತುಷ್ಟಯಗಳಿಂದ ಆತ್ಮನ ಉತ್ಪತ್ತಿಯೆಂದು ತಿಳಿಯುತ್ತಾರೆ, ನಂಬುತ್ತಾರೆ.

ಮತ್ತೆ ಕೆಲವು ಬಹಿರಾತ್ಮರುಗಳು ಆತ್ಮನು ರಾಗದ್ವೇಷಿಯೆಂದೂ, ಅಲ್ಪ ಜ್ಞಾನಿಯೆಂದೂ ತಿಳಿಯುವುದಲ್ಲದೆ, ಈ ಆತ್ಮನು ಒಂದಿಲ್ಲೊಂದು ಕಾಲದಲ್ಲಿ ವೀತರಾಗತ್ವವನ್ನು ಹೊಂದುವನೆಂದೂ ಕೂಡ ನಂಬಲಿಕ್ಕಿಲ್ಲವು. ಮಿಥ್ಯಾ ದರ್ಶನ, ಮಿಥ್ಯಾಜ್ಞಾನ ಮತ್ತು ಮಿಥ್ಯಾಚಾರಿತ್ರಗಳಿಂದ ಮಿಥ್ಯಾಮಾರ್ಗಿ

ಯಾಗಿ ಅನಾದಿ ಕಾಲದಿಂದ ಸಂಸಾರದಲ್ಲಿ ಭ್ರಮಿಸುತ್ತಿರುವರು. ಅಂತಹವರಿಗೆ ಸಂಸಾರ ಸಮುದ್ರವನ್ನು ದಾಟಲು ದೋಣಿ ಮೊದಲಾದ ಉಪಕರಣಗಳ ಪ್ರಾಪ್ತಿಯಾಗದಿದ್ದರೆ ಅದರಲ್ಲಿಯೇ ಮುಳುಗೇಳುತ್ತಿರುವಂತೆ ಸಂಸಾರ ಸಾಗರದಲ್ಲಿಯೇ ಭ್ರಮಿಸುತ್ತಿರುವ ಅಜ್ಞಾನಿಗಳಾಗಿ, ಮಹಾಪಾಪಿಗಳಾಗಿ ಸತ್ಯಮಾರ್ಗ ವಂಚಕರಾಗಿರುವ ಬಹಿರಾತ್ಮರಿಗೆ ಉಪಕರಣಗಳ ಪ್ರಾಪ್ತಿಯು ಹೇಗೆ ತಾನೇ ಆದೀತು ?

ಶ್ರೀ ನೇಮಿಚಂದ್ರಸಿದ್ಧಾಂತಚಕ್ರವರ್ತಿಗಳು ಗೋಮಟಸಾರ ಜೀವ ಕಾಂಡದಲ್ಲಿ ಹೇಳುತ್ತಾರೆ :

**ಮಿಚ್ಛತ್ತಂ ವೇದಂತೋಜೀವೋ ವಿವರೀಯದಂಸಣೋ ಹೋದಿ।**
**ಣ ಯ ಧಮ್ಮಂ ರೋಚೇದಿ ಹು ಮಹುರಂ ಖು ರಸಂ ಜಹಾ**
**ಜರಿದೋ ॥೧೭॥**

**ಮಿಚ್ಛಾ ಇಟ್ಠೀ ಜೀವೋ ಉವಇಟ್ಠಂ ಪವಯಣಂ ಣ ಸದ್ದಹದಿ।**
**ಸದ್ದಹದಿ ಅಸಬ್ಭಾವಂ ಉವಇಟ್ಠಂ ವಾ ಅಣುವ ಇಟ್ಠಂ ॥೬೫॥**

**ಭಾವಾರ್ಥ :** ಪಿತ್ತಜ್ವರದಿಂದ ಪೀಡಿತನಾದ ಮಾನವನಿಗೆ ಮಧುರ ರಸವು ರುಚಿಸದಿರುವಂತೆ, ಧರ್ಮವು, ಧರ್ಮಮಾರ್ಗವು ರುಚಿಸದ, ಮಿಥ್ಯಾತ್ವ ಕರ್ಮದ ಫಲಗಳನ್ನು ಅನುಭವಿಸುವ ವಿಪರೀತ ಶ್ರದ್ಧೆಯುಳ್ಳ ಮಿಥ್ಯಾದೃಷ್ಟಿಗೆ ಜಿನಪ್ರಣೀತ ತತ್ವಗಳನ್ನುಪದೇಶಿಸಿದರೂ ನಂಬಿಕೆಯುಂಟಾಗುವುದಿಲ್ಲವು. ತದ್ವಿರುದ್ಧವಾಗಿ ಉಪದೇಶಗಳಿಲ್ಲದಿದ್ದರೂ ಅತತ್ವಗಳನ್ನು ನಂಬುತ್ತಾನೆ. ಅಹೋ!

ಶ್ರೀ ಕುಂದಕುಂದಾಚಾರ್ಯರು ದಂಸಣಪಾಹುಡವೆಂಬ ಗ್ರಂಥದಲ್ಲಿ ವರ್ಣಿಸಿದ್ದಾರೆ :

**ದಂಸಣ ಭಟ್ಠಾ ಭಟ್ಠಾ ದಂಸಣ ಭಟ್ಠಸ್ಸ ಣತ್ಥಿ ಣಿವ್ವಾಣಂ।**
**ಸಿಜ್ಝಂತಿ ಚರಿಯಭಟ್ಠಾ ದಂಸಣಭಟ್ಠಾಂ ಣ ಸಿಜ್ಝಂತಿ ॥೩॥**
**ಸಮ್ಮತ್ತರಯಣಭಟ್ಠಾ ಜಾಣಂತಾ ಬಹುವಿಹಾಇ ಸತ್ಥಾಇ।**
**ಆರಾಹಣಾ ವಿರಹಿಯಾ ಭಮಂತಿ ತತ್ಥೇವ ತತ್ಥೇವ ॥೪॥**

**ಸಮ್ಮತ್ತ ವಿರಹಿಯಾ ಣಂ ಸುಟ್ಠು ವಿ ಉಗ್ಗಂ ತವಂ ಚರಂತಾ ಣಂ।**
**ಲಹಂತಿ ಬೋಹಿಲಾಹಂ ಅವಿ ವಾಸಸಹಸ್ಸ ಕೋಡೀಹಿಂ ॥೫॥**

**ಭಾವಾರ್ಥ :** ಬಹಿರಾತ್ಮನು ಸಮ್ಯಗ್ದರ್ಶನದಿಂದ ಭ್ರಷ್ಟನಾಗಿರುವುದರಿಂದ ಆತನಿಗೆ ನಿರ್ವಾಣ ಪದವಿಯ ಲಾಭವಾಗಲಾರದು. ಆತನು ಭ್ರಷ್ಟನೇ. ಯದಿ ಚಾರಿತ್ರ ಭ್ರಷ್ಟನಾಗಿದ್ದು, ಬಹಿರಾತ್ಮನಾಗದಿದ್ದ ಪಕ್ಷದಲ್ಲಿಯೂ ಕೂಡ ಸಿದ್ಧಪದವಿಯನ್ನು ಪಡೆಯಬಹುದು. ಆದರೆ ಸಮ್ಯಗ್ದರ್ಶನದಿಂದ ರಹಿತನಾದ ಆತ್ಮನು ಎಂದೆಂದಿಗೂ ಮೋಕ್ಷಲಕ್ಷ್ಮಿಯನ್ನು ಹೊಂದುವುದಿಲ್ಲ. ಸಮ್ಯಗ್ದರ್ಶನ ರೂಪ ರತ್ನತ್ರಯಗಳ ಪ್ರಾಪ್ತಿಯಾಗದಿರುವವರು, ಅನೇಕ ಶಾಸ್ತ್ರಗ್ರಂಥಗಳನ್ನು ಓದಿದ್ದು, ರತ್ನತ್ರಯಗಳ ಆರಾಧನೆಯಿಲ್ಲದೆ ಸಂಸಾರ ಚಕ್ರದಲ್ಲಿ ಸುತ್ತಿಕೊಂಡಿರುತ್ತಾರೆ. ಸಮ್ಯಗ್ದರ್ಶನದಿಂದ ಶೂನ್ಯರಾದ ಈ ಬಹಿರಾತ್ಮರು ಕೋಟ್ಯಾನುಕೋಟಿ ವರ್ಷಗಳವರೆಗೆ ಭಯಾನಕವೂ, ಘೋರವೂ ಆದ ತಪಸ್ಸನ್ನಾಚರಿಸಿದರೂ ಕೂಡ, ರತ್ನತ್ರಯ ಪ್ರಾಪ್ತಿಯಾಗಲೀ ಅಥವಾ ಆತ್ಮಾನುಭವವಾಗಲೀ ದೊರೆಯಲಾರದು.

ಶ್ರೀ ನಾಗಸೇನಮುನಿಗಳು ತತ್ವಾನುಶಾಸನದಲ್ಲಿ ಹೇಳಿದ್ದಾರೆ :

**ಶಶ್ವದನಾತ್ಮೀಯೇಷು, ಸ್ವತನು ಪ್ರಮುಖೇಸು ಕರ್ಮಜನಿತೇಷು।**
**ಆತ್ಮಿಯಾಭಿನಿವೇಶೊ ಮಮಕಾರೋ ಮಮ ಯಥಾ ದೇಹಃ ॥೧೪॥**
**ಯೇ ಕರ್ಮಕೃತಾಭಾವಾಃ ಪರಮಾರ್ಥನಯೇನ ಚಾತ್ಮನೋ**
**ಭಿನ್ನಾಃ।**
**ತತ್ರಾತ್ಮಾಭಿನಿವೇಶೋಽಹಂಕಾರೋಽಹಂ ಯಥಾ ನೃಪತಿಃ ॥೧೫॥**
**ತದರ್ಥಾನಿಂದ್ರಿಯೈರ್ಗೃಹ್ಣನ್ ಮುಹ್ಯತಿ ದ್ವೇಷ್ಟಿ ರಜ್ಯತೇ।**
**ತತೋ ಬಂಧೋ ಭ್ರಮತ್ಯೇವಂ ಮೋಹವ್ಯೂಹಗತಃ**
**ಪುಮಾನ್ ॥೧೬॥**

**ಭಾವಾರ್ಥ :** ಬಹಿರಾತ್ಮನಾದ ಮಿಥ್ಯಾದೃಷ್ಟಿಜೀವನು ಮಮಕಾರ (ನನ್ನದೆಂಬ ಭಾವನೆ) ಮತ್ತು ಅಹಂಕಾರಾದಿ ದೋಷಗಳಿಂದ ಲಿಪ್ತನಾಗಿರುತ್ತಾನೆ. ತನ್ನಿಂದ ಸಂಪೂರ್ಣವಾಗಿ ಭಿನ್ನಗಳೂ, ಕರ್ಮೋದಯದ ಸಂಬಂಧ

ದಿಂದ ಪ್ರಾಪ್ತವಾದ ಶರೀರ, ಧನ, ಬಂಧು ಬಾಂಧವ, ದೇಶ ಗ್ರಾಮಾದಿಗಳನ್ನು ತನ್ನವೆಂದು ಭಾವಿಸುವುದು ಮಮಕಾರವು. ಕರ್ಮಾದಿಗಳ ಉದಯದಿಂದುಂಟಾಗುವ ರಾಗಾದಿ ಭಾವಗಳು ನಿಶ್ಚಯ ನಯದಿಂದ ತನ್ನಿಂದ ಭಿನ್ನಗಳಾಗಿದ್ದರೂ ಕೂಡ, ತನ್ನವೆಂದು ಪರಿಭಾವಿಸುತ್ತ ರಾಗೀ ದ್ವೇಷೀ ಮತ್ತು ಮೋಹಿ ಎಂದೂ ವಿಚಾರಿಸುತ್ತ ಅಹಂಕಾರಪಡುತ್ತಿರುತ್ತಾನೆ. ಉದಾ :- ನಾನು ರಾಜ, ಚಕ್ರವರ್ತಿ ಇತ್ಯಾದಿ. ಹೀಗೆ ಈ ಪ್ರಾಣಿಯು ಇಂದ್ರಿಯಗಳ ಮೂಲಕ ವಸ್ತುಗಳನ್ನು ತಿಳಿಯುತ್ತ, ಅವುಗಳಲ್ಲಿ ಮೋಹ ದ್ವೇಷಗಳನ್ನು ಕಲ್ಪಿಸಿಕೊಂಡು, ಕರ್ಮಬಂಧನ ಬದ್ಧನಾಗಿ ಚತುರ್ಗತಿ ಸಂಸಾರದಲ್ಲಿ ಬಳಲುತ್ತಿರುತ್ತಾನೆ.

---

## ಅಂತರಾತ್ಮನು

**ಜೋ ಪರಿಯಾಣಇ ಅಪ್ಪ ಪರು ಜೋ ಪರಭಾವ ಚಏಇ ।**
**ಸೋ ಪಂಡಿಉ ಅಪ್ಪಾ ಮುಣಹಿಂ ಸೋ ಸಂಸಾರ ಮುಏಇ ॥ ೮ ॥**

**ಅನ್ವಯಾರ್ಥ :** ಜೋ ಅಪ್ಪ ಪರು ಪರಿಯಾಣಇ-ತನ್ನಿಂದ ಅತಿರಿಕ್ತ (ಭಿನ್ನ) ಗಳಾದ ಪದಾರ್ಥಗಳನ್ನು ತಿಳಿದವನೂ (ಪರ ಪದಾರ್ಥಗಳು ತನ್ನಿಂದ ಪೂರ್ಣ ರೀತಿ ಭಿನ್ನಗಳಾಗಿವೆಯೆಂದು ತಿಳಿದವನೂ), ಜೋ ಪರಭಾವ ಚಏಇ-ತನ್ನಿಂದ ಬೇರೆಯಾದ ಪರಭಾವಗಳನ್ನು ತ್ಯಜಿಸಿದವನೂ, ಸೋ ಪಂಡಿಉ-ಅವನೇ ನಿಜವಾದ ಪಂಡಿತನಾದ ಭೇದ ವಿಜ್ಞಾನೀ ಅಂತರಾತ್ಮನು. ಅಪ್ಪಾ ಮುಣಹಿಂ-ಅವನೇ ತನ್ನಾತ್ಮಾನುಭವಿಯು, ಸೋ ಸಂಸಾರ ಮುಏಇ-ಆತನೇ ಸಂಸಾರ ಬಂಧನದಿಂದ ಬಿಡುಗಡೆಯಾಗುವವನಾಗುತ್ತಾನೆ.

**ಭಾವಾರ್ಥ :** ಸಮ್ಯಗ್ದೃಷ್ಟಿಗೇನೇ ಅಂತರಾತ್ಮನೆಂದು ಹೇಳುವುದು. ಮಿಥ್ಯಾದೃಷ್ಟಿಯಾದ ಅಲ್ಪ ಜ್ಞಾನಿಯು ಮೊದಲನೆಯ ಮಿಥ್ಯಾದೃಷ್ಟಿ ಗುಣಸ್ಥಾನದಿಂದ ಮೇಲ್ಮೇಲೆ ಏರುತ್ತ, ನಾಲ್ಕನೆಯ ಅವಿರತ ಗುಣಸ್ಥಾನದಲ್ಲಾಗಲೀ ಅಥವಾ ಐದನೆಯ ದೇಶವಿರತ ಗುಣಸ್ಥಾನದಲ್ಲಾಗಲಿ ಅಥವಾ ಏಳನೆಯ

ಅಪ್ರಮತ್ತ ಗುಣಸ್ಥಾನದಲ್ಲಾಗಲಿ ಯಾವಾಗ ಪ್ರವೇಶಿಸುವನೋ ಆಗ ಸಮ್ಯಗ್ದೃಷ್ಟಿ ಅಂತರಾತ್ಮನಾಗುವನು. ಮಿಥ್ಯಾತ್ವ ಭೂಮಿಯನ್ನು ಬಿಟ್ಟು ಸಮ್ಯಕ್ತ್ವಭೂಮಿಯನ್ನು ಸೇರಬೇಕಾದರೆ, ಈ ಸಂಜ್ಞಿ ಪಂಚೇಂದ್ರಿಯ ಜೀವನು ಪಂಚಲಬ್ಧಿಗಳನ್ನು ಪ್ರಾಪ್ತಮಾಡಿಕೊಳ್ಳುವುದೇ ಮಹೋಪಾಯವಾಗಿರುತ್ತದೆ.

೧) **ಕ್ಷಯೋಪಶಮಃ :–** ಯಾವ ಜೀವನು ತತ್ವಜ್ಞಾನವಾಗುವ ಯೋಗ್ಯತೆಯನ್ನು ಸಂಪಾದಿಸುವ ಲಬ್ಧಿಯನ್ನು ಪ್ರಾಪ್ತವಾಡಿಕೊಂಡು, ತನ್ನ ಉದಯದಲ್ಲಿರುವ ಪಾಪಕರ್ಮಗಳ ಶಕ್ತಿಯನ್ನು ಪ್ರತಿಸಮಯದಲ್ಲಿ ಅನಂತ ಗುಣ ಕಡಿಮೆ ಮಾಡುವವನಾಗಿ, ಅರ್ಥಾತ್ ದುಃಖಗಳ ಪರಂಪರೆಯನ್ನು ಘಟಿಸುವ (ಕಡಿಮೆ) ಮಾಡುವವನಾಗಿ, ಸಾತಾವೇದನೀಯ ಕರ್ಮವನ್ನು ಸಂಪಾದಿಸುವವನಾಗುತ್ತಾನೆ. ಆಕುಲಿತ ಚಿತ್ತಧಾರಿಯಾದ ಜೀವನು ತತ್ವಗಳತ್ತ ಉಪಯೋಗಗಳನ್ನುಪಯೋಗಿಸಲಾರನು.

೨) **ವಿಶುದ್ಧಿ ಲಬ್ಧಿ :–** ಸುಜ್ಞಾನ ಅಥವಾ ಸತ್ಸಂಗತಿಯ ಪ್ರಭಾವದಿಂದ ಭಾವಗಳಲ್ಲಿ ಕಷಾಯಗಳ ಮಂದತೆಯುಂಟಾಗಿ, ಅದರಿಂದ ಶುಭ, ನೀತಿಯುಕ್ತವಾದ ಕಾರ್ಯಗಳಲ್ಲಿ ಪ್ರೀತಿ ಮತ್ತು ಉತ್ಸಾಹವುಳ್ಳವನಾಗುವುದಕ್ಕೆ ಮತ್ತು ಅಶುಭ ಕಾರ್ಯಗಳಲ್ಲಿ ಮನಸ್ಸನ್ನು ಹಿಂತೆಗೆಯುವ ಯೋಗ್ಯತೆಯನ್ನು ಪ್ರಾಪ್ತ ಮಾಡಿಕೊಳ್ಳುವುದಕ್ಕೆ ವಿಶುದ್ಧಲಬ್ಧಿಯೆಂದು ಹೆಸರು.

೩) **ದೇಶನಾಲಬ್ಧಿ :–** ತನ್ನ ಹಿತಾನ್ವೇಷಣೆಯಲ್ಲಿ ಪ್ರೀತಿಯುಳ್ಳವನಾಗಿ ಗುರುಗಳ ಅಥವಾ ಶಾಸ್ತ್ರಗ್ರಂಥಗಳ ಮೂಲಕವಾಗಿ ಧರ್ಮೋಪದೇಶವನ್ನು ಸ್ವೀಕರಿಸಿ ಮನನ ಮಾಡಿಕೊಂಡು ಜೀವ, ಅಜೀವ, ಆಸ್ರವ, ಬಂಧ, ಸಂವರ, ನಿರ್ಜರ ಮತ್ತು ಮೋಕ್ಷಗಳೆಂಬ ಸಪ್ತ ತತ್ವಗಳನ್ನು ವ್ಯವಹಾರ ಮತ್ತು ನಿಶ್ಚಯ ನಯಗಳಿಂದ ಚೆನ್ನಾಗಿ ತಿಳಿಯಬೇಕು. ವ್ಯವಹಾರನಯದಿಂದ ಅಜೀವ, ಆಸ್ರವ, ಬಂಧಗಳನ್ನು ತ್ಯಜಿಸುವುದಕ್ಕೆ ಯೋಗ್ಯಗಳಾಗಿರುವುವೆಂದೂ, ತಥಾ ಜೀವ, ಸಂವರೆ, ನಿರ್ಜರೆ ಮತ್ತು ಮೋಕ್ಷಗಳೆಂಬ ನಾಲ್ಕು ತತ್ವಗಳು ಗ್ರಹಣ ಯೋಗ್ಯಗಳಾಗಿರುವವೆಂದು ನಿಶ್ಚಯಿಸಿಕೊಳ್ಳಬೇಕು. ನಿಶ್ಚಯನಯದಿಂದ ಸಪ್ತತತ್ವಗಳಲ್ಲಿ ಜೀವ ಮತ್ತು ಕರ್ಮ ಪುದ್ಗಲಗಳು ಮುಖ್ಯವಾಗಿವೆ. ಅವು

ಗಳಲ್ಲಿ ಕರ್ಮ ಪುದ್ಗಲವು ತ್ಯಾಜ್ಯವಾಗಿ, ತನ್ನಾತ್ಮ ತತ್ವವು ಗ್ರಹಿಸಲು ಯೋಗ್ಯವಾಗಿ ಇರುವುದೆಂದೂ, ಹಾಗೆಯೇ ಸತ್ಯದೇವ, ಸತ್ಯಶಾಸ್ತ್ರ ಮತು ಸತ್ಯಗುರುಗಳ ಸ್ವರೂಪವನ್ನೂ ತಿಳಿದು ವಿಶ್ವಾಸವನ್ನಿಡಬೇಕು. ಹಾಗೆಯೇ ತನ್ನನ್ನು ಮತ್ತು ಪರಪದಾರ್ಥಗಳನ್ನು ಚನ್ನಾಗಿ ಅರಿತು, ನಾನು ಆತ್ಮ ದ್ರವ್ಯ ನಾಗಿರುವೆನೆಂದೂ, ಸಿದ್ಧಸಮಾನನೆಂದೂ, ಸ್ವಆತ್ಮನಲ್ಲಿಯೇ ರಮಿಸುವವ ನೆಂದೂ, ರಾಗಾದಿ ವಿಕಾರಭಾವಗಳ ಕರ್ತೃವಲ್ಲವೆಂದೂ. ಸಂಸಾರ ಸಂಬಂಧವಾದ ಸುಖದುಃಖಗಳನ್ನು ಅನುಭವಿಸುವವನಲ್ಲವೆಂದೂ ವಿಚಾರಿಸುತ್ತಾ, ನಾನು ಕೇವಲ ಶುದ್ಧಭಾವಗಳ ನಿರ್ಮಾಪಕನೆಂದೂ, ಆತ್ಮಾನಂದವನ್ನನುಭವಿಸುವವ ನೆಂದೂ, ಸಕಲ ಅನ್ಯ ಆತ್ಮರುಗಳಿಂದ ಸರ್ವಥಾ ಭಿನ್ನನಾದವನೆಂದೂ, ತಥಾ ಸ್ವಗುಣಗಳಿಂದ ಅಭೇದನಾಗುವೆನೆಂದೂ ಭಾವಿಸುತ್ತಿರಬೇಕು.

ಶ್ರೀ ಕುಂದಕುಂದಾಚಾರ್ಯರು ಸಮಯಸಾರದಲ್ಲಿ ವರ್ಣಿಸಿರುವಂತೆ ತನ್ನಾತ್ಮನನ್ನು ಚಿಂತಿಸಬೇಕು.

**ಜೋ ಪಸ್ಸದಿ ಅಪ್ಪಾಣಂ ಅಬುಂದ್ಧಪುಟ್ಠಂ ಅಣಣ್ಣಯಂ ಣಿಯದಂ।**
**ಅವಿಸೇಸಮು ಸಂವುತ್ತಂ ತಂ ಸುದ್ಧಣಯಂ ವಿಯಾಣೀಹಿ ॥೧೬॥**

**ಭಾವಾರ್ಥ :** ಹೀಗೆ ಆತ್ಮನನ್ನು ಅಖಂಡವಾದ ಒಂದು ಶುದ್ಧ ದ್ರವ್ಯ ವಾಗಿರುವುದೆಂದು ತಿಳಿಯಬೇಕು.

೧) **ಅಬದ್ಧ ಸ್ಪಷ್ಟವಾಗಿರುತ್ತಾನೆ :** ಈ ಆತ್ಮನು ಕರ್ಮಗಳಿಂದ ಅಬಂಧನೂ ಅಸ್ಪೃಶ್ಯನೂ ಆಗಿರುತ್ತಾನೆ.

೨) **ಅನನ್ಯನಾಗಿರುತ್ತಾನೆ :** ಈ ಆತ್ಮನು, ಕಮಲ ಪತ್ರವು ನೀರಿ ನಿಂದ ನಿರ್ಲಿಪ್ತವಾಗಿರುವಂತೆ, ಸದಾಕಾಲವಲ್ಲಿ ಆತ್ಮನೇ ಆಗಿರುವನಲ್ಲದೆ, ಮನುಷ್ಯ, ತಿರ್ಯಂಚ, ದೇವ, ನಾರಕಿಯಲ್ಲವು. ಉದಾ : ಮಣ್ಣಿನಿಂದ ನಿರ್ಮಿಸಿದ ಪಾತ್ರೆಗಳಲ್ಲಿ ಸದಾ ಮಣ್ಣು ಇರುವಂತೆ.

೩) **ನಿಯಮಿತನಾಗಿರುತ್ತಾನೆ :** ಗಾಳಿಯ ಬೀಸುವಿಕೆಯಿಲ್ಲದೆ ಸಮುದ್ರವು ನಿಶ್ಚಲವಾಗಿರುವಂತೆ, ಈ ಜೀವನು ಕರ್ಮಗಳ ಉದಯವಿಲ್ಲ ದಿದ್ದರೆ ನಿಶ್ಚಲನೇ ಆಗಿರುತ್ತಾನೆ.

೪) **ಅವಿಶೇಷನಾಗಿರುತ್ತಾನೆ:** ಯಾವ ಪ್ರಕಾರವಾಗಿ ಸುವರ್ಣ (ಬಂಗಾರ) ವು ತನ್ನ ಹಳದಿ ವರ್ಣ, ಭಾರ ಮತ್ತು ನಯುಸ್ಸು ಮೊದಲಾದ ಗುಣಗಳಿಂದ ಅಭೇದವಾಗಿರುವಂತೆ ಮತ್ತು ಸಾಮಾನ್ಯವಾಗಿರುವಂತೆ ಈ ಆತ್ಮನು ಜ್ಞಾನ, ದರ್ಶನ, ಸುಖ, ವೀರ್ಯ ಮೊದಲಾದ ತನ್ನ ಗುಣಗಳಿಂದ ಅಭೇದನೂ, ಸಾಮಾನ್ಯನೂ ಆದ ಏಕರೂಪನಾಗಿರುತ್ತಾನೆ.

೫) **ಅಸಂಯುಕ್ತನಾಗಿರುತ್ತಾನೆ:** ನೀರು ಸ್ವಾಭಾವಿಕವಾಗಿ ಉಷ್ಣ ಗುಣ ರಹಿತವಾಗಿದ್ದು, ಶೀತಲಗುಣ ಸಂಯುಕ್ತವಾಗಿರುವಂತೆ, ಈ ಆತ್ಮನು ಸ್ವಾಭಾವಿಕವಾಗಿ ವೀತರಾಗಿಯಾಗಿರುವನಲ್ಲದೆ, ರಾಗದ್ವೇಷೀ ಮತ್ತು ಮೋಹಿಯಲ್ಲವು.

ನೀರಿನಲ್ಲಿ ಸೇರಿರುವ ಕಶ್ಮಲವು ನೀರಿನಿಂದ ಹೇಗೆ ಭಿನ್ನವೋ ಮತ್ತು ಅದು ಸ್ವಾಭಾವಿಕವಾಗಿ ನಿರ್ಮಲವೂ ಆಗಿರುವಂತೆ, ಶುದ್ಧ ನಿಶ್ಚಯ ನಯ ದೃಷ್ಟಿಯಿಂದ ಈ ಆತ್ಮನು ಪರವಸ್ತುಗಳಾದ ಶರೀರ, 8 ಕರ್ಮಗಳು ಮತ್ತು ರಾಗಾದಿ ಸಕಲ ಪರಭಾವಗಳಿಂದ ಪರಿಪೂರ್ಣಭಿನ್ನನಾಗಿರುತ್ತಾನೆ. ಹೀಗೆ ಆತ್ಮ ಅನಾತ್ಮಗಳನ್ನು ತಿಳಿದು ಆತ್ಮನಲ್ಲಿ ಪ್ರೀತಿಯನ್ನಿಟ್ಟು ಇಂದ್ರ, ಚಕ್ರವರ್ತಿ ನಾರಾಯಣ ಮೊದಲಾದ ಲೌಕಿಕ ಪದವಿಗಳಿಂದಲೂ ಮತ್ತು ಸಂಸಾರ ಶರೀರಭೋಗಾದಿಗಳಿಂದಲೂ ಉದಾಸೀನನಾಗಿ ಮೋಹವನ್ನು ತೊರೆದು ತನ್ನಲ್ಲಿಯೇ ರಮಿಸತಕ್ಕದ್ದು. ರಮಿಸಲು ಅಭ್ಯಾಸಿಸಲು ಇವು ನಾಲ್ಕು ಮುಖ್ಯ ಉಪಾಯಗಳಾಗಿವೆ.

೧) ಅರಹಂತ ಮತ್ತು ಸಿದ್ಧರನ್ನು ಭಕ್ತಿಪೂರ್ವಕವಾಗಿ ಪೂಜಿಸಬೇಕು. ೨) ಆಚಾರ್ಯ, ಉಪಾಧ್ಯಾಯ ಮತ್ತು ಸರ್ವಸಾಧುಗಳೆಂಬ ಮೂರು ಜನ ಮಹಾಯೋಗಿಗಳ ಸೇವೆಯನ್ನು ಮಾಡಿಕೊಂಡು ತತ್ವಜ್ಞಾನವನ್ನು ಸಂಪಾದಿಸಬೇಕು. ೩) ತತ್ವಗ್ರಂಥವನ್ನು ಅಭ್ಯಾಸಿಸಬೇಕು. ೪) ಪ್ರಾತಃಕಾಲ ಮತ್ತು ಸಾಯಂಕಾಲ ಏಕಾಂತ ಸ್ಥಾನದಲ್ಲಿ ಕುಳಿತುಕೊಂಡು ಸಾಮಾಯಿಕವನ್ನು ಮಾಡಬೇಕು ಮತ್ತು ಭೇದವಿಜ್ಞಾನದಿಂದ ತನ್ನ ಮತ್ತು ಪರ ಆತ್ಮರುಗಳನ್ನು ಏಕವಿಧವಾಗಿ ಚಿಂತಿಸುತ್ತಾ ರಾಗದ್ವೇಷಾದಿ ವಿಷ ಮಮತೆಯನ್ನು ದೂರಗೊಳಿಸಬೇಕು.

ಹೀಗೆ ಮನನಗೈಯುತ್ತಿರಲು, ಕರ್ಮಗಳ ಸ್ಥಿತಿಯು ಘಟಿಸುತ್ತಾ ಘಟಿಸುತ್ತಾ, ಅಂತಃಕೋಟಾಕೋಟಿ ಸಾಗರ ಮಾತ್ರ ಬಾಕಿ ಇರುವಾಗ ನಾಲ್ಕನೆಯ ಪ್ರಾಯೋಗ್ಯ ಲಬ್ಧಿಯು ಅಂತರ್ಮುಹೂರ್ತಕಾಲ ಉಂಟಾಗುವುದು. ಆಗ ಮೂವತ್ನಾಲ್ಕು ಬಂಧಾಪಸರಣವಾಗುತ್ತದೆ. ಪ್ರತಿಯೊಂದು ಬಂಧಾಪಸರಣದಲ್ಲಿ ಏಳು ನೂರು ಎಂಟು ನೂರು ಸಾಗರ ಕರ್ಮಗಳ ಸ್ಥಿತಿಯು ಕಡಿಮೆಯಾಗುತ್ತಿರುತ್ತವೆ. ಮತ್ತೆ ಯಾವಾಗ ಸಮ್ಯಕ್ತ್ವೋತ್ಪತ್ತಿಯ ಲಾಭವಾಗುವುದಕ್ಕೆ ಒಂದು ಅಂತರ್ಮುಹೂರ್ತ ಶೇಷವಿರುವಾಗ ಕರಣಲಬ್ಧಿಯನ್ನು ಪಡೆಯುತ್ತಾನೆ. ಆಗ ಆತನ ಪರಿಣಾಮವು ಪ್ರತಿ ಸಮಯದಲ್ಲಿ ಅನಂತಗುಣ ಅಧಿಕ ಶುದ್ಧವಾಗುತ್ತಾ ಹೋಗುವುದು. ಅಂತ ಪರಿಣಾಮಗಳ ಶಕ್ತಿ ಸಾಮರ್ಥ್ಯ (ಪ್ರಭಾವ) ದಿಂದ ಸಮ್ಯಗ್ದರ್ಶನವನ್ನು ತಡೆಯುವ ಅನಂತಾನುಬಂಧೀ ನಾಲ್ಕು ಕಷಾಯಗಳು ಮತ್ತು ಮಿಥ್ಯಾತ್ವ ಕರ್ಮಗಳು ಉಪಶಮವಾಗುವ ಪರಿಣಾಮದ ಪ್ರಾಪ್ತಿಗೆ ಕರಣಲಬ್ಧಿಯೆಂದು ಹೇಳುತ್ತಾರೆ. ಈ ಬಹಿರಾತ್ಮನು ಅಂತರ್ಮುಹೂರ್ತ ಕಾಲದಲ್ಲಿ ನಾಲ್ಕನೆಯ ಗುಣಸ್ಥಾನವನ್ನು ಪ್ರವೇಶಿಸಿ ಸಮ್ಯಗ್ದೃಷ್ಟಿ ಅಂತರಾತ್ಮನಾಗುತ್ತಾನೆ.

ಅಂತರಾತ್ಮನಾದವನಿಗೆ ಪಂಡಿತನೆಂದು ಹೇಳುತ್ತಾರೆ. ಆತನಿಗೆ ಭೇದ ವಿಜ್ಞಾನವುಂಟಾದೊಡನೆ ಸಮಯ ಸಮಯದಲ್ಲಿ ಆತ್ಮನ ಶುದ್ಧ ಸ್ವಭಾವವನ್ನು ಧ್ಯಾನದಲ್ಲಿಟ್ಟುಕೊಂಡಿರುವಾಗ ತತ್ವಜ್ಞಾನ ಚಿಂತಕನಾಗಿರುವ ಗೃಹಸ್ಥನು, ಚಾರಿತ್ರ ಮೋಹನೀಯ ಕರ್ಮದ ಉದಯದಿಂದ ಯೋಗ್ಯ ಕಾರ್ಯಗಳನ್ನು ಮಾಡುತ್ತಿದ್ದರೂ ಅವುಗಳಲ್ಲಿ ಮಗ್ನನಾಗದೆ, ಇದೆಲ್ಲವು ನಾಟಕವೆಂದು ತಿಳಿದು ಅಂತರಂಗಿಕವಾಗಿ ವಿಚಾರಿಸುತ್ತಾನೆ. ಯಾವಾಗ ಕರ್ಮಗಳ ಉದಯವು ದೂರವಾದೊಡನೆ, ಆತನು ಕೇವಲ ವೀತರಾಗ ಭಾವನೆಯಲ್ಲಿಯೇ ರಮಿಸುತ್ತಾನೆ.

ಅಂತರಾತ್ಮನು ಹೀಗೆ ನಾಲ್ಕು ಲಕ್ಷಣಗಳಿಂದ ಯುಕ್ತನಾಗುತ್ತಾನೆ.

೧) **ಪ್ರಶಮ-ಶಾಂತಭಾವನೆ :** ಅವನು ವಿಚಾರಶೀಲನಾಗಿ ಪ್ರತಿಯೊಂದು ವಿಷಯಗಳ ಕಾರಣ ಕಾರ್ಯಗಳನ್ನು ಚಿಂತಿಸುತ್ತ ಕ್ರೋಧಕಷಾಯವುಳ್ಳವನಾಗುವುದಿಲ್ಲ; ಕಿಂತು ಶಾಂತರಸದಲ್ಲಿರುವನು.

೨) **ಸಂವೇಗ :** ಧರ್ಮದಲ್ಲಿ ಪ್ರೀತಿಯುಳ್ಳವನಾಗಿ ಸಂಸಾರ ಶರೀರ ಭೋಗಾದಿಗಳಲ್ಲಿ ವೈರಾಗ್ಯ ಭಾವನೆಯುಳ್ಳವನಾಗುವುದು.

೩) **ಅನುಕಂಪಾ :** ಸಕಲ ಜೀವರಾಶಿಗಳಲ್ಲಿ ದಯಾ ಭಾವನೆಯುಳ್ಳವನಾಗುವನು.

೪) **ಆಸ್ತಿಕ್ಯ :** ಇಹಲೋಕ ಪರಲೋಕಗಳಿರುತ್ತವೆಂಬ ನಂಬಿಕೆಯುಳ್ಳವನಾಗುವನು.

ಪರಮಾತ್ಮ ಪ್ರಕಾಶದಲ್ಲಿಯೂ ಹೇಳಿದೆ :

**ದೇಹ ವಿಭಿಣ್ಣ ಉ ಣಾಣಮು ಉ, ಜೋ ಪರಮುಪ್ಪುಣಿ ಏ ಇ।**
**ಪರಮು ಸಮಾಹಿ-ಪರಿಟ್ಠಿಯ ಉ,**
**ಪಂಡಿ ಉ ಸೋಜಿ ಹವೇ ಇ ॥೧೪॥**

**ಭಾವಾರ್ಥ :** ಯಾರು ತನ್ನ ದೇಹದಿಂದ ಭಿನ್ನನಾದ ತನ್ನಾತ್ಮನು ಜ್ಞಾನಾನಂದಮಯ ಪರಮಾತ್ಮ ಸ್ವರೂಪನೆಂದು ಧ್ಯಾನಿಸುತ್ತಿರುವನೋ ಅವನೇ ನಿಜವಾದ ಪಂಡಿತ ಅಂತರಾತ್ಮನಾಗಿರುತ್ತಾನೆ.

ದಂಸಣಪಾಹುಡ ಗ್ರಂಥದಲ್ಲಿಯು ಹೇಳಿರುತ್ತಾರೆ :

**ಛಹ ದವ್ವ ಣವ ಪಯೆತ್ಥಾ ಪಂಚತ್ಥೀ ಸತ್ತ ತಚ್ಚ ಣಿದ್ದಿಟ್ಠಾ।**
**ಸದ್ದಹಇ ತಾಣ ರೂವಂ ಸೋ ಸದ್ದಿಟ್ಠಿ ಮುಣೇಯವ್ವೋ ॥೧೯॥**
**ಜೀವಾದಿ ಸದ್ದಹಣಂ ಸಮ್ಮತ್ತಂ ಜಿಣವರೇಹಿ ಪಣ್ಣತ್ತಂ।**
**ವವಹಾರಾ ಣಿಚ್ಛಯದೋ ಅಪ್ಪಾಣಂ ಹವಇ ಸಮ್ಮತ್ತಂ ॥ ೨೦ ॥**

**ಭಾವಾರ್ಥ :** ಜೀವ, ಪುದ್ಗಲ, ಧರ್ಮಾಸ್ತಿಕಾಯ, ಅಧರ್ಮಾಸ್ತಿಕಾಯ, ಆಕಾಶ, ಕಾಲ ಇವು ಆರು ದ್ರವ್ಯಗಳು. ಇವುಗಳಲ್ಲಿ ಕಾಲದ್ರವ್ಯವನ್ನು ಬಿಟ್ಟು ಉಳಿದ ಐದು ದ್ರವ್ಯಗಳು ಅಸ್ತಿಕಾಯಗಳಾಗಿರುತ್ತವೆ. ಜೀವಾದಿ ಏಳು ತತ್ವಗಳು, ಅವುಗಳಿಗೆ ಪುಣ್ಯಪಾಪಗಳನ್ನು ಸೇರಿಸಿದರೆ ನವಪದಾರ್ಥಗಳಾಗುತ್ತವೆ. ಅವುಗಳಲ್ಲಿ ಯಾವಾತ್ಮನು ಶ್ರದ್ಧೆಯನ್ನಿಡುವನೋ ಅವನೇ ಸಮ್ಯಗ್ದೃಷ್ಟಿಯೆಂದೆನ್ನಿಸಿಕೊಳ್ಳಲು ಅರ್ಹನು.

ಜೀವಾದಿ ದ್ರವ್ಯಗಳ ಶ್ರದ್ಧಾನವೇ ವ್ಯವಹಾರ ಸಮ್ಯಗ್ದರ್ಶನವೆಂದೂ, ತನ್ನಾತ್ಮ ಶ್ರದ್ಧಾನವೇ ನಿಶ್ಚಯ ಸಮ್ಯಗ್ದರ್ಶನವೆಂದೂ ತೀರ್ಥಂಕರ ಪರಮ ದೇವರು ಆಜ್ಞೆಯಿತ್ತಿರುತ್ತಾರೆ.

ಶ್ರೀ ಅಮೃತಚಂದ್ರಾಚಾರ್ಯರು ಸಮಯಸಾರ ಕಲಶದಲ್ಲಿ ಹೇಳುತ್ತಾರೆ:

**ವರ್ಣಾದ್ಯಾ ವಾ ರಾಗಮೋಹಾದಯೋ ವಾ ಭಿನ್ನಾಭಾವಾಃ ಸರ್ವ**
**ಏವಾಸ್ಯ ಪುಂಸಃ।**
**ತೇನೈವಾಂ ತಸ್ತತ್ತ್ವತಃ ಪಶ್ಯತೋಽಮೀ ನೋ ದೃಷ್ಟಾಃ**
**ಸ್ಯುರ್ದೃಷ್ಟಮೇಕಂ ಪರಂ ಸ್ಯಾತ್ ॥೫-೨॥**

**ಭಾವಾರ್ಥ:** ಈ ಆತ್ಮನಿಂದ ವರ್ಣಾದಿಗಳು ಮತ್ತು ಎಲ್ಲಾ ರಾಗಾದಿ ಭಾವಗಳು ಭಿನ್ನವಾಗಿರುವುವೆಂದು ತಿಳಿದು, ನಿಶ್ಚಯನಯದ ದೃಷ್ಟಿಯಿಂದ ತನ್ನಂತರಂಗದಲ್ಲಿ, ನೋಡಿದೊಡನೆ ಅವಿಕಾರಭಾವಾದಿಗಳು ದೃಷ್ಟಿಗೋಚರ ವಾಗದೆ. ಕೇವಲ ಪರಿಶುದ್ಧ ಪರಮಾತ್ಮನ ದರ್ಶನವಾಗುತ್ತದೆ.

ಸಮಯಸಾರಸಮುಚ್ಚಯದಲ್ಲಿ ಹೇಳಿರುತ್ತಾರೆ.

**ಪಂಡಿತೋಽಸೌ ವಿನೀತೋಽಸೌ ಧರ್ಮಜ್ಞಃ ಪ್ರಿಯದರ್ಶನಃ।**
**ಯಃ ಸದಾಚಾರಸಂಪನ್ನಃ ಸಮ್ಯಕ್ತ್ವದೃಢಮಾನಸಃ ॥೪೨॥**

**ಭಾವಾರ್ಥ:** ಯಾವಾತ್ಮನು ಸಮ್ಯಗ್ದರ್ಶನದಲ್ಲಿ ದೃಢ ಮನಸ್ಕನೂ ಮತ್ತು ಸದಾಚಾರಿಯೂ ಆಗಿರುತ್ತಾನೆಯೋ ಅವನೇ ನಿಜವಾದ ಪಂಡಿತನೂ, ವಿನಯಶೀಲನೂ, ಧರ್ಮಾತ್ಮನೂ ಮತ್ತು ತನ್ನ ದರ್ಶನಪ್ರಿಯನೂ ಆಗಿ ರುತ್ತಾನೆ.



## ಪರಮಾತ್ಮ ಸ್ವರೂಪ

**ಣಿಮ್ಮಲು ಣಿಕ್ಕಲು ಸುದ್ಧು ಜಿಣು ವಿಣ್ಹು ಬುದ್ಧು ಸಿವ ಸಂತು।**
**ಸೋ ಪರಮಪ್ಪಾ ಜಿಣ ಭಣಿಉ ಏಹಉ ಜಾಣಿ ಣಿಭಂತು ॥೯॥**

**ಅನ್ವಯಾರ್ಥ :** ಣಿಮ್ಮಲು-ಯಾರು ಕರ್ಮಮಲ ಮತ್ತು ರಾಗಾದಿಗಳಿಂದ ರಹಿತನೋ, ಣಿಕ್ಕಲು-ಶರೀರ ರಹಿತನೋ, ಸುದ್ಧ-ಪರಿಶುದ್ಧ ಮತ್ತು ಅಭೇದ ಸ್ವರೂಪನೇ, ಜಿಣು-ಆತ್ಮನ ಸಕಲ ಶತ್ರುಗಳನ್ನು ಜಯಿಸಿದವನೋ, ವಿಣ್ಹು-ವಿಷ್ಣುವೋ ಅರ್ಥಾತ್ ಜ್ಞಾನಾದಿ ದೃಷ್ಟಿಯಿಂದ ಸರ್ವಲೋಕಾಲೋಕವ್ಯಾಪಿಯೋ ಅಂದರೆ ಸಕಲವನ್ನು ತಿಳಿದವನೋ, ಬುದ್ಧ-ಬುದ್ಧನೋ ಅಂದರೆ ಎಲ್ಲಾ ತತ್ವಗಳನ್ನರಿತವನೋ, ಸಿವ-ಶಿವ ಸ್ವರೂಪ (ಪರಮ ಕಲ್ಯಾಣ ಕಾರಕನೋ), ಸಂತು-ಪರಮಶಾಂತಮಯ ವೀತರಾಗನೋ, ಸೋ ಅಪ್ಪಾ-ಅಂತಹ ಆತ್ಮನೇ ಪರಮಾತ್ಮನೆಂದು, ಜಿಣ ಭಣಿಉ-ತೀರ್ಥಂಕರ ಪರಮ ಜಿನ ದೇವನು ಆಜ್ಞೆಯಿತ್ತಿರುವನೆಂದು, ಏಹಉ ಣಿಭಂತು ಜಾಣಿ-ನಿಃಸ್ಸಂದೇಹವಾಗಿ ನಂಬು, ತಿಳಿ.

**ಭಾವಾರ್ಥ :** ಉತ್ಕೃಷ್ಟನೂ, ಪರಮ ಪವಿತ್ರನೂ ಆದ ಆತ್ಮನಿಗೆ ಪರಮಾತ್ಮನೆಂದು ಹೇಳುತ್ತಾರೆ. ಆವನಲ್ಲಿ ಸಂಸಾರಿ ಪ್ರಾಣಿಗಳಲ್ಲಿ ಕಂಡು ಬರುವ ಕಷಾಯಭಾವಗಳೂ, ರಾಗದ್ವೇಷಮೋಹರೂಪವಿಕಾರಗಳೂ ಪುಣ್ಯ ಪಾಪಗಳ ಸಂಬಂಧವೂ, ಇಚ್ಛೆ ದುರಾಶೆಗಳ ಮೂಲಕ ಉಂಟಾಗುವ ಸಂಕಲ್ಪ ವಿಕಲ್ಪ ವಿಕಾರಗಳೂ, ಆಜ್ಞೆವಿಧಿಸುವಿಕೆಯೂ, ಆರಂಭಾದಿ ಕ್ರಿಯೆಗಳನ್ನು ಮಾಡುವಿಕೆಯೂ, ಸ್ವಂತಕಾರ್ಯಗಳ ಸಿದ್ಧಿಯಿಂದ ಸಂತೋಷಪಡುವಿಕೆಯೂ, ಸಿದ್ಧಿಸದ ಪಕ್ಷದಲ್ಲಿ ವಿಷಾದಪಡುವಿಕೆಯೂ ಇವೇ ಮೊದಲಾದ ದೋಷಗಳ ಲವಲೇಶವು ಆ ಪರಮಾತ್ಮನಲ್ಲಿ ಇರುವುದಿಲ್ಲವು. ಆದ್ದರಿಂದಲೇ ಪರಮಾತ್ಮನು ಯಾವಜಗತ್ತಿನ ಸೃಷ್ಟಿಲಯಾದಿಗಳನ್ನು ಮಾಡುವವನೂ, ಅವರವರ ಪಾಪ ಪುಣ್ಯಗಳ ಫಲಗಳನ್ನು ವಿಧಿಸುವವನೂ, ಸಂಸಾರ ಚಕ್ರದಲ್ಲಿ ಸಿಲುಕಿರುವವನೂ ಮುಂತಾಗಿ ಹೇಳುವ ದೋಷಾರೋಪಣೆಗಳು ಪರಮಾತ್ಮನಿಗೆ ಇಲ್ಲವು. ಆದ್ದರಿಂದ ಆ ದಯಾಮೂರ್ತಿಯಾದ ಪರಮಾತ್ಮನು ಕೃತಕೃತ್ಯನಾಗಿರುತ್ತಾನೆ.

ಈ ಜಗತ್ತು ಅನಾದಿಯಾಗಿರುವಾಗ ಕರ್ಮದಿಂದೇನು? ಜಗತ್ತಿನ ಸರ್ವಕಾರ್ಯಗಳು ಸ್ವಾಭಾವಿಕವಾಗಿಯೇ ನಡೆದುಕೊಂಡು ಬರುತ್ತಿವೆ. ನೀರಿನಿಂದ ಆವಿಯು, ಅದರಿಂದ ಮೋಘಗಳು, ಅದರಿಂದ ಪುನಃ ಮಳೆಯು ಹೊಯ್ದು, ಆದು ನದಿ ರೂಪವಾಗಿ ಹರಿಯುವುದು. ಆದರಿಂದ ಎಲ್ಲಿಂದಲೋ ಮಣ್ಣು ಬಂದು ಸೇರಿ ಭೂಮಿಯಾಗುತ್ತದೆ ಮೊದಲಾದವು. ಕೆಲಸ ಮಾಡು ವುದರಲ್ಲಿ ಇಚ್ಛಾವಾನ್ ಮನುಷ್ಯನು ನಿಮಿತ್ತ ಮಾತ್ರನು. ವಸ್ತ್ರ ಪಾತ್ರಾದಿ ಗಳನ್ನು ಮನುಷ್ಯನು ಮತ್ತು ಪಕ್ಷಿಗಳು ತಂತಮ್ಮ ಇಷ್ಟಬಂದಂತೆ ಮಾಡಿ ಕೊಳ್ಳುತ್ತವೆ. ಹೀಗೆ ಪ್ರಪಂಚದಕಾರ್ಯಕಲಾಪಗಳು ನಡೆದುಕೊಂಡಿರುತ್ತವೆ.

ಪುಣ್ಯಪಾಪಗಳ ಫಲವು ಕೂಡ ಸ್ವತಃ ಆಗುತ್ತವೆ. ಅವು ಕಾರ್ಮಣ ಶರೀರದಲ್ಲಿ ಬಂಧವಾಗಿ ಪರಿಪಕ್ವರೂಪವಾದೊಡನೆ ಫಲವು ದೃಷ್ಟಿಗೋಚರ ವಾಗುವಂತೆ, ಕ್ರೋಧ, ಮಾನ, ಮಾಯಾ, ಮತ್ತು ಲೋಭ ಕಷಾಯಗಳು ಮತ್ತು ಕಾಮವಿಕಾರವುಂಟಾಗುವಂತೆ–ಉದಾ: ನಾವು ಪ್ರತಿನಿತ್ಯವು ಸೇವಿ ಸಲ್ಪಡುವ ಅನ್ನ, ಪಾನ, ವಾಯು ಮೊದಲಾದವು ಸ್ವಯಂ ರಸ, ರುಧಿರ, ಅಸ್ಥಿ, ಮಜ್ಜಾ, ಮಾಂಸ ರೂಪವಾಗಿ ಪರಿಣಮಿಸುವುದಾಗಲೀ ಅಥವಾ ರೋಗಿ ಯಾಗುವುದಾಗಲೀ, ಶರೀರವು ಬಲಸಾಮರ್ಥ್ಯದಿಂದ್ಯುಕ್ತವಾಗಿರುವುದಾಗಲೀ, ವಿಷದ ಭಕ್ಷಣೆಯಿಂದ ಮರಣ ಸಂಭವಿಸುವುದಾಗಲೀ ಮೊದಲಾದವುಗಳಂತೆ,– ಬಂಧಾದಿಗಳಿಂದ ಅವಸ್ಥೆಗಳುಂಟಾಗುತ್ತವೆ, ಇತ್ಯಾದಿ

ಒಂದು ವೇಳೆ ಪರಮಾತ್ಮನು ಮೇಲ್ಕಂಡ ವಿಷಯಗಳ ಲೆಕ್ಕಪಟ್ಟಿ ಯನ್ನು ಇಟ್ಟುಕೊಳ್ಳುವುದಾದರೆ, ಚಿಂತಾಸಾಗರದಲ್ಲಿ ಮುಳುಗಬೇಕಾಗುವುದು. ಹಾಗೆಯೇ ಸಕಲ ಜಗತ್ತಿನ ಜೀವರಾಶಿಗಳಲ್ಲಿ ಕರುಣಾಭಾವವು ಇರುತ್ತಿದ್ದರೆ ಅಥವಾ ಸರ್ವಶಕ್ತಿಯುಳ್ಳವನಾಗುತ್ತಿದ್ದರೆ, ಪ್ರಾಣಿಗಳ ಸ್ವಭಾವಗಳನ್ನು ಪರಿವರ್ತಿಸಿ ಪಾಪಕೆಲಸಗಳನ್ನೆಸಗದಂತೆ ಮಾಡಬಹುದಾಗಿತ್ತು. ಆದರೆ ಪರ ಮಾನಂದ ಸ್ವರೂಪಾಮೃತವನ್ನು ಪಾನಮಾಡಿಕೊಂಡಿರುವ ಪರಮಾತ್ಮನಿಂದ ಫಲವನ್ನು ಕೊಡುವ ವಿಕಾರವಾಗಲೀ, ಉದ್ಯೋಗವಾಗಲೀ ಸಂಭವಿಸುವುದಿ ಲ್ಲವು. ಹೀಗಿರುವಾಗ ದಯಾ ಸ್ವರೂಪನಾದ ಪರಮಾತ್ಮನು ಕೆಲವರಲ್ಲಿ ಪ್ರಸನ್ನನಾಗಿ ಸುಖದುಃಖವನ್ನುಂಟುಮಾಡಲು ಸಾಧ್ಯವಿಲ್ಲದಿರುವಾಗ, ಆತನ

ಸ್ತುತಿ, ಭಕ್ತಿ ಮತ್ತು ಪೂಜೆಯನ್ನು ಗೈಯುವ ಅವಶ್ಯಕತೆಯಾಗಲಿ, ಪ್ರಯೋಜನವಾಗಲಿ ಏನು?

ಸಮಾಧಾನವನ್ನು ಹೇಳುತ್ತಾರೆ?

ಪರಮ ಪವಿತ್ರ, ಪರಮ ಪರಿಶುದ್ಧಗುಣಧಾರೀ ಪರಮಾತ್ಮನ ನಾಮ ಸ್ಮರಣೆಯಿಂದಲೂ, ಗುಣಸ್ಮರಣೆಯಿಂದಲೂ, ಪೂಜೆ, ಭಕ್ತಿ ಮೊದಲಾದ ಸತ್ಕಾರಗಳಿಂದಲೂ ಭಕ್ತ ಜನರ ಪರಿಣಾಮಗಳು ನಿರ್ಮಲವಾಗುತ್ತವೆ. ಅದರಿಂದ ರಾಗದ್ವೇಷಾದಿ ಮಲದೋಷಗಳು ದೂರವಾಗಿ, ಭಾವಗಳ ಶುದ್ಧಿಯಾಗುತ್ತಿರಲು, ಪಾಪ ಸಮೂಹವು ಸ್ವಾಭಾವಿಕವಾಗಿ ನಾಶಹೊಂದುತ್ತವೆ. ಶುಭೋಪಯೋಗದಿಂದ ಪುಣ್ಯಕರ್ಮಗಳ ಬಂಧವು ಆಗುತ್ತದೆ. ಹೇಗೆಂದರೆ ಜಡವಾದ ಶಾಸ್ತ್ರಗ್ರಂಥಗಳ ಸ್ವಾಧ್ಯಾಯದಿಂದಲೂ, ಕೇಳುವಿಕೆಯಿಂದಲೂ ಪರಿಣಾಮದಲ್ಲಿ ಜ್ಞಾನ ಮತ್ತು ವೈರಾಗ್ಯ ಭಾವನೆಯುಂಟಾಗುವಂತೆ ಪರಮಾತ್ಮನ ಪೂಜೆ ಮೊದಲಾದ ಭಕ್ತಿಭಾವ ಪರಿಣಾಮಗಳಲ್ಲಿ ಶುದ್ಧಾತ್ಮಜ್ಞಾನವೂ, ಸಂಸಾರಭಾವನೆಯಿಂದ ವೈರಾಗ್ಯಭಾವನೆಯೂ ಉದ್ಭವಿಸುತ್ತದೆ. ಪರಮಾತ್ಮನು ಉದಾಸೀನ ಕಾರಣನಾಗಿರುತ್ತಾನಲ್ಲದೆ ಪ್ರೇರಕ ನಿಮಿತ್ತನಲ್ಲವು. ನಾವೆಲ್ಲರೂ ಆತನ ಅವಲಂಬನದಿಂದಲೇ ಆತ್ಮಕಲ್ಯಾಣವನ್ನು ಮಾಡಿಕೊಳ್ಳುವುದು. ಪರಮಾತ್ಮನು ಯಾರಿಗೂ ಮುಕ್ತಿಯನ್ನೂ ಕೂಡ ಕೊಡುವುದಿಲ್ಲವು. ಆತನಲ್ಲಿರುವ ಭಕ್ತಿಯ ಮೂಲಕ ನಾವು ತಮ್ಮಲ್ಲಿಯೇ ಸ್ಥಿರರಾಗಿ, ಪರಮ ಸಮಾಧಿಯನ್ನು ಪಡೆಯುವುದಕ್ಕಾಗಿ ಅಭ್ಯಾಸವನ್ನು ಮಾಡುತ್ತ ಮಾಡುತ್ತಾ ಸಕಲ ಕರ್ಮರಹಿತ ಪರಮಾತ್ಮ ಸ್ವರೂಪಿಗಳೂ, ಪರಮ ನಿರ್ಮಲ ಸ್ವರೂಪಿಗಳೂ ಆಗುತ್ತೇವೆ.

ಪರಮಾತ್ಮನು ತೈಜಸ, ಕಾರ್ಮಣ, ಆಹಾರಕ, ವೈಕ್ರಿಯಕ ಮತ್ತು ಔದಾರಿಕ ಶರೀರಗಳ ಸಂಬಂಧವಿಲ್ಲದಿರುವುದರಿಂದಲೇ ಅಮೂರ್ತಿಕನಾಗಿರುತ್ತಾನೆ. ಹಾಗಿದ್ದರೂ ಪರಮಾತ್ಮನು ಅಮೂರ್ತಿಕನಾದ ಜ್ಞಾನಮಯ ರೂಪ ಆಕಾರವನ್ನು ಧರಿಸಿರುತ್ತಾನೆ. ಯಾವ ಶರೀರದಿಂದ ಬಿಡುಗಡೆಯಾಗಿ ಪರಮಾತ್ಮ ಸ್ವರೂಪನಾಗಿರುತ್ತಾನೆಯೋ, ಆ ಶರೀರದಲ್ಲಿ ಯಾವ ಧ್ಯಾನ

ಮುದ್ರೆಯಿತ್ತೋ, ಅದೇ ಆಕಾರವು ಮೋಕ್ಷಾವಸ್ಥೆಯಲ್ಲಿರುತ್ತದೆ. ಪ್ರತಿಯೊಂದು ವಸ್ತುವು ಆಕಾರರಹಿತವಾಗಿ ಇರುವುದಿಲ್ಲವು. ಅಮೂರ್ತಿಕ ದ್ರವ್ಯಗಳಿಗೆ ಅಮೂರ್ತಿಮತ್ತಾದ ಆಕಾರವೂ, ಮೂರ್ತಿಕ ಪುದ್ಗಲರಚಿತ ದ್ರವ್ಯಗಳಿಗೆ ಮೂರ್ತಿಮತ್ತಾದ ಆಕಾರವೂ ಇದ್ದೇ ಇರುತ್ತದೆ.

ಪರಿಶುದ್ಧ ಪರಮಾತ್ಮನಲ್ಲಿ ಕರ್ತೃಕರ್ಮಾಧಿಕಾರಕಗಳಿಲ್ಲದಿರುವುದರಿಂದ ಆತ್ಮನು ತನ್ನ ಅನಂತಗುಣ ಪರ್ಯಾಯಗಳ ಅಖಂಡನಿಧಿಯಾಗಿರುತ್ತಾನೆ. ಆ ಗುಣಗಳಿಂದ ಯಾವುದಾದರೊಂದು ಗುಣವೂ ನಾಶವಾಗುವುದಿಲ್ಲವು. ಯಾವ ಹೊಸ ಗುಣಗಳೂ ಕೂಡ ಪ್ರವೇಶಿಸುವುದಿಲ್ಲವು. ಅಂತಹ ಪರಮಾತ್ಮದೇವನಿಗೆ ಜಿನೇಂದ್ರದೇವನೆಂದು ಹೇಳುತ್ತಾರೆ. ಯಾಕೆಂದರೆ ತ್ರಿಲೋಕದಲ್ಲಿ ಅವರನ್ನು ಜಯಿಸುವ ಯಾವಶಕ್ತಿಗಳಾಗಲೀ, ವಿಕಾರಿಗಳನ್ನಾಗಿ ಮಾಡುವ ಶಕ್ತಿಗಳಾಗಲೀ, ಸಂಸಾರಿಯನ್ನಾಗಿ ಮಾಡುವ ಶಕ್ತಿ ಸಾಮರ್ಥ್ಯಗಳಾಗಲೀ ಇರುವುದಿಲ್ಲವು. ಅವರಲ್ಲಿ ಯಾವ ವಿಧದ ರಾಗದ್ವೇಷಗಳಿಲ್ಲದಿರುವುದರಿಂದಲೂ, ಪುಣ್ಯಪಾಪಕರ್ಮಗಳ ಬಂಧನವಿಲ್ಲದಿರುವುದರಿಂದಲೂ ಪರಮಾತ್ಮನು ಸದಾ ವಿನಯ ಶೀಲನಾಗಿರುತ್ತಾನೆ.

ಆ ಪರಮಾತ್ಮ ಪದವಿಯು ಯಾವ ಕರ್ಮದ ಫಲವೂ ಕೂಡ ಇರುವುದಿಲ್ಲವು. ಕಿಂತು ಅದು ಆತ್ಮನ ಸ್ವಾಭಾವಿಕ ಸ್ಥಾನವಾಗಿರುತ್ತದೆ. ಆದ್ದರಿಂದಲೇ ಪರಮಾತ್ಮನು ಎಂದೆಂದಿಗೂ ವಿಭಾವ ಸ್ವರೂಪಿಯಾಗಲಾರನು. ಅವನು ನಿಜವಾದ ವಿಷ್ಣುವು ಆಗಿರುವನು, ಕಾರಣ ಆತ ಸರ್ವಜ್ಞ ಪರಮಾತ್ಮನಾದುದರಿಂದ ಅಖಂಡ ಜ್ಞಾನವು ಸಕಲದ್ರವ್ಯಗಳ ಗುಣಪರ್ಯಾಯಗಳನ್ನು ಏಕ ಕಾಲದಲ್ಲಿ ತಿಳಿಯುವುದರಿಂದ ಸರ್ವಜ್ಞನು ಸರ್ವವ್ಯಾಪ್ತಿಯಾದ ವಿಷ್ಣುವು. ಅಜ್ಞಾನದಿಂದ ರಹಿತನಾಗಿರುವುದರಿಂದ ಯಥಾರ್ಥ ಬುದ್ಧನು; ಮಂಗಲ ಸ್ವರೂಪನಾದುದರಿಂದ ಶಿವನೂ, ಪರಮಶಾಂತಸ್ವರೂಪ ಪರಮವೀತರಾಗನೂ ಆಗಿರುತ್ತಾನೆ. ಅಂತಹ ಪರಮಾತ್ಮ ಸ್ಮರಣೆ ಭಜನೆಗಳಿಂದ ನಮ್ಮ ಕಲ್ಯಾಣವು ಅವಶ್ಯಂಭಾವಿಯಾಗಿರುತ್ತದೆ.

ನಿಶ್ಚಯವಾಗಿಯು ಸಿದ್ಧಾತ್ಮರೇ ನಿಜವಾದ ಪರಮಾತ್ಮರಾಗಿರುತ್ತಾರೆ. ಅರಹಂತರ ಆತ್ಮರಲ್ಲಿಯೂ ಕೂಡ ಪರಮಾತ್ಮ ಗುಣಗಳು ಪ್ರಕಟವಾಗಿರುವುದ

ರಿಂದಲೂ, ಅಘಾತಿ ಕರ್ಮಗಳ ಅಸ್ತಿತ್ವವಿರುವುದರಿಂದಲೂ, ಶರೀರ ಸಹಿತರಾಗಿರುವುದರಿಂದಲೂ, ಅತಿ ಶೀಘ್ರವೇ ಸಿದ್ಧಾವಸ್ಥೆಯನ್ನು ಪಡೆಯುವುದರಿಂದಲೂ ಅವರಿಗೂ ಪರಮಾತ್ಮನೆಂದೇ ಹೇಳುತ್ತಾರೆ. ಸರ್ವಜ್ಞ ಮತ್ತು ವೀತರಾಗ ಇವರಿಬ್ಬರು ಅರಹಂತರು ಸಿದ್ಧಪರಮಾತ್ಮರೇ ಆಗಿರುತ್ತಾರೆ.

ಅವರು ನಮಗೆ ಆದರ್ಶಪ್ರಾಯರಾದುದರಿಂದ ಅವರ ಸ್ವರೂಪವನ್ನರಿತು ಅವರಂತೆ ತಮ್ಮನ್ನು ಮಾಡಿಕೊಳ್ಳಲು ಪ್ರಯತ್ನಿಸಬೇಕೆಂದು ಪರಮಾತ್ಮ ಪ್ರಕಾಶದಲ್ಲಿ ಹೇಳಿರುತ್ತಾರೆ.

**ಅಪ್ಪಾ ಲದ್ಧಉ ಣಾಣಮಉ, ಕಮ್ಮವಿಮುಕ್ಕೇ ಜೇಣ।**
**ಮೇಲ್ಲವಿ ಸಯಲಉ ವಿ ದವ್ವು ಪರು, ಸೋಪರು ಮುಣಹಿಂ**
**ಮಣೇಣ ॥೧೫॥**

**ಣಿಚ್ಚು ಣಿರಂಜಣು ಣಾಣಮಉ, ಪರಮಾಣಂದ ಸಹಾಉ।**
**ಜೋ ಏಹಉ ಸೋ ಸಂತು ಸಿಉ, ತಾಸು ಮುಣಿಜ್ಜಹಿ**
**ಭಾಉ ॥೧೭॥**

**ವೇಯಹಿಂ ಸತ್ಥಹಿಂ ಇಂದಿಯಹಿ, ಜೋ ಜಿಯ ಮುಣಹು ಣ**
**ಜಾಇ।**
**ಣಿಮ್ಮಲ-ಝಾಣಹಂ ಜೋ ಬಿಸಉ, ಸೋ ಪರಮಪ್ಪು**
**ಅಣಾಇ ॥೨೩॥**

**ಭಾವಾರ್ಥ** : ಯಾರು ಸಕಲ ಕರ್ಮಗಳನ್ನು ನಾಶಮಾಡಿದವರೂ, ಸರ್ವ ಶರೀರಾದಿ ಪರದ್ರವ್ಯಗಳ ಸಂಯೋಗವನ್ನು ಹೋಗಲಾಡಿಸಿ ಜ್ಞಾನಾನಂದಮಯ ಆತ್ಮೀಯಗುಣವನ್ನು ಪಡೆದವರೂ ಆಗಿರುವರೋ ಅಂಥ ಆತ್ಮರುಗಳೇ ಪರಮಾತ್ಮರೆಂದು ಪರಿಶುದ್ಧಮನಸ್ಕನಾಗಿ ತಿಳಿ. ಪರಮಾತ್ಮನು ನಿತ್ಯನೂ, ನಿರಂಜನನೂ, ವೀತರಾಗಿಯೂ, ಜ್ಞಾನಸ್ವರೂಪಿಯೂ, ಪರಮಾನಂದ ಸ್ವಭಾವಿಯೂ, ಶಿವನೂ, ಶಾಂತಸಾಗರನೂ, ಇಂದ್ರಿಯಾದಿಗಳಿಂದ ಗ್ರಹಣಮಾಡಲು ಆಗದ ಪರಮಾತ್ಮರ ಶುದ್ಧಭಾವಗಳನ್ನು ನಿರ್ಮಲವಾದ ಧ್ಯಾನದಿಂದ ಪ್ರಕಾಶಿತನೂ ಆಗಿರುತ್ತಾನೆ.

ಅದನ್ನೇ ಸಮಾಧಿಶತಕದಲ್ಲಿ ವರ್ಣಿಸಿರುತ್ತಾರೆ:

**ನಿರ್ಮಲಃ ಕೇವಲಃ ಶುದ್ಧೋ ವಿವಿಕ್ತಃ ಪ್ರಭುರವ್ಯಯಃ।**
**ಪರಮೇಷ್ಠೀ ಪರಾತ್ಮೇತಿ ಪರಮಾತ್ಮೇಶ್ವರೋ ಜಿನಃ ॥೬॥**

**ಭಾವಾರ್ಥ:** ಪರಮಾತ್ಮನು ಕರ್ಮಮಲರಹಿತನೂ, ಕೇವಲ ಸ್ವಾಧೀನನೂ, ಸಾಧ್ಯವನ್ನು ಸಿದ್ಧಿಸಿಕೊಂಡ ಸಿದ್ಧನೂ, ಸಕಲ ದ್ರವ್ಯಗಳ ಅಸ್ತಿತ್ವಗಳಿಂದ ಭಿನ್ನವಾದ ಅಸ್ತಿತ್ವವುಳ್ಳವನೂ, ಅನಂತವೀರ್ಯಧಾರಿಯಾದ ಪ್ರಭುವೂ, ಅವಿನಾಶಿಯೂ, ಪರಮ ಶ್ರೇಷ್ಠವಾದ ಸ್ಥಾನದಲ್ಲಿ ವಿರಾಜಮಾನನಾಗಿರುವ ಪರಮೇಷ್ಠಿಯೂ, ಪರಮಶ್ರೇಷ್ಠಾತ್ಮನೂ, ಸಕಲ ಶುದ್ಧ ಗುಣನಿಧಿಯೂ ಆದ ಈಶ್ವರನೂ, ಪರಮ ವಿಜಯಶೀಲನಾದ ಜಿನೇಂದ್ರದೇವನೂ ಆಗಿರುತ್ತಾನೆ.

ಶ್ರೀ ಸಮಂತಭದ್ರಾಚಾರ್ಯರು ಸ್ವಯಂಭೂಸ್ತೋತ್ರದಲ್ಲಿ ಇಂತು ಬಣ್ಣಿಸಿರುವರು :

**ನ ಪೂಜಯಾರ್ಥಸ್ತ್ವಯಿ ವೀತರಾಗೇ ನ ನಿಂದಯಾ ನಾಥ**
**ವಿವಾಂತವೈರೇ**
**ತಥಾಪಿ ತೇ ಪುಣ್ಯಗುಣಸ್ಮೃತಿ ನಃ ಪುನಾತು ಚಿತ್ತಂ**
**ದುರಿತಾಂಜನೇಭ್ಯಃ ॥೫೭॥**
**ದುರಿತಮಲಕಲಂಕಮಷ್ಟಕಂ ನಿರುಪಮಯೋಗ ಬಲೇನ**
**ನಿರ್ದಹನ್ ।**
**ಅಭವದಭವ ಸೌಖ್ಯವಾನ್ ಭವಾನ್ ಮಮಾಪಿ ಭವೋ**
**ಪಶಾಂತಯೇ ॥೧೧೫॥**

**ಭಾವಾರ್ಥ:** ಪರಮಾತ್ಮನು ಪರಮವೀತರಾಗನಾಗಿರುವುದರಿಂದ ನಮ್ಮೆಲ್ಲರ (ಭಕ್ತರ) ಪೂಜಾಭಕ್ತಿಗಳಿಂದಲೂ ಪ್ರಸನ್ನನಾಗುವುದಿಲ್ಲವು. ವೈರಭಾವನೆಯು ಇಲ್ಲದಿರುವುದರಿಂದ ನಮ್ಮ ನಿಂದೆ ದೋಷಾರೋಪಣೆ ಮೊದಲಾದ ಕಾರ್ಯಗಳಿಂದಲೂ ಅಪ್ರಸನ್ನನಾಗುವುದಿಲ್ಲವು. ಹಾಗಿದ್ದರೂ ಅವರ ಪರಮ ಪಾವನವಾದ ಗುಣಗಳ ಸ್ಮರಣೆಯು ಮನಸ್ಸಿನ ಮಲಕಲಂಕವನ್ನು

ಹೋಗಲಾಡಿಸಿ ನಿರ್ಮಲವನ್ನಾಗಿ ಮಾಡುತ್ತದೆ. ಅನುಪಮಯೋಗಾಭ್ಯಾಸ ದಿಂದ ಎಂಟು ಕರ್ಮಗಳ ಕಠಿಣ ಕಲಂಕವನ್ನು ಧ್ವಂಸಮಾಡಿ ಅತೀಂದ್ರಿಯ ಸುಖವನ್ನು ಪ್ರಾಪ್ತಮಾಡಿಕೊಂಡ ಪರಮಾತ್ಮನು, ಸಂಸಾರಿ ಪ್ರಾಣಿಗಳ ಸಂತಾಪವನ್ನು ಶಾಂತಗೊಳಿಸಲು ಉದಾಸೀನ ಸಹಾಯಕನಾಗಿರುತ್ತಾನೆ. ಅಂತಹ ಪವಿತ್ರ ಆತ್ಮರ ಧ್ಯಾನದಿಂದಲೇ ನಾನೂ ಸಂಸಾರ ತಾಪವನ್ನು ನಾಶ ಗೊಳಿಸುವೆನು.



## ಬಹಿರಾತ್ಮನು ಪರವಸ್ತುಗಳನ್ನೇ ತಾನೆಂದು ತಿಳಿಯುತ್ತಾನೆ

**ದೇಹಾದಿಉ ಜೇ ಪರಿ ಕಹಿಯಾ ತೇ ಅಪ್ಪಾಣು ಮುಣೇ ಇ।**
**ಸೋ ಬಹಿರಪ್ಪಾ ಜಿಣಭಣಿಉ ಪುಣು ಸಂಸಾರ ಭಮೇ ಇ ॥೧೦॥**

**ಅನ್ವಯಾರ್ಥ :** ದೇಹಾದಿಉ ಜೇ ಪರಿ ಕಹಿಯಾ-ಆತ್ಮನಿಂದ ಭಿನ್ನ ಗಳಾದ ಶರೀರಾದಿಗಳನ್ನು, ತೇ ಅಪ್ಪಾಣು ಮುಣೇಇ-ತನ್ನ ಸ್ವರೂಪವೆಂದು ತಿಳಿಯುವವ, ಸೋ ಬಹಿರಪ್ಪಾ-ಅವನು ಬಹಿರಾತ್ಮನೆಂದು, ಜಿಣಭಣಿಉ-ಜಿನೇಶ್ವರರು ಹೇಳಿರುತ್ತಾರೆ. ಪುಣು ಸಂಸಾರ ಭಮೇಇ-ಪುನಃ ಪುನಃ ಸಂಸಾರದಲ್ಲಿ ಭ್ರಮಿಸುತ್ತಿರುತ್ತಾನೆ.

**ಭಾವಾರ್ಥ :** ಯಥಾರ್ಥವಾಗಿ ಆತ್ಮನು ಅಖಂಡನೂ. ಅಮೂರ್ತಿಯೂ, ಜ್ಞಾನಸ್ವರೂಪಿಯೂ, ಸ್ವಾಭಾವಿಕ ಪರಮ ವಿಶುದ್ಧನೂ, ಪರಮ ನಿರ್ಮಲ ನೀರಿನಂತೆ ವೀತರಾಗನೂ, ಶಾಂತಸ್ವರೂಪಿಯೂ, ಪರಮಾನಂದ ಮಯ ಅಖಂಡ ದ್ರವ್ಯವಾಗಿರುತ್ತಾನೆ. ಹೇಗೆಂದರೆ ಸಿದ್ಧ ಪರಮಾತ್ಮನು ಸಿದ್ಧಕ್ಷೇತ್ರದಲ್ಲಿ ನಿತ್ಯನಿರಂಜನ ಶುದ್ಧ ದ್ರವ್ಯವಾಗಿರುವಂತೆ, ಈ ಆತ್ಮನು ಶರೀರದಲ್ಲಿ ವಾಸಿಸುತ್ತಿದ್ದರೂ, ತನ್ನಾತ್ಮನಿಗೂ, ಪರಮಾತ್ಮನಿಗೂ ಪ್ರದೇಶ ಗಳ ದೃಷ್ಟಿಯಿಂದಲೂ, ಆಕಾರದ ದೃಷ್ಟಿಯಿಂದಲೂ, ಸರ್ವಥಾ ಭಿನ್ನತ್ವವೇ ಇರುತ್ತದೆ. ಆದರೆ ಗುಣಗಳ ದೃಷ್ಟಿಯಿಂದ ಏಕತ್ವವಿದೆ. ನಿಜವಾಗಿಯೂ

ಒಬ್ಬಾತ್ಮನಲ್ಲಿ ಎಷ್ಟು ಗುಣಗಳಿರುತ್ತವೆಯೋ ಅಷ್ಟೇ ಗುಣಗಳು ಅನ್ಯ ಆತ್ಮರುಗಳಲ್ಲಿರುತ್ತವೆ. ಪ್ರದೇಶದ ಗಣನೆಯು ಕೂಡಾ ಸರಿಸಮಾನವೇ ಆಗಿರುತ್ತದೆ. ಅಂದರೆ ಪ್ರತಿಯೊಂದು ಜೀವ ದ್ರವ್ಯವು ಅಸಂಖ್ಯಾತ ಪ್ರದೇಶಿಯಾಗಿರುತ್ತದೆ.

ಹೀಗೆ ಯಾವನು ಆತ್ಮದ್ರವ್ಯದ ಸ್ವಭಾವವನ್ನೊಪ್ಪಿಕೊಳ್ಳದೆ, ಎಂಟು ಕರ್ಮಗಳ ಸಂಯೋಗ ಸಂಬಂಧವಾಗುವುದರಿಂದುಂಟಾದ ಉದಯದಿಂದಾಗಲೀ, ಫಲದಿಂದಾಗಲೀ ಯಾವ ಯಾವ ಅಶುದ್ಧ ಅವಸ್ಥೆಗಳು ತಲೆದೋರುತ್ತವೆಯೋ ಅವೆಲ್ಲವನ್ನು ಆತ್ಮನ ಸ್ವಭಾವವೆಂದು ತಿಳಿಯುವನೋ ಅವನು ಬಹಿರಾತ್ಮನು.

ಉದಾ : ನೀರಿನಲ್ಲಿ ಭಿನ್ನ ಭಿನ್ನ ಪ್ರಕಾರದ ಬಣ್ಣಗಳನ್ನು ಮಿಶ್ರ ಮಾಡುವುದರಿಂದ (ಕೂಡಿಸುವುದರಿಂದ) ನೀರು ಕೆಂಪು, ಹಸರು, ಹಳದಿ, ಕಪ್ಪು, ನೀಲ ಮೊದಲಾದ ರೂಪವಾಗಿ ತೋರುವ ನೀರನ್ನು ಇದು ಸ್ವಾಭಾವಿಕವಾದುದೆಂದು ತಿಳಿಯುವುದಾದರೆ, ಅವನು ನಿಜವಾಗಿಯೂ ಮೂಢನೇ, ಅಜ್ಞಾನಿಯೆಂದೇ ಹೇಳಬೇಕು. ಅವನು ನೀರಿನ ಸ್ಥಾನದಲ್ಲಿ ಬಣ್ಣವುಳ್ಳ ನೀರನ್ನು ಕುಡಿದು, ಅದರ ನೈಜವಾದ ರುಚಿ, ಸ್ವಾದವನ್ನು ಕಾಣಲು ಆಗದಂತೆ, ಕರ್ಮಗಳ ಉದಯದಿಂದುಂಟಾಗುವ ವಿಕಾರೀ ಅವಸ್ಥೆಗಳನ್ನೇ ಆತ್ಮನೆಂದು ಗ್ರಹಿಸಿ ಧ್ಯಾನಿಸುವ ಅಜ್ಞಾನಿಯು ಆತ್ಮನ ನಿಜವಾದ ಜ್ಞಾನಾನಂದಮಯವಾದ ಸ್ವಾಭಾವಿಕ ರುಚಿಯನ್ನು ಪಡೆಯಲಾರನು, ಆತ್ಮಾನುಭವ ಅವನಿಗೆ ಪ್ರಾಪ್ತವೂ ಆಗಲಾರದು. ಯಾಕೆಂದರೆ ಅವನ್ನು ವಿಪರೀತ ರುಚಿಯನ್ನೇ ಅನುಭವಿಸುತ್ತಾನೆ (ಭಾವಿಸುತ್ತಾನೆ). ಜ್ಞಾನಾವರಣ, ದರ್ಶನಾವರಣ, ಅಂತರಾಯ ಕರ್ಮಗಳ ಕ್ಷಯೋಪಶಮದಿಂದ ಈ ಸಂಸಾರೀ ಜೀವಗಳಲ್ಲಿ ಅಲ್ಪವೂ, ಅಶುದ್ಧವೂ ಆದ ಜ್ಞಾನದರ್ಶನವೀರ್ಯಾದಿಗಳುಂಟಾಗುತ್ತವೆ. ಅವುಗಳ ಉದಯದಿಂದ ಮಲಿನನಾಗುತ್ತಾ ಇರುತ್ತಾನೆ.

ಎಲ್ಲಿ ಸರ್ವಘಾತಿ ಕರ್ಮಸ್ಪರ್ಧಕಗಳ ಉದಯಾಭಾವಗಳ ಲಕ್ಷಣವು ಕ್ಷಯವಾಗಿರುವುದೋ, ಅಂದರೆ ಫಲಗಳನ್ನು ಕೊಡದೆ ಉದರಿಹೋಗುವುದೋ,

ಆಗಾಮಿ ಕಾಲದಲ್ಲಿ ಉದಯಕ್ಕೆ ಬರುವ ಸತ್ತಾ ರೂಪ ಉಪಶಮವಾಗುವುದೋ, ದೇಶಘಾತಿ ಸ್ಪರ್ಧಕಗಳ ಉದಯುವಾಗುವುದೋ ಅದಕ್ಕೇನೇ ಕ್ಷಯೋಪಶಮವೆಂದು ಹೇಳುತ್ತಾರೆ. ಈ ಮಲಿನವಾದ ಅಲ್ಪಜ್ಞಾನದರ್ಶನ ವೀರ್ಯಗಳನ್ನು ಪರಿಪೂರ್ಣ ಜ್ಞಾನದರ್ಶನವೀರ್ಯವೆಂದು ತಿಳಿಯುವುದೇ ಮಿಥ್ಯಾತ್ವವಾಗಿರುತ್ತದೆ. ಇದೇ ಪ್ರಕಾರವಾಗಿ ಮೋಹನೀಯ ಕರ್ಮದ ಉದಯದಿಂದ ಕ್ರೋಧ, ಮಾನ, ಮಾಯಾ, ಲೋಭ ಭಾವಗಳೂ, ಹಾಸ್ಯ, ರತಿ, ಅರತಿ, ಶೋಕ, ಭಯ, ಜುಗುಪ್ಸಾ, ಸ್ತ್ರೀವೇದ, ಪುಂವೇದ, ನಪುಂಸಕ ವೇದ ಭಾವಗಳೂ ಉಂಟಾಗುತ್ತವೆ. ಒಂದೊಂದು ಸರ್ತಿ ಲೋಭಕಷಾಯದ ತೀವ್ರ ಉದಯುವಾಗುವಾಗ ಅದಕ್ಕೆ ಅಶುಭರಾಗವೆಂತಲೂ, ಮಂದಾಗುವಾಗ ಶುಭರಾಗವೆಂತಲೂ ಹೇಳುತ್ತಾರೆ.

ಮಾನ, ಮಾಯಾ, ಕ್ರೋಧಗಳ ತೀವ್ರ ಉದಯಕ್ಕೂ ಕೂಡ ಅಶುಭ ರಾಗವೆಂದೂ, ಮಂದ ಉದಯಕ್ಕೂ ಶುಭರಾಗವೆಂದೂ ಹೇಳುತ್ತಾರೆ. ದೇವ ಪೂಜೆ, ಭಕ್ತಿ, ದಾನ, ಪರೋಪಕಾರ, ಸೇವೆ, ಕ್ಷಮಾ, ನಮ್ರತೆ, ಸರಳತೆ, ಸತ್ಯ, ಸಂತೋಷ, ಸಂಯಮ, ಉಪವಾಸಾದಿ ತಪಸ್ಸು, ಆಹಾರದಾನ, ಔಷಧದಾನ, ಅಭಯದಾನ, ವಿದ್ಯಾದಾನ, ಅಲ್ಪಮಮತ್ವ ಪರಿಣಾಮ ಮತ್ತು ಬ್ರಹ್ಮಚರ್ಯ ಪರಿಪಾಲನೆ ಮೊದಲಾದ ಭಾವನೆಗಳಿಗೆ ಶುಭಭಾವವೆಂದೂ, ಶುಭೋಪಯೋಗವೆಂದೂ ಹೇಳುತ್ತಾರೆ. ಇಂತಹ ಭಾವನೆಗಳಿಂದಲೇ ಪುಣ್ಯ ಕರ್ಮದ ಬಂಧವಾಗುವುದು.

ಹಿಂಸೆ, ಅಸತ್ಯ, ಚೌರ್ಯ, ಕುಶೀಲ, ಮಮತ್ವ, ಜುಗಾರೀ, ಮಾಂಸಾ ಹಾರ, ಮದ್ಯಪಾನ, ಬೇಟೆ, ವೇಶ್ಯಾಸೇವನೆ, ಪರಸ್ತ್ರೀಸೇವನೆ, ಪರರಿಗೆ ಅಪ ಕಾರತ್ವ, ನೀಚವ್ಯವಹಾರ, ಇಂದ್ರಿಯಲೋಲುಪತೆ, ಅಧಿಕಕಾಮ ವಾಸ ನೆಯೇ ಮೊದಲಾದ ಭಾವಗಳಿಗೆ ಅಶುಭಭಾವವೆಂದೂ, ಅಶುಭೋಪಯೋಗ ವೆಂದೂ ಹೇಳುತ್ತಾರೆ. ಈ ಅಶುಭ ಭಾವಗಳಿಂದಲೇ ಪಾಪಕರ್ಮಗಳ ಬಂಧವಾಗುತ್ತದೆ. ಈ ಮೋಹನೀಯ ಕರ್ಮಜನಿತವಾದ ಮಲಿನತೆಯೂ, ಅಶುಚಿತ್ವವೂ, ಆಕುಲತೆಯುಂಟಾಗುವಿಕೆಯೂ, ದುಃಖದಾಯಕವೂ, ಅಶಾಂ

ತತಿಯೂ ಆದ ಭಾವಗಳನ್ನು ಆತ್ಮಭಾವವೆಂದು ನಂಬುವುದು, ತಿಳಿಯು ವುದು ಕೂಡಾ ಮಿಥ್ಯಾತ್ವವಾಗಿದೆ.

ಈ ಆತ್ಮನು ಅಘಾತಿಕರ್ಮಗಳೊಂದಾದ ಆಯುಷ್ಯಕರ್ಮದ ಉದಯ ದಿಂದ ನರಕ, ತಿರ್ಯಂಚ. ಮನುಷ್ಯ ಮತ್ತು ದೇವಗತಿಗಳೆಂಬ ನಾಲ್ಕು ಪ್ರಕಾ ರದ ಶರೀರದಲ್ಲಿ ಬಂಧಿತನಾಗುತ್ತಾನೆ. ಈ ಕೈದಖಾನೆಯನ್ನೇ (ಜೈಲನ್ನೇ) ಆತ್ಮನ ಮನೆಯೆಂದು ಭಾವಿಸುವುದು ಮಿಥ್ಯಾತ್ವನಾಗಿದೆ. ನಾಮಕರ್ಮದ ಉದಯದಿಂದ ಶರೀರವು ಸುಂದರ, ಕುರೂಪವೆಂದೂ, ರೋಗಿ, ನಿರೋಗಿ ಯೆಂದೂ, ಬಲಿಷ್ಠ, ಬಲಹೀನನೆಂದೂ ಇವೇ ಮೊದಲಾದ ಅವಸ್ಥೆಗಳನ್ನೂ, ಗೋತ್ರ ಕರ್ಮಗಳ ಉದಯದಿಂದಾಗುವ ಉಚ್ಚನೀಚತ್ವಾದಿಗಳನ್ನೂ, ವೇದ ಕರ್ಮದ ಉದಯದಿಂದಾಗುವ ಅವಸ್ಥೆಗಳಾದ ಧನ, ಕುಟುಂಬ, ರಾಜ್ಯ, ಭೂಮಿ, ವಾಹನ, ಭವನ ಮೊದಲಾದ ಒಳ್ಳೆಯ, ಕೆಟ್ಟ, ಚೇತನ, ಅಚೇತನ ಪದಾರ್ಥಗಳ ಸಂಬಂಧವಾಗುವಿಕೆ ಮೊದಲಾದುವುಗಳನ್ನೂ ತನ್ನ ಅವಸ್ಥೆ ಗಳೆಂದೇ ತಿಳಿಯುವುದೂ ಕೂಡ ಮಿಥ್ಯಾತ್ವವೇ ಆಗಿರುತ್ತದೆ.

ಈ ಬಹಿರಾತ್ಮನು ಅಜ್ಞಾನದಿಂದ ಕರ್ಮಜನಿತ ಅವಸ್ಥೆಗಳನ್ನು ತನ್ನ ವೆಂದೇ ಪರಿಭಾವಿಸುತ್ತ ತನ್ನಾತ್ಮನ ಸ್ವಭಾವವನ್ನು ಮರೆತು, ಆತ್ಮಕಲ್ಯಾಣ ವನ್ನು ಮಾಡಿಕೊಳ್ಳದೇ ನಿರಂತರ ಶುಭಾಶುಭಕರ್ಮಗಳನ್ನು ಬಂಧಿಸಿಕೊಂಡು ಒಂದು ಗತಿಯಿಂದ ಮತ್ತೊಂದು ಗತಿಗೂ, ಆದರಿಂದಲು ಮತ್ತೊಂದು ಗತಿಗೂ ಹೀಗೆ ಅನಾದಿ ಕಾಲದಿಂದ ಭ್ರಮಿಸುತ್ತಿರುವನು.

ಯದಿ ಯಾವನು ಮುನಿಯ ಅಥವಾ ಗೃಹಸ್ಥನ ಚಾರಿತ್ರವನ್ನು ಪಾಲಿಸುತ್ತ, ಅದನ್ನು ಕೂಡ ಆತ್ಮನ ಸ್ವಭಾವವೆಂದು ಪರಿಗಣಿಸುತ್ತ, ನಾನು ಮುನಿಯೆಂದೂ, ನಾನು ಗೃಹಸ್ಥನೆಂದೂ ಅಭಿಮಾನಪಡುವವನೂ ಕೂಡಾ ಬಹಿರಾತ್ಮನೇ ಆಗಿರುತ್ತಾನೆ.

ಒಂದು ವೇಳೆ ಜ್ಞಾನಿಯಾದವನು ಮುನಿಯ ಅಥವಾ ಶ್ರಾವಕನ ಚಾರಿತ್ರವನ್ನು ಪಾಲಿಸುತ್ತಿರುವುದು ವಿಭಾವವಲ್ಲದೆ ಸ್ವಭಾವವಲ್ಲವೆಂದು ತಿಳಿ ಯುತ್ತಾ, ಪರಮ ಶುದ್ಧೋಪಯೋಗಭಾವರೂಪವೇ ಆತ್ಮನಾಗಿರುವನು,

ಯಾವ ಸಾಧುವಿಗೆ ಉಂಟಾದ ಶುಕ್ಲಧ್ಯಾನವು ಪರಮಶುದ್ಧೋಪವಾಗ ಲಾರದು, ಯಾಕೆಂದರೆ ಹತ್ತನೆಯ ಗುಣಸ್ಥಾನದವರೆವಿಗೂ ಮೋಹನೀಯ ಕರ್ಮದ ಅಸ್ತಿತ್ವವು ಇದ್ದೇ ಇರುತ್ತದೆ, ಹನ್ನೊಂದು ಮತ್ತು ಹನ್ನೆರಡನೆಯ ಗುಣಸ್ಥಾನಗಳಲ್ಲಿ ಸಂಪೂರ್ಣ ಜ್ಞಾನವಿಲ್ಲದಿರುವುದರಿಂದಲೇ ಅಜ್ಞಾನತ್ವ ವೆಂದೇ ಭಾವಿಸಬೇಕು. ಇದನ್ನು ಆತ್ಮನ ಸ್ವಭಾವವೆಂದು ಪರಿಭಾವಿಸುವುದೂ ಕೂಡಾ ಮಿಥ್ಯಾತ್ವಭಾವವೇ.

ಶ್ರೀ ಸಮಯಸಾರದಲ್ಲಿ ಹೇಳಿರುತ್ತಾರೆ :

**ಪರಮಾಣು ಮಿತ್ತಿಯಂ ಪಿಹು ರಾಗಾದೀಣಂತು ವಿಜ್ಜದೇ ಜಸ್ಸ।**
**ಣವಿ ಸೋ ಜಾಣದಿ ಅಪ್ಪಾ ಣಯಂ ತು ಸವ್ವಾಗಮಧರೋ**
ವಿ ॥ ೨೧೪ ॥

**ಭಾವಾರ್ಥ :** ಯಾವ ಆತ್ಮನಲ್ಲಿ ಅಣುಮಾತ್ರ ಅಜ್ಞಾನ ಸಂಬಂಧ ವಾದ ರಾಗ ಭಾವವಿರುವವರೆಗೂ ಆತನು ಪರಭಾವ ಆತ್ಮನೇ. ಅವನು ಶ್ರುತಕೇವಲಿಗಳಂತೆ ಅನೇಕ ಶಾಸ್ತ್ರಗಳ ಜ್ಞಾನವುಳ್ಳವನಾಗಿದ್ದರೂ ಆತ್ಮ ಸ್ವಭಾವವನ್ನರಿಯದವನು ಬಹಿರಾತ್ಮನೇ ಆಗಿರುತ್ತಾನೆ.

ಅಮೃತಚಂದ್ರಾಚಾರ್ಯರು ಪುರುಷಾರ್ಥಸಿದ್ಧ್ಯುಪಾಯದಲ್ಲಿ ವರ್ಣಿ ಸಿರುತ್ತಾರೆ.

**ಪರಿಣಮಮಾಣೋ ನಿತ್ಯಂ ಜ್ಞಾನ ವಿವರ್ತೈರನಾದಿ ಸಂತತ್ಯಾ ।**
**ಪರಿಣಾಮಾನಾಂ ಸ್ವೇಷಾಂ ಸ ಭವತಿ ಕರ್ತಾ ಚ ಭೋಕ್ತಾ ಚ ॥೧೦॥**
**ಜೀವಕೃತಂ ಪರಿಣಾಮಂ ನಿಮಿತ್ತ ಮಾತ್ರಂ ಪ್ರಪದ್ಯ ಪುನರನ್ಯೇ।**
**ಸ್ವಯಮೇವ ಪರಿಣಮಂತೇಽತ್ರ ಪುದ್ಗಲಾಃ ಕರ್ಮಭಾವೇನ ॥ ೧೨ ॥**
**ಪರಿಣಮಮಾಣಸ್ಯ ಚಿತಶ್ಚಿದಾತ್ಮಕೈಃ ಸ್ವಯಮಪಿ ಸ್ವಕೈರ್ಭಾವೈಃ।**
**ಭವತಿ ಹಿ ನಿಮಿತ್ತ ಮಾತ್ರಂ ಪೌದ್ಗಲಿಕಂ ಕರ್ಮ ತಸ್ಯಾಪಿ ॥ ೧೩ ॥**
**ಏವ ಮಯಂ ಕರ್ಮಕೃತೈರ್ಭಾವೈರಸಮಾಹಿತೋಽಪಿ ಯುಕ್ತ ಇವ।**
**ಪ್ರತಿಭಾತಿ ಬಾಲಿಶಾನಾಂ ಪ್ರತಿಭಾಸಃ ಸಖಲು ಭವಬೀಜಂ ॥ ೧೪ ॥**

**ಭಾವಾರ್ಥ :** ಈ ಜೀವನು ಅನಾದಿ ಕಾಲದಿಂದ ಜ್ಞಾನಾವರಣಾದಿ ಎಂಟು ಕರ್ಮಗಳ ಉದಯದೊಡಗೂಡಿ ಪರಿಣಮಿಸುತ್ತ ತನ್ನನ್ನು ಕರ್ತೃವೆಂದೂ, ಭೋಕ್ತೃವೆಂದೂ, ಉತ್ತಮ ಕಾರ್ಯವಾಡಿದೆನೆಂದೂ, ಕೆಟ್ಟ ಕೆಲಸವನ್ನು ಮಾಡಿದನೆಂದೂ, ಮಹಾಸುಖಿಯೆಂದೂ, ದುಃಖಿಯೆಂದೂ ಇವೇ ಮೊದಲಾಗಿ ಅಶುದ್ಧ ಪರಿಣಾಮದಿಂದ ಕಲ್ಪಿಸುತ್ತಿರುವನು. ಹೀಗೆ ಈ ಅಜ್ಞಾನಮಯ ಜೀವನ ಪರಿಣಾಮಗಳ ನಿಮಿತ್ತದಿಂದ ಅನ್ಯ ಪೌದ್ಗಲಿಕ ಕರ್ಮವರ್ಗಣೆಗಳು ಸ್ವಯಂ ಕರ್ಮರೂಪ ತಾಳಿ ಬಂಧಿಸುತ್ತವೆ. ಯಾವಾಗ ಜೀವನು ಸ್ವಯಂ ಅಶುಭಭಾವಗಳಲ್ಲಿ ಪರಿಣಮಿಸುತ್ತಾನೆಯೋ, ಆಗ ಪೂರ್ವದಲ್ಲಿ ಬಂಧಿಸಲ್ಪಟ್ಟ ಪುದ್ಗಲ ಕರ್ಮಗಳು ಉದಯಕ್ಕೆ ಬಂದು ಅಶುದ್ಧ ಭಾವಗಳ ನಿಮಿತ್ತ ಕಾರಣಗಳಾಗಿರುತ್ತವೆ. ಹೀಗೆ ಕರ್ಮಫಲ ಭಾವಗಳನ್ನು ಮತ್ತು ಕರ್ಮಬಂಧನನ್ನು ಕರ್ಮೋದಯಗಳಿಲ್ಲವನ್ನು ಬಹಿರಾತ್ಮನು ತನ್ನವೆಂದೇ ತಿಳಿಯುತ್ತಿರುತ್ತಾನೆ. ನಿಶ್ಚಯುವಾಗಿಯು ಆತ್ಮನು ಈ ಎಲ್ಲ ಕರ್ಮಕೃತವಾದ ಭಾವಗಳಿಂದಲೂ ಭಿನ್ನನಾಗಿದ್ದರೂ, ಅಜ್ಞಾನೀ ಬಹಿರಾತ್ಮನು ವಿಭಾವಾದಿ ಪರಿಣಾಮಗಳನ್ನು ತನ್ನವೆಂದೇ ಭಾವಿಸುವುದೇ ಸಂಸಾರ ಭ್ರಮಣೆಯ ಬೀಜವಾಗಿರುವುದಲ್ಲದೆ, ಸಂಸಾರ ವೃಕ್ಷವನ್ನು ಬೆಳೆಸುವುದರಲ್ಲಿ ಮುಖ್ಯ ಕಾರಣವಾಗಿರುತ್ತದೆ.

ಈ ಬಹಿರಾತ್ಮನು ಮೋಹಾಂಧನಾಗಿ ಸಂಸಾರರೂಪ ವನದಲ್ಲಿ ಭ್ರಮಿಸುತ್ತಿರುತ್ತಾನೆ.



## ಜ್ಞಾನಿಯು ಪರವಸ್ತುಗಳನ್ನು ತಾನೆಂದು ತಿಳಿಯಬಾರದು

**ದೇಹಾದಿಉ ಜೇ ಪರಕಹಿಯಾ ತೇ ಅಪ್ಪಾಣು ಣ ಹೋಹಿಂ।**
**ಇಉ ಜಾಣೇ ವಿಣು ಜೀವ ತುಹು ಅಪ್ಪಾ ಅಪ್ಪ ಮುಣೇಹಿಂ ॥೧೧॥**

**ಅನ್ವಯಾರ್ಥ :** ದೇಹಾದಿಉ ಜೇ ಪರಕಹಿಯಾ–ಆತ್ಮನಿಂದ ಭಿನ್ನಗಳೆಂದು ಹೇಳಲ್ಪಟ್ಟಿರುವ ಶರೀರಾದಿಗಳು, ತೇ ಅಪ್ಪಾಣು ಣ ಹೋಹಿಂ–

ಆತ್ಮನಿಗೆ ಸಂಬಂಧಪಟ್ಟವುಗಳಾಗಿ ಆಗಲಾರವು. ಇಉ ಜಾಣೇ ವಿಣು-ಎಂದು ತಿಳಿದು, ಜೀವ-ಎಲೈ ಜೀವನೇ!, ತುಹು ಅಪ್ಪಾ ಅಪ್ಪ ಮುಣೇಹಿಂ -ನೀನು ನಿನ್ನಾತ್ಮನೆಂದು ನಿಶ್ಚೈಸಿಕೋ ಅಂದರೆ ಯಥಾರ್ಥ ಆತ್ಮಜ್ಞಾನ ವನ್ನು ಪಡೆಯಬೇಕೆಂದು ಭಾವವು.

ಭಾವಾರ್ಥ : ಬಹಿರಾತ್ಮನು ಪರಪದಾರ್ಥಗಳನ್ನು ಮತ್ತು ಪರಭಾವ ಗಳನ್ನು ತನ್ನವೆಂದು ಭಾವಿಸುವಂತೆ, ಅಂತರಾತ್ಮನು ಭಾವಿಸಲಾರನು. ಆತನು (ಅಂತರಾತ್ಮನು) "ತನ್ನಾತ್ಮನು ಆತ್ಮಸ್ವರೂಪನಾಗಿರುನು. ತನ್ನ ಸ್ವಭಾವವು ಅನ್ಯ ಆತ್ಮರುಗಳಿಂದಲೂ, ಪುದ್ಗಲಾದಿ ಐದು ವ್ರತಗಳಿಂದಲೂ, ಜ್ಞಾನವರ್ಣಾದಿ ಎಂಟು ಕರ್ಮಗಳಿಂದಲೂ ಮತ್ತು ಸಕಲ ರಾಗಾದಿ ಭಾವ ಗಳಿಂದಲೂ ಪೂರ್ಣ ರೀತ್ಯಾ ಭಿನ್ನವಾದ ಪರಮ ಶುದ್ಧವಾದ ದ್ರವ್ಯವಾಗಿರು ತ್ತದೆ. ಭೇದವಿಜ್ಞಾನವೆಂಬ ಸತ್ಕಲೆಯಿಂದ ತನ್ನಾತ್ಮನು ಸಕಲ ಪರವಸ್ತು ಗಳಿಂದ ಭಿನ್ನನಾದವನು" ಎಂದು ನಂಬುತ್ತಾನೆ. ಅದರ ಪ್ರಭಾವದಿಂದಲೇ ಭ್ರಮರೂಪ ಭಾವನೆಯು ನಷ್ಟವಾಗಿ ಬೆರೆತ ಹಾಲು ನೀರಿನಿಂದ ಹಂಸರಾಜನು ಹಾಲನ್ನೇ ಗ್ರಹಣ ಮಾಡುವಂತೆಯೂ, ಕೃಷಿಗಾರನು ಬತ್ತದಲ್ಲಿ ಅಕ್ಕಿ ಮತ್ತು ತೌಡು ಬೇರೆಬೇರೆಯೆಂದು ತಿಳಿಯುವಂತೆಯೂ, ಚಿನಿವಾರನು ಚಿನ್ನದ ಮಾಲೆ ಯಲ್ಲಿರುವ ಚಿನ್ನ ಮತ್ತು ನೂಲು ಭಿನ್ನಭಿನ್ನವೆಂದು ಭಾವಿಸುವಂತೆಯೂ, ಉಪ್ಪು ಮಿಶ್ರಮಾಡಿ ಬೇಯಿಸಲ್ಪಟ್ಟ ತರ್ಕಾರಿಗಳಲ್ಲಿ ಉಪ್ಪಿನ ಸ್ವಾದವನ್ನು ತರ್ಕಾರಿಗಳಿಗಿಂತ ಭಿನ್ನವೆಂದು ತಿಳಿಯುವ ಜ್ಞಾನಿಯಂತೆಯೂ, ಚತುರನಾದ ವೈದ್ಯರಾಜನು ಗುಳಿಗೆಯಲ್ಲಿ ಅನೇಕ ಔಷಧಿಗಳನ್ನು ಬೇರೆಬೇರೆ ತಿಳಿಯು ವಂತೆಯೂ ಪರಮ ಜ್ಞಾನಿಯಾದ ಅಂತರಾತ್ಮನು ಆತ್ಮನನ್ನು ಎಲ್ಲಾ ಶರೀ ರಾದಿಗಳಿಂದಲೂ, ಪರದ್ರವ್ಯಗಳಿಂದಲೂ ಭಿನ್ನನೆಂದೇ ಭಾವಿಸುತ್ತಾನೆ.

ಯಥಾರ್ಥವಾಗಿ ಆತ್ಮನು ಅನುಭವ ಗಮ್ಯನಾದುದರಿಂದ ಮನಸ್ಸಿನ ಮೂಲಕ ಚಿಂತಿಸಲು, ವಚನಗಳಿಂದ ವರ್ಣಿಸಲು, ಶರೀರದಿಂದ ಸ್ಪರ್ಶಿಸಲು ಸಾಧ್ಯವಾಗಲಾರದು. ಯಾಕೆಂದರೆ ಮನಸ್ಸಿನ ಕಾರ್ಯವು ಕ್ರಮ ಕ್ರಮ ಯಾವುದಾದರೊಂದು ಸ್ವರೂಪವನ್ನು ವಿಚಾರಿಸಬಹುದು; ವಚನದಿಂದ ಒಂದೊಂದೇ ಗುಣವನ್ನಾಗಲಿ ಅಥವಾ ಸ್ವಭಾವವನ್ನಾಗಲೀ ಏಕ ಕಾಲದಲ್ಲಿ

ಒಂದೇ ವಿಷಯುವನ್ನು ಹೇಳಬಹುದು; ಶರೀರವು ಸ್ಥೂಲ ದ್ರವ್ಯವನ್ನೇ ಸ್ಪರ್ಶಿಸಬಹುದು. ಹೀಗಿರುವಾಗ ಅನಂತ ಗುಣಗಳ ಮತ್ತು ಪರ್ಯಾಯಗಳ ಪಿಂಡನಾದ ಆತ್ಮನ ಸ್ವರೂಪವು ಅನುಭವಗಮ್ಯವು (ಅನುಭವಗೋಚರವೆಂದು ಭಾವವು). ವಚನಗಳಿಂದ ಮಾತ್ರ ಸಂಕೋಚರೂಪವಾಗಿಯೂ, ಮನಸ್ಸಿನ ಮೂಲಕ ಕ್ರಮ ವಿಚಾರ ರೂಪವಾಗಿಯೂ ಹೇಳಬಹುದಾದ್ದರಿಂದ ಶಾಸ್ತ್ರಗಳ ಮೂಲಕವಾಗಿಯೂ, ಯಥಾರ್ಥ ಗುರುವಿನ ಸದುಪದೇಶದಿಂದಲೂ ಆತ್ಮ ದ್ರವ್ಯದ ಗುಣ ಪರ್ಯಾಯಗಳನ್ನರಿತು ಶುದ್ಧ ಸ್ವರೂಪವನ್ನು ತಿಳಿಯಬೇಕು. ತಥಾ ಪರದ್ರವ್ಯಗಳ ಸಂಯೋಗದಿಂದುಂಟಾಗುವ ಅಶುದ್ಧ ಸ್ವಭಾವವನ್ನು ಅರ್ಥಾತ್ ದ್ರವ್ಯಾರ್ಥಿಕ ನಯದ ದೃಷ್ಟಿಯಿಂದಲೂ, ಪರ್ಯಾಯಾರ್ಥಿಕ ನಯದ ದೃಷ್ಟಿಯಿಂದಲೂ ಅಥವಾ ನಿಶ್ಚಯ ನಯದಿಂದಲೂ ಆತ್ಮನನ್ನು ಚೆನ್ನಾಗಿ ತಿಳಿಯಬೇಕು.

ಪರವಸ್ತುಗಳ ಸಂಬಂಧವಿಲ್ಲದವನೂ, ಜ್ಞಾನ, ದರ್ಶನ, ಸುಖ, ವೀರ್ಯಗಳೇ ಮೊದಲಾದ ಗುಣಗಳಿಗೆ ಸ್ವಾಮಿಯಾದ ಈ ಆತ್ಮನ ಧನವೆಂದರೆ ಗುಣಗಳ ಸಮೂಹವಾಗಿರುತ್ತದೆ. ಈತನ ನಿವಾಸ ಸ್ಥಾನವು ಅಥವಾ ಭವನವು ಸ್ವಭಾವವೇ ಆಗಿರುತ್ತದೆ. ಭೋಜನ ಪಾನಾದಿಗಳು ಆನಂದ ರಸಾಮೃತವೇ ಆಗಿರುತ್ತದೆ. ಆತ್ಮನಲ್ಲಿಯೇ ಸಮ್ಯಗ್ದರ್ಶನ, ಸಮ್ಯಗ್‌ಜ್ಞಾನ, ಸಮ್ಯಕ್ಚಾರಿತ್ರ, ಸಮ್ಯಕ್ತ್ವ, ತಪಸ್ಸು, ಸಂಯಮ, ತ್ಯಾಗ, ಸಂವರತತ್ವ, ನಿರ್ಜರಾ ತತ್ವ ಮತ್ತು ಮೋಕ್ಷ ತತ್ವಾದಿಗಳಿರುತ್ತವೆ. ಯಾವಾತ್ಮನು ತನ್ನ ಉಪಯೋಗಾದಿಗಳನ್ನು ತನ್ನಲ್ಲಿಯೇ ಉಪಯೋಗಿಸಿದ್ದಾದರೆ ಅವನು ಮೋಕ್ಷ ಮಾರ್ಗವನ್ನು ಪಾಲಿಸದಂತಾಗುವುದು.

ಈ ಆತ್ಮನು ತನ್ನಲ್ಲಿಯೇ ಕ್ರೀಡಿಸುತ್ತ ಮೆಲ್ಲ ಮೆಲ್ಲನೆ ಶುದ್ಧನಾಗುತ್ತ ಕ್ರಮವಾಗಿ ಪರಮಾತ್ಮನಾಗುತ್ತಾನೆ. ಮನ, ವಚನ, ಕಾಯಗಳ ಶುಭಾಶುಭ ಕ್ರಿಯೆಗಳೆಲ್ಲವು ಪರವಸ್ತುಗಳೇ. ಹಾಗೆ ಹದಿನಾಲ್ಕು ಗುಣಸ್ಥಾನಗಳ ಸೋಪಾನಗಳು ಕೂಡ ನಿಜ ಸ್ವಭಾವವಲ್ಲವು. ಆತ್ಮನು ಪರಮ ಪಾರಿಣಾಮಿಕವಾದ ಜೀವತ್ವ ಭಾವದ ಭಂಡಾರಿಯಾಗಿರುತ್ತಾನೆ. ಆತನ ಪ್ರಭಾವಾತ್ಮಕವಾದ ಜ್ಯೋತಿಯು ಸಕಲ ಕರ್ಮರಹಿತವಾದ ಸಿದ್ಧಗತಿಯಲ್ಲಿಯೇ ಪ್ರಕ

ಟಕ್ಕೆ ಬರುವುದು. ಅಂತರಾತ್ಮನು ತನ್ನಾತ್ಮನನ್ನು ಪರಭಾವಗಳ ಅಕರ್ತೃವೆಂದೂ, ಅಭೋಕ್ತೃವೆಂದೂ, ಜ್ಞಾನಚೇತನಾಮಯನೆಂದೂ, ರಾಗದ್ವೇಷ ರೂಪವಾದ ಕಾರ್ಯಗಳನ್ನೆಸಗುವ ಅನುಭವರೂಪ ಕರ್ಮ ಚೇತನೆಯನ್ನು ಮತ್ತು ಸುಖ ದುಃಖಗಳನ್ನು ಭೋಗಿಸುವರೂಪ ಕರ್ಮ ಫಲಚೇತನಾಮಯನಲ್ಲವೆಂದೂ ತಿಳಿಯುತ್ತಾನೆ

ಆತ್ಮ ಸ್ವಭಾವವನ್ನರಿತ ಅಂತರಾತ್ಮನೊಬ್ಬನೇ ಆತ್ಮರಸಿಕನು. ಆತನು ಆತ್ಮಾನಂದ ಪ್ರೇಮಿಯು; ವಿಷಯ ಭೋಗಗಳಿಂದುಂಟಾಗುವ ಸುಖದ ಶ್ರದ್ಧೆಯಿಲ್ಲದವನಾಗಿ ಆತ್ಮಾನುಭವರೂಪ ಕಾರ್ಯವು ಮಾತ್ರವಿರುವುದೆಂದು ತಿಳಿಯುತ್ತಾನೆ. ವ್ಯವಹಾರದಲ್ಲಿಯೂ ಗೃಹಸ್ಥನಾಗಲಿ ಮುನಿಯಾಗಲಿ ಅಂತರಾತ್ಮನ ಕರ್ತವ್ಯವನ್ನು ಮಾಡಬೇಕಾಗಿಬರುವುದು. ಆದೆಲ್ಲವು ಮೋಹನೀಯ ಕರ್ಮದ ಉದಯದ ಪ್ರೇರಣೆಯಿಂದಲೇ ನಡೆಯುತ್ತಿರುವುದು. ಆದ್ದರಿಂದ ಅಂತರಾತ್ಮನು ಧರ್ಮಾರ್ಥಕಾಮಪುರುಷಾರ್ಥಗಳ ಚೇಷ್ಟೆಗಳನ್ನು ಆತ್ಮನ ಸ್ವಾಭಾವಿಕ ಧರ್ಮಗಳೆಂದು ಭಾವಿಸದೆ, ಈ ಎಲ್ಲ ಚೇಷ್ಟೆಗಳಿಂದ ರಹಿತನಾದ ನಿಶ್ಚಲ ಪರಮ ಕೃತಕೃತ್ಯನಾಗಿರುವನೆಂದು ನಿಶ್ಚಯಿಸಿಕೊಂಡಿರುತ್ತಾನೆ.

ಹೀಗೆ ಆತ್ಮನನ್ನು ಕೇವಲ ಆತ್ಮರೂಪ ಟಂಕೋತ್ಕೀರ್ಣ ಜ್ಞಾತಾ ದೃಷ್ಟಾ ಪರಮಾನಂದಮಯನೆಂದು ಭಾವಿಸುತ್ತಾ, ಅದರಲ್ಲಿಯೇ ರಮಿಸುತ್ತಾ ಅತ್ಯಂತ ಪ್ರೀತಿಯುಕ್ತವಾಗಿರುವುದೇ ಅಂತರಾತ್ಮನ ಸ್ವಭಾವವಾಗಿರುತ್ತದೆ. ಆತನು ತ್ರಿಲೋಕದ ಸಂಪತ್ತಿಯನ್ನು ಆದರ ದೃಷ್ಟಿಯಿಂದ ನೋಡಲಾರನು. ಆದ್ದರಿಂದ ಸಮ್ಯಗ್ದೃಷ್ಟಿಯಾದ ಅಂತರಾತ್ಮನಿಗೆ ಜೀವನ್ಮುಕ್ತನೆಂದು ಹೇಳಿರುತ್ತಾರೆ. ಯಥಾರ್ಥವಾದ ಜ್ಞಾನದಿಂದಲೂ, ಪರಮ ವೈರಾಗ್ಯಭಾವನೆಯಿಂದಲೂ ತತ್ವಾಭಿರುಚಿಯುಳ್ಳವನಾಗಿರುತ್ತಾನೆ. ಆತನ ವಿಚಾರವು ಸತತ ಸಿದ್ಧಾತ್ಮ ತತ್ವದಲ್ಲಿ ಲವಲೀನವಾಗಿರುತ್ತದೆ.

ಸಮಯಸಾರದಲ್ಲಿ ಹೇಳಿರುತ್ತಾರೆ:

**ಪುಗ್ಗಲ ಕಮ್ಮಂ ರಾಗೋ ತೆಸ್ಸ ವಿವಾಗೋದವೋಹವದಿ ಏಸೋ।**
**ಣ ಹು ಏಸ ಮಜ್ಝಭಾವೋ ದು ಅಹಮಿಕ್ಕೋ ॥೨೦೭॥**

**ಉದಯ ವಿವಾಗೋ ವಿವಿಹೋ ಕಮ್ಮಾಣಂ ವಣ್ಣದೋಜಿಣವರೇಹಿಂ।
ಣದು ತೇ ಮಜ್ಝ ಸಹಾವಾ ಜಾಣಗ ಭಾವೋ ದು
ಅಹಮಿಕ್ಕೋ ॥೨೧೦॥**

**ಉಪ್ಪಣ್ಣೋದಯಭೋಗೇ ವಿಓಗಬುದ್ಧೀಯ ತಸ್ಸ ಸೋ ಣಿಚ್ಚಂ।
ಕಂಖಾಮಣಾಗದಸ್ಸ ಯ ಉದಯಸ್ಸ ಣ ಕುವ್ವದೇ ಣಾಣಿ ॥ ೨೨೮॥**

**ಭಾವಾರ್ಥ :** ರಾಗವು ಒಂದು ಪುದ್ಗಲ ಕರ್ಮವಾಗಿದೆ. ಅದರ ಫಲದಿಂದಲೇ ಆತ್ಮನಲ್ಲಿ ರಾಗಾದಿಭಾವಗಳುಂಟಾಗುತ್ತವೆ. ಇದು ಕರ್ಮಕೃತ ವಿಕಾರವಲ್ಲದೆ ಸ್ವಾಭಾವಿಕ ಗುಣವಲ್ಲವು. ನಾನೊಬ್ಬ ಜ್ಞಾಯಕ ಭಾವ ಧಾರಿಯು. ಸರ್ವಜ್ಞಜಿನದೇವನು ಹೇಳಿರುವುದೇನೆಂದರೆ ಕರ್ಮಗಳ ಉದಯದಿಂದುಟಾಗುವ ನಾನಾ ಪ್ರಕಾರದ ಫಲಗಳೆಲ್ಲವು ಆತ್ಮಸ್ವಭಾವವಲ್ಲ ಮತ್ತು ಕರ್ಮೋದಯದಿಂದ ಪ್ರಾಪ್ತವಾಗುವ ಭೋಗೋಪಭೋಗ ವಸ್ತುಗಳಲ್ಲಿ ಜ್ಞಾನಿಗೆ ಆದರ ಭಾವವೂ ಕೂಡ ಇರುವುದಿಲ್ಲ. ಕಿಂತುವಿಯೋಗ ಬುದ್ಧಿಯಿರುವಾಗ ಆಗಾಮಿ ಭೋಗೇಚ್ಛೆಯು ಹೇಗೆ ತಾನೇ ಉಂಟಾದೀತು? ಅರ್ಥಾತ್ ಉಂಟಾಗಲಾರದೆಂದು ಭಾವವು.

ಸಮಯಸಾರ ಕಲಶದಲ್ಲಿ ಹೇಳಿದೆ:

**ಇತಿ ವಸ್ತು ಸ್ವಭಾವಂ ಸ್ವಂ ಜ್ಞಾನೀ ಜಾನಾತಿ ತೇನ ಸಃ।
ರಾಗಾದೀನ್ನಾತ್ಮನಃ ಕುರ್ಯಾನ್ನಾತೋ ಭವತಿ ಕಾರಕಃ ॥೧೪॥**

**ಭಾವಾರ್ಥ :** ಜ್ಞಾನಿಯು ತನ್ನ ಆತ್ಮದ್ರವ್ಯದ ಸ್ವಭಾವವನ್ನು ನಿಶ್ಚಯವಾಗಿ ತಿಳಿದಿರುವುದರಿಂದಲೇ, ರಾಗಾದಿಭಾವಗಳೆಲ್ಲವನ್ನು ಆತ್ಮಧನವಲ್ಲವೆಂದೂ, ಅವುಗಳ ಕರ್ತೃವಲ್ಲವೆಂದೂ, ಇವೆಲ್ಲವುಗಳು ಕರ್ಮೋದಯದ ವಿಕಾರಗಳೆಂದು ನಿಶ್ಚಯಿಸಿಕೊಂಡಿರುತ್ತಾನೆ.

ಶ್ರೀ ಅಮಿತಗತಿ ಆಚಾರ್ಯರು ಬೃಹತ್‌ಸಾಮಾಯಿಕ ಪಾಠದಲ್ಲಿ ಹೇಳುತ್ತಾರೆ.

ನಾಹಂ ಕಸ್ಯಚಿದಸ್ಮಿ ಕಶ್ಚನ ನ ಮೇ ಭಾವಃ ಪರೋ ವಿದ್ಯತೇ
ಮುಕ್ತ್ವಾತ್ಮಾನಮಪಾಸ್ತ ಕರ್ಮಸಮಿತಿಂ ಜ್ಞಾನೇಕ್ಷಣಾಲಂಕೃತಿಂ ।
ಯಸ್ಯೈಷಾಮತಿರಸ್ತಿ ಚೇತಸಿ ಸದಾ ಜ್ಞಾತಾತ್ಮ ತತ್ತ್ವಸ್ಥಿತೇ
ರ್ಬಂಧಸ್ತಸ್ಯ ನ ಮಂತ್ರಿತಸ್ತ್ರಿಭುವನಂ ಸಂಸಾರಿಕೈರ್ಬಂಧನೈಃ ॥೧೧॥

ಭಾವಾರ್ಥ: ಜ್ಞಾನೀ ಅಂತರಾತ್ಮನು ವಿಚಾರಿಸುತ್ತಾನೇನಂದರೆ ನಾನು ಜ್ಞಾನವೆಂಬ ನೇತ್ರಗಳಿಂದ ಅಲಂಕೃತನೂ, ಸಕಲ ಕರ್ಮಸಮೂಹ ದಿಂದ ರಹಿತನೂ ಆದ ಸ್ವತಂತ್ರ ಆತ್ಮದ್ರವ್ಯನಾಗಿರುತ್ತೇನೆ. ಅದಲ್ಲದೆ ಅನ್ಯ ಯಾವ ಪರದ್ರವ್ಯವಾಗಲೀ, ಪರಭಾವಗಳಾಗಲೀ ಅಥವಾ ಸಂಬಂಧಿಗಳಾಗಲೀ ಯಾರೂ ಇಲ್ಲವು. ಹೀಗೆ ಯಾವ ಆತ್ಮೀಕ ತತ್ವಗಳ ಜ್ಞಾತೃವಿನ ಅಂತರಂಗ ದಲ್ಲಿ ನಿರ್ಮಲ ವಿಶುದ್ಧ ಬುದ್ಧಿಯು ವಾಸಿಸುವುದೋ, ಅವನಿಗೆ ಸಂಸಾರ ಬಂಧ ನವೇ ಆಗಲಾರದು.

ಶ್ರೀ ನಾಗಸೇನ ಮುನಿಗಳು ತತ್ವಾನುಶಾಸನದಲ್ಲಿ ಹೇಳಿರುತ್ತಾರೆ :
ಸದ್ದ್ರವ್ಯಮಸ್ಮಿ ಚಿದಹ ಜ್ಞಾತಾ ದೃಷ್ಟಾ ಸದಾಪ್ಯುದಾಸೀನಃ ।
ಸ್ವೋಪಾತ್ತದೇಹ ಮಾತ್ರಸ್ತತಃ ಪೃಥಗ್ಗಗನವದಮೂರ್ತಃ ॥೧೫೨॥

ಭಾವಾರ್ಥ: ನಾನು ಸತ್ ಸ್ವರೂಪನೂ, ಚೈತನ್ಯಮಯನೂ, ಜ್ಞಾತೃವೂ, ದೃಷ್ಟೃವೂ ಮತ್ತು ಸದಾಕಾಲದಲ್ಲಿ ವೈರಾಗ್ಯಶಾಲಿಯೂ ಆಗಿ ರುತ್ತೇನೆ. ಯದಿ ಶರೀರದಲ್ಲಿ ಶರೀರ ಪ್ರಮಾಣನಾಗಿದ್ದರೂ ಕೂಡ, ಶರೀರ ದಿಂದ ಭಿನ್ನನೂ ಆಕಾಶದಂತೆ ಅಮೂರ್ತನೂ ಆಗಿರುತ್ತೇನೆ.

❖❖❖❖❖❖❖❖❖❖

## ಆತ್ಮಜ್ಞಾನಿಯೇ ಮೋಕ್ಷಾಧಿಕಾರಿಯು

ಅಪ್ಪಾ ಅಪ್ಪಉ ಜಇ ಮುಣಹಿ ತಉ ಣಿವ್ವಾಣ ಲಹೇಹಿ ।
ಪರ ಅಪ್ಪಾ ಜಇ ಮುಣಹಿ ತುಹುಂ ತುಹು ಸಂಸಾರ ಭಮೇಹಿ ॥೧೨॥

ಅನ್ವಯಾರ್ಥ : ಜಇ–ಒಂದು ವೇಳೆ, ಅಪ್ಪಾಅಪ್ಪಉ ಮುಣಹಿ ತಹು–ಆತ್ಮನನ್ನು ಆತ್ಮನೆಂದು ತಿಳಿಯುವುದಾದರೆ, ಣಿವ್ವಾಣ ಲಹೇಹಿ–

ಮೋಕ್ಷವನ್ನು ಹೊಂದುವಿ, ಜಇ-ಒಂದು ವೇಳೆ, ಪರ ಅಪ್ಪಾ ಮುಣಹಿ ತುಹು -ಪರಪದಾರ್ಥಗಳನ್ನು ತಾನೆಂದು ತಿಳಿಯುವಿಯಾದರೆ, ತುಹು ಸಂಸಾರ ಭಮೇಹಿ-ನೀನು ಸಂಸಾರದಲ್ಲಿ ಭ್ರಮಿಸುವಿ.

**ಭಾವಾರ್ಥ :** ಸಕಲ ರಾಗದ್ವೇಷಮೋಹಾದಿ ದೋಷಗಳಿಂದ ನಿರ್ಮು ಕ್ತನೂ, ಕರ್ಮಕಲಂಕಗಳಿಂದ ಬಿಡುಗಡೆಯಾಗಿ ಶುದ್ಧ ಸುವರ್ಣದಂತೆ ಸಂ ಪೂರ್ಣವಾಗಿ ಪರಮ ಶುದ್ಧನೂ, ಪರಮ ಪಾವನಭಾವನೆಗಳಲ್ಲಿ ನಿಮಗ್ನನೂ, ಸದಾ ಕಾಲ ಆನಂದಾಮೃತವನ್ನು ಪಾವನಮಾಡುವವನೂ ಅದ ಆತ್ಮನ ಸ್ವಾಭಾವಿಕ ಆತ್ಮೀಕ ಸ್ಥಾನಕ್ಕೆ ಮೋಕ್ಷವೆಂದು ಹೇಳುತ್ತಾರೆ. ಈ ನಿರ್ವಾಣ ಪದಕ್ಕೆ ಸಾಧನವೂ, ಆತ್ಮನನ್ನು ಆತ್ಮನೆಂದು ತಿಳಿದು ಧ್ಯಾನಿಸುವಿಕೆಯೂ ಬೇಕು.

ಪ್ರತಿಯೊಂದು ಕಾರ್ಯಕ್ಕೆ ಉಪದಾನ ಮತ್ತು ನಿಮಿತ್ತ ಕಾರಣಗಳೆ ರಡರ ಆವಶ್ಯಕತೆಯು ಇರುತ್ತದೆ. ಮೂಲ ಕಾರಣಕ್ಕೆ ಉಪಾದಾನಕಾರಣ ವೆಂದೂ, ಸಹಾಯಕ ಕಾರಣಕ್ಕೆ ನಿಮಿತ್ತ ಕಾರಣವೆಂದೂ ಹೇಳಿದೆ. ಉದಾ : ಘಟ (ಕೊಡ) ಮೊದಲಾದವುಗಳನ್ನು ಮಾಡುವುದರಲ್ಲಿ ಮೃತ್ (ಮಣ್ಣು) ಉಪಾದಾನ ಕಾರಣವೂ, ಉಳಿದ ಕುಂಭಕಾರ, ತಿಗರಿ (ಚಕ್ರ) ಮೊದಲಾದ ಸಹಾಯಕ ಕಾರಣಗಳು ನಿಮಿತ್ತ ಕಾರಣಗಳೂ ಆಗಿವೆ. ಪಟ (ವಸ್ತ್ರ) ಮೊದ ಲಾದವುಗಳನ್ನು ಮಾಡುವುದರಲ್ಲಿ ಹತ್ತಿಯು (ಅರಳೆ) ಉಪಾದಾನ ಕಾರ ಣವೂ, ಚರಕ ಯಂತ್ರಾದಿಗಳು ನಿಮಿತ್ತ ಕಾರಣಗಳೂ, ಹಾಗೆಯೇ ಚಿನ್ನದ ಉಂಗುರವನ್ನು ಮಾಡುವುದರಲ್ಲಿ ಚಿನ್ನ (ಬಂಗಾರ) ವು ಉಪಾದಾನ ಕಾರ ಣವೂ, ಚಿನಿವಾರ (ಚಿನ್ನದ ಕೆಲಸ ಮಾಡುವವ) ಮತ್ತು ಆತನ ಸೂಕ್ಷ್ಮವಾದ ಆಯುಧ ಮತ್ತು ಅಗ್ನಿ (ಬೆಂಕಿ) ಮೊದಲಾದವುಗಳು ನಿಮಿತ್ತ ಕಾರಣಗಳೂ ಆಗಿರುತ್ತವೆ.

ಇದೇ ಪ್ರಕಾರವಾಗಿ ಆತ್ಮನು ಪರಿಶುದ್ಧನಾಗಲು ಉಪಾದಾನ ಕಾರಣ ಆತ್ಮನೇ ಆಗಿರುತ್ತಾನೆ. ವ್ಯವಹಾರ ರತ್ನತ್ರಯಗಳು, ಮುನಿ ಮತ್ತು ಗೃಹ ಸ್ಥರ ಆಚರಣೆಗಳು, ಹನ್ನೆರಡು ಪ್ರಕಾರದ ತಪಸ್ಸುಗಳು, ಮನ, ವಚನ,

ಕಾಯಗಳ ಕ್ರಿಯೆಗಳ ನಿರೋಧ ಮೊದಲಾದವುಗಳು ನಿಮಿತ್ತ ಕಾರಣಗಳು. ಇವು ಇರುವುದರಿಂದಲೇ ಉಪಾದಾನ ಕಾರಣವು ಕಾರ್ಯವನ್ನೆಸಗುವುದು. ಉದಾ: ಅಗ್ನಿರೂಪ ನಿಮಿತ್ತ ಕಾರಣದಿಂದ ಅಕ್ಕಿಯು ಅನ್ನರೂಪವಾಗಿ ಪರಿಣಮಿಸುತ್ತದೆ. ಇದಕ್ಕೆ ನಿಮಿತ್ತ ಮತ್ತು ಉಪಾದಾನ ಕಾರಣಗಳು ಅತ್ಯಾವಶ್ಯಕವಾಗಿರುತ್ತದೆ. ಸಾಧಕನಾಗಲಿ ಅಥವಾ ಮೋಕ್ಷೇಚ್ಛುವಾಗಲಿ ಮೊದಲು ವ್ಯವಹಾರ ಸಮ್ಯಗ್ದರ್ಶನದಿಂದಲೇ ಅರ್ಥಾತ್ ಯಥಾರ್ಥ ದೇವ, ಗುರು, ಶಾಸ್ತ್ರಗಳಲ್ಲಿಯೂ, ಜೀವಾದಿ ಸಪ್ತತತ್ವಗಳಲ್ಲಿಯೂ ಶ್ರದ್ಧಾನ ಪೂರ್ವಕ ಮನನಮಾಡಿ, ಭೇದ ವಿಜ್ಞಾನದ ದೃಢತೆಯಿಂದ ತನ್ನಾತ್ಮರೂಪಜ್ಞಾನದ ನಿಶ್ಚಯ ಸಮ್ಯಗ್ದರ್ಶನದ ಪ್ರಾಪ್ತಿಯನ್ನುಂಟುಮಾಡಿಕೊಳ್ಳಬೇಕು. ಆಗ ಆತ್ಮನ ನಿಜೋದಯವೂ, ವೀತರಾಗತೆಯೂ, ಸಂವರ ಮತ್ತು ನಿರ್ಜರೆಗಳ ಕಾರ್ಯ ಪ್ರಾರಂಭವೂ ಮತ್ತು ಮೋಕ್ಷಮಾರ್ಗದ ಸದುದಯವೂ ಆಗುವುದು. ಕರ್ಮಬಂಧವು ರಾಗದ್ವೇಷಗಳ ಮೂಲಕವಾಗುತ್ತಿರುವಾಗ ಅವುಗಳನಾಶವು ವೀತರಾಗಭಾವನೆಯ ಮೂಲಕವೇ ಸಾಧ್ಯವಿದೆಂದು ದೃಢಪಡಿಸಿಕೊಂಡು ಮುಮುಕ್ಷುವು ಬುದ್ಧಿಪೂರ್ವಕಗಳಾದ ಪರಿಣಾಮಗಳನ್ನು ವೀತರಾಗ ಭಾವದತ್ತ ಎಳೆದುಕೊಳ್ಳುವುದೇ ಪರಮ ಪುರುಷಾರ್ಥವು. ಇದರಿಂದ ಕರ್ಮಗಳು ಸ್ವಯಂ ಉದರಿ ನೂತನ ಕರ್ಮಾಸ್ರವದ ಸಂವರೆಯು ಆಗುವುದು.

ಅಂತರಂಗ ನಿಮಿತ್ತ ಕಾರಣಗಳಾದ ಮೋಹನೀಯ ಕರ್ಮದ ಉದಯದಿಂದ ರಾಗ, ದ್ವೇಷ, ಮೋಹಾದಿಗಳುಂಟಾಗುತ್ತವೆ. ಬಾಹ್ಯ ನಿಮಿತ್ತಗಳಾದ ಚೇತನಾಚೇತನ ಪದಾರ್ಥಗಳ ಸಂಯೋಗದಿಂದಲೇ ಅವುಗಳೊಡನೆ ವ್ಯವಹಾರವು ನಡೆಯುತ್ತದೆ. ಆದ್ದರಿಂದ ಬಾಹ್ಯನಿಮಿತ್ತಗಳನ್ನು ದೂರಗೊಳಿಸಲು ಶ್ರಾವಕರ ಹನ್ನೆರಡು ವ್ರತ (೫ ಅಣುವ್ರತ, ೩ ಗುಣವ್ರತ, ೪ ಶಿಕ್ಷಾವ್ರತ) ಗಳನ್ನು ವ್ರತರೂಪವಾಗಿ ಗ್ರಹಿಸಿ, ಹನ್ನೊಂದು ನೆಲೆಗಳನ್ನು ಪೂರ್ಣಮಾಡುವವನಾಗಿ, ಬಾಹ್ಯ ಪರಿಗ್ರಹಗಳನ್ನು ಕಡಿಮೆ ಕಡಿಮೆ ಮಾಡುತ್ತ ಒಂದು ಕೌಪೀನ ಮಾತ್ರ ಧರಿಸಿ, ಬಾಲಕನಂತೆ ನಗ್ನರಾಗಿದ್ದು ಮುನಿಚರ್ಯವನ್ನೂ, ಏಕಾಂತ ನಿವಾಸವನ್ನೂ ಮತ್ತು ನಿರ್ಜನ ಸ್ಥಾನದಲ್ಲಿ ಏಕಾಸನದಲ್ಲಿ ಕುಳಿತುಕೊಂಡು ಧ್ಯಾನವನ್ನೂ, ಅನಶನ ಅವಮೋದರ್ಯ ರಸ ಪರಿತ್ಯಾಗಾದಿ ತಪಸ್ಸು

ವೈರಾಗ್ಯ ಭಾವನೆಯಿಂದ ಕರ್ಮ ಬಂಧನದಿಂದ ಬಿಡುಗಡೆಯಾಗುತ್ತಾನೆ. ಆದುದರಿಂದ ಎಲೈ ಜೀವನೇ! ಬಂಧಕ್ಕೆ ಕಾರಣಗಳಾದ ಶುಭಾಶುಭ ಕಾರ್ಯಗಳಲ್ಲಿ ಮೋಹವನ್ನಿಡಬೇಡ.

ನಿಶ್ಚಯವಾಗಿಯೂ ಲೋಕದಲ್ಲಿ ಅತಿ ಶ್ರೇಷ್ಠವಾದ ವಸ್ತುವೆಂದರೆ ಆತ್ಮ ದ್ರವ್ಯವಾಗಿರುತ್ತದೆ. ಆತ್ಮನು ತನ್ನ ಸ್ವಭಾವದಲ್ಲಿ ಅಲ್ಪಕಾಲ ಪರಿಣಮಿಸುವುದರಿಂದ, ತಿಳಿಯುವುದರಿಂದ ಸಮಯನೂ, ಜ್ಞಾನಮಯನೂ, ನಿರ್ವಿಕಾರನಾಗುವುದರಿಂದ ಶುದ್ಧನೂ. ಸರ್ವ ಸ್ವತಂತ್ರ ಚೈತನ್ಯನಾಗುವುದರಿಂದ ಕೇವಲಿಯೂ, ಮನನ ಮಾತ್ರದಿಂದ ಮುನಿಶ್ರೇಷ್ಠನೂ, ಜ್ಞಾನಮಯನಾಗುವುದರಿಂದ ಜ್ಞಾನಿಯೂ ಆಗಿರುತ್ತಾನೆ. ಹೀಗೆ ಯಾವ ಮುನಿಶ್ರೇಷ್ಠರು ಆತ್ಮೀಕ ಸ್ವಭಾವದಲ್ಲಿ ಸ್ಥಿರವಾಗಿ ಅಂದರೆ ಆತ್ಮಸ್ಥರಾಗುತ್ತಾರೆಯೋ, ಅವರೇ ನಿರ್ವಾಣ ಪದವಿಯನ್ನು ಪಡೆಯಲು ಅರ್ಹರು. ಆತ್ಮ ಸ್ವಭಾವವನ್ನರಿಯದೆ ಜಪ, ತಪ, ಧ್ಯಾನ, ವ್ರತಾದಿಗಳ ಪಾಲನೆಮಾಡುತ್ತಿದ್ದರೂ, ಅವೆಲ್ಲವು ಆತ್ಮಾನುಭವಶೂನ್ಯವಾದ್ದರಿಂದ ಅಜ್ಞಾನ ತಪಸ್ಸೆಂದೂ, ಅಜ್ಞಾನ ವ್ರತವೆಂದೂ ಸರ್ವಜ್ಞ ಜಿನದೇವನು ಅಪ್ಪಣೆಯಿತ್ತಿರುವನು.

ಸಮಯಸಾರ ಕಲಶದಲ್ಲಿ ಹೇಳಿರುತ್ತಾರೆ :

**ಪದಮಿದಂ ನನು ಕರ್ಮದುರಾಸದಂ ಸಹಜ ಬೋಧ**
**ಕಲಾ ಸುಲಭಂ ಕಿಲ।**
**ತತ ಇದಂ ನಿಜಬೋಧಕಲಾಬಲಾತ್ಕಲಯಿತುಂ ಯತತಾಂ**
**ಸತತಂ ಜಗತ್ ॥೧-೭॥**

ಭಾವಾರ್ಥ: ಶುಭ ಕ್ರಿಯೆಗಳಿಂದ ನಿರ್ವಾಣ ಪದವಿಯು ಪ್ರಾಪ್ತಿಯಾಗಲಾರದು. ಆದರೆ ಸ್ವಾಭಾವಿಕವಾದ ಆತ್ಮಜ್ಞಾನ ಕಲೆಯಿಂದಲೇ ಸಹಜ ಅವಸ್ಥೆಯು ಪ್ರಾಪ್ತವಾಗುವುದು. ಅತಃ ಸಕಲ ಮೋಕ್ಷೇಚ್ಛುಗಳು ಆತ್ಮಜ್ಞಾನವೆಂಬ ಕಲೆಯ ಸಾಮರ್ಥ್ಯದಿಂದಲೇ ಸಿದ್ಧಿ ಪಡೆಯಲು ಪ್ರಯತ್ನಿಸಬೇಕು.

ತತ್ವಾನುಶಾಸನದಲ್ಲಿ ಹೇಳಿರುತ್ತಾರೆ :

**ಪಶ್ಯನ್ನಾತ್ಮಾನಮೈಕಾಗ್ರ್ಯಾತ್ ಕ್ಷಪಯತ್ಯರ್ಜಿತಾನ್ಮಲಾನ್ ।**
**ನಿರಸ್ತಾಹಂಮಮೀಭಾವಃ ಸಂವೃಣೋತ್ಯಪ್ಯನಾಗತಾನ್ ॥೧೭೮॥**

**ಭಾವಾರ್ಥ :** ಪ್ರತಿಯೊಂದು ವಸ್ತುಗಳಲ್ಲಿ ಅಹಂಕಾರ ಮತ್ತು ಮಮಕಾರಗಳನ್ನು ತ್ಯಜಿಸಿ, ಏಕಾಗ್ರಭಾವನೆಯಿಂದ ಆತ್ಮಾನುಭವಿಯಾದೊಡನೆ ಪೂರ್ವ ಸಂಚಿತ ಕರ್ಮಮಲಗಳನ್ನೆಲ್ಲವನ್ನೂ ನಾಶಮಾಡುವುದಲ್ಲದೆ, ನೂತನ ಕರ್ಮ ಸಂವರೆಯನ್ನೂ ಮಾಡಿಕೊಳ್ಳುತ್ತಾನೆ.



## ಇಚ್ಛಾರಹಿತ ತಪಸ್ಸೇ ಮೋಕ್ಷಕ್ಕೆ ಕಾರಣವು

**ಇಚ್ಛಾರಹಿಯಉ ತವಕರಹಿ ಅಪ್ಪಾ ಅಪ್ಪ ಮುಣೇಹಿ ।**
**ತಉಲಹು ಪಾವಇ ಪರಮಗಇ ಪುಣ ಸಂಸಾರ [illegible] ಏಹಿ ॥೧೩॥**

**ಅನ್ವಯಾರ್ಥ :** ಅಪ್ಪಾ-ಎಲೈ ಆತ್ಮನೇ! ಇಚ್ಛಾರಹಿಯಉ ತವ ಕರಹಿ-ಯದಿ ನೀನು ಇಚ್ಛಾರಹಿತನಾಗಿ ತಪಸ್ಸನ್ನು ಮಾಡಿ, ಅಪ್ಪ ಮುಣೇಹಿ-ಆತ್ಮಾನುಭವವನ್ನು ಮಾಡಿಕೊಂಡರೆ, ತಉ ಲಹು ಪರಮಗಇ ಪಾವಇ-ಶೀಘ್ರವೇ ಪರಮಗತಿಯನ್ನು ಪಡೆಯುವಿ, ಪುಣ ಸಂಸಾರ ಣ ಏಹಿ-ಮತ್ತೆ ಎಂದೆಂದಿಗೂ ಸಂಸಾರದಲ್ಲಿ ಸಿಲುಕಲಾರೆ.

**ಭಾವಾರ್ಥ :** ಯಾವ ಪ್ರಕಾರವಾಗಿ ಕಿಟ್ಟಕಾಲಿಕೆಗಳಿಂದ್ಯುಕ್ತವಾದ ಮಲಿನ ಸುವರ್ಣ (ಬಂಗಾರ) ವು ಅಗ್ನಿಯಲ್ಲಿ ಔಷಧಿಯೊಡಗೂಡಿ ಪುಟಕ್ಕಿಟ್ಟು ಕಾಯಿಸುವುದರಿಂದ ಮಲಿನಾದಿಗಳು ದೂರವಾಗಿ ಪರಿಶುದ್ಧ ಸುವರ್ಣವಾಗುವಂತೆ, ತಪೋರೂಪವಾದ ಅಗ್ನಿಯಲ್ಲಿ ಜ್ಞಾನ ವೈರಾಗ್ಯವೆಂಬ ಔಷಧಿಗಳನ್ನು ಹಾಕುವುದರಿಂದ, ಕರ್ಮಕಲಂಕಗಳು ನಾಶವಾಗಿ, ಅಶುದ್ಧ ಆತ್ಮನು ಪರಿಶುದ್ಧನಾಗುತ್ತಾನೆ. ಪರಿಶುದ್ಧವಾದ ಅಪರಂಜೀ ಚಿನ್ನ ಎಂದೆಂದಿಗೂ ಅಶುದ್ಧವಾಗ

ದಿರುವಂತೆ, ಶುದ್ಧ ಮುಕ್ತಾತ್ಮನು ಮತ್ತೆ ಎಂದೆಂದಿಗೂ ಕರ್ಮಬಂಧನಾದಿಗಳಿಗೆ ಸಿಲುಕುವುದಿಲ್ಲವು. ಅರ್ಥಾತ್ ಜನನಮರಣಾದಿಗಳಿಂದ ರಹಿತನಾಗುವನೆಂದು ಭಾವವು.

ಮುಮುಕ್ಷುವುತಪಸ್ಸನ್ನಾಚರಿಸುತ್ತಿರುವಾಗ ಅದರ ಫಲಗಳಾದ ನಾರಾಯಣ, ಪ್ರತಿನಾರಾಯಣ, ಬಲದೇವ, ಚಕ್ರವರ್ತಿ, ಇಂದ್ರ, ಅಹಮಿಂದ್ರ ಅಥವಾ ಸಂಸಾರ ವಿಭೂತಿರೂಪ ಸುಖಪ್ರಾಪ್ತಿ, ಅತುಲ ಕೀರ್ತಿ, ಶತೃಕ್ಷಯ ಇವೇ ಮೊದಲಾದ ಯಾವ ಅಭಿಲಾಷೆಗಳನ್ನು ಇಟ್ಟುಕೊಳ್ಳಬಾರದು. ಕೇವಲ ತನ್ನಾತ್ಮನಿಗೆ ಪರಿಶುದ್ಧವಾದ ಪರಮಾತ್ಮ ಪದವಿಯ ಲಾಭವಾಗ ಬೇಕೆಂಬ ಭಾವನೆಯಿರಬೇಕು. ಹೀಗೆ ಶುದ್ಧವೂ, ನಿರ್ವಿಕಾರವೂ ಆದ ತಪಸ್ಸು ಯಥಾರ್ಥ ತಪಸ್ಸೆಂದೆನಿಸಿಕೊಳ್ಳುವುದು. ತಪಸ್ಸು ನಿಶ್ಚಯ ತಪಸ್ಸೆಂದೂ, ವ್ಯವಹಾರ ತಪಸ್ಸೆಂದೂ ಎರಡು ವಿಧವಾಗಿರುತ್ತದೆ. ಅದರಲ್ಲಿ ತನ್ನಾತ್ಮ ತತ್ವದಲ್ಲಿ ಶ್ರದ್ಧೆ, ಜ್ಞಾನಯುಕ್ತ ತಪಕ್ಕೆ ನಿಶ್ಚಯ ತಪಸ್ಸೆಂದೂ, ಇದಕ್ಕೆ ನಿಮಿತ್ತ ರೂಪವಾದ ಹನ್ನೆರಡು ವಿಧದ ತಪಸ್ಸನ್ನೆಸಗುವುದಕ್ಕೆ ವ್ಯವಹಾರ ತಪಸ್ಸೆಂದೂ ಹೇಳುತ್ತಾರೆ. ನಿಮಿತ್ತ ಕಾರಣರೂಪ ಸಂಯೋಗದ ಪ್ರಾಪ್ತಿಯಾದೊಡನೆ ಉಪಾದಾನ ಕಾರಣದ ಉದ್ಭವವಾಗುವುದು. ಅಂತರಂಗ ಮತ್ತು ಬಹಿರಂಗ ತಪಸ್ಸುಗಳ ಮೂಲಕವೇ ನಿಶ್ಚಯ ತಪಸ್ಸೂ. ಆದರಿಂದ ಆತ್ಮಾನುಭವದ ವೃದ್ಧಿಯೂ ಆಗುವುದು.

ಯಾವ ತಪಸ್ಸು ಬಾಹ್ಯಶರೀರಗಳ ಅಪೇಕ್ಷೆಯಿಂದ ಪ್ರತ್ಯಕ್ಷವಾಗಿ ದೃಷ್ಟಿಗೋಚರವಾಗುವುದೋ ಅದು ಬಾಹ್ಯತಪಸ್ಸು. ಅದು ಆರು ವಿಧವಾಗಿದೆ.

೧) **ಅನಶನ:** ಅನ್ನ, ಪಾನ, ಖಾದ್ಯ, ಲೇಹ್ಯಗಳೆಂಬ ನಾಲ್ಕು ವಿಧದ ಆಹಾರಗಳನ್ನು ಒಂದು ದಿವಸವೋ, ಎರಡು ದಿವಸಗಳ ತನಕವೋ ಮೊದಲಾದ ನಿಯಮ ಪೂರ್ವಕವಾಗಲಿ, ಸಮಾಧಿಮರಣ ಸಮಯ ಜನ್ಮ ಪರ್ಯಂತರವಾಗಲಿ ವ್ರತಮಾಡಿಬಿಡುವುದೇ ಉಪವಾಸ ತಪಸ್ಸು. ಈ ಉಪವಾಸ ತಪಸ್ಸಿನಿಂದ ಇಂದ್ರಿಯ ಜಯವು, ರಾಗದ್ವೇಷಗಳ ನಾಶವು, ಧ್ಯಾನದ ಸಿದ್ಧಿಯು ಮತ್ತು ಕರ್ಮಗಳ ಕ್ಷಯವು ಆಗುತ್ತದೆ. ಈ ಉಪವಾಸ ತಪಸ್ಸನ್ನಾಚರಿಸಿ ನಿಶ್ಚಯ ತಪಸ್ಸನ್ನು ಸಿದ್ಧಿಸಿಕೊಳ್ಳಬೇಕು.

೨) ಅವಮೌದರ್ಯ: ಹಸಿವೆಗಿಂತ ಕಡಿಮೆ ಆಹಾರವನ್ನು ಸೇವಿಸುವಿಕೆ. ಇದರಿಂದ ರೋಗಗಳ ಶಾಂತಿಯು, ಆಲಸ್ಯ ಮತ್ತು ನಿದ್ರಾದೇವಿ ವಿಜಯವು ಆಗುವುದಲ್ಲದೆ ಸ್ವಾಸ್ಥ್ಯ ಮತ್ತು ಧ್ಯಾನಸಿದ್ಧಿಯು ಆಗುವುದು.

೩) ವೃತ್ತಿ ಪರಿಸಂಖ್ಯಾನ: ಆಹಾರಕ್ಕೆ ಹೋಗುವಾಗ ಮನೆ ಮೊದಲಾದವುಗಳ ನಿಯಮಮಾಡಿಕೊಳ್ಳುವಿಕೆ. ಇದರಿಂದ ಒಂದು ವೇಳೆ ಭೋಜನ ಪ್ರಾಪ್ತಿಯಾಗದಿದ್ದರೂ ಸಂತೋಷದಿಂದ ಆಶಾರೋಗವು ಜಯಿಸಲ್ಪಡುತ್ತದೆ.

೪) ರಸಪರಿತ್ಯಾಗ: ಹಾಲು, ತುಪ್ಪ, ಮೊಸರು, ಸಕ್ಕರೆ, ಉಪ್ಪು ಎಣ್ಣೆ ಮೊದಲಾದ ಪದಾರ್ಥಗಳ ಷಡ್‌ರಸಗಳ ಪೈಕಿ ಒಂದೆರಡು ಅಥವಾ ಎಲ್ಲಾ ರಸವಸ್ತುಗಳನ್ನು ತ್ಯಜಿಸುವಿಕೆ. ಇದರಿಂದ ಇಂದ್ರಿಯಗಳ ವಿಜಯವೂ, ಬ್ರಹ್ಮಚರ್ಯದ ರಕ್ಷಣೆಯೂ ಆಗಿ, ಸ್ವಾಧ್ಯಾಯ ಮತ್ತು ಧ್ಯಾನದ ಸಿದ್ಧಿಯೂ ಆಗುತ್ತದೆ.

೫) ವಿವಿಕ್ತ ಶಯ್ಯಾಸನ: ಸ್ತ್ರೀಯರು, ಪುರುಷರು ಮತ್ತು ನಪುಂಸಕರು ಮೊದಲಾದ ಜೀವಜಂತುಗಳ ಉಪದ್ರವವಿಲ್ಲದಿರುವ ನಿರ್ಜನ ಸ್ಥಾನಗಳಲ್ಲಿ ಮಲಗುವುದು, ಕುಳಿತುಕೊಳ್ಳುವುದು. ಇವುಗಳಿಂದ ನಿರ್ವಿಘ್ನವಾಗಿ ಬ್ರಹ್ಮಚರ್ಯ, ಸ್ವಾಧ್ಯಾಯ ಮತ್ತು ಧ್ಯಾನಸಿದ್ಧಿಯು ಆಗುತ್ತದೆ.

೬) ಕಾಯಕ್ಲೇಶ: ಬಿಸಿಲಿನಲ್ಲಿಯೂ, ವೃಕ್ಷಗಳ ತಳದಲ್ಲಿಯೂ, ಬೈಲು ಪ್ರದೇಶಗಳಲ್ಲಿಯೂ, ಪರ್ವತಗಳ ಗುಹೆಗಳಲ್ಲಿಯೂ ನಾನಾ ಪ್ರಕಾರದ ಆಸನಗಳ ಮೂಲಕ ಕಠಿಣ ತಪಸ್ಸನ್ನಾಚರಿಸುವಿಕೆ. ಇದರಿಂದ ದೇಹಾದಿಗಳ ಮಮತೆಯು ಕಡಿಮೆಯಾಗುತ್ತದೆ. ಅಲ್ಲದೇ ಧ್ಯಾನದ ಸಿದ್ಧಿಯೂ ಆಗುತ್ತದೆ. ಧ್ಯಾನಾಭ್ಯಾಸಿಯು ಶರೀರದ ಶಕ್ತಿಸಾಮರ್ಥ್ಯಗಳನ್ನು ನೋಡಿಯೇ ತಪಸ್ಸನ್ನಾಚರಿಸುತ್ತಾನೆ. ಆರ್ತಧ್ಯಾನದ ಕ್ಲೇಶಗಳನ್ನು ಸಹಿಸಲಾರನು.

ಮನಸ್ಸನ್ನು ನಿಗ್ರಹಿಸಲು ಮತ್ತು ಪರಿಣಾಮಗಳನ್ನು ನಿರ್ಮಲಗೊಳಿಸಲು ಪ್ರಧಾನ ಕಾರಣವಾದ ತಪಸ್ಸಿಗೆ ಅಭ್ಯಂತರ ತಪಸ್ಸೆಂದು ಹೇಳುತ್ತಾರೆ. ಅದು ಆರು ಪ್ರಕಾರವಾಗಿದೆ.

೧) ಪ್ರಾಯಶ್ಚಿತ್ತ : ಪ್ರಮಾದದಿಂದುಂಟಾದ ದೋಷಗಳ ಪರಿಶುದ್ಧಿಗಾಗಿ ಸ್ವತಹವೋ, ಗುರುಗಳ ಮೂಲಕವೋ ಶಿಕ್ಷೆಯನ್ನು ಹೊಂದಬೇಕು. ಉದಾ :-ವಸ್ತ್ರಾದಿಗಳಲ್ಲಿ ಬಿದ್ದ ಕಲೆಯನ್ನು ದೂರಿಕರಿಸಬೇಕಾದರೆ, ಶೀಘ್ರವೇ ಪ್ರಕ್ಷಾಲಿಸಿ (ಒಗೆದರೆ) ದರೆ ನಿರ್ಮಲವಾಗುತ್ತದೆ. ಇದರಂತೆ ಮನ, ವಚನ, ಕಾಯಗಳ ಮೂಲಕ ದೋಷಗಳುಂಟಾದರೆ, ಅವನ್ನು ಆಲೋಚನಾ, ಪ್ರತಿಕ್ರಮಣ ತಥಾ ಪ್ರಾಯಶ್ಚಿತ್ತಾದಿಗಳಿಂದ ಹೋಗಲಾಡಿಸಿ ಪರಿಣಾಮವು ನಿರ್ಮಲವಾಗುವಂತೆ ಮಾಡಿಕೊಳ್ಳಬೇಕು.

೨) ವಿನಯ : ಅತ್ಯಾದರದಿಂದ ಜ್ಞಾನವನ್ನು ವೃದ್ಧಿಗೊಳಿಸಿಕೊಳ್ಳುವಿಕೆಯು, ಗಾಢವಿಶ್ವಾಸವನ್ನಿಟ್ಟುಕೊಳ್ಳುವಿಕೆಯು, ಚಾರಿತ್ರವನ್ನು ನಿರ್ದೋಷವಾಗಿ ಪಾಲಿಸುವುದು, ಪೂಜ್ಯ ಪುರುಷರಲ್ಲಿ ವಿನಯವನ್ನು ತೋರುವುದು ಮತ್ತು ಅವರ ಗುಣಗಳನ್ನು ಸ್ಮರಿಸುವುದು ಇವೇ ಮೊದಲಾದವು ವಿನಯ ಕ್ರಿಯೆಗಳಾಗಿವೆ.

೩) ವೈಯ್ಯಾವೃತ್ಯ : ಮುನಿ, ಆರ್ಯಿಕಾ, ಶ್ರಾವಕ, ಶ್ರಾವಿಕೆ ಮೊದಲಾದವರ ಸೇವೆ ಶುಶ್ರೂಷೆಯನ್ನು ಮಾಡುವುದು, ರೋಗ ಪರೀಷಹಾದಿಗಳುಂಟಾದರೆ ಶರೀರದಲ್ಲಾಗಲೀ, ಉಪದೇಶದಲ್ಲಾಗಲೀ ಅಥವಾ ಅನ್ಯಉಪಾಯಗಳಿಂದಾಗಲೀ ಆ ವೇದನೆಗಳನ್ನು ಹೋಗಲಾಡಿಸುವುದು ಇವೇ ವೈಯ್ಯಾವೃತ್ಯ ತಪಸ್ಸಾಗಿದೆ. ಇದರಿಂದ ಜಿಗುಪ್ಸಾ ಭಾವನೆಯ ಅಭಾವವು, ವಾತ್ಸಲ್ಯ ಗುಣಾಧಿಕ್ಯವು, ಧರ್ಮ ರಕ್ಷಣಾರೂಪ ತಪಸ್ಸಿನ ವೃದ್ಧಿಯು ಆಗುವುದು. ಮಹಾಪುರುಷರ ಸೇವೆ ಶುಶ್ರೂಷೆಯಿಂದಲೇ ಧ್ಯಾನ ಮತ್ತು ತಪಸ್ಸು ಸಿದ್ಧಿಸುವುದು.

೪) ಸ್ವಾಧ್ಯಾಯ : ಜ್ಞಾನಭಾವನೆಗಾಗಿಯೂ, ಆಲಸ್ಯವನ್ನು ಹೋಗಲಾಡಿಸುವುದಕ್ಕಾಗಿಯೂ ಐದು ವಿಧದ ಸ್ವಾಧ್ಯಾಯದ ಸಿದ್ಧಿಗಾಗಿ ಸ್ವಾಧ್ಯಾಯದ ನಿಮಯವನ್ನಿಟ್ಟುಕೊಳ್ಳುವುದು ಅತ್ಯಾವಶ್ಯಕವಾಗಿದೆ.

(1) ಗ್ರಂಥಗಳನ್ನು ನಿರ್ದೋಷವಾಗಿ ಓದುವುದು, ಓದಿಸುವುದು, ಕೇಳುವುದು, ಕೇಳಿಸುವುದು. (2) ಸಂಶಯ ನಿವಾರಣೆಗಾಗಿಯೂ, ಜ್ಞಾನದ ವೃದ್ಧಿ

ಗಾಗಿಯೂ ಪ್ರಶ್ನೆಗಳನ್ನು ಕೇಳುವುದು ( ಪ್ರಶ್ನಿಸುವುದು ) (3) ತಿಳಿದು ಕೊಂಡಿದ್ದ ವಿಷಯಗಳನ್ನು ಆಗಾಗ ಚಿಂತಿಸುವುದು, ಮನನಮಾಡುವುದು ವಿಚಾರಿಸುವುದು. (4) ಶುದ್ಧವಾಗಿ ಪಠನಮಾಡುವುದು. (5) ಧರ್ಮೋಪ ದೇಶವನ್ನು ಮಾಡುವುದು. ಹೀಗೆ ವಾಚನಾ, ಪೃಚ್ಛನಾ, ಅನುಪ್ರೇಕ್ಷೆ, ಆಮ್ನಾಯ ಮತ್ತು ಧರ್ಮೋಪದೇಶ ಈ ಐದು ವಿಧದ ಸ್ವಾಧ್ಯಾಯಗಳಿಂದ ಜ್ಞಾನವೃದ್ಧಿಯೂ. ವೈರಾಗ್ಯ ಬೆಳವಣಿಗೆಯೂ ಮತ್ತು ದೋಷಗಳ ನಿವಾ ರಣೆಯೂ ಆಗುವುದು.

೪) **ವ್ಯುತ್ಸರ್ಗ:** ಬಾಹ್ಯಪರಿಗ್ರಹಗಳಾದ ಶರೀರ, ಧನ, ಮನೆ, ಮಠ ಮೊದಲಾದ ಪರಿಗ್ರಹಗಳಿಂದಲೂ ಮತ್ತು ಅಂತರಂಗ ಪರಿಗ್ರಹಗಳಾದ ರಾಗ ವಿಭಾವಾದಿಗಳಿಂದಲೂ ವಿಶೇಷ ಮಮತಾಭಾವಗಳ ತ್ಯಾಗದಿಂದ ನಿರ್ಲಿಪ್ತವಾಗುವುದೇ ತಪಸ್ಸಾಗಿದೆ.

೬) **ಧ್ಯಾನ:** ಯಾವುದಾದರೊಂದು ಧ್ಯೇಯ ವಸ್ತುವಿನಲ್ಲಿ ಮನಸ್ಸ ನ್ನಿಡುವುದೇ ಧ್ಯಾನವು. ಅದು ಧರ್ಮ, ಶುಕ್ಲ, ಆರ್ತ, ರೌದ್ರಗಳೆಂದು ನಾಲ್ಕು ವಿಧವು. ಇವುಗಳಲ್ಲಿ ಧರ್ಮಧ್ಯಾನ ಮತ್ತು ಶುಕ್ಲಧ್ಯಾನಗಳು ಮೋಕ್ಷಕ್ಕೆ ಕಾರಣಗಳಾಗಿವೆ. ಅವುಗಳನ್ನೇ ಅಭ್ಯಾಸಿಸಬೇಕು. ಆರ್ತಧ್ಯಾನ ಮತ್ತು ರೌದ್ರಧ್ಯಾನಗಳು ಸಂಸಾರ ದುಃಖಕ್ಕೆ ಕಾರಣಗಳಾಗಿದ್ದರಿಂದ ಅವು ಗಳಿಂದ ದೂರವಿರಲು ಪ್ರಯತ್ನಿಸುವುದು ಲೇಸು.

ಮೋಕ್ಷಪ್ರಾಪ್ತಿಗಾಗಿ ತಪಸ್ಸನ್ನಾಚರಿಸುವುದು ಮತ್ತು ಆರಾಧಿಸುವುದು ಅತ್ಯಾವಶ್ಯಕವಾಗಿದೆ. ನಿಶ್ಚಯ ತಪಸ್ಸನ್ನು ಮಾಡದೆ ಕರ್ಮಗಳು ನಿರ್ಜರೆ ಯಾಗಲಾರದು. ಆದ್ದರಿಂದ ತಪಸ್ಸಿನಿಂದಲೇ ಸಂವರೆ ಮತ್ತು ನಿರ್ಜರೆಗಳೆ ರಡು ಪ್ರಾಪ್ತವಾಗುತ್ತವೆ.

ಸಮಯಸಾರದಲ್ಲಿ ಹೇಳಿದ್ದಾರೆ:

**ಅಪ್ಪಾಣಮಪ್ಪಣೋರುಂಭಿದೂಣ ದೋಸು ಪುಣ್ಣಪಾವಜೋಗೇಸು।**
**ದಂಸಣಣಾಣಮ್ಹಿ ಠಿದೋ ಇಚ್ಛಾವಿರದೋ ಯ ಅಣ್ಣಮ್ಹಿ ॥೧೮೦॥**

**ಜೋ ಸವ್ವಸಂಗಮುಕ್ಕೋ ಝಾಯದಿ ಅಪ್ಪಣಮಪ್ಪಣೋ ಅಪ್ಪಾ।
ಣವಿ ಕಮ್ಮಂ ಣೋ ಕಮ್ಮಂ ಚೇದಾ ಚಿಂತೇದಿ ಏಯತ್ತಂ ॥೧೮೮॥**

**ಅಪ್ಪಾಣಂ ಝಾಯಂತೋ ದಂಸಣಣಾಣ ಮಇಓ ಅಣಣ್ಣಮಣೋ।
ಲಹದಿ ಅಚಿರೇಣ ಅಪ್ಪಾಣಮೇವ ಸೋ ಕಮ್ಮಣಿಮ್ಮುಕ್ಕಂ ॥೧೮೯॥**

**ಭಾವಾರ್ಥ:** ಪುಣ್ಯಪಾಪಗಳ ಬಂಧಕ್ಕೆ ಕಾರಣಗಳಾದ ಶುಭಾಶುಭ ಯೋಗಗಳಿಂದ ತನ್ನಾತ್ಮನನ್ನು ತನ್ನಿಂದಲೇ ತಡೆಯುವಾತ್ಮನು ಪರದ್ರವ್ಯೇಚ್ಛೆಯಿಂದ ವಿರಕ್ತನಾಗಿಯೂ, ಸಕಲ ಪರಿಗ್ರಹಗಳೇಚ್ಛೆಯಿಂದ ರಹಿತನಾಗಿಯೂ ಜ್ಞಾನದರ್ಶನಮಯನಾದ ಆತ್ಮನಲ್ಲಿ ಸ್ಥಿರನಾಗಿ ಕುಳಿತುಕೊಂಡು, ತನ್ನನ್ನು ತಾನೇ ಧ್ಯಾನಿಸುತ್ತಾ, ಭಾವ, ದ್ರವ್ಯ. ಕರ್ಮ, ನೋಕರ್ಮಗಳನ್ನು ಸ್ವಲ್ಪವು ಸ್ಪರ್ಶಿಸದೆ, ಕೇವಲ ಶುದ್ಧಭಾವವನ್ನು ಅನುಭವಿಸುತ್ತಾ, ಏಕಾಗ್ರಮನಸ್ಕನಾಗಿ, ಸ್ವಯಂ ಜ್ಞಾನದರ್ಶನಮಯನಾಗಿ ಆತ್ಮೀಕ ಸುಖವನ್ನು ಪಡೆಯುತ್ತಾನೆ.

ಶ್ರೀ ಗುಣಭದ್ರಾಚಾರ್ಯರು ಆತ್ಮಾನುಶಾಸನದಲ್ಲಿ ಹೇಳುತ್ತಾರೆ :

**ಜ್ಞಾನಸ್ವಭಾವಃ ಸ್ಯಾದಾತ್ಮಾಸ್ವಭಾವಾವಾಪ್ತಿರಚ್ಯುತಿಃ।
ತಸ್ಮಾದಚ್ಯುತಿಮಾಕಾಂಕ್ಷನ್ ಭಾವಯೇಜ್ಜ್ಞಾನಭಾವನಾಂ ॥೧೭೪॥**

**ಮೋಹಬೀಜಾದ್ರತಿದ್ವೇಷೌ ಬೀಜಾತ್ ಮೂಲಾಂಕುರಾವಿವ।
ತಸ್ಮಾಜ್ಜ್ಞಾನಾಗ್ನಿನಾ ದಾಹ್ಯಂ ತದೇತೌ ನಿರ್ದಿಧಿಕ್ಷುಣಾ ॥೧೮೨॥**

**ಅಧೀತ್ಯ ಸಕಲಂ ಶ್ರುತಂ ಚಿರಮುಪಾಸ್ಯ ಘೋರಂ ತಪೋ
ಯದೀಚ್ಛಸಿ ಫಲಂ ತಯೋರಿಹ ಹಿ ಲಾಭಪೂಜಾದಿಕಂ।
ಛಿನತ್ಸಿ ಸುತಪಸ್ತರೋಃ ಪ್ರಸವಮೇವ ಶೂನ್ಯಾಶಯಃ,
ಕಥಂ ಸಮುಪಲಪ್ಸ್ಯಸೇ ಸುರಸಮಸ್ಯ ಪಕ್ವಂ ಫಲಂ ॥೧೮೯॥**

**ಭಾವಾರ್ಥ:** ಆತ್ಮನ ಸ್ವಭಾವವು ಜ್ಞಾನಮಯವಾಗಿರುತ್ತದೆ. ಆ ನಿಜ ಸ್ವಭಾವದ ಪ್ರಾಪ್ತಿಗೇನೇ ಮೋಕ್ಷವೆಂದು ಹೇಳುತ್ತಾರೆ. ಆದ್ದರಿಂದ ಮೋಕ್ಷೇಚ್ಛುಗಳು ಜ್ಞಾನಭಾವನೆಯನ್ನು ಭಾವಿಸಬೇಕು. ಉದಾ: ಬೀಜದಿಂದ ಅಂಕುರೋತ್ಪತ್ತಿಯಾಗುವಂತೆ, ಮೋಹವೆಂಬ ಬೀಜದಿಂದ ರಾಗದ್ವೇಷ

ಗಳುಂಟಾಗುತ್ತವೆ. ಅಂತಹ ರಾಗದ್ವೇಷಗಳನ್ನು ನಾಶಗೊಳಿಸಬೇಕೆಂಬ ಇಚ್ಛೆಯು ಇದ್ದರೆ, ಸುಜ್ಞಾನರೂಪ ಅಗ್ನಿಯಿಂದಲೇ ಅವನ್ನು ಸುಟ್ಟುಹಾಕಬೇಕು. ಎಲೈ ಭವ್ಯನೇ! ಸಕಲ ಶಾಸ್ತ್ರಗಳನ್ನು ಓದಿಯೂ, ಬಹುಕಾಲ ಘೋರ ತಪಸ್ಸನ್ನಾಚರಿಸಿಯೂ ಸಂಸಾರ ಸಂಬಂಧವಾದ ಲಾಭ, ಪೂಜೆ, ಪ್ರತಿಷ್ಠಾದಿಗಳನ್ನು ಇಚ್ಛಿಸುವಿಯಾದರೆ, ಜಡಬುದ್ಧಿಯಾದವನಂತೆ ಸುಂದರವೂ, ಶ್ರೇಷ್ಠವಾದ ತಪೋರೂಪವೂ ಆದ ವೃಕ್ಷದ ಮೂಲ (ಬುಡ) ವನ್ನೇ ಕತ್ತರಿಸಿದರೆ, ಪಕ್ವವಾದ ಮೋಕ್ಷರೂಪ ಮಹಾಫಲದ ಸುಖವನ್ನು ಹೇಗೆ ತಾನೇ ಪಡೆಯಲಾದೀತು? (ಸಾಧ್ಯವಿಲ್ಲವೆಂದರ್ಥವು).

ಶ್ರೀ ಕುಂದಕುಂದಾಚಾರ್ಯರು ಭಾವಪಾಹುಡದಲ್ಲಿ ವರ್ಣಿಸುತ್ತಾರೆ:

**ಬಾಹಿರಸಂಗಚ್ಚಾಓ ಗಿರಿಸರಿದರಿಕಂದರಾಇ ಆವಾಸೋ।**
**ಸಬಲೋ ಝಾಣಜ್ಝಯಣೋ ಣಿರತ್ಥವೋ ಭಾವರಹಿಯಾಣಂ॥೮೯॥**

**ಭಾವಾರ್ಥ:** ಯಾವನ ಭಾವನೆಯು ಶುದ್ಧಾತ್ಮನಲ್ಲಿ ಸ್ಥಿರವಾಗಿರುವುದಿಲ್ಲವೋ, ಅವನ ಬಾಹ್ಯ ಪರಿಗ್ರಹಗಳ ತ್ಯಾಗವು ಪರ್ವತ, ನದಿಯ ದಡ, ಗುಹೆ, ಕಂದರ ಮೊದಲಾದ ಸ್ಥಾನಗಳಲ್ಲಿ ನಿವಾಸವಾಗಿದ್ದು ಧ್ಯಾನ, ಪಠಣ, ಪಠನಾದಿ ಕ್ರಿಯೆಗಳನ್ನು ಮಾಡಿದರೂ ಕೂಡ ವ್ಯರ್ಥವೇ.



## ಭಾವನೆಯೇ ಬಂಧ ಮತ್ತು ಮೋಕ್ಷಕ್ಕೆ ಕಾರಣವು

**ಪರಿಣಾಮೆ ಬಂಧುಜಿ ಕಹಿಉ ಮೋಕ್ಖ ವಿ ತಹ ಜಿ ವಿಯಾಣಿ।**
**ಇಉ ಜಾಣೇ ವಿಣು ಜೀವ ತುಹು ತಹ ಭಾವವು ಪರಿಯಾಣಿ ॥೧೪॥**

**ಅನ್ವಯಾರ್ಥ:** ಪರಿಣಾಮೆ ಬಂಧುಜಿ ಕಹಿಉ–ಪರಿಣಾಮದಿಂದಲೇ ಕರ್ಮಬಂಧವಾಗುತ್ತದೆಂದು ಹೇಳಿದ ಮೇಲೆ, ತಹ ಜಿ ಮೋಕ್ಖ ವಿ ವಿಯಾಣಿ –ಹಾಗೆಯೇ ಪರಿಣಾಮದಿಂದಲೇ ಮೋಕ್ಷಪ್ರಾಪ್ತಿಯೆಂದೂ ಭಾವಿಸು, ಜೀವ–

ಎಲೈ ಜೀವನೇ !, ಇಬು ಜಾಣೇ ವಿಣು–ಹಾಗೆಂದು ತಿಳಿದು, ಶುಹು ತಹ ಭಾವವು ಪರಿಯಾಣಿ– ಸೀನು ಆ ಪರಿಣಾಮಗಳನ್ನು ಅನ್ವೇಷಿಸು.

**ಭಾವಾರ್ಥ :** ಆತ್ಮನು ತನ್ನ ಭಾವಗಳಿಗೆ ತಾನೇ ಕರ್ತೃವು (ಸ್ವಾಭಾವಿಕವಾಗಿಯೇ ಶುದ್ಧಭಾವಗಳ ಕರ್ತೃವು). ಈ ಆತ್ಮದ್ರವ್ಯವು ಪರಿಣಮನ ಶೀಲವು; ಸ್ಫಟಿಕ ಮಣಿಯಂತೆಯೂ ಇರುತ್ತದೆ. ಸ್ಫಟಿಕ ಮಣಿಯು ಕೆಳಭಾಗದಲ್ಲಿ ಅನ್ಯವರ್ಣವುಳ್ಳ ವಸ್ತುಗಳ ಸಂಯೋಗವಾದೊಡನೆ, ಆ ವರ್ಣವೇ ದೃಷ್ಟಿಗೋಚರವಾಗುವುದು. ಯದಿ ಪರವಸ್ತುಗಳ ಸಂಯೋಗವಾಗದಿದ್ದರೆ, ಅದು ನಿರ್ಮಲಸ್ವರೂಪವಲ್ಲಿಯೇ ಪ್ರತಿಬಿಂಬಿಸುವಂತೆ, ಈ ಆತ್ಮನಲ್ಲಿ ಕರ್ಮಗಳ ಉದಯದ ನಿಮಿತ್ತದಿಂದ ವಿಭಾವಗಳಲ್ಲಿಯಾಗಲೀ ಅಥವಾ ಔಪಪಾಧಿಕ ಅಶುದ್ಧಭಾವಗಳಲ್ಲಿಯಾಗಲೀ ಪರಿಣಮನಶಕ್ತಿಯು ಇರುತ್ತದೆ. ಮೋಹನೀಯ ಕರ್ಮಗಳ ಉದಯದಿಂದ ವಿಭಾವ ಭಾವಗಳುಂಟಾಗುತ್ತವೆ. ಆ ಔದಾಯಿಕ ಭಾವಗಳಿಂದಲೇ ಬಂಧವಾಗುತ್ತದೆ.

ಅಶುದ್ಧಭಾವಗಳ ನಿಮಿತ್ತವು ಒದಗಿದೊಡನೆ, ಕಾರ್ಮಣ ವರ್ಗಣೆಗಳು ಎಂಟು ಕರ್ಮಗಳ ರೂಪವಾಗಿಯೂ ಅಥವಾ ಕರ್ಮಗಳ ರೂಪವಾಗಿಯೂ ಬಂಧವಾಗುತ್ತವೆ. ಬಂಧಕಾರಕಭಾವಗಳು ಶುಭೋಪಯೋಗವೆಂದೂ, ಅಶುಭೋಪಯೋಗವೆಂದೂ ಎರಡು ವಿಧವು. ಮಂದಕಷಾಯರೂಪಭಾವಗಳಿಗೆ ಶುಭೋಪಯೋಗವೆಂದೂ, ತೀವ್ರಕಷಾಯರೂಪಭಾವಗಳಿಗೆ ಅಶುಭೋಪಯೋಗವೆಂದೂ ಹೇಳುತ್ತಾರೆ. ಈ ಎರಡು ಭಾವಗಳು ಅಶುದ್ಧವು ಮತ್ತು ಬಂಧಕ್ಕೆ ಕಾರಣಗಳಾಗಿರುತ್ತವೆ. ಸೂಕ್ಷ್ಮ ಕಷಾಯದ ಉದಯವಿರುವವರೆಗು ಕರ್ಮಬಂಧವು ಇದ್ದೇ ಇರುತ್ತದೆ. ಅದು ಹತ್ತನೆಯ ಸೂಕ್ಷ್ಮ ಗುಣಸ್ಥಾನದ ವರೆಗಿರುತ್ತದೆಂದು ಭಾವವು.

ರಾಗದ್ವೇಷಾದಿಮೋಹಭಾವಗಳು ಬಂಧಕ್ಕೇನೇ ಕಾರಣಗಳಾಗಿರುತ್ತವೆ. ಜ್ಞಾನಿಯು ಮಾತ್ರ ಇವನ್ನು ಚೆನ್ನಾಗಿ ತಿಳಿದಿರಬೇಕು. ಮುನಿವ್ರತದ ಅಥವಾ ಶ್ರಾವಕ ವ್ರತದ ರಾಗವಾಗಲಿ, ತಪೋರಾಗವಾಗಲಿ, ಭಕ್ತಿಯರಾಗವಾಗಲಿ, ಪಠನಪಾಠನರಾಗವಾಗಲಿ, ಮಂತ್ರಗಳ ಜಪರೂಪರಾಗವಾಗಲಿ ಇವೇ ಮೊದಲಾದವು ಬಂಧಕ್ಕೇನೇ ಕಾರಣಗಳಾಗಿವೆ. ಸಾಧುಗಳು ಉಗ್ರವಾದ

ಚಾರಿತ್ರವನ್ನು ರಾಗಸಹಿತ ಪಾಲಿಸುತ್ತಿದ್ದರೂ, ಬಂಧವನ್ನೇ ಮಾಡಿಕೊಳ್ಳುತ್ತಾರೆ. ವೀತರಾಗಭಾವವಾಗಲಿ, ಶುದ್ಧೋಪಯೋಗವಾಗಲಿ ಇವು ಮೋಕ್ಷಕ್ಕೆ ಕಾರಣಗಳಾಗಿರುತ್ತವೆ ಅದೇ ನಿಶ್ಚಯರತ್ನತ್ರಯವಾಗಿರುತ್ತದೆ. ಶುದ್ಧಾತ್ಮನ ದರ್ಶನ, ಜ್ಞಾನ, ಧ್ಯಾನಗಳು ಸಮ್ಯಗ್ದರ್ಶನ, ಸಮ್ಯಗ್ಜ್ಞಾನ, ಸಮ್ಯಕ್ಚಾರಿತ್ರವೇ ಆಗಿರುತ್ತವೆ. ಈ ರತ್ನತ್ರಯ ಧರ್ಮವು ಏಕದೇಶದಿಂದಿದ್ದರೂ ಕೂಡ ಬಂಧದ ಕಾರಣಗಳಾಗಲಾರವು.

ದೃಢ ವಿಶ್ವಾಸವುಳ್ಳವನಾದ ಜ್ಞಾನಿಯು ತನ್ನ ಉಪಯೋಗಗಳನ್ನು ಅನ್ಯ ಚಿಂತೆಗಳತೊಯ್ಯದೆ ಏಕಾಗ್ರನಾಗಿ ಹೀಗೆ ತನ್ಮಯನಾಗಬೇಕು. ಧ್ಯಾತಾ, ಧ್ಯಾನ, ಧ್ಯೇಯ ಭೇದವಿಲ್ಲದೆಯೂ, ಗುಣ, ಗುಣೀ ಭೇದವನ್ನು ವಿಚಾರಿಸದೆಯೂ ಸ್ವಸ್ವರೂಪದಲ್ಲಿ ಮಗ್ನನಾಗಬೇಕು. ಹೇಗೆಂದರೆ ನೀರಿನಲ್ಲಿ ಲವಣವು ಕರಗಿ ಹೋಗುವಂತೆ ತನ್ಮಯನಾಗಿ ಆತ್ಮ ಸಮಾಧಿಯು ಪ್ರಾಪ್ತವಾಗಬೇಕು ಅಥವಾ ಸ್ವಾನುಭವವಾಗಬೇಕು. ಇದಕ್ಕೇನೇ ಧ್ಯಾನಾಗ್ನಿಯೆಂದು ಹೇಳುವುದು. ಈ ಏಕಾಗ್ರ ಶುದ್ಧ ಭಾವವೇ ಮೋಕ್ಷಕ್ಕೆ ಕಾರಣವು; ಸಂವರ, ನಿರ್ಜರೆಗಳಿಗೂ ಕಾರಣವಾಗಿರುತ್ತದೆ. ಈ ಭಾವ ಪ್ರಾಪ್ತಿಯು ಕಲೆಯು ನಾಲ್ಕನೇ ಅವಿರತ ಸಮ್ಯಗ್ದೃಷ್ಟಿ ಗುಣಸ್ಥಾನದಿಂದಲೇ ಉಂಟಾಗಲು ಪ್ರಾರಂಭವಾಗುವುದು.

ಈ ಪ್ರವೃತ್ತಿ ಮತ್ತು ನಿವೃತ್ತಿ ರೂಪ ಮಾರ್ಗವು ನಾಲ್ಕನೇ ಅವಿರತ, ಐದನೆಯ ದೇಶವಿರತ ಮತ್ತು ಆರನೆಯ ಪ್ರಮತ್ತವಿರತ ಗುಣಸ್ಥಾನಗಳಲ್ಲಿಯೇ ಪ್ರವೃತ್ತಿಯಾಗುವುದು. ಯಾವಾಗ ಗೃಹಸ್ಥನಾಗಲಿ ಅಥವಾ ಮುನಿಯಾಗಲಿ ಧ್ಯಾನಸ್ಥನಾಗುತ್ತಾನೆಯೋ ಆಗ ನಿವೃತ್ತಿ ಮಾರ್ಗದಲ್ಲಿ ಏರುತ್ತಾನೆ. ಗೃಹಸ್ಥನು ಧರ್ಮ ಅರ್ಥ, ಕಾಮ ಪುರುಷಾರ್ಥಗಳನ್ನೂ ಅಥವಾ ಸಾಧುವು ವ್ಯವಹಾರ ಚಾರಿತ್ರ, ಆಹಾರ, ವಿಹಾರ, ಸ್ವಾಧ್ಯಾಯ, ಧರ್ಮೋಪದೇಶಾದಿಗಳನ್ನು ಸಾಧಿಸುವವನಾಗಿ ಪ್ರವೃತ್ತಿ ಮಾರ್ಗದಲ್ಲಿರುತ್ತಾನೆ. ಉಪಯೋಗವು ಶುದ್ಧಾತ್ಮನ ಸನ್ಮುಖವಾಗುವಾಗ ನಿವೃತ್ತಿಮಾರ್ಗವಿರುವುದು. ಪ್ರವೃತ್ತಿಮಾರ್ಗದಲ್ಲಿ ಚಾರಿತ್ರ ಅಪೇಕ್ಷೆಯಿಂದ ಉಪಯೋಗವು ಪರದ್ರವ್ಯಗಳ ಸನ್ಮುಖವಾಗಿರುತ್ತದೆ. ಏಳನೆಯ ಗುಣಸ್ಥಾನದಿಂದ ಹತ್ತನೆಯ ಗುಣಸ್ಥಾನದವರೆಗೆ ಸಾಧು

ಗಳ ನಿವೃತ್ತಿಮಾರ್ಗವು ಇರುತ್ತದಲ್ಲದೆ, ಪ್ರವೃತ್ತಿಮಾರ್ಗವು ಇರುವುದಿಲ್ಲವು. ಕಾರಣ ಅಲ್ಲಿ ಧ್ಯಾನಾವಸ್ಥೆಯು ಇರುತ್ತದೆಂದು ಭಾವವು.

ಹೀಗೆ ನಾಲ್ಕನೆಯ ಗುಣಸ್ಥಾನದಿಂದ ಹತ್ತನೆಯ ಗುಣಸ್ಥಾನದವರೆಗೆ ನಿವೃತ್ತಿ ಮತ್ತು ಪ್ರವೃತ್ತಿ ಮಾರ್ಗಗಳು ಯಥಾ ಸಂಭವವಾಗಿ ಸಂಭವಿಸುತ್ತಿದ್ದರೂ ಕೂಡ, ಅಪ್ರತ್ಯಾಖ್ಯಾನಾದಿ ಕಷಾಯದ ಉದಯವು ನಾಲ್ಕನೆಯ ಗುಣಸ್ಥಾನದಲ್ಲಿಯೂ, ಪ್ರತ್ಯಾಖ್ಯಾನಾವರಣೀಯ ಕಷಾಯದ ಉದಯವು ಐದನೆಯ ಗುಣಸ್ಥಾನದಲ್ಲಿಯೂ, ಸಂಜ್ವಲನ ಕಷಾಯದ ತೀವ್ರ ಉದಯವು ಆರನೇ ಗುಣಸ್ಥಾನದಲ್ಲಿಯೂ, ಸಂಜ್ವಲನ ಕಷಾಯದ ಮಂದ ಉದಯವು ಏಳನೇ ಗುಣಸ್ಥಾನದಿಂದ ಹತ್ತನೇ ಗುಣಸ್ಥಾನದವರೆಗೂ ಇರುವುದು. ಪ್ರವೃತ್ತಿಯ ಕಾಲದಲ್ಲಿ ತೀವ್ರವಾದ ಉದಯದ ಅವಸ್ಥೆಯು ಇರುವುದು. ತಥಾಪಿ ಕಷಾಯಗಳ ಉದಯವಿರುವವರೆವಿಗೂ ಕರ್ಮಬಂಧವು ತಪ್ಪುವುದಿಲ್ಲವು. ರತ್ನತ್ರಯಭಾವವಿರುವಾಗ ಸಂವರೆ ಮತ್ತು ನಿರ್ಜರೆ ಆಗುತ್ತಿರುತ್ತದೆ. ಬಂಧ ಮತ್ತು ನಿರ್ಜರೆಗಳ ಧಾರಾ ಪ್ರವಾಹವು ಜೊತೆಜೊತೆಯಲ್ಲಿಯೇ ಹರಿದು ಕೊಂಡಿರುತ್ತದೆ.

ಪ್ರತಿಯೊಂದು ಜೀವವು ಗುಣಸ್ಥಾನಗಳಿಗನುಸಾರವಾಗಿ ಬಂಧಕ್ಕೆ ಯೋಗ್ಯವಾದ ಪ್ರವೃತ್ತಿಗಳ ಬಂಧವನ್ನು ಅವಶ್ಯಮಾಡಿಕೊಳ್ಳುತ್ತದೆ. ನಿವೃತ್ತಿಮಾರ್ಗದಲ್ಲಿ ಆರೂಢನಾದ ಮೇಲೆಯೇ, ಘಾತಿಕರ್ಮಗಳ ಸ್ಥಿತಿ ಮತ್ತು ಅನುಭಾಗಗಳು ಬಹು ಅಲ್ಪಸಂಖ್ಯೆಯಲ್ಲಿ ಬೀಳುವುವು ಮತ್ತು ಅಘಾತಿಕರ್ಮಗಳಲ್ಲಿ ಕೆಲವು ಶುಭ ಪ್ರಕೃತಿಗಳ ಬಂಧವಾಗುತ್ತದಲ್ಲದೆ, ಅವುಗಳಲ್ಲಿ ಸ್ಥಿತಿ ಬಂಧವು ಕಡಿಮೆ, ಅನುಭಾಗ ಬಂಧವು ಅಧಿಕ ಪ್ರಮಾಣದಲ್ಲಿರುತ್ತದೆ. ಪ್ರವೃತ್ತಿಮಾರ್ಗದ ಶುಭೋಪಯೋಗಾವಸ್ಥೆಯಲ್ಲಿ ಮೇಲೆ ವರ್ಣಿಸಿರುವ ಅವಸ್ಥೆಯೇ ಇರುತ್ತದೆ. ಆದರೆ ತೀವ್ರಕಷಾಯಗಳ ಉದಯದಿಂದ ಅಶುಭೋಪಯೋಗ ಪ್ರವರ್ತಿಸಲು, ಘಾತಿಕರ್ಮಗಳ ಸ್ಥಿತಿ ಮತ್ತು ಅನುಭಾಗಬಂಧವು ಅಧಿಕವಾಗಿಯೂ, ಹಾಗೆಯೇ ಅಘಾತಿಕರ್ಮಗಳಲ್ಲಿ ಕೆಲವು ಪಾಪಕರ್ಮಗಳ ಅಧಿಕ ಸ್ಥಿತಿ ಮತ್ತು ಅನುಭಾಗ ಬಂಧವೂ ಇರುತ್ತದೆ.

ಇದರ ಮುಖ್ಯಾರ್ಥವು ಶುಭಾಶುಭಭಾವಗಳು, ಅಶುದ್ಧಭಾವವು ಬಂಧಕ್ಕೆ ಕಾರಣಗಳಾಗಿರುತ್ತವೆ. ಪರಿಶುದ್ಧಭಾವವು, ವೀತರಾಗಭಾವವು, ಶುದ್ಧಾತ್ಮಾಭಿಮುಖಭಾವಗಳು ಮೋಕ್ಷಕ್ಕೆ ಕಾರಣಗಳಾಗಿರುತ್ತವೆಂಬ ಶ್ರದ್ಧಾನವು ಜ್ಞಾನಿಗೆ ಅತ್ಯಾವಶ್ಯಕವಾಗಿರುತ್ತದೆ.

ಸಮಯಸಾರದಲ್ಲಿ ಹೇಳಿದೆ :

**ಅಜ್ಝವಸಿದೇಣ ಬಂಧೋ ಸತ್ತೆ ಮಾರೇ ಹಿ ಮಾವ ಮಾರೇ ಹಿಂ।**
**ಏಸೋ ಬಂಧ ಸಮಾಸೋ ಜೀವಾಣಂ ಣಿಚ್ಛಯಣಯಸ್ಯ ॥ ೨೬೪ ॥**

**ವತ್ಥುಂ ಪಡುಚ್ಚ ತಂಪುಣ ಅಜ್ಝವಸಾಣಂ ತು ಹೋದಿ ಜೀವಾಣಂ।**
**ಣಹಿ ಮತ್ಥುದೋ ದು ಬಂಧೋ ಅಜ್ಝವ ಸಾಣೇಣ**
**ಬಂಧೋತ್ತಿ ॥ ೨೬೭ ॥**

**ಏದಾಣಿ ಣತ್ಥಿ ಜೇಸಿಂ ಅಜ್ಝವ ಸಾಣಾಣಿ ಏವ ಮಾದೀಣಿ।**
**ತೇ ಅಸುಹೇಣ ಸುಹೇಣ ಯ ಕಮ್ಮೇಣ ಮುಣೀಣ ಲಿಪ್ಪಂತಿ ॥೨೮೭॥**

ಭಾವಾರ್ಥ : ಹಿಂಸಕ ಪರಿಣಾಮದಿಂದಲೇ ಕರ್ಮಬಂಧವಾಗುವುದು. ಪ್ರಾಣಿಗಳು ಸಾಯಲಿ ಅಥವಾ ಬದುಕಲಿ, ಯಥಾರ್ಥವಾಗಿಯು ಜೀವಗಳ ವಿಕಾರಭಾವಗಳಿಂದಲೇ ಕರ್ಮಬಂಧವಾಗುವುದು. ಇದಕ್ಕೇನೇ ಬಂಧತತ್ವವೆಂದು ಹೇಳುತ್ತಾರೆ. ಯದಿ ಬಾಹ್ಯ ಪದಾರ್ಥಗಳ ನಿಮಿತ್ತದಿಂದಲೇ ಅಶುದ್ಧಭಾವನೆಯುಂಟಾದರೂ, ಬಾಹ್ಯವಸ್ತುಗಳ ಮೂಲಕ ಬಂಧವುಂಟಾಗುವುದಿಲ್ಲವು. ಆದರೆ ಬಂಧವು ಪರಿಣಾಮಗಳಿಂದಲೇ ಆಗುತ್ತದೆ. ಶುಭಾಶುಭಗಳೆಂಬೆರಡು ಭಾವನೆಗಳಿಲ್ಲದ ಮುನಿಶ್ರೇಷ್ಠರಿಗೆ ಪುಣ್ಯಪಾಪಗಳ ಕರ್ಮಗಳ ಬಂಧವು ಆಗಲಾರದು.

ಅದನ್ನೇ ಸಮಯಸಾರಕಲಶದಲ್ಲಿ ಹೇಳಿರುತ್ತಾರೆ:

**ಯಾವತ್ಪಾಕಮುಪೈತಿ ಕರ್ಮವಿರತಿರ್ಜ್ಞಾನಸ್ಯ ಸಮ್ಯಜ್ ನಸಾ**
**ಕರ್ಮಜ್ಞಾನ ಸಮುಚ್ಚಯೋಽಪಿ ವಿಹಿತಸ್ತಾವನ್ನ ಕಾಚಿತ್ಕ್ಷತಿಃ।**

**ಕಿಂ ತ್ವತ್ರಾಪಿ ಸಮುಲ್ಲಸತ್ವ ವಶತೋ ಯತ್ಕರ್ಮ ಬಂಧಃ ಯು ತ-**
**ನ್ಮೋಕ್ಷಾಯ ಸ್ಥಿತಮೇಕಮೇವ ಪರಮಂಜ್ಞಾನಂ ವಿಮುಕ್ತಂ**
**ಸ್ವತಃ ॥೧೧೪॥**

**ಭಾವಾರ್ಥ :** ಮೋಹನೀಯಕರ್ಮದ ಉದಯವು ಇರುವವರೆವಿಗೂ ಪರಿಪೂರ್ಣವೀತರಾಗತೆಯುಂಟಾಗಲಾರದು. ಅವೆರಡು (ಮೋಹದ ಉದಯ ಮತ್ತು ಸಮ್ಯಗ್ದರ್ಶನಗಳು) ಒಟ್ಟಿಗಿದ್ದರೂ ಹಾನಿ ಯಾವುದೂ ಇಲ್ಲವು. ಆದರೆ ಇಲ್ಲಿ ಎಷ್ಟು ಭಾಗವು (ಅಂಶ) ಕರ್ಮಗಳು ಉದಯದಿಂದ ತನ್ನಲ್ಲಿ ರಾಗಾಂಶವು ಇರುವುದೋ, ಅಷ್ಟೇ ಭಾಗವು (ಅಂಶವು) ಬಂಧವಾಗುವುದು. ಹಾಗೆಯೇ ಪರವಸ್ತುಗಳಿಂದ ನಿರ್ಮುಕ್ತವಾದ ಪರಮ ಆತ್ಮಜ್ಞಾನವು ಸ್ವಯಂ ಮೋಕ್ಷಕ್ಕೆ ಕಾರಣವಾಗಿರುತ್ತದೆ. ರತ್ನತ್ರಯ ಅಂಶವು ಬಂಧಕಾರಕವಲ್ಲವು. ರಾಗಾಂಶವೇ ಬಂಧಕಾರಕವು.

ಶ್ರೀ ಕುಂದಕುಂದಾಚಾರ್ಯರು ಭಾವಪಾಹುಡದಲ್ಲಿ ಹೇಳುತ್ತಾರೆ :

**ಭಾವಂ ತಿವಿಹಪಯಾರಂ ಸುಹಾಸುಹಂ ಸುದ್ಧಮೇವಣಾಯವ್ವಂ।**
**ಅಸುಹಂಚ ಅಟ್ಟರುದ್ದಂ ಸುಹ ಧಮ್ಮಂ ಜಿಣವರಿಂದೇಹಿ ॥೭೬॥**

**ಸುದ್ಧಂ ಸುದ್ಧಸಹಾವಂ ಅಪ್ಪಾ ಅಪ್ಪಮ್ಮಿ ತಂ ಚಿ ಣಾಯವ್ವಂ।**
**ಇದಿ ಜಿಣವರೇಹಿಂ ಭಣಿಯಂ ಜಂ ಸೇಯಂ ತಂ ಸಮಾಯ**
**ರಹ ॥೭೭॥**

**ಭಾವಾರ್ಥ :** ಅಶುಭ, ಶುಭ ಮತ್ತು ಶುದ್ಧವೆಂದು ಜೀವಗಳ ಭಾವಗಳು ಮೂರು ವಿಧವು. ಆರ್ತ, ರೌದ್ರ ಧ್ಯಾನಗಳೆರಡು ಅಶುಭ ಭಾವಗಳೆಂದೂ, ಧರ್ಮ ಧ್ಯಾನವು ಶುಭಭಾವವೆಂದೂ, ಆತ್ಮನ ಶುದ್ಧ ಸ್ವಭಾವವು ಶುದ್ಧಭಾವವೆಂದೂ ಹೇಳಿದೆ. ಈ ಶುದ್ಧಭಾವದಲ್ಲಿಯೇ ಆತ್ಮನು ರಮಿಸಬೇಕೆಂದೂ, ಅದರಿಂದಲೇ ಆತ್ಮಕಲ್ಯಾಣವು ನಿಶ್ಚಯವೆಂದೂ ಸರ್ವಜ್ಞ ಜಿನದೇವರು ಆಜ್ಞೆಯಿತ್ತಿರುವರು.

ಅಂತರಂಗ ಅಭಿಪ್ರಾಯದಲ್ಲಿ ಇಷ್ಟವಿಯೋಗ, ಅನಿಷ್ಟ ಸಂಯೋಗ, ಪೀಡಾರೂಪ ಚಿಂತನೆ, ಭೋಗಾಕಾಂಕ್ಷೆ, ನಿದಾನ ಭಾವವು ಮತ್ತು ಹಿಂಸಾ

ನಂದ, ಮೃಷಾನಂದ, ಚೌರ್ಯಾನಂದ, ಪರಿಗ್ರಹಾನಂದ ಮೊದಲಾದ ನಾಲ್ಕು ಪ್ರಕಾರದ ರೌದ್ರ ಧ್ಯಾನದಲ್ಲಿ ಯಾವುದಾದರೊಂದು ಭಾವವು ಅಶುಭ ಭಾವವೆಂದೂ, ರತ್ನತ್ರಯ ಧರ್ಮದಲ್ಲಿ ಪ್ರೇಮ ಭಾವನೆಯು ಶುಭ ಭಾವವೆಂದೂ ಮತ್ತು ನಿರ್ವಿಕಲ್ಪ ಭಾವವೇ ಆತ್ಮೀಕ ಭಾವವೆಂದೂ ನಿಶ್ಚಯಿಸಬೇಕು.

ಇದರಿಂದ ಜ್ಞಾನಿಯಾದ ಸಮ್ಯಗ್ದೃಷ್ಟಿಗೇನೆ ಶುದ್ಧ ಭಾವವುಂಟಾಗುತ್ತದೆ. ವ್ಯವಹಾರದಲ್ಲಿ ಮಿಥ್ಯಾ ದೃಷ್ಟಿಯ ಮಂದ ಕಷಾಯಕ್ಕೆ ಶುಭ ಭಾವವೆಂದು ಹೇಳುತ್ತಾರೆ. ಅವನಲ್ಲಿ ಅಶುಭ ಆಶಯಗಳಿರುವುದರಿಂದಲೂ, ಒಂದಿಲ್ಲೊಂದು ಆರ್ತವೋ ರೌದ್ರವೋ ಇರುವುದರಿಂದಲೂ ಅಶುಭ ಭಾವವೇ ಪರಿಗಣಿಸಲ್ಪಡುವುದು.

ಶುದ್ಧ ಭಾವವು ಮೋಕ್ಷಕ್ಕೆ ಕಾರಣಭೂತವೂ ಆತ್ಮಾನುಭವರೂಪವೂ ಆಗಿರುತ್ತದೆ.



## ಪುಣ್ಯಕರ್ಮವು ಮೋಕ್ಷಸುಖವನ್ನುಂಟು ಮಾಡಲಾರದು

**ಅಹ ಪುಣು ಅಪ್ಪಾ ಣ ವಿ ಮುಣಹಿ ಪುಣ್ಣು ವಿ ಕರಇ ಅಸೇಸು।**
**ತೌ ವಿಣು ಪಾವಇ ಸಿದ್ಧಸುಹು ಪುಣು ಸಂಸಾರ ಭಮೇಸು ॥ ೧೫ ॥**

**ಅನ್ವಯಾರ್ಥ :** ಅಹ ಪುಣು ಅಪ್ಪಾ ಣ ವಿ ಮುಣಹಿ–ಒಂದು ವೇಳೆ ನೀನು ಆತ್ಮನನ್ನು ತಿಳಿಯದಿದ್ದರೆ, ಅಸೇಸು ಪುಣ್ಣು ವಿ ಕರಇ- ಎಲ್ಲ ಪುಣ್ಯ ಕರ್ಮಗಳನ್ನೆಸಗುತ್ತ, ತಉ ವಿ ಸಿದ್ಧಸುಹು ಣ ಪಾವಇ – ಇದ್ದರೂ ಕೂಡ ನೀನು ಸಿದ್ಧ ಸುಖವ ಪಡೆಯುವುದಿಲ್ಲವು. ಪುಣು ಸಂಸಾರ ಭಮೇಇ–ಪುನಃ ಪುನಃ ಸಂಸಾರದಲ್ಲಿಯೇ ಭ್ರಮಿಸುವಿ.

**ಭಾವಾರ್ಥ :** ಸಿದ್ಧ ಸುಖವಾಗಲೀ ಅಥವಾ ಮೋಕ್ಷ ಸುಖವಾಗಲಿ ಅದು ಆತ್ಮನ ನಿಜವಾದ ಸ್ವಾಭಾವಿಕವಾದ ಅತೀಂದ್ರಿಯ ಗುಣವಾದ ಗುಣ

ವಾಗಿದೆ. ಆ ಪರಮನಿರಂಜನವಾದ ಆತ್ಮನ ಗುಣವು ಜ್ಞಾನಾವರಣ, ದರ್ಶನಾವರಣ, ಮೋಹನೀಯ ಮತ್ತು ಅಂತರಾಯಗಳೆಂಬ ನಾಲ್ಕು ಘಾತಿ ಕರ್ಮಗಳಿಂದ ಆವರಿಸಲ್ಪಟ್ಟಿರುತ್ತದೆ. ಆ ನಿಜವಾದ ಗುಣಗಳು ಪ್ರಕಟಕ್ಕೆ ಬರಬೇಕಾದರೆ ನಾಲ್ಕು ಘಾತಿಕರ್ಮಗಳನ್ನು ಸಂಪೂರ್ಣ ರೀತಿಯಿಂದ ನಾಶ ಮಾಡಬೇಕು. ಆಗ ಅನಂತ ಅತೀಂದ್ರಿಯ ಸುಖಯುಕ್ತವಾದ ಅರ್ಹಂತ್ಯ ಕೇವಲೀತ್ವವು ಪ್ರಕಟವಾಗುತ್ತದೆ. ಅದೇ ಸಿದ್ಧಾವಸ್ಥೆಯಲ್ಲಿ ಇರುತ್ತದೆ. ಈ ಸುಖದ ಪ್ರಾಪ್ತಿಯ ಉಪಾಯವು ತನ್ನಾತ್ಮನ ಶ್ರದ್ಧಾಜ್ಞಾನ ಮತ್ತು ಚಾರಿತ್ರವೇ ಆಗಿರುತ್ತದೆ. ಆದ್ದರಿಂದ ಸಮ್ಯಗ್ದೃಷ್ಟಿಯು ತನ್ನಾತ್ಮನ ಸತ್ಯ ಸ್ವಭಾವದಲ್ಲಿ ಪೂರ್ಣ ವಿಶ್ವಾಸವಿಟ್ಟುಕೊಂಡಿರುತ್ತಾನೆ. ಆದರಿಂದ ತನ್ನಲ್ಲಿ ತಾನು ಮಗ್ನನಾಗಿ, ಆನಂದ ರಸಾಮೃತವನ್ನು ಪಾನಮಾಡುತ್ತಿರುವಾಗಲೇ, ವೀತರಾಗ ಪರಿಣತಿಯಿಂದ ಪೂರ್ವಸಂಚಿತ ಕರ್ಮಗಳ ನಿರ್ಜರೆಯೂ, ನೂತನ ಕರ್ಮಗಳ ಸಂವರೆಯೂ ಆಗುತ್ತಿರುತ್ತದೆ. ಆತ್ಮನೇ ಸಾಧಕನೂ ಸಾಧ್ಯನೂ ಆಗಿರುತ್ತಾನೆ. ತತ್ವದಲ್ಲಿ ಪುಣ್ಯಬಂಧಕ್ಕೆ ಕಾರಣಗಳಾದ ಶುಭ ಮನ, ವಚನ, ಕಾಯಗಳ ಮೂಲಕ ನಾನಾ ರೀತಿಯ ಕಾರ್ಯಗಳನ್ನು ಮಾಡುತ್ತಾ, ಮೋಕ್ಷಸುಖದ ಪ್ರಾಪ್ತಿಯಾಗಬೇಕೆಂದು ಆಶಿಪಡುತ್ತಾನೆ. ಆದರೆ ಅದು ಎಂದೆಂದಿಗೂ ಸಿಕ್ಕಲಾರದು. ಮನ, ವಚನ, ಕಾಯಗಳಲ್ಲಿ ಮೋಹ, ಅನುರಾಗವಿರುವವರೆಗೆ, ಕರ್ಮಬಂಧವಲ್ಲದೆ ನಿರ್ಜರೆಯು ಆಗುವುದಿಲ್ಲವು.

ಮಾನವನು ಉಗ್ರವಾದ ತಪಸ್ಸನ್ನಾಗಲೀ, ವ್ರತಗಳನ್ನಾಗಲೀ ಮತ್ತು ಪುಣ್ಯಕರ್ಮಬಂಧಕ್ಕೆ ಕಾರ್ಯಗಳನ್ನಾಗಲೀ ಮಾಡಿದರೂ ಕೂಡ, ಅವನು ಸಂಸಾರ ಮಾರ್ಗದ ಮಾರ್ಗಸ್ಥನಲ್ಲದೆ, ನಿರ್ವಾಣ ಮಾರ್ಗದ ಮಾರ್ಗಸ್ಥನಾಗಿ ಆಗಲು ಸಾಧ್ಯವಿಲ್ಲವು. ಅವನು ನಿಜವಾಗಿಯೂ ಬಹಿರಾತ್ಮನು ಮತ್ತು ಮಿಥ್ಯಾದೃಷ್ಟಿಯೇ ಆಗಿರುವನು. ಆತನು ದ್ರವ್ಯಲಿಂಗಿ ಮುನಿಯ ಚಾರಿತ್ರವನ್ನೂ, ಶಾಸ್ತ್ರೋಕ್ತ ವ್ರತ, ಸಮಿತಿ, ಗುಪ್ತಿಗಳನ್ನೂ ಮತ್ತು ತಪಸ್ಸನ್ನೂ ಆಚರಿಸುತ್ತಾ, ಮಹಾ ಪುಣ್ಯಬಂಧವನ್ನೇ ಬಂಧಿಸಿಕೊಂಡು, ಒಂಭತ್ತನೆಯ ಗ್ರೈವೇಯಕದಲ್ಲಿ ಅಹಮಿಂದ್ರನಾಗಿ ಜನಿಸುತ್ತಾನೆ. ಹೀಗೆ ಸಂಸಾರದಲ್ಲಿ ಭ್ರಮಿಸಿಕೊಂಡಿರುತ್ತಾನೆ.

ಮೋಕ್ಷಕ್ಕೆ ಪ್ರಧಾನ ಕಾರಣವಾದ ಶುದ್ಧೋಪಯೋಗ ತತ್ವದಲ್ಲಿ ಶ್ರದ್ಧೆಯನ್ನಿಟ್ಟ ಅಂತರಾತ್ಮನು ಮೋಕ್ಷಮಾರ್ಗಿಯಾಗುವನು. ಈತನ ದೃಷ್ಟಿಯು ಪ್ರತಿ ಸಮಯದಲ್ಲಿ ಆತ್ಮ ತತ್ವದಲ್ಲಿ ರಮಿಸಿಕೊಂಡಿರುತ್ತದೆ. ಆತ್ಮರೂಪ ಶಾಂತ ಗಂಗಾನದಿಯಲ್ಲಿ ಸ್ನಾನಮಾಡಿಕೊಂಡಿರುವುದೇ ಸತ್ಯಧರ್ಮವೆಂದು ಭಾವಿಸಿಕೊಂಡಿರುತ್ತಾನೆ. ಮಾತ್ರವಲ್ಲ, ಮನ, ವಚನ, ಕಾಯಗಳ ಪ್ರವೃತ್ತಿಯನ್ನು ಬಂಧಕಾರಕಗಳೆಂದೂ, ಅಧರ್ಮವೆಂದೂ ತಿಳಿಯುತ್ತಾನೆ. ವ್ಯವಹಾರದಲ್ಲಿ ಧರ್ಮಕಾರ್ಯಗಳೆಂದು ಹೇಳಲ್ಪಡುವ ಕಾರ್ಯಗಳೆಲ್ಲ ಧರ್ಮವೆಂಬ ದೃಢವಾದ ನಂಬಿಕೆಯೂ ಕೂಡ ಇರುತ್ತದೆ.

ಪವಿತ್ರ ಸಮ್ಯಗ್ದರ್ಶನದ ಲಾಭವಾದೊಡನೆ, ಅಶುಭ ಪ್ರವೃತ್ತಿಯಿಂದ ಉದಾಸೀನನಾಗುವಂತೆ, ಶುಭ ಪ್ರವೃತ್ತಿಯಿಂದಲೂ ಉದಾಸೀನನಾಗುತ್ತಾನೆ. ಅವನು ಮುನಿಗಳ ಅಥವಾ ಗೃಹಸ್ಥರ ವ್ರತಗಳನ್ನಾಚರಿಸಲು ಇಷ್ಟಪಡುವುದಿಲ್ಲವು. ಪರಂತು ಆತ್ಮ ಬಲದ ಹೀನತೆಯಿಂದ, ಉಪಯೋಗವು ತನ್ನಂತರಂಗದಲ್ಲಿ ಅಧಿಕ ಸಮಯ ಸ್ಥಿರವಾಗಿರಲಾರದೋ, ಅಷ್ಟರವರೆಗೆ ಅಶುಭಾದಿಗಳಿಂದ ರಕ್ಷಣೆ ಹೊಂದುವುದಕ್ಕೋಸ್ಕರ ಶುಭಕಾರ್ಯಗಳನ್ನೇ ಮಾಡಿಕೊಂಡಿರುತ್ತಾನೆ. ಆದರೂ ಅವೆಲ್ಲವೂ ಬಂಧಕಾರಕಗಳೆಂಬ ವಿಚಾರವು ಬೇರೂರಿಕೊಂಡಿರುತ್ತದೆ. "ಅಂತರಂಗ ಪರಿಣಾಮವು ಆತ್ಮನಲ್ಲಿಯೇ ರಮಿಸಬೇಕೆಂದಿರುವುದು. ನಾನು ನನ್ನ ಮನೆಯನ್ನು ಬಿಟ್ಟು ಪರರ ಮನೆಯಲ್ಲಿ ಬಂದು ವಾಸಿಸುತ್ತ ಅಪರಾಧಿಯಂಥಾಗಿರುವೆನು. ಶುಭಕಾರ್ಯಗಳು ಮೋಕ್ಷಕ್ಕೆ ಕಾರಣವಲ್ಲ" ಎಂದು ನಿಶ್ಚಯಿಸಿಕೊಂಡಿರುವನು ಆ ಸಮ್ಯಗ್ದೃಷ್ಟಿಯು.

ಯಾವ ಸಾಧನಗಳಿಂದ ವೀತರಾಗ ಪರಿಣತಿಯ ಪ್ರಕಾಶವು ಪ್ರಜ್ವಲಿಸುವುದೋ, ಅದು ಮೋಕ್ಷಮಾರ್ಗವೆಂದು ಭಾವಿಸುತ್ತಾನಾದ್ದರಿಂದಲೇ, ಶುಭ ಕಾರ್ಯಗಳನ್ನು ಉದಾಸೀನತೆಯಿಂದಲೇ ಮಾಡುತ್ತಿರುವ ಮೋಕ್ಷಮಾರ್ಗಿಯ ನಿಶ್ಚಯ ರತ್ನತ್ರಯವೇ ಧರ್ಮವು. ಇದಕ್ಕೆ ವ್ಯವಹಾರ ರತ್ನತ್ರಯವು ನಿಮಿತ್ತ ಮಾತ್ರವಾಗಿರುತ್ತದೆ. ಅದು ನಿಶ್ಚಯದ ದೃಷ್ಟಿಯಿಂದ (ಅಪೇಕ್ಷೆಯಿಂದ) ಅಧರ್ಮವೇ ಆಗಿರುತ್ತದೆ. ಜ್ಞಾನಿಯು ಆತ್ಮಜ್ಞಾನದ ಹೊರತು ಇನ್ನಿತರ ಕಾರ್ಯಗಳನ್ನೆಸಗುವುದು ಅಪರಾಧವೆಂದೂ, ತನ್ನಾತ್ಮನಲ್ಲಿ ಸದಾಕಾಲ ರಮಿಸುವುದು

ನಿಜವಾದ ಹಿತವೆಂದೂ ತಿಳಿಯುತ್ತಾನೆ. ಸಮ್ಯಗ್ದೃಷ್ಟಿ ಜ್ಞಾನಿಯು ನಾಲ್ಕನೆಯ ಅವಿರತ ಗುಣಸ್ಥಾನವಲ್ಲಿದ್ದರೂ ಕೂಡ, ನಿರಂತರ ಆತ್ಮಾನುಭವದ ಅನ್ವೇಷಣೆಯಲ್ಲಿರುವುದಲ್ಲದೆ, ವ್ಯವಹಾರ ಧರ್ಮಗಳಾದ ಪೂಜೆ, ಜಪ, ತಪ, ಸ್ವಾಧ್ಯಾಯವೇ ಮೊದಲಾದ ವ್ರತಗಳನ್ನು ಪಾಲಿಸುತ್ತಿದ್ದರೂ, ಅಂತರಂಗದಲ್ಲಿ ಪುಣ್ಯಾನ್ವೇಷಣೆಯನ್ನಾಗಲೀ ಅಥವಾ ಅದನ್ನು ಇಚ್ಛಿಸುವುದಾಗಲಿ ಮಾಡುವುದಿಲ್ಲವು. ಆತನು ವ್ಯವಹಾರ ಧರ್ಮಸಾಧನಗಳು ಕೇವಲ ಪುಣ್ಯಬಂಧವೆಂದು ಭಾವಿಸುತ್ತಿರುತ್ತಾನೆ.

ಚತುರನಾದ ವ್ಯಾಪಾರಿಯು ಧನ ಸಂಪಾದಿಸುವ ಪ್ರೇಮಿ (ಅಭಿರುಚಿ) ಯುಳ್ಳವನಾಗಿ, ಪೇಟೆಗೆ ಹೋಗಿ ಪದಾರ್ಥಗಳನ್ನು ಖರೀದಿಸಿ, ತೂಕ, ಅಳತೆ ಮಾಡುತ್ತ ವಿಕ್ರಯ ಮಾಡುತ್ತಾನೆ. ಧನಸಂಪಾದನೆಯಾದೊಡನೆ ತನ್ನ ಸಕಲ ಪರಿಶ್ರಮವು ಸಫಲವಾಯಿತೆಂದು ತಿಳಿಯುತ್ತಾನೆ. ಯದಿ ಅನೇಕ ತರಹದಿಂದ ಪರಿಶ್ರಮಪಟ್ಟರೂ, ಧನವು ಸಂಪಾಧನೆಯಾಗಲಿಲ್ಲವೆಂದರೆ, ನಿಪುಣವ್ಯಾಪಾರಿಯಲ್ಲವೆಂದೇ ತೀರ್ಮಾನಿಸಿಕೊಳ್ಳಬೇಕು.

ಆತನ ಪ್ರಯತ್ನಗಳೆಲ್ಲವನ್ನೂ ಧನಲಾಭವೆಂದು ಭಾವಿಸಲಾರನು. ಧನಲಾಭವೇ ಆತನ ಮುಖ್ಯ ಧ್ಯೇಯವು. ಆ ಧ್ಯೇಯದ ಸಿದ್ಧಿಯು ಉದ್ಯಮವೇ ನಿಮಿತ್ತಮಾತ್ರವಾಗಿರುತ್ತದಾದ್ದರಿಂದ ಆ ಉದ್ಯಮವನ್ನೇ ಮಾಡುತ್ತಿರುತ್ತಾನೆ. ಆತನ ಹಗಲಿರುಳಿನ ವಿಚಾರ ಧಾರೆಯು ಧನಸಂಗ್ರಹವೇ ತನ್ನ ಸಫಲತೆಯೆಂದು ವಿಚಾರಿಸುವಂತೆ, ಸಮ್ಯಗ್ದೃಷ್ಟಿ ಜ್ಞಾನಿಯು ಆತ್ಮಾನುಭವದ ಲಾಭವೇ ತನ್ನ ಲಾಭವೆಂದು ವಿಚಾರಿಸುತ್ತ, ರಾತ್ರಿ ಹಗಲು ಆತ್ಮಾನುಭವದ ಅನ್ವೇಷಣೆಯಲ್ಲಿರುತ್ತ, ವ್ಯವಹಾರ ಧರ್ಮದ ಸಹಾಯದಿಂದ ಪುನಃ ಆತ್ಮಾನುಭವದಲ್ಲಿ ತನ್ಮಯನಾಗಲೆಂದು ಇಚ್ಛಿಸುತ್ತಾನೆ. ಉದಾಹರಣೆ: ಒಬ್ಬ ಸಮ್ಯಗ್ದೃಷ್ಟಿ ಶ್ರಾವಕನು ದೇವರ ಪೂಜೆಯನ್ನು ಮಾಡುತ್ತ, ಸ್ತೋತ್ರಗೈಯುತ್ತ, ಅರಹಂತ ಮತ್ತು ಸಿದ್ಧರ ಆತ್ಮೀಕ ಗುಣಗಳನ್ನು ವರ್ಣಿಸುತ್ತಾ, ಇವೆಲ್ಲಾ ತನ್ನಾತ್ಮನ ಗುಣ ವರ್ಣನೆಯನೆಯೆಂದೇ ಭಾವಿಸುತ್ತಾನೆ. ಆತನ ಮುಖ್ಯ ಲಕ್ಷ್ಯವು ತನ್ನಾತ್ಮನಲ್ಲಿದ್ದು, ಪೂಜಾಕಾರ್ಯಾದಿಗಳ ಮಧ್ಯದಲ್ಲಿಯು ಅಲ್ಪಕಾಲ ಇದ್ದು, ಆತ್ಮಾನಂದದಲ್ಲಿ ಕ್ರೀಡಿಸುತ್ತ, ಆತ್ಮಾನುಭವವನ್ನು ಪ್ರಾಪ್ತ ಮಾಡಿಕೊಳ್ಳುತ್ತಾನೆ.

ಇದೇ ಪ್ರಕಾರವಾಗಿ ಸಾಮಾಯಿಕವನ್ನು ಮಾಡುತ್ತಿರುವಾಗಲೂ, ಸ್ವಾಧ್ಯಾಯ ಮಾಡುತ್ತಿರುವಾಗಲೂ, ಜಪ, ತಪಗಳನ್ನಾಚರಿಸುತ್ತಿರುವಾಗಲೂ ಆತ್ಮನಲ್ಲಿ ಸ್ಥಿರತೆಯ ಅನ್ವೇಷಣದಲ್ಲಿಯೇ ಮಗ್ನನಾಗಿರುತ್ತಾನೆ. ಯಾವಾಗ ಅಲ್ಪ ಸಮಯದವರೆಗೆ ಆತ್ಮಾನುಭವವಾಗುವೋ, ಯಾತ್ರಾದಿಗಳನ್ನು ಮಾಡುವುದು ಸಫಲವೆಂದು ಭಾಸವಾಗುತ್ತದೆ. ವ್ಯಾಪಾರಿಯು ಧನಾನ್ವೇಷಕನಾಗಿರುವಂತೆ, ಸಮ್ಯಕ್ತ್ವವಂತನೂ ಕೂಡ ಆತ್ಮಾನುಭವದ ಅನ್ವೇಷಕನೇ. ಆತ್ಮಾನುಭವದ ಪ್ರಾಪ್ತಿಯ ಭಾವನೆಯಿಲ್ಲದೆ, ಶುಭಕಾರ್ಯಗಳು ಕೇವಲ ಬಂಧಕ್ಕೆ ಕಾರಣಗಳಾಗಿವೆ. ಆತ್ಮಾನುಭವದ ಪ್ರಾಪ್ತಿಯೇ ಮೋಕ್ಷ ಸಾಧನದ ಪ್ರಾಪ್ತಿಯು ಆಗಿದೆ. ಯಾಕೆಂದರೆ ಅದರಲ್ಲಿ ನಿಶ್ಚಯ ಸಮ್ಯಕ್ತ್ವ, ನಿಶ್ಚಯ ಸಮ್ಯಗ್ಜ್ಞಾನ ಮತ್ತು ನಿಶ್ಚಯ ಸಮ್ಯಕ್ಚಾರಿತ್ರಗಳೆಂಬ ಮೂರು ರತ್ನಗಳು ಗರ್ಭಿತವಾಗಿರುತ್ತವೆ. ಮೋಕ್ಷದಲ್ಲಿ ದೃಷ್ಟಿಯಿರುವಾತನೇ ಮೋಕ್ಷಮಾರ್ಗಿಯೆಂದೂ, ಸಂಸಾರದಲ್ಲಿ ದೃಷ್ಟಿಯಿರುವಾತನೇ ಸಂಸಾರಮಾರ್ಗಿಯೆಂದೂ ನಿಶ್ಚಯಿಸಿಕೊಳ್ಳುವುದು.

ಸಂಸಾರದಲ್ಲಿದ್ದುಕೊಂಡು ಅದನ್ನೇ ಮೋಕ್ಷದೃಷ್ಟಿಯೆಂದು ಭಾವಿಸುವವನೇ ಮಿಥ್ಯಾದೃಷ್ಟಿಯೆಂದೂ, ಮೋಕ್ಷ ವಿಚಾರದಲ್ಲಿ ಶುಭಭಾವಗಳು ಬಂಧಕ್ಕೆ ಕಾರಣಗಳೆಂದೂ, ಆತ್ಮಭಾವನೆಯು ಮೋಕ್ಷಕಾರಕವೆಂದೂ ಮೊದಲಾದ ವಿಚಾರವುಳ್ಳವನೇ ಸಮ್ಯಗ್ದೃಷ್ಟಿಯೆಂದೂ ಆಚಾರ್ಯರು ವರ್ಣಿಸಿರುತ್ತಾರೆ. ಇದನ್ನೇ ಯೋಗೀಂದ್ರಾಚಾರ್ಯರು ಅಪ್ಪಣೆಕೊಡಿಸಿದ್ದಾರೆ. ಏನೆಂದರೆ: ವ್ಯವಹಾರ ಧರ್ಮದಲ್ಲಿ ತನ್ಮಯನಾಗಿ, ನಿಶ್ಚಯ ಧರ್ಮದ ಪ್ರಾಪ್ತಿಯ ವಿಷಯವನ್ನು ಮರೆಯಬೇಡ. ಒಂದು ವೇಳೆ ಆತ್ಮಾನುಭವದ ಸ್ವರೂಪವು ಮಾಯವಾದೊಡನೆ, ಭವಭವಗಳಲ್ಲಿಯೂ ಅನೇಕ ಸಲ ಸಾಧುಗಳ ಚಾರಿತ್ರವನ್ನು ಪಾಲಿಸುತ್ತಿದ್ದರೂ, ಸಂಸಾರವೇ ಕಟ್ಟಿಟ್ಟ ಗಂಟುವೆಂದು ತಿಳಿ. ಮಾತ್ರವಲ್ಲ ಪುಣ್ಯಬಂಧಕ್ಕೆ ಕಾರಣಗಳಾದ ಭಾವಗಳನ್ನು ಮೋಕ್ಷಮಾರ್ಗವೆಂದು ಮಾತ್ರ ನಂಬಬೇಡ.

ಸಮಯಸಾರದಲ್ಲಿ ಹೇಳಿರುತ್ತಾರೆ:

**ವದಣಿಯಮಾಣಿಧರಂತಾ ಸೀಲಾಣಿ ತಹಾ ತವಂ ಚ ಕುವ್ವಂತಾ।**
**ಪರಮಟ್ಠ ವಾಹಿರಾ ಜೇಣ ತೇಣ ತೇ ಹೊಂತಿ ಅಣ್ಣಾಣಿ ॥೧೬೦॥**

**ಪರಮಟ್ಠಬಾಹಿರಾ ಜೇ [illegible] ಅಣ್ಣಾಣೇಣ ಪುಣ್ಣ ಮಿಚ್ಛಂತಿ।**
**ಸಂಸಾರಗಮಣಹೇದುಂ ವಿಮೋಕ್ಖಹೇದುಂ ಅಯಾಣಾಂತಾ ॥೧೬೧॥**

**ಭಾವಾರ್ಥ:** ನಿಶ್ಚಯ ಆತ್ಮಸ್ವಭಾವ ಧರ್ಮದಿಂದ ರಹಿತರಾದ ಯಾವ ವ್ರತ ನಿಯಮಗಳುಳ್ಳವರೂ, ಶೀಲವ್ರತವುಳ್ಳವರೂ, ತಪಸ್ಸು ಮೊದಲಾದವರೂ, ಅಜ್ಞಾನಿ ಬಹಿರಾತ್ಮರೇ ಮಾತ್ರವಲ್ಲ, ಪರಮಾರ್ಥವಾದ ಆತ್ಮವನ್ನರಿಯದವರೂ ಅವರೆಲ್ಲರೂ ಅಜ್ಞಾನದಿಂದ ಸಂಸಾರ ಪರಿಭ್ರಮಣಕ್ಕೆ ಕಾರಣಗಳಾದ ಪುಣ್ಯಕರ್ಮಗಳನ್ನೇ ಇಷ್ಟಪಡುತ್ತಾರೆ. ಯಾಕೆಂದರೆ ಅವರಿಗೆ ಮೋಕ್ಷಸಾಧನಗಳ ಪರಿಜ್ಞಾನವಿರುವುದಿಲ್ಲವು.

ಶ್ರೀ ಕುಂದಕುಂದಾಚಾರ್ಯರು ಮೋಕ್ಷಪಾಹುಡದಲ್ಲಿ ಹೇಳಿರುತ್ತಾರೆ:

**ಕಿಂ ಕಾಹಿದಿ ಬಹಿಕಮ್ಮಂ ಕಿಂ ಕಾಹಿದಿ ಬಹುವಿಹಂ ಚ ಖವಣಂ ತು।**
**ಕಿಂ ಕಾಹಿದಿ ಆದಾವಂ ಆದ ಸಹಾವಸ್ಸ ವಿವರೀದೋ ॥ ೯೯ ॥**

**ಭಾವಾರ್ಥ:** ಬಾಹ್ಯಕ್ರಿಯೆಗಳಾದ ಉಪವಾಸಾದಿ ತಪಸ್ಸು, ಆತ್ಮೋಪಯೋಗಾದಿ ಕಾಯಕ್ಲೇಶಗಳು ಮೋಕ್ಷಸುಖದ ಸಾಧಕಗಳಾಗಲಾರವು. ಆತ್ಮಜ್ಞಾನವೇ ಮೋಕ್ಷಸುಖದ ಸಾಧಕವಾಗಿರುತ್ತದೆ.

ಸಮಾಧಿಶತಕದಲ್ಲಿ ಹೇಳಿದ್ದಾರೆ:

**ಯೋ ನ ವೇತ್ತಿ ಪರಂ ದೇಹಾದೇವಮಾತ್ಮಾನಮವ್ಯಯಂ।**
**ಲಭತೇ ನ ಸ ನಿರ್ವಾಣಂ ತಪ್ತ್ವಾಪಿ ಪರಮಂ ತಪಃ ॥ ೩೩೦ ॥**

**ಭಾವಾರ್ಥ:** ಶರೀರಾದಿಗಳಿಂದ ಭಿನ್ನನೂ, ಅವಿನಾಶಿಯೂ ಆದ ಆತ್ಮನನ್ನು ತಿಳಿಯದೇ ಉತ್ಕೃಷ್ಟ ತಪಸ್ಸನ್ನು ಆಚರಿಸಿದರೂ ಮೋಕ್ಷಲಕ್ಷ್ಮಿಯನ್ನು ಪಡೆಯಲಾರನು.



# ಆತ್ಮದರ್ಶನವೇ ಮೋಕ್ಷಕ್ಕೆ ಕಾರಣವು

**ಅಪ್ಪಾ ದಂಸಣ ಇಕ್ಕಪರು ಅಣ್ಣು ಣ ಕಿಂ ಪಿ ವಿಯಾಣಿ।**
**ಮೋಕ್ಖಹ ಕಾರಣ ಜೋಈಯಾ ಣಿಚ್ಛಹ ಏಹಉ ಜಾಣಿ ॥೧೭॥**

**ಅನ್ವಯಾರ್ಥ** : ಜೋಈಯಾ–ಎಲೈ ಯೋಗಿಯೇ! ಇಕ್ಕ ಅಪ್ಪಾ ದಂಸಣ ಮೋಕ್ಖಹ ಕಾರಣ–ಆತ್ಮನ ದರ್ಶನ ಒಂದೇ ಮೋಕ್ಷಮಾರ್ಗವಾಗಿ ರುತ್ತದೆ. ಅಣ್ಣು ಪರು ಣ ಕಿಂ ವಿಯಾಣಿ-ಬೇರೆ ಯಾವುದು ಮೋಕ್ಷಮಾರ್ಗ ವಾಗಲಾರದೆಂದು ತಿಳಿ. ಣಿಚ್ಛಹ ಏಹಉ ಜಾಣಿ-ಇದು ನಿಶ್ಚಯನಯವೆಂದೂ ತಿಳಿ.

**ಭಾವಾರ್ಥ:** ಯಥಾರ್ಥ ಕಥನವು ನಿಶ್ಚಯನಯದಿಂದಲೇ ಆಗುವುದು ಅಥವಾ ಈ ನಯದಿಂದಲೇ ಉಪಾದಾನ ಕಾರಣದ ವರ್ಣನೆಯೂ, ಮೋಕ್ಷ ಮಾರ್ಗವಾದ ಆತ್ಮದರ್ಶನವೂ ಆಗುವುದಲ್ಲದೆ ಅನ್ಯ ಯಾವ ಮಾರ್ಗಗಳು ಇರುವುದಿಲ್ಲವೆಂದು ತೀರ್ಮಾನಿಸಿಕೊಳ್ಳಬೇಕು. ಒಂದು ವೇಳೆ ಪರವಸ್ತು ಗಳ ಆಶ್ರಯದಿಂದಲೇ ಮೋಕ್ಷಪ್ರಾಪ್ತಿಯಾಗುವುದೆಂದರೆ ಅದು ಮಿಥ್ಯಾತ್ವವೇ ಆಗುತ್ತದೆ. ಮನ, ವಚನ, ಕಾಯಗಳು ಆತ್ಮ ತತ್ವದಿಂದ ಅಥವಾ ಆತ್ಮನ ಮೂಲತತ್ವ ಸ್ವಭಾವದಿಂದ ಸರ್ವಥಾ ಭಿನ್ನಗಳಾಗಿವೆ. ಅದು ಮಾನಸಿಕ ಸಂಕಲ್ಪ ವಿಕಲ್ಪಾದಿಗಳಿಂದ ರಹಿತವೂ, ವಚನ ವ್ಯಾಪಾರವಿಲ್ಲದುದೂ, ಕಾಯ ಚೇಷ್ಟೆ ಮೊದಲಾದವುಗಳಿಂದ ರಹಿತವೂ ಆದ ಸಿದ್ಧಾತ್ಮರಂತೆ ಇರುತ್ತದೆ. ವ್ಯವಹಾರ ಧರ್ಮಸಂಬಂಧವಾದ ಸಕಲ ಆಚರಣೆಗಳು ಮನ, ವಚನ, ಕಾಯ ಗಳ ಅಧೀನವಾಗಿರುವುದರಿಂದ, ಅವು ನಿಮಿತ್ತಕಾರಣಗಳಾಗಬಹುದೇ ಹೊರತು ಉಪಾದಾನಕಾರಣಗಳಾಗಲಾರವು.

ಆತ್ಮಾಧೀನವಾದವುಗಳೇ ಉಪಾದಾನ ಕಾರಣಗಳು ಉಪಯೋಗಾಧಿ ಪತಿಯಾದ ಆತ್ಮನಲ್ಲಿಯಾಗಲಿ ಅಭೇದ ಮತ್ತು ಸಾಮಾನ್ಯ ದೃಷ್ಟಿಯಿಂದ ಒಂದೇ ಆತ್ಮನೇ ನೋಡಲು ಯೋಗ್ಯನಾಗಿಯೂ ಮತ್ತು ಸ್ವತಃ ನೋಡುವವ ನಾಗಿಯೂ, ವರ್ಣನೆ ಗೈಯುಲು ದೃಷ್ಟಾ ಮತ್ತು ಸ್ವಭಾವವು ಒಬ್ಬಾತ್ಮನೇ ಆಗಿರುತ್ತಾನೆ (ಆಗಿರಬೇಕು) ಈ ನಿರ್ವಿಕಲ್ಪ ಸಮಾಧಿ ಸ್ವಭಾವಕ್ಕಾಗಲಿ

ಅಥವಾ ಸ್ವಭಾವಕ್ಕಾಗಲಿ ಆತ್ಮನ ದರ್ಶನವೆಂದು ಹೇಳುತ್ತಾರೆ. ಈ ಆತ್ಮ ದರ್ಶನವು ಅತಿ ಗೋಪ್ಯ (ಗುಪ್ತ) ವಾದ ತತ್ವವಾಗಿದೆ. ಇದನ್ನು ವಚನ ದಿಂದ ವರ್ಣಿಸಲು, ಮನಸ್ಸಿನಿಂದ ಚಿಂತಿಸಲು ಆಗದ ಆ ತತ್ವವು ಅನುಭವ ಗಮ್ಯವಾಗಿದೆ.

ಆತ್ಮವು ಗುಣಪರ್ಯಾಯಗಳುಳ್ಳ ಅಖಂಡ ದ್ರವ್ಯವಾಗಿದೆ. ಆತ್ಮನು ಮನಸ್ಸಿನಿಂದಲೂ, ವಚನದಿಂದಲೂ ಖಂಡಸ್ವರೂಪನಾಗಿರುತ್ತಾನೆ. ಆತ್ಮನ ಸಂಪೂರ್ಣ ಸ್ವರೂಪವು ಲಕ್ಷ್ಯಕ್ಕೆ ಗೋಚರವಾಗುವುದಿಲ್ಲವಾದುದರಿಂದ, ಸರ್ವ ಮಾನಸಿಕ ವಿಚಾರಗಳನ್ನು ಬಿಡುವುದು ಅತ್ಯಾವಶ್ಯಕವಾಗಿರುತ್ತದೆ. ಯಾವನ ಸ್ವರೂಪವು ಮೌನದಿಂದ ಗುಪ್ತವಾಗಿರುವುದೋ, ಆವನೇ ಆತ್ಮನಲ್ಲಿ ಕ್ರೀಡಿಸು ವವನಾಗಿರುತ್ತಾನೆ. ಗುಣ್ಯಗುಣೀ ಭೇದಕಲ್ಪನೆಯಿಂದಲೂ ಕೂಡ, ಆತ್ಮ ಸ್ವರೂಪವು ನಮ್ಮಲ್ಲಿ ಉಂಟಾಗುವುದಿಲ್ಲವು. ಆತ್ಮನು ಮನ, ವಚನ, ಕಾಯ ಗಳಿಂದ ವಿಮಲನಾಗಿ ತಾನು ತನ್ನಲ್ಲಿಯೇ ವಿಶ್ರಮಿಸುವಾಗಲೇ, ಆತ್ಮ ದರ್ಶನ ಭಾಗ್ಯವು ದೊರಕುವುದು. ಆಲ್ಲಿ ಸಹಜ ಜ್ಞಾನವು ಇರುವುದಲ್ಲದೆ, ಮತಿ ಜ್ಞಾನಾದಿ ಯಾವ ವಿಕಲ್ಪಜ್ಞಾನಗಳೂ ಇರಲಾರವು.

ಮೊದಲು ಸಾಧಕನು ಆತ್ಮ ಸ್ವಭಾವ ಮತ್ತು ವಿಭಾವಗಳನ್ನು ನಿಶ್ಚಯ ಶಾಸ್ತ್ರಗಳಿಂದಲೇ ಮಾಡಿಕೊಳುವುದುಚಿತವಾಗಿರುತ್ತದೆ. ಆತ್ಮನು ಕರ್ಮಬಂಧವನ್ನು ಹೇಗೆ ಬಂಧಿಸಿಕೊಳ್ಳುತ್ತಾನೆಂದೂ, ಕರ್ಮಗಳ ಉದಯ ದಿಂದ ಯಾವ ಯಾವ ಅವಸ್ಥೆಗಳುಂಟಾಗುತ್ತವೆಂದೂ, ಕರ್ಮಗಳ ಬರುವಿಕೆ ಯನ್ನು ಯಾವ ವಿಧದಿಂದ ತಡೆಯುವುದೆಂದೂ, ಅವುಗಳ ನಾಶವು ಹೇಗಾಗು ವುದೆಂದೂ, ಮೋಕ್ಷವೆಂಬ ವಸ್ತುವು ಎಂಥಾದೆಂದೂ ಇವೇ ಮೊದಲಾಗಿ ಜೀವಾದಿ ಸಪ್ತ ತತ್ವಗಳ ಜ್ಞಾನವನ್ನು ಸಂಪಾದಿಸಿಕೊಳ್ಳಲು ಸರ್ವಾರ್ಥಸಿದ್ಧಿ ಗೋಮಟಸಾರ ಜೀವಕಾಂಡ ಮತ್ತು ಕರ್ಮಕಾಂಡಗಳ ಜ್ಞಾನವು ಸಾಧಕನಿಗೆ ಅತ್ಯಾವಶ್ಯಕವಾದುದು. ಹಾಗೆಯೇ ಸಾಧಕನು ವ್ಯವಹಾರ ಚಾರಿತ್ರವನ್ನು ಅರಿತವನಾಗಿರಬೇಕು; ಆಮೇಲೆ ಆತ್ಮ ಸ್ವಭಾವದ ತಿಳುವಳಿಕೆಯನ್ನು ಶ್ರೀ ಕುಂದಕುಂದಾಚಾರ್ಯ ವಿರಚಿತವಾದ ಪಂಚಾಸ್ತಿಕಾಯ, ಪ್ರವಚನಸಾರ, ಸಮಯಸಾರ, ನಿಯಮಸಾರ, ಅಷ್ಟಪಾಹುಡ ಮೊದಲಾದ ಗ್ರಂಥಗಳನ್ನು

ಓದುವುದರಿಂದ, ಮನನಮಾಡುವುದರಿಂದ ಹೊಂದಬೇಕು; ನಿಶ್ಚಯ ಆತ್ಮ ತತ್ವವು ಕೇವಲ ತನ್ನ ಶುದ್ಧ ಪರಿಣತಿಗೆ ಕರ್ತೃವಾಗಿರುವುದೆಂಬ, ತನ್ನ ಶುದ್ಧ ಪರಿಣತಿಯ ಭೋಕ್ತೃವಾಗಿರುವುದೆಂಬ ಮತ್ತು ಪರಮ ವೀತರಾಗ ಪರಮಾನಂದ ಸ್ವಭಾವಿಯಾಗಿರುವುದೆಂಬ ಜ್ಞಾನವುಳ್ಳವನಾಗಿರಬೇಕು.

ವ್ಯವಹಾರ ರತ್ನತ್ರಯದ ಜ್ಞಾನವು ಮಾತ್ರ ನಿಮಿತ್ತ ಕಾರಣವಾಗಲು ಸಹಕಾರಿಯಾಗಿ, ನಿಶ್ಚಯ ತತ್ವಜ್ಞಾನವು ಸ್ವಾನುಭವಕ್ಕೆ ಹಿತಕಾರಿಯಾಗಿರುವುದರಿಂದಲೂ, ಸಾಧಕನು ವ್ಯವಹಾರ ಚಾರಿತ್ರದ ಆಧಾರದಿಂದಲೇ ಜೈನ ಧರ್ಮಸಂಬಂಧವಾದ ಆಚಾರಗಳನ್ನು ಪಾಲಿಸುತ್ತಿರುವುರಿಂದಲೂ, ಮನ, ವಚನ, ಕಾಯಗಳ ಕ್ರಿಯೆಯು ಹಾನಿಯನ್ನುಂಟುಮಾಡತಕ್ಕವುಗಳಾಗಿ ಆಗದೆ, ಅವುಗಳನ್ನು ತನ್ನ ಅಧೀನದಲ್ಲಿಟ್ಟುಕೊಂಡು, ಧ್ಯಾನಾಭ್ಯಾಸದ ನಿಮಿತ್ತ ಏಕಾಂತದಲ್ಲಿ ಕುಳಿತುಕೊಂಡು, ದ್ರವ್ಯಾರ್ಥಿಕನಯದಿಂದ ಆತ್ಮ ತತ್ವವನ್ನು ಅಭೇದರೂಪವಾಗಿ ವಿಚಾರಿಸಬೇಕು.

ಶಾಸ್ತ್ರ ಗ್ರಂಥಗಳಲ್ಲಿ ವರ್ಣಿಸಿರುವ ಪ್ರಕಾರ, ಆತ್ಮ ತತ್ವವನ್ನು ಮನನಗೈಯುತ್ತ, ಮನಸ್ಸನ್ನು ಸ್ಥಿರಗೊಳಿಸಿಕೊಂಡು ಮೌನವಾಗಿ ಏಕಾಂತ ಕುಳಿತಕೊಂಡು, ಉಪಯೋಗವನ್ನು ಸ್ವಭಾವ ಜ್ಞಾನ ಮೊದಲಾದವುಗಳ ಶ್ರದ್ಧಾನದಿಂದ ನಿಜಾತ್ಮನನ್ನು ಪ್ರಕಾಶಿಸಿಕೊಳ್ಳಬೇಕು. ಹೀಗೆ ಅಭ್ಯಾಸಿಸುವವನಿಗೆ ಪ್ರಪ್ರಥಮ ಅಲ್ಪ ಸಮಯದವರೆಗೆ ಸ್ಥಿರವಿರಬಹುದು. ಇದೇ ಕ್ರಮವಾಗಿ ಏಕಾಗ್ರತೆಯನ್ನು ಬಲಪಡಿಸಿಕೊಳ್ಳುತ್ತಾ ಹೋಗುವಾಗ, ಆತ್ಮ ಪ್ರಭುವಿನ ದರ್ಶನವೂ ಕೂಡ ಅಧಿಕ ಸಮಯದವರೆಗೆ ಆಗುತ್ತ ಹೋಗುವುದು. ಯಾವ ಪರಿಣಾಮದಿಂದ ನೂತನ ಕರ್ಮಗಳ ಸಂವರೆಯು ಮತ್ತು ಪೂರ್ವ ಸಂಚಿತ ಕರ್ಮಗಳ ನಿರ್ಜರೆಯು ಆಗುತ್ತದೋ, ಅದು ಮೋಕ್ಷಮಾರ್ಗವಾಗಿ ಪರಿಣಮಿಸುವುದು. ಆ ಆತ್ಮದರ್ಶನದಲ್ಲಿಯೂ ಮತ್ತು ಆತ್ಮಾನುಭವದಲ್ಲಿಯೂ ವೀತರಾಗ ಪ್ರವಾಹವು ಹರಿಯುವುದು. ಸಮ್ಯಗ್ದರ್ಶನ, ಜ್ಞಾನ, ಚಾರಿತ್ರಗಳು ಏಕತ್ವವಾಗಿ ರೂಪುಗೊಳ್ಳುವುದರಿಂದಲೇ, ಸಂವರೆ ಮತ್ತು ನಿರ್ಜರಾ ತತ್ವವು ಪ್ರಕಾಶಿಸುವುದು. ಗೃಹಸ್ಥನಾಗಲಿ ಅಥವಾ ಮುನಿಯಾಗಲಿ ಅವನಿಗೆ ನಿರ್ವಾಣ ಪದವಿಯ ಭಾವನೆಯಿದ್ದರೇನೆ, ಆತ್ಮದರ್ಶನದ ಅಭ್ಯಾಸವು ಕೈಗೂಡುವುದು.

ಆತ್ಮ ದರ್ಶನವನ್ನು ಪಡೆದವನು ಸತ್ಯ ವೀತರಾಗದೇವನ ದರ್ಶನಮಾಡಿರುವನೆಂದೂ, ಅರಹಂತ ಮತ್ತು ಸಿದ್ಧ ಪರಮಾತ್ಮನ ಆರಾಧನೆ ಮಾಡಿರುವನೆಂದೂ, ಗೃಹಸ್ಥ ಮುನಿಗಳ ವ್ರತವನ್ನು ಪಾಲಿಸಿದವನೆಂದೂ, ಸತ್ಯಸ್ವರೂಪ ನಿರ್ವಾಣದ ಪಥಿಕನೆಂದೂ ಹೇಳುತ್ತಾರೆ. ಇವನ ಮಾರ್ಗವೇ ನಿಜವಾದ ಆತ್ಮ ದರ್ಶನ ಸ್ವರೂಪ ಮೋಕ್ಷಮಾರ್ಗವಾಗಿದೆ. ಈ ಪ್ರಕಾರದ ಶ್ರದ್ಧೆಯು ಎಷ್ಟರ ವರೆಗೆ ಉಂಟಾಗುವುದಿಲ್ಲವೋ, ಅಷ್ಟರವರೆಗೆ ಸಮ್ಯಗ್ದರ್ಶನ ಪ್ರಕಾಶವು ಪ್ರಕಾಶಿಸುವುದಿಲ್ಲವು. ಆತ್ಮದರ್ಶನವೇ ಯಥಾರ್ಥವಾದ ಸಮ್ಯಗ್ದರ್ಶನವಾಗಿದೆ.

ಸಮಯಸಾರದಲ್ಲಿ ಹೇಳಿದೆ:

**ಪಣ್ಣಾಏ ಘಿತ್ತಬ್ಬೋ ಜೋ ದಟ್ಠಾ ಸೋ ಅಹಂ ತು ಣಿಚ್ಛಯದೋ।**
**ಅವ ಸೇಸಾ ಜೇ ಭಾವಾ ತೇ ಮಜ್ಝ ಪರೇತ್ತಿ ಣಾದವ್ವಾ ॥೩೨೦॥**

**ಭಾವಾರ್ಥ :** ಭೇದ ವಿಜ್ಞಾನದಿಂದ ಗ್ರಹಿಸಲ್ಪಡುವ ಯೋಗ್ಯವಾದ ವಸ್ತುವು ನಾನಾಗಿರುತ್ತೇನೆ, ಚೈತನ್ಯಶಾಲಿಯೂ ಆಗಿರುತ್ತೇನೆ ಎಂದು ತಿಳಿಯುವುದೇ ನಿಶ್ಚಯ ತತ್ವವು. ಉಳಿದ ತತ್ವಗಳೆಲ್ಲವು ನನ್ನ ಸ್ವಭಾವದಿಂದ ಭಿನ್ನಗಳಾಗಿರುವುವೆಂದು ತಿಳಿದು ಅವೆಲ್ಲವನ್ನು ತ್ಯಜಿಸಿ, ತನ್ನಲ್ಲಿಯೇ ರಮಿಸಬೇಕು.

ಶ್ರೀ ಕುಂದಕುಂದಾಚಾರ್ಯರು ಮೋಕ್ಷಪಾಹುಡದಲ್ಲಿ ಇಂತು ಬಣ್ಣಿಸಿರುವರು :

**ಜೋ ದೇಹೇ ಣಿರವೆಕ್ಖೋ ಣಿದ್ದಂದೋ ಣಿಮ್ಮಮೋ ಣಿರಾರಂಭೋ।**
**ಆದಸಹಾಭೆ ಸುರಓ ಜೋಈ ಸೋ ಲಹಇ ಣಿವ್ವಾಣಂ ॥೧೨॥**

**ಸದ್ದವ್ವರಓ ಸವಣೋ ಸಮ್ಮಾ ಇಟ್ಠೀ ಹವೇಇ ಸೋ ಸಾಹೂ॥**
**ಸಮ್ಮತ್ತ ಪರಿಣದೋ ಉಣ ಖವೇಇ ದುಟ್ಠಟ್ಠ ಕಮ್ಮಾಇಂ ॥೧೪॥**

**ಆದಸಹಾವಾದಣ್ಣಂ ಸಚ್ಚಿತ್ತಾಚಿತ್ತಮಿಸ್ಸಿಯಂ ಹವಇ।**
**ತಂ ಪರದವ್ವಂ ಭಣಿಯಂ ಅವಿತತ್ಥಂ ಸವ್ವದರಸೀಹಿಂ ॥೧೭॥**

**ದುಟ್ಠಟ್ಠಕಮ್ಮರಹಿಯಂ ಅಣೋವಮಂ ಣಾಣ ವಿಗ್ಗಹಂ ಣಿಚ್ಚಂ।**
**ಸುದ್ಧಂ ಜಿಣೇಹಿಂ ಕಹಿಯಂ ಅಪ್ಪಾಣಂ ಹವಇ ಸದ್ದವಂ ॥೧೮॥**

**ಜೇ ಝಾಯಂತಿ ಸದ್ದವ್ವಂ ಪರದವ್ವಪರಮ್ಮುಹಾ ಹು ಸುಚರಿತ್ತಾ॥**
**ತೇ ಜಿಣವರಾಣ ಮಗ್ಗೇ ಅಣುಲಗ್ಗಾ ಲಹದಿ ಣಿವ್ವಾಣಂ ॥೧೯॥**

ಭಾವಾರ್ಥ: ಯಾವನು ಶರೀರಾದಿಗಳಿಂದ, ರಾಗದ್ವೇಷಗಳಿಂದ ರಹಿತನೂ. ಮಮತಾಭಾವನೆಯಿಂದ ದಾಟಿದವನೂ, ಸಕಲ ಲೌಕಿಕ ಆರಂಭಾದಿಗಳಿಂದ ರಹಿತನೂ ಆಗಿ, ಕೇವಲ ತನ್ನ ಆತ್ಮನಲ್ಲಿಯೇ ಮಗ್ನನಾಗಿರುವನೋ ಅವನೇ ಯೋಗಿವರ್ಯನು, ಮೋಕ್ಷಾಧಿಕಾರಿಯು. ತನ್ನಾತ್ಮನಲ್ಲಿ ಲವಲೀನನಾಗಿರುವಾತನು ಸಾಧುವಾಗಲೀ ಅಥವಾ ಸಮ್ಯಗ್ದೃಷ್ಟಿ ಶ್ರಾವಕನಾಗಲೀ ಜ್ಞಾನಾವರಣಾದಿ ಎಂಟು ಕರ್ಮಗಳೆಂಬ ದುಷ್ಟ ಶತೃಗಳನ್ನು ನಾಶ ಮಾಡುವವನೆಂದು ಸರ್ವದರ್ಶಿಯಾದ ಪರಮಾತ್ಮನು ಉಪದೇಶವನ್ನಿತ್ತಿರುವನು. ಅಷ್ಟೇ ಅಲ್ಲ ಎಂಟು ಕರ್ಮಗಳಿಂದ ರಹಿತನೂ, ಅನುಪಮ ಜ್ಞಾನಧಾರಿಯೂ, ನಿತ್ಯವೂ, ಶುದ್ಧವೂ ಆದ ತನ್ನಾತ್ಮನೇ ಸದ್ದ್ರವ್ಯವೆಂದೂ ಉಪದೇಶವಿತ್ತಿರುವನು. ಯಾವ ಆತ್ಮನು ಜೀವ ದ್ರವ್ಯವನ್ನು ಚಿಂತಿಸುತ್ತಾ, ಪರವಸ್ತುಗಳ ಉಪಯೋಗವನ್ನುಪಯೋಗಿಸದೆ, ಸುಂದರ ಚಾರಿತ್ರವನ್ನು ಪಾಲಿಸುವನೋ ಅವನೇ ನಿರ್ವಾಣ ಪದವಿಯನ್ನು ಪಡೆಯುವನು.

ಸಮಾಧಿಶತಕದಲ್ಲಿ ಹೇಳಿರುತ್ತಾರೆ:

**ತಥೈವ ಭಾವಯೇದ್ದೇಹಾದ್ ವ್ಯಾವೃತ್ಯಾತ್ಮಾನಮಾತ್ಮನಿ।**
**ಯಥಾ ನ ಪುನರಾತ್ಮಾನಂ ದೇಹೇ ಸ್ವಪ್ನೇಽಪಿ ಯೋಜಯೇತ್ ॥೮೨॥**

ಭಾವಾರ್ಥ: ಶರೀರಾದಿಗಳಿಂದ ಬಿಡುಗಡೆಯಾಗಿ ತನ್ನಂತರಂಗದಲ್ಲಿಯೇ ತನ್ನನ್ನು ಧ್ಯಾನಿಸಬೇಕು. ಮಾತ್ರವಲ್ಲ ಸದಾಕಾಲದಲ್ಲಿಯೂ ತನ್ನಾತ್ಮನು ಪರಿಶುದ್ಧನಾದವನೆಂದು ಮತ್ತು ಪರದ್ರವ್ಯಗಳ ಸಂಬಂಧವಿಲ್ಲದವನೆಂದು ಧ್ಯಾನಿಸಬೇಕು.



# ಆತ್ಮನು ಗುಣಸ್ಥಾನ ಮತ್ತು ಮಾರ್ಗಣಾಸ್ಥಾನ ಸ್ವರೂಪನೂ ಅಲ್ಲ

**ಮಗ್ಗಣಗುಣಠಾಣಇ ಕಹಿಯಾ ವವಹಾರೇಣ ವಿ ದಿಟ್ಠ ।**
**ಣಿಚ್ಛಇಣಇ ಅಪ್ಪಾ ಮುಣಹು ಜಿಯು ಪಾವಹು ಪರಮೇಟ್ಠೀ ॥೧೭॥**

**ಅನ್ವಯಾರ್ಥ :** ವವಹಾರೇಣ ವಿ ದಿಟ್ಠ–ಕೇವಲ ವ್ಯವಹಾರ ನಯದ ಅಪೇಕ್ಷೆಯಿಂದಲೇ, ಮಗ್ಗಣಗುಣಠಾಣಇ ಕಹಿಯಾ–ಜೀವನು ಗುಣಸ್ಥಾನ ಮತ್ತು ಮಾರ್ಗಣಾಸ್ಥಾನ ರೂಪನೆಂದು ಹೇಳಿರುವುದು. ಣಿಚ್ಛಇಣಇ–ನಿಶ್ಚಯನಯದ ಅಪೇಕ್ಷೆಯಿಂದ, ಅಪ್ಪಾ ಮುಣಹು–ತನ್ನಾತ್ಮನನ್ನು ಆತ್ಮ ಸ್ವರೂಪನೆಂದೇ ತಿಳಿ. ಜಿಯು ಪರಮೇಟ್ಠೀ ಪಾವಹು–ಆದರಿಂದ ನೀನು ಸಿದ್ಧ ಪರಮೇಷ್ಠಿಗಳ ಪದವಿಯನ್ನು ಪಡೆಯುವಿ.

**ಭಾವಾರ್ಥ :** ವ್ಯವಹಾರ ನಯವು ಪರಾಶ್ರಯವಾಗಿರುವುದು. ಅದು ಅನ್ಯ ದ್ರವ್ಯಗಳ ಅಪೇಕ್ಷೆಯಿಂದ ಆತ್ಮನನ್ನು ಒಂದೊಂದು ರೀತಿಯಿಂದ ಹೇಳುವುದು. ನಿಶ್ಚಯನಯವು ಸ್ವಾಶ್ರಿತವು. ಅದು ಆತ್ಮನ ಸ್ವರೂಪವನ್ನು ಯಥಾರ್ಥವಾಗಿ ಇದ್ದಂತೆ ಹೇಳುವಂಥಾದ್ದಾಗಿದೆ. ನಿಶ್ಚಯ ನಯದಿಂದ ಆತ್ಮನು ಸ್ವಯಂ ಅರಹಂತ ಅಥವಾ ಸಿದ್ಧ ಸ್ವರೂಪನಾಗಿರುತ್ತಾನೆಂದೂ, ಅಭೇದ ಶುದ್ಧಜ್ಞಾಯಕರೂಪನಾಗಿರುವನೆಂದೂ, ಶುದ್ಧ ಸ್ವರೂಪನೆಂದೂ ಧ್ಯಾನಿಸುವುದೇ ಸಾಕ್ಷಾತ್ ಪರಮಾತ್ಮನಾಗುವ ಉಪಾಯವಾಗಿರುತ್ತದೆ. ಇದಕ್ಕೇನೇ ಮೋಕ್ಷಮಾರ್ಗವೆಂದು ಹೇಳುವುದು. ನೀತಿ: " ಜೈಸಾ ಧ್ಯಾವೇ ವೈಸಾ ಹೋ ಜಾವೆ "

ಸಮಯಸಾರದಲ್ಲಿ ಹೇಳಿರುತ್ತಾರೆ :

**ಸುದ್ಧಂ ತು ವಿಯಾಣಂತೋ ಸುದ್ಧಮೇವಪ್ಪಯಂ ಲಹದಿ ಜೀವೋ ।**
**ಜಾಣಂತೋ ದು ಅಸುದ್ಧಂ ಅಸುದ್ಧಮೇವಪ್ಪಯಂ ಲಹದಿ ॥ ೧೮೬ ॥**

**ಭಾವಾರ್ಥ :** ಶುದ್ಧಾತ್ಮನನ್ನು ಧ್ಯಾನಿಸುವುದರಿಂದಲೂ, ಅನುಭವಿಸುವುದರಿಂದಲೂ ಶುದ್ಧನಾಗುವನು. ಅಶುದ್ಧ ಸ್ವರೂಪನೆಂದು ಧ್ಯಾನಿಸಿದರೆ

ಅಶುದ್ಧನಾಗುವನಾದುದರಿಂದ, ಶುದ್ಧ ನಿಶ್ಚಯ ನಯವು ಗ್ರಾಹ್ಯವೂ, ವ್ಯವಹಾರ ನಯವು ಅಗ್ರಾಹ್ಯವೂ ಆಗಿರುತ್ತದೆ. ಅನಾದಿ ಕಾಲದಿಂದ ಈ ಆತ್ಮನು ಕರ್ಮಸಂಯೋಗಿಯಾಗಿ ತೊಳಲುತ್ತ, ಬಳಲುತ್ತ ಬರುತ್ತಿರುವುದರಿಂದ, ಯಾವ ಯಾವ ಅವಸ್ಥೆಗಳುಂಟಾಗಿರುವುವೆಂದು ತಿಳಿಯುವುದೇ ವೈರಾಗ್ಯೋತ್ಪತ್ತಿಗೆ ಕಾರಣಗಳಾಗಿರುತ್ತದೆ. ವ್ಯವಹಾರ ನಯದಿಂದ ಆತ್ಮನು ಮಾರ್ಗಣಾಸ್ಥಾನ ಮತ್ತು ಗುಣಸ್ಥಾನ ರೂಪನಾಗಿರುವುದೆಂದು ತಿಳಿಯಬೇಕು.

ಸಂಸಾರಿಕ ಸಕಲ ಅವಸ್ಥೆಗಳ ಜ್ಞಾನವು ಮಾರ್ಗಣ ಗುಣಸ್ಥಾನಗಳಿಂದಲೇ ಆಗುತ್ತದೆ.

ಶ್ರೀ ಗೋಮಟಸಾರ ಜೀವಕಾಂಡದಲ್ಲಿ ವರ್ಣಿಸಿರುವುದನ್ನು ಪಾಠಕರ ಅನುಭವಕ್ಕಾಗಿ ಸ್ಮರಣಕ್ಕೆ ತರುವುದುಚಿತವಾಗಿದೆ.

**ಜಾಹಿ ವ ಜಾಸು ವ ಜೀವಾ ಮಗ್ಗಿಜ್ಜಂತೇ ಜಹಾ ತಹಾ ದಿಟ್ಠಾ ।**
**ತಾಓ ಚೋದ್ದಸ ಜಾಣೇ ಸುಯಣಾಣೇ ಮಗ್ಗಣಾ ಹೋಂತಿ ॥೧೪೧॥**

**ಗಇ ಇಂದಿಯೇಸು ಕಾಯೇ ಜೋಗೆ ವೇದೇ ಕಸಾಯ ಣಾಣೇಯ ।**
**ಸಂಜಮ ದಂಸಣ ಲೇಸ್ಸಾ ಭವಿಯಾ ಸಮ್ಮತ್ತ ಸಣ್ಣಿ ಆಹಾರೇ ॥೧೪೨॥**

**ಭಾವಾರ್ಥ :** ಸಂಸಾರೀ ಜೀವಗಳು ಜ್ಞಾನಮೂಲಕವಾಗಿ ಯಾವ ಯಾವ ಅವಸ್ಥೆಗಳಲ್ಲಿ ಅನ್ವೇಷಿಸಲ್ಪಡುವುವೋ ಆ ಅವಸ್ಥೆಗಳಿಗೆ (ಸ್ಥಾನಗಳಿಗೆ) ಮಾರ್ಗಣಾಸ್ಥಾನಗಳೆಂದು ಹೆಸರು. ಅವು ಹದಿನಾಲ್ಕು ಪ್ರಕಾರಗಳಾಗಿವೆ. ಅವು ೧. ಗತಿ. ೨. ಇಂದ್ರಿಯ. ೩. ಕಾಯ. ೪. ಯೋಗ. ೫. ವೇದ, ೬. ಕಷಾಯ ೭. ಜ್ಞಾನ. ೮. ಸಂಯಮ. ೯. ದರ್ಶನ. ೧೦. ಲೇಶ್ಯೆ. ೧೧. ಭವ್ಯ. ೧೨. ಸಮ್ಯಕ್ತ್ವ. ೧೩. ಸಂಜ್ಞಿ. ೧೪. ಆಹಾರಗಳೆಂದು ಹದಿನಾಲ್ಕು ಪ್ರಕಾರಗಳಾಗಿವೆ.

ಎಲ್ಲಾ ಸಂಸಾರಿ ಜೀವಗಳಲ್ಲಿ ಈ ಹದಿನಾಲ್ಕು ಅವಸ್ಥೆಗಳು ಪ್ರತಿ ಸಮಯದಲ್ಲಿ ಹುಡುಕುವುದಾದರೆ, ಪ್ರತಿಯೊಂದರಲ್ಲಿ ಸಂಸಾರೀ ಜೀವಗಳು ಸಿಗುತ್ತವೆ. ಇವುಗಳ ಸ್ವರೂಪವು ಮತ್ತು ಭೇದಗಳು ವರ್ಣಿಸಲ್ಪಡುವುವು.

೧. ಗತಿ ಮಾರ್ಗಣೆಯು ನಾಲ್ಕು ಪ್ರಕಾರಗಳಾಗಿವೆ:

**ಗಇ ಉದಯಜ ಪಜ್ಜಾಯಾ ಚಉಗಇ ಗಮಣಸ್ಸ ಹೇಉ ವಾ**
**ಹು ಗಈ।**
**ಣಾರಯ ತಿರಿಕ್ಖ ಮಾಣುಸ ದೇವಗ ಇತ್ತಿ ಯ ಹವೇ ಚದುಧಾ॥೧೪೬॥**

ಭಾವಾರ್ಥ: ಗತಿ ನಾಮಕರ್ಮದ ಉದಯದಿಂದ ಯಾವ ಪರ್ಯಾಯವುಂಟಾಗುವುದೋ ಅಥವಾ ನಾಲ್ಕು ಗತಿಗಳಲ್ಲಿ ಭ್ರಮಿಸಲು ಕಾರಣವಾಗಿರುವುದೋ ಅದಕ್ಕೆ ಗತಿಯೆಂದು ಹೇಳುತ್ತಾರೆ. ಅವು ನರಕಗತಿ, ತಿರ್ಯಂಚಗತಿ, ಮನುಷ್ಯಗತಿ ಮತ್ತು ದೇವಗತಿಗಳೆಂದು ನಾಲ್ಕು ವಿಧವು. ಪ್ರತಿಯೊಂದು ಸಂಸಾರೀ ಜೀವನು ಒಂದಿಲ್ಲೊಂದು ಗತಿಯಲ್ಲಿ ಇದ್ದೇ ಇರುತ್ತಾನೆ. ವಿಗ್ರಹಗತಿಯಲ್ಲಿದ್ದರೂ, ಅವನು ಯಾವ ಗತಿಗೆ ಹೋಗುತ್ತಿರುವನೋ ಅದೇ ಗತಿಯೆಂದೇ ಸಮ್ಮತಿಸಬೇಕು.

೨. ಇಂದ್ರಿಯಮಾರ್ಗಣೆಯು ಐದು ಪ್ರಕಾರವಾಗಿದೆ:

**ಅಹಮಿಂದಾ ಜಹದೇವಾ ಅವಿಸೇಸಂ ಅಹಮಹಂತಿ ಮಣ್ಣಂತಾ।**
**ಈಸಂತಿ ಎಕ್ಕಮೇಕ್ಕಂ ಇಂದಾಇವ ಇಂದಿಯೇ ಜಾಣ ॥೧೬೪॥**

ಭಾವಾರ್ಥ: ಅಹಮಿಂದ್ರರುಗಳಂತೆ ಬೇರೆ ಇಂದ್ರಾದಿ ದೇವತೆಗಳಿಲ್ಲದೆ ಸ್ವತಂತ್ರರಾಗಿ ಇಂದ್ರರಾಗಿರುವಂತೆ, ಸ್ಪರ್ಶನಾದಿ ಇಂದ್ರಿಯಗಳು ತಮ್ಮತಮ್ಮ ವಿಷಯಗಳಲ್ಲಿ ಸ್ವತಂತ್ರವಾಗಿ, ಒಂದಕ್ಕೊಂದರ ಸಹಾಯತೆಯನ್ನು ಅಪೇಕ್ಷಿಸದೆ, ಭಿನ್ನಭಿನ್ನ ಕಾರ್ಯಗಳನ್ನು ಮಾಡುವವುಗಳಿಗೆ ಇಂದ್ರಿಯಗಳೆಂದು ಹೇಳುತ್ತಾರೆ. ಅವು ಸ್ಪರ್ಶನ, ರಸನ, ಘ್ರಾಣ, ಚಕ್ಷು ಮತ್ತು ಶ್ರೋತ್ರಗಳೆಂದು ಐದು ಪ್ರಕಾರಗಳಾಗಿವೆ. ಆದುದರಿಂದ ಸಂಸಾರೀ ಜೀವಗಳು ಏಕೇಂದ್ರಿಯ, ದ್ವೀಂದ್ರಿಯ, ತ್ರೀಂದ್ರಿಯ, ಚತುರಿಂದ್ರಿಯ ಮತ್ತು ಪಂಚೇಂದ್ರಿಯ ಜೀವಗಳೆಂದು ಹೇಳಿಸಿಕೊಳ್ಳುವುವು.

೩. ಕಾಯಮಾರ್ಗಣಾ ಆರು ವಿಧವು:

**ಜಾಈ ಅವಿಣಾಭಾವೀ ತಸ ಥಾವರ ಉದಯ ಜೋ ಹವೇ ಕಾಓ।**
**ಸೋ ಜಿಣಮದಹ್ಮಿ ಭಣಿಓ ಪುಢವೀಕಾಯಾದಿ ಛಬ್ಬೇಯೋ ॥೧೮೧॥**

**ಭಾವಾರ್ಥ :** ಜಾತಿನಾಮಕರ್ಮದೊಡಗೂಡಿರುವ ಸ್ಥಾವರ ಮತ್ತು ನಾಮಕರ್ಮದ ಉದಯದಿಂದುಟಾದ ಶರೀರಗಳಿಗೆ ಕಾಯವೆಂದು ಹೇಳುತ್ತಾರೆ. ಅವುಗಳಲ್ಲಿ ಪೃಥ್ವೀಕಾಯ, ಜಲಕಾಯ, ಅಗ್ನಿಕಾಯ (ತೇಜಸ್ಕಾಯ), ವಾಯುಕಾಯ, ವನಸ್ಪತಿಕಾಯ ಮತ್ತು ತ್ರಸಕಾಯಗಳೆಂಬ ಆರು ಭೇದಗಳಿರುತ್ತವೆ. ಈ ಆರು ಪ್ರಕಾರದ ಶರೀರ ರಚನೆಗಳಲ್ಲಿ ಭಿನ್ನತೆಯಿರುವುದರಿಂದ, ಅವು ಆರು ಭಿನ್ನಭಿನ್ನಗಳೇ ಆಗಿರುತ್ತವೆ. ಮಾಂಸೋತ್ಪತ್ತಿಯು ತ್ರಸಜೀವಗಳ ಶರೀರಗಳಲ್ಲಿಯೇ ಇರುವುದಲ್ಲದೆ, ಐದು ವಿಧದ ಸ್ಥಾವರ ಜೀವಗಳ ಶರೀರಗಳಲ್ಲಿರುವುದಿಲ್ಲವು. ವನಸ್ಪತಿಕಾಯ ಮತ್ತು ತ್ರಸಕಾಯಗಳ ರಚನೆಯಲ್ಲಿ ಪೃಥ್ವೀ ಮೊದಲಾದ ನಾಲ್ಕುಕಾಯಗಳು ಸಹಾಯಕಗಳಾಗಿವೆ.

೪. ಯೋಗಮಾರ್ಗಣೆಯು ಹದಿನೈದು ಪ್ರಕಾರಗಳಾಗಿವೆ :

**ಪುಗ್ಗಲ ವಿವಾಇ ದೇಹೋದಯೇಣ ಮಣವಯಣಕಾಯ ಜುತ್ತಸ್ಸ ।**
**ಜೀವಸ್ಸ ಜಾಹು ಸತ್ತೀ ಕಮ್ಮಾಗಮಕಾರಣಂ ಜೋಗೋ ॥ ೨೧೬ ॥**

**ಭಾವಾರ್ಥ :** ಮನ, ವಚನ, ಕಾಯ ಈ ಮೂರರಿಂದ ಸಹಿತವಾಗಿಯಾಗಲೀ, ವಚನ, ಕಾಯಗಳೆರಡರಿಂದ ಸಹಿತವಾಗಿಯಾಗಲೀ ಅಥವಾ ಕಾಯಸಹಿತವಾಗಿಯಾಗಲೀ ಜೀವಗಳ ಅಂತರಂಗದಲ್ಲಿ ಪುದ್ಗಲವಿಪಾಕೀ ಶರೀರ ನಾಮಕರ್ಮದ ಉದಯದಿಂದ, ಕರ್ಮ ಮತ್ತು ನೋಕರ್ಮವರ್ಗಣೆಗಳನ್ನು ಗ್ರಹಣ ಮಾಡುವ ಶಕ್ತಿಗೆ ಯೋಗವೆಂದು ಹೇಳುತ್ತಾರೆ. ಇದರ ಕಾರ್ಯವು ಶರೀರನಾಮಕರ್ಮದ ಉದಯದಿಂದಲೇ ಉಂಟಾಗುವುದು. ಎಷ್ಟರವರೆಗೆ ಹದಿನೈದು ಯೋಗಗಳ ಪ್ರವೃತ್ತಿಯಾಗುತ್ತಿರುತ್ತದೆಯೋ, ಅಷ್ಟರವರೆಗೆ ಪ್ರತಿಸಮಯದಲ್ಲಿಯೂ ಯೋಗಶಕ್ತಿಯು ಅಯೋಗಕೇವಲಿಯಾಗುವವರೆವಿಗೂ ಕಾರ್ಯವನ್ನು ಮಾಡುತ್ತಿರುತ್ತದೆ. ವಿಗ್ರಹಗತಿಯಲ್ಲಿ ಕಾರ್ಮಣವರ್ಗಣೆಗಳನ್ನೂ ಮತ್ತು ತೈಜಸ ವರ್ಗಣೆಗಳನ್ನೂ. ಉಳಿದ ಸಮಯದಲ್ಲಿ ಈ ಎರಡು ವರ್ಗಣೆಗಳೊಡನೆ ಆಹಾರಕ ವರ್ಗಣೆಗಳನ್ನೂ, ಭಾಷಾವರ್ಗಣೆಗಳನ್ನೂ, ಮನೋವರ್ಗಣೆಗಳನ್ನೂ (ಸಂಜ್ಞಿ ಜೀವಗಳು) ಗ್ರಹಣೆಮಾಡುತ್ತಲೇ ಇರುತ್ತವೆ.

ನಾಲ್ಕು ಪ್ರಕಾರದ ಮನಸ್ಸು :–ಸತ್ಯ, ಅಸತ್ಯ, ಉಭಯ, ಅನುಭವ ವೆಂದು.

ನಾಲ್ಕು ಪ್ರಕಾರದ ವಚನ :–ಸತ್ಯ, ಅಸತ್ಯ, ಉಭಯ, ಅನುಭಯ ವೆಂದು.

ಏಳು ಪ್ರಕಾರದ ಕಾಯ :–ಔದಾರಿಕ, ಔದಾರಿಕಮಿಶ್ರ (ಅಪರ್ಯಾಪ್ತ ಗಳಿಗೆ), ವೈಕ್ರಿಯಕ, ವೈಕ್ರಿಯಕಮಿಶ್ರ (ಅಪರ್ಯಾಪ್ತಗಳಿಗೆ), ಆಹಾರಕ, ಆಹಾರಕಮಿಶ್ರ ಮತ್ತು ಕಾರ್ಮಣವೆಂದು. ಮನುಷ್ಯ ಮತ್ತು ತಿರ್ಯಂಚ ಗಳಿಗೆ ಔದಾರಿಕ ಮತ್ತು ಔದಾರಿಕಮಿಶ್ರಗಳೆರಡು, ದೇವನಾರಕಿಯರಿಗೆ ವೈಕ್ರಿ ಯಕ ಮತ್ತು ವೈಕ್ರಿಯಕಮಿಶ್ರಗಳೆರಡು, ಆರನೇ ಗುಣಸ್ಥಾನವರ್ತಿ ಮುನಿ ಗಳಿಗೆ ಆಹಾರಕ ಮತ್ತು ಆಹಾರಕಮಿಶ್ರಗಳೆರಡು ಮತ್ತು ವಿಗ್ರಹಗತಿಯಲ್ಲಿ ಕಾರ್ಮಣಯೋಗವು ಇರುತ್ತವೆ.

೫. ವೇದಮಾರ್ಗಣೆಯು ಮೂರು ವಿಧವು :

**ಪುರುಸಿಚ್ಛಿಸಂಢವೇದೋದಯೇಣ ಪುರುಸಿಚ್ಛಿಸಂಢಓ ಭಾವೇ।**
**ಣಾಮೋದಯೇಣ ದವ್ವೇ ಪಾಏಣ ಸಮಾ ಕಹಂ ವಿಸಮಾ ॥ ೨೭೦ ॥**

**ವೇದಸ್ಸುದೀರಣಾಏ ಪರಿಣಾಮಸ್ಸ ಯ ಹವೇಜ್ಜ ಸಂಮೋಹೋ।**
**ಸಂಮೋಹೇಣ ಣ ಜಾಣದಿ ಜೀವೋ ಹು ಗುಣಂ ವ ದೋಸಂ-**
**ವಾ ॥ ೨೭೧ ॥**

**ಭಾವಾರ್ಥ :** ವೇದವೆಂಬ ನೋಕಷಾಯದ ಉದಯದಿಂದ ಪುರುಷ, ಸ್ತ್ರೀ, ನಪುಂಸಕ ರೂಪವಾದ ಜೀವಗಳಿಗಾಗುವ ಪರಿಣಾಮ ವಿಶೇಷಕ್ಕೆ ಭಾವ ವೇದವೆಂದೂ, ಅಂಗೋಪಾಂಗ ನಾಮಕರ್ಮದ ಉದಯದಿಂದ ಮೂರು ಪ್ರಕಾರದ ಶರೀರಗಳ ರಚನೆಯಾಗುವುದಕ್ಕೆ ದ್ರವ್ಯವೇದವೆಂದೂ ಎರಡು ವಿಧ ವಾಗಿವೆ. ಪ್ರಾಯಶಃ ಭಾವವೇದ, ದ್ರವ್ಯವೇದಗಳು ಸಮಾನವಾಗುತ್ತಿ ದ್ದರೂ ಕೆಲವೆಡೆ ವಿಷಮವೂ ಆಗುವುದು. ದೇವ, ನಾರಕಿ ಮತ್ತು ಭೋಗ ಭೂಮಿಗಳಲ್ಲಿ ದ್ರವ್ಯವೇದವು ಇರುವಂತೆ, ಭಾವವೇದವೂ ಇರುತ್ತದೆ. ಆದರೆ ಕರ್ಮಭೂಮಿಯ ಮಾನವ ಮತ್ತು ಪಶುಪಕ್ಷಿಗಳಲ್ಲಿ ದ್ರವ್ಯ ವೇದದೊಡನೆ

ಮೂರು ಪ್ರಕಾರದ ಭಾವವೇದಗಳುಂಟಾಗಬಹುದು. ಮಾರ್ಗಣೆಯಲ್ಲಿ ಭಾವವೇದದ ಪ್ರಾಧಾನ್ಯತೆ ಇರುವುದು. ಪುಂವೇದ, ಸ್ತ್ರೀವೇದ, ನಪುಂಸಕ ವೇದ ಮತ್ತು ನೋಕಷಾಯಗಳ ಉದೀರಣದಿಂದ ಜೀವ ಪರಿಣಾಮಗಳಲ್ಲಿ ಬಹು ವಿಶೇಷವಾದ ಮೋಹವುಂಟಾಗುತ್ತದೆ. ಈ ಮೋಹ ಅಥವಾ ಮೂರ್ಛಾ ಪರಿಣಾಮದಿಂದ, ಜೀವನಿಗೆ ಗುಣದೋಷಗಳ ವಿಚಾರವೂ ವಿವೇಕವೂ ಇರುವುದಿಲ್ಲವು.

೬. ಕಷಾಯ ಮಾರ್ಗಣೆಯು ಇಪ್ಪತ್ತೈದು ಪ್ರಕಾರವಾಗಿದೆ:

**ಸುಹುದುಕ್ಖ ಸುಬಹು ಸಸ್ಸಂ ಕಮ್ಮಕ್ಖೇತ್ತಂ ಕಸೇದಿ ಜೀವಸ್ಸ।**
**ಸಂಸಾರದೂರಂಮೇರಂ ತೇಣ ಕಸಾಓತ್ತಿ ಣಂ ವೇಂತಿ ॥ ೨೮೧ ॥**

**ಸಮತ್ತ ದೇಸ ಸಯಲ ಚರಿತ್ತ ಜಹಕ್ಖಾದ ಚರಣ ಪರಿಣಾಮೇ।**
**ಘಾದಂತಿ ವಾ ಕಸಾಯಾ ಚಉಸೋಲ ಅಸಂಖ**
**ಲೋಗಮಿದಾ ॥ ೨೮೨ ॥**

**ಭಾವಾರ್ಥ:** ಜೀವನ ಕರ್ಮರೂಪ ಕ್ಷೇತ್ರ (ಗದ್ದೆ) ದ ಎಲ್ಲೆಯು ಅತ್ಯಂತವಾಗಿರುವ ಸಂಸಾರ ಪರಿಭ್ರಮಣರೂಪವಾಗಿರುತ್ತದೆ. ಅದರಲ್ಲಿ ಸುಖದುಃಖರೂಪವಾದ ಬಹುಧಾನ್ಯವುಂಟಾಗುತ್ತವೆ. ಅಂತಹ ಕ್ಷೇತ್ರವನ್ನು ನೇಗಿಲಾದಿಗಳಿಂದ ಉಳಲ್ಪಡುವುದೇ ಕಷಾಯವು. ಸಮ್ಯಗ್ದರ್ಶನ ಮತ್ತು ಸ್ವರೂಪಾಚರಣಗಳನ್ನು ಘಾತಿಸುವ ಅನಂತಾನುಬಂಧಿ ಕ್ರೋಧ, ಮಾನ, ಮಾಯಾ ಮತ್ತು ಲೋಭಗಳೆಂಬ ನಾಲ್ಕು ಕಷಾಯಗಳೂ, ದೇಶ ಸಂಯಮವನ್ನು ಘಾತಿಸುವ ಅಪ್ರತ್ಯಾಖ್ಯಾನ ಕ್ರೋಧಾದಿ ನಾಲ್ಕು ಕಷಾಯಗಳೂ, ಯಥಾಖ್ಯಾತ ಚಾರಿತ್ರದ ಪರಿಣಾಮವನ್ನು ನಾಶಮಾಡುವ ಸಂಜ್ವಲನ ಕ್ರೋಧಾದಿ ನಾಲ್ಕು ಕಷಾಯಗಳೂ ಮತ್ತು ಹಾಸ್ಯ, ರತಿ, ಅರತಿ, ಶೋಕ, ಭಯ, ಜುಗುಪ್ಸಾ, ಸ್ತ್ರೀವೇದ, ಪುಂವೇದ ಮತ್ತು ನಪುಂಸಕವೇದಗಳೆಂಬ ಒಂಭತ್ತು ನೋಕಷಾಯಗಳೂ ಇರುತ್ತವೆ. ಆದ್ದರಿಂದ ಇವುಗಳಿಗೆ ಕಷಾಯಗಳೆಂದೇ ಹೇಳುತ್ತಾರೆ. ಇವುಗಳಲ್ಲಿ ಮುಖ್ಯವಾಗಿ ನಾಲ್ಕು ಭೇದಗಳು ಅಥವಾ ಹದಿನಾರು ಅಥವಾ ಇಪ್ಪತ್ತೈದು ಮೊದಲಾಗಿ ಅಸಂಖ್ಯಾತ ಲೋಕ ಪ್ರಮಾಣ ಭೇದಗಳಾಗುತ್ತವೆ.

೭. ಜ್ಞಾನಮಾರ್ಗಣೆಯು ಎಂಟು ಪ್ರಕಾರವಾಗಿದೆ :

**ಜಾಣಇ ತಿಕಾಲವಿಸಏ ದವ್ವಗುಣೇ ಪಜ್ಜ ಏ ಯ ಬಹುಭೇದೇ।**
**ಪಚ್ಚಕ್ಖಂ ಚ ಪರೋಕ್ಖಂ ಅಣೇಣ ಣಾಣೇತ್ತಿ ಣಂ ಬೇಂತಿ ॥೨೯೮॥**

**ಭಾವಾರ್ಥ :** ಭೂತ, ಭವಿಷ್ಯತ್, ವರ್ತಮಾನರೂಪ ಮೂರು ಕಾಲ ಸಂಬಂಧವಾದ ಸಕಲ ದ್ರವ್ಯಗಳ ಗುಣ ಮತ್ತು ಅವುಗಳ ಪರ್ಯಾಯಗಳನ್ನು ಏಕಕಾಲದಲ್ಲಿ ತಿಳಿಯುವುದೇ ಜ್ಞಾನವು. ಮನಸ್ಸು ಮತ್ತು ಇಂದ್ರಿಯಗಳ ಮೂಲಕ ತಿಳಿಯುವುದೇ ಪರೋಕ್ಷಜ್ಞಾನವು. ಅವಧಿ, ಮನಃಪರ್ಯಯ ಮತ್ತು ಕೇವಲಜ್ಞಾನ ಈ ಮೂರು ಜ್ಞಾನಗಳು ಪ್ರತ್ಯಕ್ಷಜ್ಞಾನಗಳಾಗಿ ರುತ್ತವೆ.

೮. ಸಂಯಮ ಮಾರ್ಗಣೆಯು ಏಳು ಪ್ರಕಾರವಾಗಿದೆ :

**ವದಸಮಿದಿ ಕಸಾಯಾಣಂ ದಂಡಾಣ ತಹಿಂದಿಯಾಣ ಪಂಚಣ್ಹಂ।**
**ಧಾರಣ ಪಾಲಣ ಣಿಗ್ಗಹ ಚಾಗಜಓ ಸಂಜಮೋ ಭಣಿಯೋ ॥೪೬೪॥**

**ಭಾವಾರ್ಥ :** ಅಹಿಂಸಾದಿ ಐದು ಅಣುವ್ರತಾದಿಗಳನ್ನು ಧರಿಸುವುದು, ಈರ್ಯಾಸಮಿತಿ ಮೊದಲಾದ ಪಂಚಸಮಿತಿಗಳನ್ನು ಪಾಲಿಸುವುದು, ಇಪ್ಪತ್ತೈದು ಕಷಾಯಗಳನ್ನು ತಡೆಯುವುದು (ನಿಗ್ರಹಿಸುವುದು), ಮನ, ವಚನ ಮತ್ತು ಕಾಯಗಳೆಂಬ ದಂಡಗಳ ತ್ಯಾಗವಮಾಡುವುದು, ಪಂಚೇಂದ್ರಿಯಗಳನ್ನು ತನ್ನ ಅಧೀನದಲ್ಲಿಟ್ಟುಕೊಳ್ಳುವುದು ಮೊದಲಾದವುಗಳಿಗೆ ಸಂಯಮವೆಂದೆನ್ನುತ್ತಾರೆ. ಅದು ಅಸಂಯಮ, ದೇಶಸಂಯಮ, ಸಾಮಾಯಿಕ, ಛೇದೋಪಸ್ಥಾಪನಾ, ಪರಿಹಾರ ವಿಶುದ್ಧಿ, ಸೂಕ್ಷ್ಮಸಾಂಪರಾಯ ಮತ್ತು ಯಥಾಖ್ಯಾತಗಳೆಂದು ಏಳು ಪ್ರಕಾರಗಳಾಗಿವೆ.

೯. ದರ್ಶನಮಾರ್ಗಣೆಯು ನಾಲ್ಕು ಪ್ರಕಾರವಾಗಿದೆ :

**ಜಂ ಸಾಮಣ್ಣಂ ಗಹಣಂ ಭಾವಾಣಂ ಣೇವ ಕಟ್ಟು ಮಾಯಾರಂ।**
**ಅವಿಸೇಸಿದೂಣ ಅಟ್ಠೇ ದಂಸಣ ಮಿದಿ ಭಣ್ಣಯೇ ಸಮಯೇ ॥೪೮೧॥**

**ಭಾವಾರ್ಥ :** ಸಾಮಾನ್ಯ ವಿಶೇಷಾತ್ಮಕರೂಪವಾದ ಪದಾರ್ಥಗಳ ವಿಶೇಷ ಅಂಶವನ್ನು ಗ್ರಹಣೆಮಾಡದೆ, ಕೇವಲ ಸಾಮಾನ್ಯ ಅಂಶದ ಯಾವ

ನಿರ್ವಿಕಲ್ಪರೂಪದಿಂದ ಗ್ರಹಣೆಯಾಗುತ್ತದೋ, ಅದನ್ನು ಪರಮಾಗಮದಲ್ಲಿ ದರ್ಶನವೆಂದು ಹೇಳಲ್ಪಡುತ್ತದೆ. ಇದರಲ್ಲಿ ಚಕ್ಷುದರ್ಶನ, ಅಚಕ್ಷುದರ್ಶನ, ಅವಧಿದರ್ಶನ, ಕೇವಲದರ್ಶನವೆಂಬ ನಾಲ್ಕು ಭೇದಗಳಿವೆ.

೧೦) ಲೇಶ್ಯಾಮಾರ್ಗಣೆಯು ಆರುಪ್ರಕಾರವಾಗಿದೆ:

**ಲಿಂಪಇ ಅಪ್ಪೀ ಕೀರಇ ಏದೀ ಏ ಣಿಯ ಅಪುಣ್ಣ ಪುಣ್ಣಂ ಚ।**
**ಜೀವೋತ್ತಿ ಹೋದಿ ಲೇಸ್ಸಾ ತಿಸ್ಸಾಗುಣ ಜಾಣಯಕ್ಖಾದಾ ॥೪೮೮॥**

**ಜೋಗ ಪಉತ್ತೀ ಲೇಸ್ಸಾ ಕಸಾಯ ಉದಯಾಣು ರಂಜಿಯಾ ಹೋಇ।**
**ತತ್ತೋ ದೋಣ್ಣಂ ಕಜ್ಜಂ ಬಂಧ ಚಉಕ್ಕಂ ಸಮುದಿಟ್ಠ ॥೪೮೯॥**

**ಭಾವಾರ್ಥ:** ಜೀವನು ತನ್ನ ಪರಿಣಾಮಗಳಿಂದ ತನ್ನಲ್ಲಿಯೇ ಪುಣ್ಯ ಪಾಪಗಳನ್ನು ಲೇಪಿಸಿಕೊಳ್ಳುವುದು ಅಥವಾ ಗ್ರಹಣಮಾಡುವುದು ಇದಕ್ಕೆ ಲೇಶ್ಯೆಯೆಂದು ಹೆಸರು. ಕಷಾಯಗಳ ಉದಯದಿಂದಾಗುವ ಅನುರಂಜಿತ ವಾದ ಯೋಗಗಳ ಪ್ರವೃತ್ತಿಗೆ ಲೇಶ್ಯೆಯೆಂದು ಹೆಸರು. ಆದರಿಂದ ಪುಣ್ಯ ಮತ್ತು ಪಾಪಗಳ ಪ್ರಕೃತಿ, ಪ್ರದೇಶ, ಸ್ಥಿತಿ, ಅನುಭಾಗರೂಪ ಈ ನಾಲ್ಕು ಪ್ರಕಾರದ ಬಂಧವೂ ಆಗುತ್ತದೆ. ಅದರಲ್ಲಿ ಕೃಷ್ಣ, ನೀಲ, ಕಾಪೋತಗಳೆಂಬ ಮೂರು ಅಶುಭ ಲೇಶ್ಯೆಗಳು. ಪೀತ, ಪದ್ಮ, ಶುಕ್ಲಗಳೆಂಬ ಮೂರು ಶುಭ ಲೇಶ್ಯೆಗಳು. ಹೀಗೆ ಆರು ಪ್ರಕಾರಗಳಾಗಿವೆ.

೧೧) ಭವ್ಯತ್ವಮಾರ್ಗಣೆಯು ಎರಡು ಪ್ರಕಾರವಾಗಿದೆ:

**ಭವಿಯಾ ಸಿದ್ಧೀ ಜೇಸಿಂ ಜೀವಾಣಂ ತೇ ಹವಂತಿ ಭವಸಿದ್ಧಾ।**
**ತವ್ವಿವರೀಯಾ ಭವ್ವ ಸಂಸಾರಾದೋ ಣ ಸಿಜ್ಝಂತಿ ॥೫೫೬॥**

**ಭಾವಾರ್ಥ:** ಯಾವ ಜೀವಗಳಲ್ಲಿ ಸಿದ್ಧತ್ವವನ್ನು ಪಡೆಯುವ ಶಕ್ತಿ ಇರುವುದೋ ಆ ಜೀವಗಳು ಭವ್ಯ ಜೀವಗಳೆಂದೂ, ಈ ಶಕ್ತಿ ಇಲ್ಲದಿರುವ ಜೀವಗಳು ಅಭವ್ಯಜೀವಗಳೆಂದೂ ತಿಳಿಯಬೇಕು.

೧೨) ಸಮ್ಯಕ್ತ್ವಮಾರ್ಗಣೆಯು ಆರು ವಿಧವು:

**ಛಪ್ಪಂಚಣವವಿಹಾಣಂ ಅತ್ಥಾಣಂ ಜಿಣವರೋವ ಇಟ್ಠಾಣಂ।**
**ಆಣಾಏ ಅಹಿಗಮೇಣ ಯ ಸದ್ದಹಣಂ ಹೋಇ ಸಮ್ಮತ್ತಂ ॥೫೬೦॥**

**ಭಾವಾರ್ಥ :** ಜೀವಾದಿ ಆರು ದ್ರವ್ಯಗಳಲ್ಲೂ ಐದು ಅಸ್ತಿಕಾಯಗಳಲ್ಲೂ ಒಂಭತ್ತು ಪದಾರ್ಥಗಳಲ್ಲೂ ತೀರ್ಥಂಕರ ಪರಮದೇವರು ಆಜ್ಞೆಯಿತ್ತಿರುವಂತೆ ಆಜ್ಞೆಯಿಂದಾಗಲೀ, ಅಧಿಗಮದಿಂದಾಗಲೀ ನಂಬಿಕೆಯನ್ನಿಡುವುದೇ ಸಮ್ಯಕ್ತ್ವವು. ಅದರಲ್ಲಿ ಮಿಥ್ಯಾತ್ವ, ಸಾಸಾದನ, ಮಿಶ್ರ, ಉಪಶಮವೇದಕ, ಕ್ಷಾಯಿಕವೆಂದು ಆರು ವಿಧವಾಗಿದೆ.

೧೩) ಸಂಜ್ಞಿಮಾರ್ಗಣೆಯಲ್ಲಿ ಎರಡು ವಿಧವು :

**ಣೋ ಇಂದಿಯ ಆವರಣ [illegible] ಓಪಸಮಂ ತಜ್ಜವೋಹಣಂ ಸಣ್ಣಾ ।**
**ಸಾಜಸ್ಸ ಸೋ ದು ಸಣ್ಣೀ ಇದರೋ ಸೇಸಿಂದಿ ಅವ-**
**ವೋಹೋ ॥೬೫೯॥**

**ಸಿಕ್ಖಾಕಿರಿಯುವದೇಸಾಲಾವಗ್ಗಾಹೀ ಮಣೋವಲಂಬೇಣ।**
**ಜೋ ಜೀವೋ ಸೋ ಸಣ್ಣೀ ತವ್ವಿವರೀಯೋ ಅಸಣ್ಣೀ ದು ॥೬೬೦॥**

**ಭಾವಾರ್ಥ :** ನೋ ಇಂದ್ರಿಯಾವರಣ ಕ್ಷಯೋಪಶಮದಿಂದುಂಟಾಗುವ ಜ್ಞಾನಕ್ಕೆ ( ತಿಳುವಳಿಕೆಗೆ ) ಸಂಜ್ಞಿಯೆಂದು ಹೆಸರು. ಅದು ಇರುವ ಜೀವವೇ ಸಂಜ್ಞಿಜೀವವು. ಯಾವ ಜೀವಗಳಿಗೆ ಇಂದ್ರಿಯಗಳ ಮೂಲಕವಾದ ತಿಳುವಳಿಕೆಯಾಗುವುದೋ ಅವು ಅಸಂಜ್ಞೀ ಜೀವಗಳು. ಯಾವ ಜೀವಗಳು ಶಿಕ್ಷಣ, ಉಪದೇಶ, ಹಿತಾಹಿತಕ್ರಿಯೆ, ವಾರ್ತಾಲಾಪಾದಿ, ಸಂಕೇತಾದಿಗಳನ್ನು ಮನಸ್ಸಿನ ಅವಲಂಬನೆಯಿಂದ ಮಾಡಿಕೊಳ್ಳುವುವೋ ಅವು ಸಂಜ್ಞೀಜೀವಗಳು. ಶಿಕ್ಷಣ ಉಪದೇಶಾದಿಗಳನ್ನು ಗ್ರಹಣಮಾಡದ ಜೀವಗಳೇ ಅಸಂಜ್ಞೀ ಜೀವಗಳು.

೧೪) ಆಹಾರಮಾರ್ಗಣೆಯು ಎರಡು ಪ್ರಕಾರವು :

**ಉದಯಾವಣ್ಣ ಸರೀರೋದಯೇಣ ತದ್ದೇಹ ವಯಣ ಚಿತ್ತಾಣಂ।**
**ಣೋಕಮ್ಮವಗ್ಗಣಾಣಂ ಗಹಣಂ ಆಹಾರಯಂ ಣಾಮ ॥೬೬೩॥**

**ಭಾವಾರ್ಥ :** ಉದಯ ಪ್ರಾಪ್ತ ಶರೀರ ನಾಮ ಕರ್ಮದ ಉದಯ ದಿಂದ ಶರೀರ ಸಂಬಂಧಿಯಾಗಲಿ, ವಚನ ಸಂಬಂಧಿಯಾಗಲಿ ಅಥವಾ ಮನ ಸಂಬಂಧಿಯಾಗಲಿ ನೋಕರ್ಮ ವರ್ಗಣೆಗಳನ್ನು ಗ್ರಹಿಸುವುದೇ ಆಹಾರಕವು. ಗ್ರಹಣ ಮಾಡದೇ ಇರುವುದೇ ಅನಾಹಾರಕವು.

**ಜೇಹಿಂದು ಲಕ್ಖಿಜಂತೇ ಉದಯಾದಿಸು ಸಂಭವೇಹಿಂ ಭಾವೇಹಿಂ।**
**ಜೀವಾ ತೇ ಗುಣಸಣ್ಣಾ ಣಿದ್ದಿಟ್ಠಾ ಸವ್ವದರಸೀಹಿಂ ॥೮॥**

**ಭಾವಾರ್ಥ :** ಮೋಹನೀಯ ಕರ್ಮದ ಉದಯ, ಉಪಶಮ, ಕ್ಷಯೋ ಪಶಮ ಅಥವಾ ಕ್ಷಯದಿಂದುಂಟಾಗುವ ಯಾವ ಭಾವಗಳಿಂದ ಜೀವಗಳ ಪರಿ ಚಯವು ಆಗುವುದೋ ಅವುಗಳಿಗೆ ಗುಣಸ್ಥಾನಗಳೆಂದು ಸರ್ವಜ್ಞ ಪರಮ ದೇವರು ಉಪದೇಶವನ್ನಿತ್ತಿರುವರು. ಇವು ಮೋಕ್ಷ ಮಾರ್ಗದ ಹದಿನಾಲ್ಕು ಸೋಪಾನಗಳು. ಇವು ಮೋಹ ಮತ್ತು ಯೋಗಗಳ ಸಂಬಂಧದಿಂದುಂಟಾಗು ವವುಗಳಾಗಿವೆ. ಜೀವನು ಅವುಗಳನ್ನು ದಾಟಿ ಸಿದ್ಧನಾಗುತ್ತಾನೆ. ಒಬ್ಬ ಜೀವನಿಗೆ ಒಂದು ಸಮಯದಲ್ಲಿ ಒಂದೇ ಗುಣಸ್ಥಾನವಾಗುವುದು.

**ಮಿಚ್ಛೋ ಸಾಸಣ ಮಿಸ್ಸೋ ಅವಿರದ ಸಮ್ಮೋಯ ದೇಸ ವಿರದೋಯ।**
**ವಿರದಾ ಪಮತ್ತ ಇದರೋ ಅಪುವ್ವ ಅಣಿಯಟ್ಟಿ ಸುಹಮೋ ಯ ॥೯॥**

**ಉದಸಂತ ಖೀಣಮೋಹೋ ಸ ಜೋಗ ಕೇವಲಿಜಿಣೋ ಅಜೋಗೀಯ।**
**ಚಉದಸ ಜೀವಸಮಾಸಾ ಕಮೇಣ ಸಿದ್ಧಾಯ ಣಾದವ್ವಾ ॥೧೦॥**

**ಭಾವಾರ್ಥ :** ೧. ಮಿಥ್ಯಾತ್ವ. ೨. ಸಾಸಾದನ. ೩. ಮಿಶ್ರ. ೪. ಅವಿರತ ಸಮ್ಯಕ್ತ್ವ. ೫. ದೇಶ ವಿರತ. ೬. ಪ್ರಮತ್ತ ವಿರತ. ೭. ಅಪ್ರ ಮತ್ತ ವಿರತ. ೮. ಅಪೂರ್ವಕರಣ. ೯. ಅನಿವೃತ್ತಿಕರಣ. ೧೦. ಸೂಕ್ಷ್ಮ ಲೋಭ. ೧೧. ಉಪಶಾಂತ ಮೋಹ. ೧೨. ಕ್ಷೀಣ ಮೋಹ. ೧೩. ಸಯೋಗ ಕೇವಲಿ ಜಿನ. ೧೪. ಅಯೋಗ ಕೇವಲಿ ಜಿನ. ಈ ಹದಿನಾಲ್ಕು ಗುಣಸ್ಥಾನಗಳನ್ನು ದಾಟಿದವರೇ ಸಿದ್ಧಪರಮೇಷ್ಠಿಗಳು.

## ಹದಿನಾಲ್ಕು ಗುಣಸ್ಥಾನಗಳ ಸ್ವರೂಪ

೧) ಮಿಥ್ಯಾತ್ವ ಗುಣಸ್ಥಾನ :

**ಮಿಚ್ಛೋ ದಯೇಣ ಮಿಚ್ಛತ್ತಮಸದ್ದಹಣಂ ತು ತಚ್ಚ ಅತ್ಥಾಣಂ।**
**ಏಯಂತಂ ವಿವರೀಯಂ ವಿಣಯಂ ಸಂಸಯಿದ ಮಣ್ಣಾಣಂ ॥ ೧೫॥**

ಭಾವಾರ್ಥ : ಮಿಥ್ಯಾದರ್ಶನ ಕರ್ಮದ ಉದಯದಿಂದ ಮಿಥ್ಯಾತ್ವಭಾವ ವುಂಟಾಗಿ ತತ್ವಗಳಲ್ಲಿ ಶ್ರದ್ಧೆಯು ಉಂಟಾಗುವುದಿಲ್ಲವು. ಅದರಲ್ಲಿ ಏಕಾಂತ, ವಿಪರೀತ, ವಿನಯ, ಸಂಶಯ ಮತ್ತು ಅಜ್ಞಾನಗಳಿಂದು ಐದು ಪ್ರಕಾರವಾಗಿದೆ.

೨) ಸಾಸಾದನ ಗುಣಸ್ಥಾನ :

**ಆದಿಮಸಮ್ಮತ್ತದ್ಧಾ ಸಮಯಾದೋ ಛಾವಲಿತ್ತಿ ವಾ ಸೇಸೇ।**
**ಅಣಅಣ್ಣದರುದ ಯಾದೋ ಣಾಸಿಯ ಸಮ್ಮೋತ್ತಿ ಸಾಸಣ-**
**ಕ್ಖೋಸೋ ॥ ೧೯ ॥**

ಭಾವಾರ್ಥ : ಉಪಶಮ ಸಮ್ಯಕ್ತ್ವದ ಅಂತರ್ಮುಹೂರ್ತ ಕಾಲದ ಅವಧಿಯಲ್ಲಿ ಒಂದು ಸಮಯ ಮೊದಲುಗೊಂಡು ಆರು ಆವಲಿ ಶೇಷ (ಬಾಕಿ) ಇರುವಾಗ ಅನಂತಾನುಬಂಧೀ ನಾಲ್ಕು ಕಷಾಯಗಳಲ್ಲಿ ಯಾವುದಾದರೊಂದು ಕಷಾಯದ ಉದಯದಿಂದ ಯಾವಾಗ ಸಮ್ಯಕ್ತ್ವದಿಂದ ಚ್ಯುತನಾಗಿ ಮಿಥ್ಯಾತ್ವದತ್ತ ತಲುಪುವ ಮಧ್ಯ ಅವಸ್ಥೆಯೇ ಸಾಸಾದನ ಭಾವವು.

೩) ಮಿಶ್ರ ಗುಣಸ್ಥಾನ (ಸಮ್ಯಙ್ಮಿಥ್ಯಾದೃಷ್ಟಿ) :

**ಸಮ್ಮಾಮಿಚ್ಛುದಯೇಣ ಯ ಜತ್ತಂತರ ಸವ್ವ ಘಾದಿ ಕಜ್ಜೇಣ।**
**ಣ ಯ ಸಮ್ಮಂ ಮಿಚ್ಛಂಪಿಯ ಸಮ್ಮಿಸ್ಸೋ ಹೋದಿ**
**ಪರಿಣಾಮೋ ॥ ೨೧ ॥**

ಭಾವಾರ್ಥ : ಜಾತ್ಯಂತರ ಸರ್ವಘಾತಿ ಸಮ್ಯಙ್ಮಿಥ್ಯಾತ್ವ ಪ್ರಕೃತಿಯ ಉದಯದಿಂದ ಜೀವನಿಗೆ ಕೇವಲ ಸಮ್ಯಕ್ತ್ವ ರೂಪ ಭಾವವಾಗಲೀ ಅಥವಾ ಮಿಥ್ಯಾತ್ವರೂಪ ಭಾವವಾಗಲಿ ಆಗದೆ ಮಿಶ್ರರೂಪ ಪರಿಣಾಮವಾಗುತ್ತದೆ.

೪) ಅವಿರತ ಸಮ್ಯಕ್ತ್ವ ಗುಣಸ್ಥಾನ (ಅಸಂಯತ ಸಮ್ಯಗ್ದೃಷ್ಟಿ):

**ಸತ್ತಣ್ಹಂ ಉವ ಸಮದೋ ಉವಸಮ ಸಮ್ಮೋ ಖಯೊದು**
**ಖಇಓ ಯ।**
**ವಿದಿಯ ಕಸಾಯುದಯಾದೋ ಅಸಂಜದೋ ಹೋದಿ**
**ಸಮ್ಮೋಯ ॥೨೬॥**

**ಭಾವಾರ್ಥ :** ಅನಂತಾನುಬಂಧಿ ಕ್ರೋಧ, ಮಾನ, ಮಾಯಾ, ಲೋಭ ಮಿಥ್ಯಾತ್ವ, ಮಿಶ್ರ, ಸಮ್ಯಕ್ತ್ವಪ್ರಕೃತಿ ಈ ಏಳು ಪ್ರಕೃತಿಗಳ ಉಪ ಶಮದಿಂದ ಉಪಶಮ ಸಮ್ಯಕ್ತ್ವವೂ, ಕ್ಷಯದಿಂದ ಕ್ಷಾಯಿಕ ಸಮ್ಯಕ್ತ್ವವೂ ಮತ್ತು ಬಾಕಿ ಆರರ ಉದಯವು ಇಲ್ಲದೆ ಇರುವುದರಿಂದ ಕೇವಲ ಸಮ್ಯಕ್ತ್ವದ ಉದಯದಿಂದ ಈ ಗುಣಸ್ಥಾನದಲ್ಲಿ ವೇದಕ ಸಮ್ಯಕ್ತ್ವವುಂಟಾಗುತ್ತದೆ. ಅಪ್ರತ್ಯಾಖ್ಯಾನ ಕಷಾಯಗಳ ಉದಯದಿಂದ ಅಸಂಯಮವೂ ಕೂಡ ಉಂಟಾ ಗುತ್ತದೆ.

೫) ದೇಶವಿರತ ಗುಣಸ್ಥಾನ :

**ಪಚ್ಚಕ್ಖಾಣುದಯಾದೋ ಸಂಜಮಭಾವೋ ಣ ಹೋದಿ ಣ ವರಿಂದು।**
**ಥೋವ ವದೋ ಹೋದಿ ತದೋ ದೇಸವದೋ ಹೋದಿ ಪಂಚಮ**
**ಓ ॥೩೦॥**

**ಭಾವಾರ್ಥ :** ಪ್ರತ್ಯಾಖ್ಯಾನಾವರಣ ಕಷಾಯದ ಉದಯದಿಂದ ಪೂರ್ಣ ಸಂಯಮವಾಗದಿದ್ದರೂ ಏಕದೇಶ ಸಂಯಮವು ಆಗುತ್ತದೆ. ಇದ ಕ್ಕೇನೇ ದೇಶ ಸಂಯಮ ಗುಣಸ್ಥಾನವೆಂದು ಹೇಳುವುದು.

೬) ಪ್ರಮತ್ತ ವಿರತ ಗುಣಸ್ಥಾನ:

**ಸಂಜಲಣ ಣೋ ಕಸಾಯಾಣುದಯಾದೋ ಸಂಜಮೋ ಹವೇ**
**ಜಹ್ಮಾ।**
**ಮಲಜಣಣ ಪಮಾದೋ ವಿ ಯ ತಮ್ಹಾಹು ಪಮತ್ತವಿರದೋ**
**ಸೋ ॥೩೧॥**

**ಭಾವಾರ್ಥ:** ಸಂಜ್ವಲನ ಕ್ರೋಧ, ಮಾನ, ಮಾಯಾ, ಲೋಭಗಳು ಮತ್ತು ನೋಕಷಾಯಗಳ ಉದಯದಿಂದ ಸಂಯಮ ಭಾವವುಂಟಾಗುತ್ತದೆ. ಆದರೆ ಇಲ್ಲಿ ಅತಿಚಾರಗಳನ್ನುಂಟುಮಾಡುವ ಪ್ರಮಾದಗಳೂ ಕೂಡ ಉಂಟಾಗುವುದರಿಂದ ಪ್ರಮತ್ತವಿರತ ಗುಣಸ್ಥಾನವೆಂದು ಹೇಳುತ್ತಾರೆ.

೭) ಅಪ್ರಮತ್ತ ಗುಣಸ್ಥಾನ:

**ಣಟ್ಠಾ ಸೇಸ ಪಮಾದೋ ವಯಗುಣ ಸೀಲೋಲಿ ಮಂಡಿ ಓ ಣಾಣೀ।**
**ಅಣುವಸಮಓ ಅಖವಓ ಝಾಣಣಿಲೀಣೋ ಹು ಅಪ**
**ಮತ್ತೋ ॥೪೬॥**

**ಭಾವಾರ್ಥ:** ಸಕಲ ಪ್ರಮಾದ ರಹಿತನೂ, ವ್ರತಗುಣ ಶೀಲಾದಿಗಳಿಂದ ಅಲಂಕೃತನೂ, ಜ್ಞಾನಿಯೂ, ಉಪಶಮ ಮತ್ತು ಕ್ಷಪಕ ಶ್ರೇಣಿಯಿಂದ ಕೆಳಗೆ ಧ್ಯಾನಮಗ್ನನಾದ ಸಾಧುವೇ ಅಪ್ರಮತ್ತವಿರತನು.

೮) ಅಪೂರ್ವಕರಣ ಗುಣಸ್ಥಾನ:

**ಅಂತೋ ಮುಹುತ್ತಕಾಲಂ ಗಮಿಊಣ ಅಧಾಪವತ್ತ ಕರಣಂ ತಂ।**
**ಪಡಿಸಮಯಂ ಸುಜ್ಝಂತೋ ಅಪುವ್ವಕರಣಂ ಸಮಲ್ಲಿಯಇ ॥೫೦॥**

**ಭಾವಾರ್ಥ:** ಏಳನೆಯ ಗುಣಸ್ಥಾನದಲ್ಲಿ ಒಂದು ಮುಹೂರ್ತ ಕಾಲದ ವರೆಗೆ ಅಧಃಪ್ರವೃತ್ತಕರಣವನ್ನು ಪೂರ್ಣಗೊಳಿಸಿ ಪ್ರತಿ ಸಮಯದಲ್ಲೂ ಶುದ್ಧಿ ಹೊಂದುತ್ತ ಅಪೂರ್ವ ಪರಿಣಾಮವನ್ನು ಪ್ರಾಪ್ತಮಾಡಿಕೊಳ್ಳುತ್ತಾನೆ. ಆದಕ್ಕೆ ಅಪೂರ್ವಕರಣ ಗುಣಸ್ಥಾನವೆಂದು ಹೇಳುತ್ತಾರೆ.

೯) ಅನಿವೃತ್ತಿಕರಣ ಗುಣಸ್ಥಾನ:

**ಏಕಹ್ಮಿ ಕಾಲಸಮಯೇ ಸಂಠಾಣಾದೀಹಿಂ ಜಇ [illegible] ವಟ್ಟಂತಿ।**
**ಣ ಣಿವಟ್ಟಂತಿ ತಹಾವಿ ಯ ಪರಿಣಾಮೇಹಿಂ ಮಿಹೋ ಜೇಹು॥೫೬॥**
**ಹೋಂತಿ ಅಣಿಯಟ್ಟಿಣೋತೇ ಪಡಿಸಮಯಂ ಜೇಸ್ಸಿ ಮೆಕ್ಕ**
**ಪರಿಣಾಮೋ।**
**ವಿಮಲಯರ ಝಾಣಹುಯ ವಹ ಸಿಹಾಹಿಂ ಣಿದ್ದಡ್ಢ ಕಮ್ಮವಣಾ**
**॥೫೭॥**

**ಭಾವಾರ್ಥ:** ಶರೀರಾದಿ ಆಕಾರಗಳ ಭಿನ್ನತೆ ಇದ್ದರೂ ಕೂಡ ಏಕ ಸಮಯವರ್ತಿ ಜೀವಗಳ ಪರಿಣಾಮಗಳಲ್ಲಿ ಪರಸ್ಪರ ಸಾಧುಗಳಲ್ಲಿ ಭಿನ್ನತ್ವವು ಇಲ್ಲದೆ ಪ್ರತಿ ಸಮಯದಲ್ಲಿಯೂ ಸಮಾನ ವೃದ್ಧಿಯಿಂದ ಶುದ್ಧಿಹೊಂದುವವುಗಳಾಗಿ ಇರುವ ಅನಿವೃತ್ತಿಕರಣ ಗುಣಸ್ಥಾನಧಾರಿಗಳಾದ ಸಾಧುಗಳು ಅತಿ ಪರಿಶುದ್ಧ ಧ್ಯಾನಾಗ್ನಿಯಿಂದ ಕರ್ಮಗಳನ್ನು ನಾಶಗೊಳಿಸುತ್ತಾರೆ (ಸುಟ್ಟುಹಾಕುತ್ತಾರೆ).

೧೦) ಸೂಕ್ಷ್ಮಲೋಭ ಗುಣಸ್ಥಾನ:

**ಅಣುಲೋಹಂ ವೇದಂತೋ ಜೀವೋ ಉವಸಾಮಗೋ ವ**
**ಖವಗೋವಾ ।**
**ಸೋ ಸುಹುಮ ಸಂಪರಾಓ ಸಹಖಾದೇಣೂಣ ಓ ಕಿಂಚಿ ॥೬೦॥**

**ಭಾವಾರ್ಥ:** ಸೂಕ್ಷ್ಮಲೋಭದ ಉದಯವನ್ನನುಭವಿಸುವ ಜೀವನು ಉಪಶಮ ಅಥವಾ ಕ್ಷಪಕಶ್ರೇಣಿಯಲ್ಲಿದ್ದರೂ ಅವನು ಸೂಕ್ಷ್ಮಸಾಂಪರಾಯ ಗುಣಸ್ಥಾನಧಾರಿಯು. ಅವನು ಯಥಾಖ್ಯಾತ ಸಂಯಮಿಗಿಂತ ಸ್ವಲ್ಪ ಕೆಳಗಿರುವವನಾಗಿರುತ್ತಾನೆ.

೧೧) ಉಪಶಾಂತಮೋಹ ಗುಣಸ್ಥಾನ:

**ಕದಕ ಫಲಜುದಜಲಂ ವಾ ಸರಏ ಸರವಾಣಿಯಂ ವ ಣಿಮ್ಮಲಯಂ ।**
**ಸಯಲೋಬಸಂತಮೋಹೋ ಉಬಸಂತಕ ಸಾಯಓಹೋದಿ ॥೬೧॥**

**ಭಾವಾರ್ಥ:** ನಿರ್ಮಲೀ ಫಲದಿಂದ ಕೂಡಿದ ನೀರಿನಂತೆಯೂ ಅಥವಾ ಶರತ್ಕಾಲ ಸರೋವರದ ನೀರಿನಂತೆಯೂ ಸಂಪೂರ್ಣ ಮೋಹನೀಯ ಕರ್ಮದ ಉಪಶಮ ಭಾವವನ್ನು ಪ್ರಾಪ್ತಮಾಡಿಕೊಂಡ ಸಾಧುವು ಉಪಶಾಂತ ಕಷಾಯ ಗುಣಸ್ಥಾನಧಾರಿಯಾಗುತ್ತಾನೆ.

೧೨) ಕ್ಷೀಣಮೋಹ ಗುಣಸ್ಥಾನ:

**ಣಿಸ್ಸೇಸ ಖೀಣಮೋಹೋ ಫಲಿಹಾಮಲಭಾವಣುದಯ**
**ಸಮಚಿತ್ತೊ ।**
ಖೀಣಕಸಾಓ ಭಣ್ಣದಿ ಣಿಗ್ಗಂಥೋ ವೀಯರಾಯೇಹಿಂ ॥೬೨॥

**ಭಾವಾರ್ಥ :** ಸಂಪೂರ್ಣ ಮೋಹನೀಯ ಕರ್ಮವನ್ನು ನಾಶಮಾಡಿರುವವನೂ, ಸ್ಫಟಿಕ ಮಣಿಯ ಪಾತ್ರೆಯಲ್ಲಿರುವ ನೀರಿನಂತೆ ನಿರ್ಮಲನಾದವನೂ ಆದ ನಿರ್ಗ್ರಂಥ ಸಾಧುವಿಗೆ ಕ್ಷೀಣಮೋಹಗುಣಸ್ಥಾನದ ಜೀವನೆಂದು ಸರ್ವಜ್ಞದೇವನು ಉಪದೇಶವನ್ನಿತ್ತಿರುವನು.

೧೩) ಸಯೋಗಕೇವಲೀ ಗುಣಸ್ಥಾನ :

**ಕೇವಲಣಾಣ ದಿವಾಯರ ಕಿರಣ ಕಲಾವಪ್ಪಣಾಸಿಯಣ್ಣಾಣೋ।**
**ಣವ ಕೇವಲ ಲದ್ಧುಗ್ಗಮ ಸುಜಣಿಯ ಪರಮಪ್ಪವವಏಸೋ ॥೬೩॥**

**ಅಸಹಾಯ ಣಾಣದಂಸಣ ಸಹಿಣೋ ಇದಿ ಕೇವಲೀ ಹು ಜೋಗೇಣ।**
**ಜುತ್ತೋತ್ತಿ ಸಜೋಗಿ ಜಿಣೊ ಅಣಾಇಣಿಹಣಾರಿಸೇ ಉತ್ತೋ॥೬೪॥**

**ಭಾವಾರ್ಥ :** ಕೇವಲಜ್ಞಾನರೂಪ ಸೂರ್ಯನ ಕರಣಗಳಿಂದ ಅಜ್ಞಾನವನ್ನು ನಾಶಗೊಳಿಸುವವನೂ, ನವಕೇವಲಲಬ್ಧಿಗಳ ಜ್ಯೋತಿರ್ಮಯವಾದ ಪ್ರಕಾಶದಿಂದ ಪರಮಾತ್ಮ ಅವಸ್ಥೆಯನ್ನು ಪಡೆದಿರುವವನೂ, ಅನ್ಯ ಸಹಾಯಗಳಿಲ್ಲದ ಕೇವಲಜ್ಞಾನ, ಕೇವಲದರ್ಶನಗಳಿಂದ ಯುಕ್ತನಾದವನೂ ಆದ ಕೇವಲಿಯು ಯೋಗಸಹಿತನಾಗಿರುವುದರಿಂದ ಅನಾದಿನಿಧನ ಶಾಸ್ತ್ರಗಳಲ್ಲಿ ಸಯೋಗಕೇವಲಿ ಜಿನನೆಂದು ಹೇಳಿರುತ್ತಾರೆ. ೧. ಅನಂತದರ್ಶನ, ೨. ಅನಂತಜ್ಞಾನ, ೩. ಅನಂತಸುಖ, ೪. ಅನಂತವೀರ್ಯ, ೫. ಕ್ಷಾಯಿಕಸಮ್ಯಕ್ತ್ವ, ೬. ಅನಂತದಾನ, ೭. ಅನಂತಲಾಭ, ೮. ಅನಂತಭೋಗ, ೯. ಅನಂತ ಉಪಭೋಗಗಳೆಂಬ ನವಕೇವಲ ಲಬ್ಧಿಗಳು ಇವರಿಗೆ ಪ್ರಾಪ್ತಿಯಾಗಿರುತ್ತವೆ.

೧೪. ಅಯೋಗಕೇವಲಿ ಜಿನ ಗುಣಸ್ಥಾನ :

**ಸೀಲೇಸಿಂ ಸಂಪತ್ತೋ ಣಿರುದ್ಧಣಿಸ್ಸೇಸ ಆಸವೋ ಜೀವೋ।**
**ಕಮ್ಮರಯ ವಿಪ್ಪಮುಕ್ಕೋ ಗಯ ಜೋಗೋ ಕೇವಲೀ**
**ಹೋದಿ ॥೬೫॥**

**ಭಾವಾರ್ಥ :** ಚಾರಿತ್ರಾಧಿಪತಿಯೂ, ಸಕಲ ಆಸ್ರವಗಳಿಂದ ನಿರ್ಮುಕ್ತನೂ, ಅಘಾತಿ ಕರ್ಮಗಳೆಂಬ ರಜದಿಂದ ರಹಿತನೂ ಆದ ಜೀವನೇ ಅಯೋಗಕೇವಲಿ ಜಿನನು.

ಈ ಹದಿನಾಲ್ಕು ಗುಣಸ್ಥಾನಗಳಲ್ಲಿ ಮೊದಲಿನ ಐದು ಗುಣಸ್ಥಾನಗಳು ಶ್ರಾವಕರ ಗುಣಸ್ಥಾನಗಳು. ಆರನೆಯ ಗುಣಸ್ಥಾನದಿಂದ ಹನ್ನೆರಡನೆಯ ಗುಣಸ್ಥಾನದವರೆಗೂ ಸಾಧುಗಳ ಗುಣಸ್ಥಾನಗಳು ಮತ್ತು ಹದಿಮೂರನೆಯ, ಹದಿನಾಲ್ಕನೆಯ ಗುಣಸ್ಥಾನಗಳೆರಡು ಪರಮಾತ್ಮರುಗಳ ಗುಣಸ್ಥಾನಗಳೆಂದು ತಿಳಿಯಬೇಕು.

ಅನಾದಿ ಮಿಥ್ಯಾದೃಷ್ಟಿ ಜೀವನು ಅನಂತಾನುಬಂಧೀ ನಾಲ್ಕು ಕಷಾಯ ಗಳನ್ನು ಮತ್ತು ಮಿಥ್ಯಾತ್ವ ಕರ್ಮವನ್ನು ಉಪಶಮವನ್ನಾಗಿ ಮಾಡಿ, ಮೊದ ಲನೆಯ ಗುಣಸ್ಥಾನದಿಂದ ಒಂದೇ ಸರ್ತಿ ನಾಲ್ಕನೆಯ ಗುಣಸ್ಥಾನಕ್ಕೆ ಬಂದು ಅಥವಾ ಅಪ್ರತ್ಯಾಖ್ಯಾನ ಕಷಾಯಗಳನ್ನು ಉಪಶಮಪಡಿಸಿ ಒಂದೇ ಸಾರಿ ಐದನೆಯ ಗುಣಸ್ಥಾನಕ್ಕೆ ಬಂದು ಅಥವಾ ಪ್ರತ್ಯಾಖ್ಯಾನ ಕಷಾಯಗಳನ್ನು ಉಪಶಮಗೊಳಿಸಿ ಒಂದೇ ಸಾರಿ ಏಳನೆಯ ಗುಣಸ್ಥಾನಕ್ಕೆ ಬಂದು ಉಪಶಮ ಸಮ್ಯಕ್ತ್ವದಿಂದ ಅಂತರ್ಮುಹೂರ್ತಕಾಲದವರೆಗಿದ್ದು ಮಿಥ್ಯಾತ್ವ ಕರ್ಮವನ್ನು ಮಿಥ್ಯಾತ್ವ, ಮಿಶ್ರ, ಸಮ್ಯಕ್ತ್ವಪ್ರಕೃತಿರೂಪವಾಗಿ ಮೂರು ಖಂಡವನ್ನಾಗಿ ಮಾಡುತ್ತಾನೆ.

ಈ ಅವಧಿಯಲ್ಲಿ ಆರು ಆವಲಿಯು ಉಳಿದಿರುವಾಗ, ಯದಿ ಅನಂತಾನು ಬಂಧೀ ಕಷಾಯಗಳ ಉದಯವಾದೊಡನೆ ಎರಡನೆಯ ಸಾಸಾದನ ಗುಣ ಸ್ಥಾನಕ್ಕೆ ಬರುತ್ತಾನೆ (ಮೇಲಿಂದ ಕೆಳಕ್ಕೆ ಬೀಳುತ್ತಾನೆ.) ಪುನಃ ನಿಯಮ ಪ್ರಕಾರ ಮೊದಲನೆಯ ಗುಣಸ್ಥಾನವನ್ನೇ ಆಶ್ರಯಿಸುತ್ತಾನೆ. ಈ ಗುಣ ಸ್ಥಾನವು ಉಪಶಮದಿಂದಲೇ ಆಗುತ್ತದೆ.

ಒಂದು ವೇಳೆ ಉಪಶಮ ಸಮ್ಯಕ್ತ್ವಿಗೆ ಮಿಶ್ರದ ಉದಯವಾದೊಡನೆ ಮೂರನೆಯ ಮಿಶ್ರಗುಣಸ್ಥಾನಕ್ಕೆ ಬರುವನು. ಒಂದು ಸಲ ಮಿಥ್ಯಾತ್ವ ಗುಣಸ್ಥಾನದಲ್ಲಿರುವವನು ಪುನಃ ಮೂರನೇ ಗುಣಸ್ಥಾನಕ್ಕೆ ಬರಬಹುದು. ಒಂದು ವೇಳೆ ಸಮ್ಯಙ್ಮೋಹನೀಯ ಕರ್ಮದ ಉದಯದ ಉಪಶಮದಿಂದ ವೇದಕ ಸಮ್ಯಕ್ತ್ವಿಯಾಗುವನು. ಆದರಿಂದ (ವೇದಕ ಸಮ್ಯಕ್ತ್ವದಿಂದ) ಕ್ಷಾಯಿಕ ಸಮ್ಯಕ್ತ್ವವನ್ನು ಹೊಂದುವನು ಮತ್ತು ನಾಲ್ಕನೆಯ ಗುಣಸ್ಥಾನ ದಿಂದ ಏಳನೆಯ ಗುಣಸ್ಥಾನದವರೆಗೆ ಯಾವುದಾದರೊಂದು ಸ್ಥಾನವನ್ನು ಪ್ರವೇಶಿಸುವನು.

ನಾಲ್ಕನೆಯ ಗುಣಸ್ಥಾನದಿಂದ ಐದನೆಯ ಗುಣಸ್ಥಾನವನ್ನೋ ಅಥವಾ ಏಳನೆಯ ಗುಣಸ್ಥಾನವನ್ನೋ ಪ್ರವೇಶಿಸಬಹುದು. ಐದನೆಯ ಗುಣಸ್ಥಾನದಿಂದ ಏಳನೆಯ ಗುಣಸ್ಥಾನಿಯಾಗಬಹುದೇ ಹೊರತು, ಆರನೆಯ ಗುಣಸ್ಥಾನವರ್ತಿಯಾಗಲಾರನು. ಏಳನೆಯ ಗುಣಸ್ಥಾನದಿಂದ ಆರನೆಯ ಗುಣಸ್ಥಾನಕ್ಕೆ ಬರಬಹುದು. ಹೀಗೆ ಮುನಿಗಳಿಗೆ ಆರು ಮತ್ತು ಏಳನೆಯ ಗುಣಸ್ಥಾನಗಳು ಆಗಾಗ ಆಗಬಹುದು. ಈ ಪಂಚಮಕಾಲದಲ್ಲಿ ಏಳನೆಯ ಗುಣಸ್ಥಾನದವರೆಗೆ ಮಾತ್ರ ಆಗಬಹುದು. ಮುಂದುಮುಂದಿನ (ಎಂಟು ಒಂಭತ್ತು, ಹತ್ತು ಮೊದಲಾದ ಗುಣಸ್ಥಾನ) ಗುಣಸ್ಥಾನಗಳು ಉತ್ತಮ ಸಂಹನನಧಾರಿಗಳಿಗೇನೇ ಆಗುತ್ತದೆ. ಪಂಚಮಕಾಲದಲ್ಲಿ ಕೊನೆಯ ಮೂರು ಸಂಹನನ (ಅರ್ಧನಾರಾಚ, ಕೀಲಕ ಮತ್ತು ಅಸಂಪ್ರಾಪ್ತಾಸೃಪಾಟಿಕಾ ಸಂಹನನ) ಆಗುತ್ತವೆ.

ಧರ್ಮಧ್ಯಾನವು ಏಳನೆಯ ಗುಣಸ್ಥಾನದವರೆವಿಗೂ ಇರುತ್ತದೆ. ಶುಕ್ಲಧ್ಯಾನವು ಎಂಟನೆಯ ಗುಣಸ್ಥಾನದಿಂದಲೇ ಪ್ರಾರಂಭವಾಗುವುದು. ಏಳನೆಯ ಗುಣಸ್ಥಾನದಿಂದ ಮುಂದಕ್ಕೆ ಮೋಹನೀಯಕರ್ಮದ ಉಪಶಮವು ಎಂಟನೆಯ, ಒಂಭತ್ತನೆಯ, ಹತ್ತನೆಯ ಮತ್ತು ಹನ್ನೊಂದನೆಯ ಗುಣಸ್ಥಾನಗಳಲ್ಲಿ ಕ್ರಮವಾಗಿ ನಿಶ್ಚಯದಿಂದ ಆಗುತ್ತದೆ. ಎಲ್ಲಿ ಮೋಹನೀಯ ಕರ್ಮದ ಕ್ಷಯಮಾಡುವ ಎಂಟನೆಯ, ಒಂಭತ್ತನೆಯ, ಹತ್ತನೆಯ ಮತ್ತು ಹನ್ನೆರಡನೆಯ ಗುಣಸ್ಥಾನಗಳನ್ನು ವಜ್ರವೃಷಭನಾರಾಚಸಂಹನನಧಾರಿಯೇ ಆರೋಹಣ ಮಾಡುತ್ತಾನೆ.

ಪುನಃ ಹನ್ನೆರಡನೆಯ ಗುಣಸ್ಥಾನಸ್ಥಾನಧಾರಿಯು ಉಳಿದ ಮೂರು ಕರ್ಮ (ಜ್ಞಾನಾವರಣ, ದರ್ಶನಾವರಣ, ಅಂತರಾಯ) ಗಳನ್ನು ನಾಶ ಮಾಡಿ ಹದಿಮೂರನೆಯ ಗುಣಸ್ಥಾನದಲ್ಲಿ ಅರ್ಹಂತ ಪರಮಾತ್ಮ ಜಿನನಾಗುವನು. ಅದೇ ಗುಣಸ್ಥಾನದಲ್ಲಿ ಶ್ರೀ ವಿಹಾರ ಮತ್ತು ಉಪದೇಶಾದಿಗಳು ನಡೆಯುತ್ತವೆ. ಆಯುಷ್ಯದಲ್ಲಿ ಅ, ಇ, ಉ, ಋ, ಲೃ ಈ ಐದು ಅಕ್ಷರಗಳನ್ನು ಉಚ್ಚಾರ ಮಾಡುವ ಕಾಲವು ಶೇಷವಿರುವಾಗ ಹದಿನಾಲ್ಕನೆಯ ಗುಣಸ್ಥಾನವಾಗುತ್ತದೆ. ಮತ್ತೆ ಜೀವನು ಸಿದ್ಧಪರಮಾತ್ಮನಾಗುತ್ತಾನೆ.

ಆರನೆಯ, ಐದನೆಯ, ನಾಲ್ಕನೆಯ ಗುಣಸ್ಥಾನದಿಂದ ಚ್ಯುತನಾಗಿ, ಏಕದಮ್ ಯಾವುದಾದರೊಂದು ಕೆಳಗಿನ ಗುಣಸ್ಥಾನಕ್ಕೆ ಬರಬಹುದು.

ಮೂರನೆಯ ಮತ್ತು ಎರಡನೆಯ ಗುಣಸ್ಥಾನದಿಂದ ಬಂದು ಮೊದಲನೆಯ ಗುಣಸ್ಥಾನಕ್ಕೇನೆ ಹೋಗುವನು. ಮೂರನೆಯ ಗುಣಸ್ಥಾನದಲ್ಲಿಯೂ, ಕ್ಷಪಕಶ್ರೇಣಿಯಾದ 8, 9, 10 ಮತ್ತು 12 ನೇ ಗುಣಸ್ಥಾನದಲ್ಲಿಯೂ ಮತ್ತು ಕೇವಲಿ ಗುಣಸ್ಥಾನವಾದ ಹದಿಮೂರನೆಯ ಗುಣಸ್ಥಾನದಲ್ಲಿಯೂ ಮರಣವು ಸಂಭವಿಸಲಾರದು. ಮೊದಲನೆಯ, ನಾಲ್ಕನೆಯ, ಐದನೆಯ ಮತ್ತು ಹದಿಮೂರನೆಯ ಗುಣಸ್ಥಾನಗಳ ಉತ್ಕೃಷ್ಟಕಾಲವು ಅಧಿಕವಾಗಿರುತ್ತದೆ. ಉಳಿದ ಎಲ್ಲ ಗುಣಸ್ಥಾನಗಳ ಅವಧಿಯು ಒಂದು ಮುಹೂರ್ತಕ್ಕಿಂತ ಅಧಿಕವಿಲ್ಲವು.

ಒಬ್ಬ ಜೀವನಿಗೆ ಹದಿನಾಲ್ಕು ಮಾರ್ಗಣೆಗಳಾಗಬಹುದು. ಆದರೆ ಗುಣಸ್ಥಾನವೊಂದೇ ಆಗುತ್ತದೆಂದು ತಿಳಿಯಬೇಕು. ಉಪದೇಶವನ್ನೀಯುವ ಆರನೆಯದಾದ ಪ್ರಮತ್ತ ವಿರತ ಗುಣಸ್ಥಾನದ ಸಾಧುವಿಗೆ ಹೀಗೆ ಮಾರ್ಗಣೆಗಳಾಗುವುವು.-

೧. ಮನುಷ್ಯಗತಿ, ೨. ಪಂಚೇಂದ್ರಿಯ, ೩. ತ್ರಸಕಾಯ, ೪. ವಚನಯೋಗ, ೫. ಪುಂವೇದ, ೬. ಲೋಭಕಷಾಯ, ೭. ಶ್ರುತಜ್ಞಾನ, ೮. ಸಾಮಾಯಿಕ ಸಂಯಮ, ೯. ಚಕ್ಷು ಮತ್ತು ಅಚಕ್ಷುದರ್ಶನ, ೧೦. ಶುಭ ಲೇಶ್ಯಾ, ೧೧. ಭವ್ಯತ್ವ, ೧೨. ವೇದಕ ಸಮ್ಯಕ್ತ್ವ, ೧೩. ಸಂಜ್ಞಿ. ೧೪. ಆಹಾರಕಾದಿ ಹದಿನಾಲ್ಕು ಮಾರ್ಗಣೆಗಳಾಗುವುವು.

ಈ ಮಾರ್ಗಣಾಸ್ಥಾನ, ಗುಣಸ್ಥಾನಗಳು ಕರ್ಮಗಳ ಅಪೇಕ್ಷೆಯಿಂದಲೇ ಆಗುವುವೆಂದು ವ್ಯವಹಾರ ನಯದಿಂದ ಹೇಳುತ್ತಾರೆ. ನಿಶ್ಚಯ ನಯದಿಂದ ಜೀವನು ಇವುಗಳಿಂದ ರಹಿತನಾಗಿರುವನು.

ಸಮಯಸಾರದಲ್ಲಿ ಹೇಳಿರುತ್ತಾರೆ:

**ವವಹಾರೇಣ ದು ಏದೇ ಜೀವಸ್ಸ ಹವಂತಿ ವಣ್ಣಮಾದೀಯಾ।**
**ಗುಣಠಾಣಂತಾಭಾವಾ ಣದು ಕೇ ಈ ಣಿಚ್ಛಯಣಯಸ್ಸ ॥೬೧॥**

**ಭಾವಾರ್ಥ:** ವ್ಯವಹಾರ ನಯಾಪೇಕ್ಷೆಯಿಂದ ವರ್ಣಾದಿಗಳು, ಮಾರ್ಗಣೆಗಳು, ಗುಣಸ್ಥಾನಾದಿ ಎಲ್ಲಾ ಭಾವಗಳು ಜೀವನಭಾವಗಳೆಂದು

ಹೇಳಿದೆ. ನಿಶ್ಚಯ ನಯದಿಂದ ಇವೆಲ್ಲವು ಜೀವನಿಗೆ ಇಲ್ಲವು. ಯಾಕೆಂದರೆ ಜೀವನು ಪರಶುದ್ಧನಾಗಿರುತ್ತಾನೆ.



# ಗೃಹಸ್ಥನು ಕೂಡಾ ಮೋಕ್ಷಮಾರ್ಗದಲ್ಲಿ ವರ್ತಿಸಬಹುದು

**ಗಿಹಿವಾವಾರ ಪರಿಟ್ಠಿಆ ಹೇಯಾಹೇಉ ಮುಣಂತಿ।**
**ಅಣುದಿಣು ಝಾಯಹಿ ದೇಉ ಜಿಣು ಲಹು ಣಿವ್ವಾಣು**
**ಲಹಂತಿ ॥೧೮॥**

**ಅನ್ವಯಾರ್ಥ:** ಗಿಹಿವಾವಾರ ಪರಿಟ್ಠಿಆ-ಯಾರು ಗೃಹಸ್ಥ ಕಾರ್ಯ ಗಳಲ್ಲಿ ತತ್ಪರರೋ, ಹೇಯಾಹೇಉ ಮುಣಂತಿ-ಹೇಯೋಪಾದೇಯವನ್ನು ತಿಳಿಯುವವರೋ, ಅಣುದಿಣುಜಿಣು ದೇಉ ಝಾಯಹಿ-ಹಗಲಿರುಳು ಜಿನ ದೇವನನ್ನೇ ಧ್ಯಾನಿಸುವರೋ, ಲಹು ಣಿವ್ವಾಣು ಲಹಂತಿ-ಅಂತಹ ಗೃಹ ಸ್ಥರು ಶೀಘ್ರವೇ ಮೋಕ್ಷವನ್ನು ಪಡೆಯುವರು.

**ಭಾವಾರ್ಥ:** ಪ್ರತಿಯೊಬ್ಬ ಭವ್ಯನು ಮೋಕ್ಷೋಪಾಯ ಮಾಡ ಬಹುದು. ಅವನ್ನೇ ಇಲ್ಲಿ ಸ್ಪಷ್ಟೀಕರಿಸುವರು. ಗೃಹಸ್ಥ ಕಾರ್ಯದಲ್ಲಿ ತನ್ಮಯನಾದ ಮಾನವನು ನಿರ್ವಾಣವನ್ನು ಸಾಧಿಸಬಹುದು. ನಿರ್ವಾಣವು ಆತ್ಮನ ಪರಿಶುದ್ಧ ಅವಸ್ಥೆಯು ಆಗಿದೆ. ಆತ್ಮನನ್ನು ಆವರಿಸಿದ ಕರ್ಮಲೇಪ ವನ್ನು ಹೋಗಲಾಡಿಸುವುದೇ ಶುದ್ಧಸ್ವಭಾವದ ದರ್ಶನವಾಗಿದೆ. ಆ ನಿರ್ವಾಣ ಮಾರ್ಗವು ತನ್ನಲ್ಲಿಯೇ ಇರುವುದು.

ಸಮ್ಯಗ್ದೃಷ್ಟೀ ಅಂತರಾತ್ಮನ ಅಂತರಂಗದಲ್ಲಿ ಭೇದವಿಜ್ಞಾನ ಕಲೆಯು ಪ್ರಕಟವಾಗುವುದು. ಅದರ ಪ್ರಭಾವದಿಂದಲೇ ಆತ್ಮನು ತನ್ನಾತ್ಮನನ್ನು ವೀತರಾಗ ವಿಜ್ಞಾನಮಯನಾದ ಪರಿಶುದ್ಧ ಸಿದ್ಧಾತ್ಮನಂತೆ ನಂಬುತ್ತಾನೆ, ತಿಳಿ ಯುತ್ತಾನೆ; ಅದರಂತೆ ಆಚರಣೆಯನ್ನು ಮಾಡುತ್ತಾನೆ; ಮಾತ್ರವಲ್ಲ ಅದ ರಲ್ಲಿಯೇ ಸ್ಥಿರಮನಸ್ಕನಾಗುತ್ತಾನೆ. ಆತ್ಮಸ್ಥಿರತೆಯ ಯೋಗ್ಯತೆಯು ಅವಿರತ

ಸಮ್ಯಗ್ದೃಷ್ಟಿಯಾದ ಶ್ರಾವಕನಿಗೆ ಉಂಟಾಗುವುದು. ಇಷ್ಟ ಪ್ರಕಾರ ತನ್ನಾತ್ಮನನ್ನು ಸಿದ್ಧರೋಪಾದಿಯಲ್ಲಿ ದರ್ಶನಮಾಡಿಕೊಳ್ಳಬಹುದು.

ಮುನಿಯಾಗಲೀ, ಗೃಹಸ್ಥನಾಗಲೀ ಆತ್ಮದರ್ಶನವನ್ನು ಮಾಡಬಹುದು. ಗೃಹಸ್ಥನು ಅನ್ಯಕಾರ್ಯಗಳ ನಿಮಿತ್ತದಿಂದ ಚಿಂತಾವಶನಾಗಿರುವುದರಿಂದ, ಅಲ್ಪಸ್ವಲ್ಪ ಸಮಯವನ್ನು ಆತ್ಮದರ್ಶನಕ್ಕಾಗಿ ಮೀಸಲಾಗಿಸಿರುತ್ತಾನೆ. ಗೃಹಕಾರ್ಯಗಳಿಂದ ನಿವೃತ್ತನಾದ ಸಾಧುವು ನಿರಂತರ ಆತ್ಮದರ್ಶನ ಗೈಯುತ್ತಿರುತ್ತಾನೆ. ಆ ಪದವಿಯೇ ನಿರ್ವಾಣಪದದ ಸಾಕ್ಷಾತ್ ಸಾಧನವಾಗಿರುತ್ತದೆ. ಗೃಹಸ್ಥ ಪದವಿಯು ಏಕದೇಶ ಸಾಧುವಾಗಿರುತ್ತದೆಂದು ತಿಳಿಯಬೇಕು.

ಪ್ರತಿಯೊಬ್ಬ ತತ್ವಜ್ಞಾನಿ ಅಂತರಾತ್ಮನಾದ ಗೃಹಸ್ಥನಿಗೆ ಪುರುಷಾರ್ಥ ಚತುಷ್ಟಯ (ಧರ್ಮ, ಅರ್ಥ, ಕಾಮ, ಮೋಕ್ಷ) ಗಳನ್ನು ಸಾಧಿಸಿಕೊಳ್ಳುವುದು ಅತ್ಯಾವಶ್ಯಕವಾಗಿರುತ್ತದೆ. ಅವನು ಮುಖ್ಯವಾಗಿ ಮೋಕ್ಷ ಪುರುಷಾರ್ಥವನ್ನೇ ಪ್ರಧಾನ ಲಕ್ಷ್ಯದಲ್ಲಿಟ್ಟುಕೊಂಡು ಅದನ್ನು ಸಿದ್ಧಿಸಿಕೊಳ್ಳುವುದೇ ಯೋಗ್ಯವೆಂದು ನಿಶ್ಚಯಿಸಿಕೊಂಡು, ಉಳಿದ ಮೂರು ಪುರುಷಾರ್ಥಗಳಾದ ಧರ್ಮ, ಅರ್ಥ ಮತ್ತು ಕಾಮಗಳನ್ನು ಸಾಧಿಸಿಕೊಳ್ಳುವವನಾಗಿ, ಅವುಗಳಲ್ಲಿ ಪರಸ್ಪರ ವಿರೋಧವುಂಟಾಗದಂತೆ ಕಾರ್ಯಗಳನ್ನು ಮಾಡುವವನಾಗಿ ಅವುಗಳನ್ನು ಸಾಧಿಸಿಕೊಳ್ಳುತ್ತಾನೆ.

ಅವನು ಅರ್ಥ ಪುರುಷಾರ್ಥಕ್ಕಾಗಿ ತನ್ನ ಯೋಗ್ಯತೆಯನ್ನನುಸರಿಸಿ ಕೆಳಗೆ ವರ್ಣಿಸಲ್ಪಡುವ ಆರು ಕರ್ಮಗಳನ್ನು ಮಾಡಿಕೊಂಡಿರುತ್ತಾನೆ. ಈ ಆರು ಕರ್ಮಗಳು ಸಹಾಯಕಗಳಾಗಿವೆ.

೧ **ಅಸಿಕರ್ಮ :** ರಕ್ಷಣೆಯ ಸಲುವಾಗಿ ಶಸ್ತ್ರಗಳನ್ನು ಧರಿಸುವಿಕೆಯು.

೨. **ಮಸಿಕರ್ಮ :** ಜಮಾಖರ್ಚು ಮೊದಲಾದ ಗಣಿತವನ್ನೂ, ಪತ್ರ ಲೇಖನಾದಿಗಳನ್ನೂ ಮಾಡುವಿಕೆಯು.

೩. **ಕೃಷಿಕರ್ಮ :** ಹೊಲ ಗದ್ದೆ ಮೊದಲಾದ ಕೆಲಸಕಾರ್ಯಗಳನ್ನು ಮಾಡುವುದು, ಮಾಡಿಸುವುದು ಮತ್ತು ಅದರ ವ್ಯವಸ್ಥೆಯನ್ನು ಮಾಡುವುದು ಇತ್ಯಾದಿ.

೪. **ವಾಣಿಜ್ಯಕರ್ಮ :** ದೇಶವಿದೇಶಾದಿಗಳ ಸರಕುಗಳ ಕ್ರಯವಿಕ್ರಯಗಳನ್ನು ಮಾಡುವಿಕೆಯು.

೫. **ಶಿಲ್ಪಕರ್ಮ :** ಅನೇಕ ಪ್ರಕಾರದ ಉದ್ಯೋಗ ಮತ್ತು ಅವಶ್ಯಕ ವಸ್ತುಗಳನ್ನು ನಿರ್ಮಾಣಮಾಡುವಿಕೆಯು.

೬. **ವಿದ್ಯಾಕರ್ಮ :** ಸಂಗೀತ, ನೃತ್ಯ, ತಂತಿವಾದ್ಯ ಮತ್ತು ಚಿತ್ರಕರ್ಮಾದಿ ಕಲಾವಿದ್ಯೆ ಮೊದಲಾದ ಕೈಕಾರ್ಯಗಳ ಅಭ್ಯಾಸಮಾಡುವಿಕೆಯು ಇತ್ಯಾದಿ.

ಕಾಮಪುರುಷಾರ್ಥದಲ್ಲಿ ನ್ಯಾಯ ನೀತಿ ಪೂರ್ವಕವಾಗಿ ಧರ್ಮಕ್ಕೆ ಬಾಧೆಬರದಂತೆ ಪಂಚೇಂದ್ರಿಯ ಸಂಬಂಧವಾದ ಭೋಗಗಳನ್ನು ಭೋಗಿಸುತ್ತಾ, ಸ್ಪರ್ಶನೇಂದ್ರಿಯ ವಿಷಯಭೋಗದಲ್ಲಿ ತನ್ನ ಪತ್ನಿಯಲ್ಲಿ ಸಂತೋಷಪಡುವವನಾಗಿಯೂ, ರಸನೇಂದ್ರಿಯ (ನಾಲಿಗೆ) ವಿಷಯಭೋಗದಲ್ಲಿ ಶುದ್ಧವೂ, ಆರೋಗ್ಯವರ್ಧಕವೂ ಆದ ಭೋಜನ, ಪಾನ ವಸ್ತುಗಳನ್ನು ಸ್ವೀಕರಿಸುವವನಾಗಿಯೂ, ಘ್ರಾಣೇಂದ್ರಿಯ (ಮೂಗು) ವಿಷಯ ಭೋಗದಲ್ಲಿ ಶರೀರ ರಕ್ಷಣೆಗಾಗಿ ಸುಗಂಧ ವಸ್ತುಗಳನ್ನುಪಯೋಗಿಸುವವನಾಗಿಯೂ, ಚಕ್ಷು (ಕಣ್ಣು) ಇಂದ್ರಿಯ ವಿಷಯಭೋಗದಲ್ಲಿ ಉಪಯುಕ್ತವಾದ ಶಾಸ್ತ್ರಗ್ರಂಥಗಳನ್ನು ಮತ್ತು ಪದಾರ್ಥಗಳನ್ನು ನೋಡುವವನಾಗಿಯೂ ಮತ್ತು ಕರ್ಣೇಂದ್ರಿಯ (ಕಿವಿ) ವಿಷಯಭೋಗದಲ್ಲಿ ಸಂಗೀತಾದಿಗಳನ್ನು ಕೇಳುವವನಾಗಿಯೂ ಇರಬೇಕು.

ಧರ್ಮಪುರುಷಾರ್ಥವಾದ ಧಾರ್ಮಿಕ ಕ್ರಿಯೆಗಳನ್ನು ಮಾಡುತ್ತಿರಬೇಕು.

**ದೇವಪೂಜಾ ಗುರುಪಾಸ್ತಿಃ ಸ್ವಾಧ್ಯಾಯಃ ಸಂಯಮಸ್ತಪಃ ।**
**ದಾನಂ ಚೇತಿ ಗೃಹಸ್ಥಾನಂ ಷಟ್ ಕರ್ಮಾಣಿ ದಿನೇ ದಿನೇ ।**

(ಪದ್ಮನಂದೀ ಶ್ರಾವಕಾಚಾರ)

೧. **ದೇವಪೂಜೆ :** ಅರಹಂತ ಮತ್ತು ಸಿದ್ಧರಲ್ಲಿ ಭಕ್ತಿಯನ್ನಿಡುವಿಕೆಯು. ಆ ಭಕ್ತಿಯಲ್ಲಿ ಆರು ವಿಧವಾಗಿದೆ. ೧) ನಾಮಗಳನುಚ್ಚರಿಸುತ್ತಾ ಸ್ಮರಣೆಗೆಯ್ಯುವಿಕೆಯು ನಾಮಭಕ್ತಿಯು. ೨) ಮೂರ್ತಿಗಳನ್ನಿಟ್ಟುಕೊಂಡು

ದರ್ಶನಮಾಡುವುದು. ಜಲ, ಗಂಧ, ಅಕ್ಷತೆ, ಪುಷ್ಪ, ಚರು, ದೀಪ, ಧೂಪ, ಫಲಗಳೆಂಬ ಎಂಟು ಮಂಗಲ ದ್ರವ್ಯಗಳಿಂದ ಪೂಜಿಸುವುದು ಸ್ಥಾಪನಾ ಭಕ್ತಿಯು. ೩) ಅರಹಂತ ಸಿದ್ಧಾದಿಗಳ ಸ್ವರೂಪ ಚಿಂತನೆಮಾಡುವುದು ದ್ರವ್ಯಭಕ್ತಿಯು. ೪) ಅರಹಂತ ಸಿದ್ಧಾದಿಗಳ ಭಾವ ಮನನಮಾಡುವುದು ಭಾವಭಕ್ತಿಯು. ೫) ಯಾವ ಯಾವ ಸ್ಥಾನಗಳಲ್ಲಿ ಮಹಾಪುರುಷರು ಜನಿಸಿರುವರೋ, ತಪಸ್ಸುಮಾಡಿರುವರೋ, ಕೇವಲಜ್ಞಾನಪಡೆದಿರುವರೋ ಮತ್ತು ಮುಕ್ತಿಯನ್ನು ಹೊಂದಿರುವರೋ, ಆ ಸ್ಥಾನಗಳ ಮೂಲಕ ಮುಕ್ತಿಯನ್ನು ಹೊಂದಿರುವವರೆಲ್ಲರ ಗುಣಸ್ಮರಣೆಮಾಡುವುದೇ ಕ್ಷೇತ್ರಭಕ್ತಿಯು. ೬) ಯಾವ ಯಾವ ಕಾಲಗಳಲ್ಲಿ ಜನ್ಮ, ತಪಸ್ಸು, ಜ್ಞಾನ, ಮೋಕ್ಷಾದಿಗಳನ್ನು ಪಡೆದಿರುವರೋ, ಆಯಾ ಕಾಲಗಳನ್ನು ಧ್ಯಾನದಲ್ಲಿಟ್ಟುಕೊಂಡು, ಅವರ ಗುಣಗಳನ್ನು ಸ್ಮರಿಸುವುದೇ ಕಾಲಭಕ್ತಿಯು. ಹೀಗೆ ಆರು ವಿಧದ ದೇವಪೂಜಾದಿಗಳನ್ನು ಸಾಧ್ಯವಾದ ಮಟ್ಟಿಗೆ ಪ್ರತಿನಿತ್ಯವೂ ಮಾಡಬೇಕು.

೨. **ಗುರುಭಕ್ತಿ :** ಆಚಾರ್ಯ, ಉಪಾಧ್ಯಾಯ ಸಾಧುಗಳಲ್ಲಿ ವಿನಯ ಸೇವೆ ಮೊದಲಾದವುಗಳನ್ನು ಮಾಡುವಿಕೆಯು, ಅವರಿಂದ ಉಪದೇಶಾದಿಗಳನ್ನು ಕೇಳುವಿಕೆಯು, ಒಂದು ವೇಳೆ ಅವರು ಪ್ರತ್ಯಕ್ಷದಲ್ಲಿಲ್ಲದಿದ್ದರೂ ಪರೋಕ್ಷವಾಗಿ ಅವರಿಂದುಪದೇಶಿಸಲ್ಪಟ್ಟಿರುವ ಮಾರ್ಗವನ್ನು ಸ್ಮರಿವಿಕೆಯು ಅಥವಾ ಮಾನ್ಯತೆಕೊಡುವಿಕೆಯು.

೩. **ಸ್ವಾಧ್ಯಾಯ :** ತತ್ವಜ್ಞಾನದಿಂದ ಭರಿತವಾದ ಅಧ್ಯಾತ್ಮಿಕ ಗ್ರಂಥಗಳನ್ನು ಓದುವುದು, ಕೇಳುವುದು ಮತ್ತು ಮನನಮಾಡುವುದು ಇತ್ಯಾದಿಗಳು.

೪. **ಸಂಯಮ :** ನಿಯಮಿತ ಆಹಾರಾದಿಗಳನ್ನು ಸೇವಿಸುವುದು, ಸ್ವಚ್ಛಂಧ ಪ್ರವೃತ್ತಿಯನ್ನು ತ್ಯಜಿಸುವುದು ಮೊದಲಾದವು.

೫. **ತಪಃ :** ಪ್ರಾತಃಕಾಲ ಮತ್ತು ಸಾಯಂಕಾಲಗಳಲ್ಲಿ ಸ್ವಲ್ಪ ಸಮಯವಾದರೂ ಆತ್ಮಧ್ಯಾನಮಾಡುವುದು. (ಅಭ್ಯಾಸಮಾಡುವುದು, ಸಾಮಾಯಿಕ ಪಾಠಗಳನ್ನು ಓದುವುದು ಮತ್ತು ಆತ್ಮಚಿಂತನೆಗೈಯುವುದು ಇತ್ಯಾದಿ)

೬. **ದಾನ :** ಧರ್ಮಾತ್ಮರಾದ ಮುನಿಗಳು, ಆರ್ಜಿಕೆಯರು, ಶ್ರಾವಕರು ಮತ್ತು ಶ್ರಾವಿಕೆಯರು ಮೊದಲಾದವರಲ್ಲಿ ಭಕ್ತಿಯಿಂದ ಇರುವುದು. ಜೀವ

ಕೋಟಿಗಳಲ್ಲಿ ದಯೆಯನ್ನಿಡುವಿಕೆಯು. ಆಹಾರ, ಔಷಧ, ಅಭಯ, ಶಾಸ್ತ್ರಾದಿಗಳನ್ನು ಕೊಡುವುದು ಮತ್ತು ಅಷ್ಟಮೂಲಗುಣಗಳನ್ನು ಪಾಲಿಸುವುದು. ಅವುಗಳ ಗುಣಗಳನ್ನು ಬೇರೆ ಬೇರೆ ಆಚಾರ್ಯರುಗಳು ಬೇರೆ ಬೇರೆ ವಿಧವಾಗಿ ಅಪ್ಪಣೆಕೊಡಿಸಿರುವುದನ್ನು ಈ ಕೆಳಗೆ ವರ್ಣಿಸಲ್ಪಡುವುದು.

**ಮದ್ಯ ಮಾಂಸ ಮಧು ತ್ಯಾಗೈಃ ಸಹಾಣುವ್ರತ ಪಂಚಕಂ ।**
**ಅಷ್ಟೌಮೂಲಗುಣಾನಾಹುಃ ಗೃಹಿಣಾಂ ಶ್ರಮಣೋತ್ತಮಾಃ ॥ ೬೬ ॥**

(ರತ್ನಕರಂಡಕ ಶ್ರಾವಕಾಚಾರ)

**ಭಾವಾರ್ಥ :** ಮಾದಕ ಪದಾರ್ಥಗಳಾದ ಹೆಂಡ, ಅಫೀಮು ಮೊದಲಾದವುಗಳನ್ನು ಸೇವಿಸದಿರುವಿಕೆಯು. ಮಾಂಸ ಭಕ್ಷಿಸದಿರುವಿಕೆಯು ಮತ್ತು ಹಿಂಸಾಕಾರಕಗಳಾದ ಮಧು ( ಜೇನುತುಪ್ಪ ) ವನ್ನು ಉಪಯೋಗಿಸದಿರುವುದು. ಈ ಮಕಾರ ತ್ರಯಗಳನ್ನು ಸೇವಿಸದೆ (ತ್ಯಜಿಸಿ) ಪಂಚಾಣುವ್ರತಗಳನ್ನು ಪಾಲಿಸುವುದು. ಇವು ಶ್ರಾವಕನ ಎಂಟು ಮೂಲಗುಣಗಳಾಗಿವೆ.

೧. **ಅಹಿಂಸಾಣುವ್ರತ :** ಸಂಕಲ್ಪ ಹಿಂಸೆಯನ್ನು ತ್ಯಜಿಸುವುದು. ಉದಾ : ಮಾಂಸಾಹಾರಕ್ಕಾಗಿ ಬೇಟೆಯಾಡಿ ಪ್ರಾಣಿವಧೆಮಾಡುವುದು. ತಮಾಷೆಗಾಗಿ ಪ್ರಾಣಿಪೀಡಾಕಾರಿಯಾದ ಕಾರ್ಯಗಳನ್ನೆಸಗುವುದು ಮೊದಲಾದಲಾದವು. ಆರಂಭ ಹಿಂಸೆ ಎಂದರೆ ಅರ್ಥ ಕಾಮ ಪುರುಷಾರ್ಥಗಳ ಸಾಧಕವಾಗಿ ಮಾಡುವ ಕಾರ್ಯಗಳು. ಇದನ್ನು ಗೃಹಸ್ಥನು ತ್ಯಜಿಸಲು ಸಾಧ್ಯವಾಗಲಾರದು. ಆದರೆ ವ್ಯರ್ಥವಾಗಿ ಆರಂಭ ಹಿಂಸೆಯನ್ನು ಮಾಡಬಾರದು.

೨. **ಸತ್ಯಾಣುವ್ರತ :** ಸತ್ಯವಚನವನ್ನಾಡುವುದು, ಪೀಡಾಕಾರಿಯಾದ ಕಠೋರವೂ, ನಿಂದನೀಯವೂ ಆದ ಮಾತುಗಳನ್ನಾಡದಿರುವಿಕೆಯೂ, ಆರಂಭ ಸಂಬಂಧವಾದ ಮಾತುಗಳನ್ನು ಕೂಡಾ ತ್ಯಜಿಸುವಿಕೆಯು ಇತ್ಯಾದಿ.

೩. **ಅಚೌರ್ಯಾಣುವ್ರತ :** ಬಿದ್ದಿರುವುದು, ಮರೆತುಬಿಟ್ಟಿರುವುದು ಆದ ಪರರ ವಸ್ತುಗಳನ್ನು ತೆಗೆದುಕೊಳ್ಳದಿರುವಿಕೆ ಇತ್ಯಾದಿ.

೪. **ಬ್ರಹ್ಮಚರ್ಯಾಣುವ್ರತ:** ಸ್ವಸ್ತ್ರೀಯಲ್ಲಿಯೇ ಸಂತೋಷಪಡುವವನಾಗಿ ತನ್ನ ವೀರ್ಯವನ್ನು ರಕ್ಷಣೆಮಾಡಿಕೊಳ್ಳುವಿಕೆ ಇತ್ಯಾದಿಗಳು.

೫. **ಪರಿಗ್ರಹತ್ಯಾಗಾಣುವ್ರತ:** ಆಶೆಯನ್ನು ಕಡಿಮೆಮಾಡಿಕೊಳ್ಳುವುದಕ್ಕಾಗಿ ಸಂಪತ್ತು ಮೊದಲಾದವುಗಳ ವಿಷಯವಾಗಿ ಇಂತಿಷ್ಟೆಂದು ಪ್ರಮಾಣಮಾಡಿಕೊಳ್ಳುವಿಕೆಯು, ಅವಕ್ಕಿಂತ ಅಧಿಕವಾದೊಡನೆ ಪರೋಪಕಾರ, ಧಾರ್ಮಿಕಕಾರ್ಯಗಳನ್ನೆಸಗುತ್ತಾ ಕಾಲಹರಣೆ ಮಾಡುವಿಕೆಯು ಇತ್ಯಾದಿ.

ಈ ಗೃಹಸ್ಥನು ಇಂಥ ವಿಷಯಗಳನ್ನು ನೆನಪಿನಲ್ಲಿಡಬೇಕು.

**ಸರ್ವಮೇವ ಹಿ ಜೈನಾನಾಂ ಪ್ರಮಾಣಂ ಲೌಕಿಕೋ ವಿಧಿಃ ।**
**ಯತ್ರ ಸಮ್ಯಕ್ತ್ವಹಾನಿರ್ನ ತತ್ರ ನ ವ್ರತದೂಷಣಂ ॥**

**ಭಾವಾರ್ಥ:** ಜೈನ ಶ್ರಾವಕನು ಆ ಎಲ್ಲ ಲೌಕಿಕ ನಿಯಮಗಳನ್ನು ಪಾಲಿಸುತ್ತಾ ತನ್ನ ಐದು ಅಣುವ್ರತಗಳಿಗೆ ಬಾಧೆಬಾರದಂತೆ (ದೋಷಗಳು ಸಂಭವಿಸದಂತೆ) ನೋಡಿಕೊಳ್ಳಬೇಕು. (ಶ್ರದ್ಧೆಯನ್ನಿಟ್ಟುಕೊಂಡಿರಬೇಕು.)

ಮಹಾಪುರಾಣದಲ್ಲಿ ಜಿನಸೇನಾಚಾರ್ಯರು ಹೇಳಿದ್ದಾರೆ:

**ಹಿಂಸಾಸತ್ಯಸ್ತೇಯಾಬ್ರಹ್ಮಪರಿಗ್ರಹಾಚ್ಚ ಬಾದರಭೇದಾತ್ ।**
**ದ್ಯೂತಾನ್ಮಾಂಸಾನ್ಮದ್ಯಾದ್ವಿರತಿರ್ಗೃಹಿಣೋಽಷ್ಟಮೂಲಗುಣಾಃ ॥**

**ಭಾವಾರ್ಥ:** ಸ್ಥೂಲಹಿಂಸೆ, ಸ್ಥೂಲಅಸತ್ಯ, ಸ್ಥೂಲಚೌರ್ಯ, ಸ್ಥೂಲಅಬ್ರಹ್ಮ, ಸ್ಥೂಲಪರಿಗ್ರಹಾದಿಗಳ ತ್ಯಾಗವೂ, ಜೂಜಾಡದಿರುವಿಕೆಯೂ, ಮಾಂಸತಿನ್ನದಿರುವಿಕೆಯೂ, ಹೆಂಡಕುಡಿಯದಿರುವಿಕೆಯೂ ಇವು ಎಂಟು ಗೃಹಸ್ಥನ ಮೂಲಗುಣಗಳಾಗಿವೆ.

ಆಶಾಧರ ಸೂರಿಗಳು ಸಾಗಾರಧರ್ಮಾಮೃತದಲ್ಲಿ ಹೇಳಿದ್ದಾರೆ:

**ಮದ್ಯಪಲಮಧುನಿಶಾಶನಪಂಚಫಲೀವಿರತಿಪಂಚಕಾಪ್ತನುತಿಃ ।**
**ಜೀವದಯಾ ಜಲಗಾಲನಮಿತಿ ಚ ಕ್ವಚಿದಷ್ಟಮೂಲಗುಣಾಃ ॥೧೮॥**

ಭಾವಾರ್ಥ: ೧. ಮದ್ಯತ್ಯಾಗ, ೨. ಮಾಂಸತ್ಯಾಗ, ೩. ಮಧು ತ್ಯಾಗ. ೪. ರಾತ್ರಿ ಭೋಜನತ್ಯಾಗ, ೫. ಅತ್ತಿ, ಆಲ, ಗೋಳಿ, ಬಸರಿ, ಅಶ್ವತ್ಥಗಳೆಂಬ ಐದು ಹಾಲು ಬರುವ ವೃಕ್ಷಗಳ ಫಲತ್ಯಾಗ, ೬. ಪಂಚ ಪರ ಮೇಷ್ಠಿಗಳಲ್ಲಿ ಭಕ್ತಿ, ೭. ಜೀವದಯೆ, ೮. ಜಲಗಾಲನ ಇವು ಎಂಟು ಮೂಲಗುಣಗಳಾಗಿವೆ.

ಪುರುಷಾರ್ಥಸಿದ್ಧ್ಯುಪಾಯದಲ್ಲಿ ವರ್ಣಿಸಿರುತ್ತಾರೆ;

**ಮದ್ಯಂ ಮಾಸಂ ಕ್ಷೌದ್ರಂ ಪಂಚೋದುಂಬರಫಲಾನಿ ಯತ್ನೇನ।**
**ಹಿಂಸಾವ್ಯುಪರತಿಕಾಮೈರ್ಮೋಕ್ತವ್ಯಾನಿ ಪ್ರಥಮಮೇವ ॥೬೧॥**

ಭಾವಾರ್ಥ: ಹಿಂಸೆಯಿಂದ ರಕ್ಷಣೆ ಪಡೆಯಬೇಕೆಂಬೇಚ್ಛೆಯುಳ್ಳವರಿಗೆ ಮೊದಲು ಮದ್ಯ, ಮಾಂಸ, ಮಧುಗಳನ್ನು ತ್ಯಜಿಸುವುದಲ್ಲದೆ, ಪಂಚಕ್ಷೀರ ಫಲ ಗಳನ್ನು ಕೂಡಾ ತ್ಯಜಿಸಬೇಕು.

ಆತ್ಮಜ್ಞಾನಿಯಾದ ಗೃಹಸ್ಥನು ಅರಹಂತದೇವನ ಮತ್ತು ತನ್ನಾತ್ಮನ ಸ್ವಭಾವವು ಒಂದೇ ವಿಧವಾಗಿರುವುದೆಂದು ಭಾವಿಸುವವನಾಗಿ, ನಿರಂತರ ಪರ ಮಾತ್ಮನ ಧ್ಯಾನದಿಂದ ತನ್ನಾತ್ಮ ಚಿಂತನೆಯನ್ನು ಪರಮ ಅಭಿರುಚಿಯಿಂದಲೇ ಮಾಡುತ್ತಾನೆ. ಇನ್ನುಳಿದ ಕಾರ್ಯಗಳನ್ನು ಗತ್ಯಂತರವಿಲ್ಲದೆ ಮಾಡುತ್ತಿರು ತ್ತಾನೆ. (ಇಲ್ಲಿ ಮುಖ್ಯವಾಗಿ ಆತ್ಮಚಿಂತನೆ ಪ್ರಾಧಾನ್ಯವಾದುದು.) ಗೃಹ ಸ್ಥನು ರಾಗದ್ವೇಷ ಪೂರ್ವಕವಾದ ಕಾರ್ಯಗಳಲ್ಲಿಯೂ ಮತ್ತು ಕರ್ಮಫಲ ಗಳನ್ನು ಅನುಭವಿಸುವಿಕೆಯಲ್ಲಿಯೂ ಸಮಭಾವನೆಯುಳ್ಳವನಾಗಿರುತ್ತಾನೆ. ಅಷ್ಟೇಅಲ್ಲ, ಕರ್ಮೋದಯವಾಗಿ ಪ್ರಪಂಚ ಸಂಬಂಧವಾದ ಬಂಧನದಿಂದ ಬಿಡುಗಡೆಯಾಗುವನೆಂಬ ಪ್ರಬಲವಾದ ಭಾವನೆಯು ಉದ್ದೀಪಿತವಾಗಿರುತ್ತದೆ.

ಸಮಾಧಿಶತಕದಲ್ಲಿ ಹೇಳಿದ್ದಾರೆ:

**ಆತ್ಮಜ್ಞಾನಾತ್ಪರಂ ಕಾರ್ಯಂ ನ ಬುದ್ಧೌ ಧಾರಯೇಚ್ಚಿರಂ।**
**ಕುರ್ಯಾದರ್ಥವಶಾತ್ ಕಿಂಚಿದ್ವಾಕ್ಕಾಯಾಭ್ಯಾಮತತ್ಪರಃ ॥೫೦॥**

ಭಾವಾರ್ಥ: ಜ್ಞಾನಿ ಸಮ್ಯಗ್ದೃಷ್ಟಿಯು ಆತ್ಮಜ್ಞಾನವಲ್ಲದೆ ಅನ್ಯ ಕಾರ್ಯಗಳಲ್ಲಿ ಹೆಚ್ಚು ಸಮಯ ಬುದ್ಧಿಯನ್ನಿಡಲಾರನು. ಪ್ರಯೋಜನ

ವಶಾತ್ ಯಾವುದಾದರೊಂದು ಕಾರ್ಯವನ್ನು ಮಾಡಬೇಕೆಂದಿದ್ದರೆ, ಅದರಲ್ಲಿ ಆಸಕ್ತನಾಗದೆ ವಚನ ಮತ್ತು ಕಾಯದಿಂದ ಮಾಡುತ್ತಾನೆ.

ಸಮಯಸಾರ ಕಲಶದಲ್ಲಿ ಹೇಳಿದೆ:

**ನಾಶ್ನುತೇ ವಿಷಯ ಸೇವನೇಽಪಿ ಯತ್ ಸ್ವಂ ಫಲಂ ವಿಷಯ ಸೇವನಸ್ಯನಾ।**
**ಜ್ಞಾನವೈಭವ ವಿರಾಗತಾ ಬಲಾತ್ಸೇವಕೋಽಪಿ ತದಸಾವಸೇವಕಃ ॥ ೩-೭ ॥**

**ಭಾವಾರ್ಥ :** ಜ್ಞಾನಿಯು ವಿಷಯಗಳನ್ನು ಅನುಭವಿಸುತ್ತಿದ್ದರೂ ವಿಷಯ ಸೇವನೆಯ ಫಲವನ್ನು ಅನುಭವಿಸಲಾರನು. ಯಾಕೆಂದರೆ ಅವನು ತತ್ವಜ್ಞಾನದ ವಿಭೂತಿಯಿಂದ, ವೈರಾಗ್ಯಭಾವನೆಯ ಬಲದಿಂದ ಸೇವಿಸು ತ್ತಿದ್ದರೂ ಸೇವಿಸದವನಂತೆಯೇ ಸರಿ; ಸಮಭಾವನೆಯಿಂದ ಕರ್ಮಗಳ ಫಲ ವನ್ನು ಅನುಭವಿಸುವುದರಿಂದ, ಕರ್ಮಗಳ ನಿರ್ಜರೆಯು ಬಹುಬೇಗ ಆಗು ವುದು. ಅಷ್ಟೇ ಅಲ್ಲ ಅಲ್ಪಬಂಧವು ಆಗುತ್ತದೆ. ಅತಃ ಸಮ್ಯಗ್ದೃಷ್ಟಿ ಯಾದ ಗೃಹಸ್ಥನು ಮೋಕ್ಷಮಾರ್ಗದ ಪಥಿಕನಾದರೆ ಸಂಸಾರಪರಂಪರೆಯು ಘಟಿಸುತ್ತಿರುತ್ತದೆ. ಯಾಕೆಂದರೆ ಸಂಸಾರದಲ್ಲಿ ಪ್ರಯೋಜನಕ್ಕನುಕೂಲವಾದ ಅರ್ಥ ಮತ್ತು ಕಾಮಪುರುಷಾರ್ಥಗಳನ್ನು ಉದಾಸೀನದಿಂದ ಸಾಧಿಸುವವ ನಾಗಿಯೂ ಮತ್ತು ವ್ಯವಹಾರ ಧರ್ಮವನ್ನು ಪಾಲಿಸುವವನಾಗಿಯೂ ಇರು ತ್ತಾನಾದರೂ ಅವೆಲ್ಲವುಗಳಿಂದ ವಿರಾಗಿಯಾಗಿ ಇರುವುದರಿಂದ ನಿರ್ವಾಣವನ್ನು ಪಡೆಯಲು ಸಾಧ್ಯವಾಗುವ ಯೋಗ್ಯತೆಯನ್ನು ಬೆಳಸಿಕೊಳ್ಳುತ್ತಾನೆ.



# ಜಿನೇಂದ್ರ ಸ್ಮರಣೆಯು ಪರಮಪದಕ್ಕೆ ಕಾರಣವು

**ಜಿಣ ಸುಮಿರಹು ಜಿಣ ಚಿಂತವಹು ಜಿಣ ಝಾಯಹು ಸುಮಣೇಣ।**
**ಸೋಝಾಹಂತಹ ಪರಮಪಉ ಲಬ್ಭಇ ಎಕ್ಕಖಣೇಣ ॥೧೯॥**

**ಅನ್ವಯಾರ್ಥ :** ಸುಮಣೇಣ-ಶುದ್ಧಸ್ವಭಾವದಿಂದ, ಜಿಣ ಸುಮಿರಹು -ಜಿನೇಂದ್ರನನ್ನು ಸ್ಮರಿಸು. ಜಿಣ ಚಿಂತವಹು-ಜಿನೇಶ್ವರನನ್ನು ಚಿಂತಿಸು.

ಜಿಣಝಾಯಹು–ಜಿನನನ್ನು ಧ್ಯಾನಿಸು. ಸೋಃ ಝಾಹಂತಹ-ಹಾಗೆ ಧ್ಯಾನಿಸುವುದರಿಂದ, ಏಕ್ಕಖಣೇಣ–ಒಂದೇ ಕ್ಷಣದಲ್ಲಿ, ಪರಮುಪಉ ಲಬ್ಭಇ–ಪರಮ ಶ್ರೇಷ್ಠವಾದ ಪದವಿಯು ಪ್ರಾಪ್ತಿಯಾಗುವುದು.

**ಭಾವಾರ್ಥ:** ಜಿನೇಶ್ವರನಲ್ಲಿಯೂ. ತನ್ನಾತ್ಮನ ಮೂಲ ಸ್ವಭಾವ ದಲ್ಲಿಯೂ ಯಾವ ವಿಧವಾದ ಅಂತರವು ಇಲ್ಲವು. ಸಮ್ಯಗ್ದೃಷ್ಟಿ ಅಂತ ರಾತ್ಮನು ನಿಜವಾದ ಆತ್ಮೀಕ ಸ್ಥಾನದ ಸ್ನೇಹಿಯಾಗಿ ಅಂತರಂಗಿಕವಾಗಿ ಜಿನೇಶ್ವರರಿಗೆ ಸಮಾನವಾಗಿದ್ದರೂ ಕೂಡಾ, ಈ ಆತ್ಮನು ಭವಭವ ದಲ್ಲಿಯೂ ಜನನ ಮರಣ ರೂಪವಾದ ಕಷ್ಟಗಳನ್ನು ಅನುಭವಿಸುತ್ತಿರುವನೆಂಬ ಅನುಕಂಪಭಾವನೆಯುಂಟಾಗುತ್ತದೆ. ಈ ಆತ್ಮನನ್ನು ಪರಮಾತ್ಮನಂತೆ ಸರ್ವ ಸ್ವತಂತ್ರನನ್ನಾಗಿಯೂ, ಸಂಪೂರ್ಣ ಪರಮಪಾವನನನ್ನಾಗಿಯೂ ಮಾಡ ಬೇಕು. ಈತನು "ತನ್ನಾತ್ಮನನ್ನು ಪರ್ಯಾಯಾಪೇಕ್ಷೆಯಿಂದ ಅಶುದ್ಧನೂ, ರಾಗಿಯೂ, ದ್ವೇಷಿಯೂ, ಅಜ್ಞಾನಿಯೂ, ಕರ್ಮಬದ್ಧನೂ ಆಗಿ ಶರೀರವೆಂಬ ಕಾರಾಗೃಹ ಬಂಧಿತನಾಗಿರುತ್ತಾನೆ ಮತ್ತು ಶ್ರೀ ಜಿನದೇವನನ್ನು ಪರಮ ಶುದ್ಧನೂ, ವೀತರಾಗಿಯೂ, ಜ್ಞಾನಿಯೂ, ಸಕಲ ಕರ್ಮಗಳಿಂದಗಲಿತನೂ ಶರೀರ ರಹಿತನಾಗಿರುವನು" ಎಂದು ವಿಚಾರಿಸುವಾಗ ಗಾಢವಾದ ಪ್ರೇಮ ಉಳ್ಳನಾಗಿಯೂ, ಮಹಾ ಉತ್ಸಾಹಿಯಾಗಿಯೂ ಆಗುತ್ತಾನೆ. ಯಾಕೆಂದರೆ ತನ್ನಾತ್ಮನು ಪಾವನವಾದ ಅವಸ್ಥೆಯನ್ನು ಶೀಘ್ರವೇ ಪಡೆಯಬೇಕೆಂಬಾಶೆ ಯಿಂದ ಪರಿಶುದ್ಧ ಜಿನದೇವನ ಪದವನ್ನು ಧರಿಸುತ್ತಾನೆ.

ಗೃಹಸ್ಥ ಸಂಬಂಧವಾದ ಕಾರ್ಯಗಳಾದ ಆಹಾರ ವಿಹಾರಾದಿಗಳನ್ನು ಮಾಡುತ್ತಿದ್ದರೂ ಕೂಡ, ಆತನು ಆಗಾಗ ಪರಮಾತ್ಮನನ್ನೇ ಸ್ಮರಿಸುತ್ತಿರು ತ್ತಾನೆ. ಒಂದೊಂದು ಸಲ ದೇವಪೂಜಾದಿಗಳನ್ನು, ಸಾಮಾಯಿಕಾದಿ ಗಳನ್ನು ಮಾಡುತ್ತಿರುವಾಗಲೂ ಪರಮಾತ್ಮನ ಗುಣಗಳನ್ನು ಚಿಂತಿಸುತ್ತಿರು ವವನಾಗಿ, ಕ್ಷಣಕಾಲ ಸ್ಥಿರನಾಗುತ್ತ, ತನ್ನನ್ನು ಜಿನಸ್ವರೂಪದಂತೆ ಭಾವಿಸುತ್ತ, ಅದ್ವೈತ ಶುದ್ಧಭಾವನೆಯಲ್ಲಿ ಏಕರೂಪನಾಗಿ ಯಥಾರ್ಥ ಆತ್ಮಸಾಕ್ಷಾತ್ಕಾರ ವನ್ನು ಪಡೆದು, ಮೋಕ್ಷಸುಖದಂತೆ ಆನಂದಪರವಶನಾಗುತ್ತಾನೆ. ಯಾವಾಗ ಏಕಾಗ್ರತೆಯಿಂದ ಸ್ವಲ್ಪ ಶಿಥಿಲನಾಗುತ್ತಾನೆಯೋ, ಆಗ ಚಿಂತಿಸತೊಡಗುತ್ತ,

ಪುನಃ ಧ್ಯಾನಸ್ಥನಾಗಿ ಆನಂದರಸಾಮೃತವನ್ನು ಪಾನಮಾಡುವನು. ಇದೇ (ಪರಮಾತ್ಮ ಧ್ಯಾನವು) ತನ್ನನ್ನು ಉತ್ಕೃಷ್ಟ ಸ್ಥಾನಕ್ಕೆ ತೆಗೆದುಕೊಂಡು ಹೋಗುವ ಪರಮ ವಾಹನವಾಗಿದೆ. ಯದಿ ಯಾವನಾದರೊಬ್ಬ ಸಾಧುವು (ವಜ್ರ ವೃಷಭ ನಾರಾಚ ಸಂಹನನ ಧಾರಿಯು) ಎಡಬಿಡದೆ ಒಂದು ಮುಹೂರ್ತಕಾಲ ಅಥವಾ ೪೮ ನಿಮಿಷಕ್ಕಿಂತ ಸ್ವಲ್ಪ ಕಡಿಮೆ ಅವಧಿಯವರೆಗೆ ಧ್ಯಾನ ಮಗ್ನನಾದರೆ, ನಾಲ್ಕು ಘಾತಿಕರ್ಮಗಳನ್ನು ನಾಶಮಾಡಿ, ಅರಹಂತ ಪರಮಾತ್ಮನಾಗಿ ಕ್ರಮೇಣ ಸಿದ್ಧ ಪದವಿಯನ್ನು ಪಡೆಯುವನು.

ಉದಾ: ಒಬ್ಬಾಳೊಬ್ಬ ಸ್ತ್ರೀಯ ಪತಿಯು ಪರದೇಶಕ್ಕೆ ಹೋದ ನಂತರ, ತನ್ನ ಮನೆಯ ಕಾರ್ಯಗಳನ್ನು ಮಾಡಿಕೊಂಡಿರುತ್ತಿದ್ದರೂ ಕೂಡ, ಪತಿಯನ್ನು ಸ್ಮರಿಸುತ್ತ, ಒಂದೊಂದು ಸಲ ಸ್ಥಿರಮನಸ್ಕಳಾಗಿ ಕುಳಿತುಕೊಂಡು, ಪತಿಯ ಗುಣಗಳನ್ನು ಮತ್ತು ಪ್ರೇಮವನ್ನು ಸ್ಮರಿಸುತ್ತಾಳೆ. ವಿಚಾರಿಸುತ್ತ ಪ್ರೇಮಾಸಕ್ತಳಾಗಿ, ಪತಿಯನ್ನು ಸೇರಿ ಪಡುವ ಆನಂದದಂತೆ ಮತ್ತು ಸುಖವನ್ನನುಭವಿಸುವಂತೆ, ಜಿನೇಶ್ವರನ ಚರಣ ಪಂಕಜಗಳ ಸ್ನೇಹೀ ಜ್ಞಾನೀ ಪುರುಷನಾದ ಗೃಹಸ್ಥನಾಗಲಿ ಅಥವಾ ಸಾಧುವಾಗಲಿ ತನ್ನಾತ್ಮ ಚಿಂತನೆಯಲ್ಲದೆ, ಅನ್ಯಕಾರ್ಯಗಳನ್ನೆಸಗುತ್ತಿದ್ದರೂ, ಜಿನೇಶ್ವರನ ಗುಣಗಳನ್ನೇ ಸ್ಮರಿಸುತ್ತಿರುತ್ತಾನೆ. ಒಂದೊಂದು ಸಲ ಏಕಾಂತದಲ್ಲಿ ಕುಳಿತು ಗುಣ ಸಮೂಹವನ್ನೇ ಚಿಂತಿಸುವವನಾಗಿಯೂ, ಒಂದೊಂದು ಸಲ ಧ್ಯಾನಮಗ್ನನಾಗಿಯೂ ಆಗುತ್ತಾನೆ. ಪರಮಾತ್ಮ ಸ್ವರೂಪದಲ್ಲಿರುವಷ್ಟು ಸ್ನೇಹವು ಅನ್ಯ ಯಾವ ವಸ್ತುಗಳಲ್ಲಿಯೂ ಇರುವುದಿಲ್ಲವು. ಅಂತಹ ಜ್ಞಾನಿಯಾದ ಅಂತರಾತ್ಮನು ಪರಮ ಪವಿತ್ರವಾದ ವೀತರಾಗ ಭಾವನೆಯಿಂದ ಜಿನಸ್ಮರಣೆ, ಚಿಂತನೆ ಮತ್ತು ಧ್ಯಾನ ಮಾಡುತ್ತ ನಿರಪೇಕ್ಷೆಯಿಂದಿರುತ್ತಾನೆ. ಆತನು ಅಂತರಂಗದಲ್ಲಿ ಕ್ಷಣ ಭಂಗುರಗಳಾದ ಸಂಸಾರದ ಪರ್ಯಾಯಗಳಲ್ಲಿ ಪೂರ್ಣ ವೈರಾಗ್ಯದಿಂದ್ಯುಕ್ತನಾಗಿ, ಇಂದ್ರ, ಚಕ್ರವರ್ತಿ ಮೊದಲಾದ ಪದವಿಗಳನ್ನಾಗಲಿ, ಇಂದ್ರಿಯಗಳ ಸಂಬಂಧವಾದ ತೃಷ್ಣಾವರ್ಧಕಗಳಾದ ಭೋಗೋಪಭೋಗಗಳನ್ನಾಗಲಿ ಮತ್ತು ಆದರ ಸತ್ಕಾರಗಳನ್ನಾಗಲಿ ಇಚ್ಛಿಸುವುದಿಲ್ಲವು. ಕಷಾಯಗಳ ಕಲಂಕವನ್ನು ಪೂರ್ಣ ರೀತ್ಯಾ ನಾಶಗೊಳಿಸಲೂ, ವೀತರಾಗನಾಗಲೂ, ಸ್ವಾನುಭವವನ್ನು ಪ್ರಾಪ್ತಮಾಡಿಕೊಳ್ಳಲೂ. ನಿಜಾನಂದ ರಸಾಮೃತವನ್ನು ಪಾನ

ಮಾಡಲೂ, ಆ ಮುಮುಕ್ಷುವು ಶುದ್ಧಭಾವನೆಯಿಂದ ಅರಹಂತ ಪರಮಾತ್ಮನ ಸ್ಮರಣ, ಚಿಂತನ ಮತ್ತು ಧ್ಯಾನಗೈಯುತ್ತಾನೆ. ಭಕ್ತಿಗೈಯ್ಯಲು, ಸವಿಕಲ್ಪ ಚಿಂತನೆಮಾಡಲು ಅಥವಾ ನಿರ್ವಿಕಲ್ಪ ಧ್ಯಾನವನ್ನು ಮಾಡಲು ಜ್ಞಾನವು ಇದೆ. ಇದರಲ್ಲಿ ಎಷ್ಟು ಭಾಗ ರಾಗಾಂಶವು ಇರುವುದೋ ಅಷ್ಟು ಕರ್ಮವನ್ನು ಬಂಧಿಸಿಕೊಳ್ಳುವನು, ಪುಣ್ಯಬಂಧವನ್ನು ಮಾಡಿಕೊಳ್ಳುವನು. ಆ ಪುಣ್ಯದ ಫಲವಾದ ಸುಖವೂ ಕೂಡ ಇರುವುದಾದಾಗ್ಯೂ, ಆ ಜ್ಞಾನಿಯು ಪುಣ್ಯವನ್ನೋ ಅಥವಾ ಅದರ ಫಲವನ್ನೋ ಇಷ್ಟಪಡಲಾರನು. ಅವನು ಇಷ್ಟಪಡುವುದು ಕರ್ಮರಹಿತ ಫಲವನ್ನು ಮಾತ್ರ.

ಈ ಜ್ಞಾನಿಯ ಅಂತರಂಗದಲ್ಲಿ ಸಮ್ಯಗ್ದರ್ಶನ ವರ್ಧಕಗಳಾದ ಎಂಟು ಅಂಗಗಳ ಮುದ್ರೆಯು ದೃಢವಾಗಿರುವುದರಿಂದ ತನ್ನಾತ್ಮನ ಶುದ್ಧ ಸ್ವಭಾವದಲ್ಲಾಗಲೀ, ಪರಮಾತ್ಮನ ಸ್ವಭಾವದಲ್ಲಾಗಲೀ ಸಂಶಯಕ್ಕಾಗಲೀ, ಮರಣ ರೋಗ ಸಂಬಂಧವಾದ ಭಯಕ್ಕಾಗಲೀ ಎಡೆಯಿರುವುದಿಲ್ಲವು. ನನ್ನಾತ್ಮನು ಅಮೂರ್ತಿಯೂ, ಅಭೇದ್ಯನೂ, ಅಛೇದ್ಯನೂ, ಅವಿನಾಶಿಯೂ ಆಗಿರುವುದರಿಂದ ಇದನ್ನು ಯಾರೂ ನಾಶಗೊಳಿಸಲಾರರೆಂಬ ನಿಃಶಂಕ ಮತ್ತು ನಿರ್ಭಯನೂ ಆಗಿ ನಿಃಶಂಕಿತ ಅಂಗವನ್ನು ಪಾಲಿಸುತ್ತಾನೆ. ಈ ಜ್ಞಾನಿಗೆ ಕರ್ಮಗಳ ಅಧೀನತ್ವವೂ, ಕ್ಷಣಿಕವೂ, ತೃಷ್ಣಾವರ್ಧಕವೂ, ಪಾಪ ಬಂಧಕಾರಕಗಳಾದ ಇಂದ್ರಿಯ ಸುಖದ ಲಾಲಸೆಯ ಆಸಕ್ತಿಯೂ ಇರುವುದಿಲ್ಲವು. ಈ ವಿಷಯಗಳಲ್ಲಿ ಪೂರ್ಣ ರೀತ್ಯಾ ವೈರಾಗ್ಯಭಾವನೆಯುಳ್ಳವನಾಗಿರುತ್ತಾನೆ. ಕೇವಲ ತನ್ನ ಅತೀಂದ್ರಿಯ ಆನಂದಾಭಿಲಾಷಿಯಾಗಿಯೂ, ವ್ಯವಹಾರ ಧರ್ಮ ಅಥವಾ ಮೋಕ್ಷಾಭಿಲಾಷಿಯಾಗಿಯೂ ಆಗುತ್ತಾನಲ್ಲದೆ, ಅನ್ಯ ಯಾವ ಪದವಿಯನ್ನೂ ಇಚ್ಛಿಸಲಾರನು. ಹೀಗೆ ನಿಃಕಾಂಕ್ಷಿತ ಅಂಗವನ್ನು ಪಾಲಿಸುತ್ತಾನೆ. ಈತನು ಆರು ದ್ರವ್ಯಗಳ ಮತ್ತು ಅವುಗಳ ಗುಣಗಳಲ್ಲುಂಟಾಗಿರುವ ಸ್ವಾಭಾವಿಕವೂ ಅಥವಾ ವೈಭಾವಿಕವೂ ಆದ ಪರ್ಯಾಯಗಳ ತಿಳುವಳಿಕೆಯುಳ್ಳವನಾಗಿರುತ್ತಾನೆ. ಅಷ್ಟೇ ಅಲ್ಲ ಸಂಸಾರ ಪರಂಪರೆಯನ್ನು ನಾಟಕ ರಂಗದಂತೆ ಪರಿಭಾವಿಸುತ್ತಾ, ಘೃಣಾಭಾವನೆಯೆಂಬ ಕಲಂಕದಿಂದ ದೂರವಿದ್ದು, ಸಮಭಾವನೆಯೆಂಬ ಭೂಮಿಯಲ್ಲಿ ವಿರಾಜಮಾನನಾಗಿ ನಿರ್ವಿಚಿಕಿತ್ಸಾ ಅಂಗವನ್ನು ಪಾಲಿಸುತ್ತಾನೆ.

ಹೀಗೆ ಪದಾರ್ಥಗಳ ಸ್ವರೂಪವನ್ನು ತಿಳಿಯುತ್ತಿರುವ ಜ್ಞಾನಿಯು ತನ್ನನ್ನು ದ್ರವ್ಯಾರ್ಥಿಕ ಮತ್ತು ಪರ್ಯಾಯಾರ್ಥಿಕ ನಯದಿಂದ ಏಕ ಮತ್ತು ಅನೇಕ ರೂಪವಾಗಿ ನೋಡುವಂತೆ ಅನ್ಯ ಆತ್ಮರುಗಳನ್ನು ನೋಡುತ್ತಾನೆ. ಯಾವ ವಿಷಯದಲ್ಲೂ ಮೂಢಭಾವವನ್ನಿಡದೆ, ಧರ್ಮ, ಅಧರ್ಮ ಆಕಾಶ, ಕಾಲಗಳೆಂಬ ನಾಲ್ಕು ದ್ರವ್ಯಗಳ ಸ್ವಭಾವದಲ್ಲಿ ಪರಿವರ್ತನಾ ಸ್ವರೂಪವಾಗಿಯೇ ಚಿಂತಿಸುತ್ತಾನೆ. ಪುದ್ಗಲಗಳ ಸ್ವಾಭಾವಿಕ ಮತ್ತು ವೈಭಾವಿಕ ಪರ್ಯಾಯಗಳನ್ನು ಪುದ್ಗಲದ ಪರ್ಯಾಯಗಳೆಂದೇ ಭಾವಿಸುತ್ತಾ, ಜೀವ ದ್ರವ್ಯದ ಯಾವ ಸ್ವಾಭಾವಿಕ, ವೈಭಾವಿಕ ಮತ್ತು ನೈಮಿತ್ತಿಕ ಪರ್ಯಾಯಗಳನ್ನು ಜೀವನ ಪರ್ಯಾಯಗಳೆಂದೇ ಪರಿಭಾವಿಸುತ್ತಾ ಮತ್ತು ಇವುಗಳಲ್ಲಿ ತನ್ನಾತ್ಮನೇ ಉಪಾದೇಯವಾದ ಒಂದು ಶುದ್ಧ ದ್ರವ್ಯವಾಗಿರುವುದೆಂದು ಭಾವಿಸುತ್ತಾ ಸ್ವಭಾವದ ಪರಿಜ್ಞಾನಿಯಾಗಿ, ಅಮೂಢಾ ದೃಷ್ಟಿ ಅಂಗವನ್ನು ಪಾಲಿಸುತ್ತಾನೆ. ಜ್ಞಾನಿಯಾದವನು ಸಕಲ ರಾಗಾದಿದೋಷಗಳಿಂದ ದೂರವಿದ್ದು, ಕಷಾಯಗಳ ಮಲಿನತೆಯನ್ನು ತಿಳಿದು, ಅವುಗಳಿಂದ ರಹಿತನಾಗಿ, ವೀತರಾಗ ಸ್ವಭಾವದಲ್ಲಿ ತಲ್ಲೀನನಾಗಿ, ತನ್ನಂತರಂಗದಲ್ಲಿ ಅನಂತ ಶುದ್ಧ ಗುಣಗಳ ಪ್ರಕಾಶವನ್ನುಂಟುಮಾಡಿಕೊಳ್ಳುತ್ತಾ, ಆತ್ಮೀಕ ಗುಣಗಳಲ್ಲಿ ತನ್ಮಯನಾಗಿ, ಉಪಗೂಹನ ಅಂಗವನ್ನು ಪಾಲಿಸುತ್ತಾನೆ.

ಜ್ಞಾನಿಯು ವಿಚಾರಿಸುತ್ತಾನೆ: ರಾಗದ್ವೇಷಗಳೆಂಬ ಗಾಳಿಯ ಹೊಡೆತದಿಂದ ತನ್ನಾತ್ಮಸಮುದ್ರವು ಚಂಚಲವಾಗಬಹುದೆಂಬ ವಿಚಾರದಿಂದ ವೀತರಾಗ ಭಾವದಲ್ಲಿ ಸ್ಥಿರಮನಸ್ಕನಾಗಿ, ಜ್ಞಾನಚೇತನಮಯನಾಗಿ, ಆತ್ಮಾನಂದ ಮಗ್ನನಾಗಿ ಸ್ಥಿತಿಕರಣ ಅಂಗವನ್ನು ಪಾಲಿಸುತ್ತಾನೆ. ತನ್ನ ಉಪಯೋಗವನ್ನು ಆತ್ಮನೆಂಬ ಭೂಮಿಯಲ್ಲಿ ರಮಿಸಬೇಕೇ ಹೊರತು, ಹೊರಗೆ ಹೋಗಲು ಬಿಡುವುದಿಲ್ಲವು. ಸಂಪೂರ್ಣ ಜಗತ್ತನ್ನು ಶಾಂತಿಮಯ ಸಮುದ್ರವನ್ನಾಗಿ ಮಾಡಿ, ಅದರಲ್ಲಿಯೇ ಸ್ನಾನಮಾಡುತ್ತಿರುತ್ತಾನೆ. ಶುದ್ಧ ಪ್ರೇಮವನ್ನಿಟ್ಟುಕೊಂಡು ವಾತ್ಸಲ್ಯ ಅಂಗವನ್ನು ಪರಿಪಾಲಿಸುತ್ತಾನೆ. ನಿರ್ಮಲವಾದ ತನ್ನ ಉಪಯೋಗರೂಪ ರಥದಲ್ಲಿ ಪರಮಾತ್ಮನನ್ನು ವಿರಾಜಮಾನಮಾಡಿಕೊಂಡು, ಧ್ಯಾನವೆಂಬ ಮಾರ್ಗದಲ್ಲಿಯೇ ರಥವನ್ನು ನಡೆಸುವವನಾಗಿ, ತನ್ನ ಶಾಂತ ಮಹಿಮೆಯನ್ನು ವಿಶಾಲಗೊಳಿಸುತ್ತಾ, ಪ್ರಭಾವನಾ ಅಂಗವನ್ನು ಪಾಲಿಸು

ತ್ತಾನೆ. ಹೀಗೆ ಈ ಅಷ್ಟಾಂಗಗಳಿಂದ ಅಲಂಕೃತನಾದ ಜ್ಞಾನಿಯು ಪರಿಶುದ್ಧ ಭಾವದಿಂದ ಶ್ರೀ ಜಿನೇಶ್ವರನನ್ನು ಸ್ಮರಿಸುತ್ತಾ, ಚಿಂತಿಸುತ್ತಾ ಮತ್ತು ಧ್ಯಾನಿಸುತ್ತಾ ನಿರ್ವಾಣವೆಂಬ ಅಚಲನಗರದ ಕಡೆಗೆ ಪ್ರಯಾಣ ಬೆಳೆಸುತ್ತಾನೆ.

ಸಮಾಧಿಶತಕದಲ್ಲಿ ಹೇಳಿರುತ್ತಾರೆ:

**ಭಿನ್ನಾತ್ಮಾನಮುಪಾಸ್ಯಾತ್ಮಾ ಪರೋ ಭವತಿ ತಾದೃಶಃ।**
**ವರ್ತಿರ್ದೀಪಂ ಯಥೋಪಾಸ್ಯ ಭಿನ್ನಾ ಭವತಿ ತಾದೃಶೀ ॥೯೭॥**

**ಭಾವಾರ್ಥ:** ಬತ್ತಿಯು ದೀಪದಿಂದ ಭಿನ್ನವಾಗಿದ್ದರು ಕೂಡಾ, ದೀಪದ ಸೇವೆಯನ್ನು ಮಾಡುತ್ತಾ ಸ್ವಯಂ ದೀಪವಾಗುವಂತೆ. ಈ ಭಿನ್ನ ಪರಮಾತ್ಮನ ಉಪಾಸನೆಯಿಂದ ಸ್ವಯಂ ಪರಮಾತ್ಮನಾಗುತ್ತಾನೆ.

ಭಾವಪಾಹುಡದಲ್ಲಿ ಶ್ರೀ ಕುಂದಕುಂದಾಚಾರ್ಯರು ಹೇಳುತ್ತಾರೆ:

**ಣಾಣಮ್ಮಿವಿಮಲಸೀಯಲಸಲಿಲಂ ಪಾಊಣ ಭವಿಯ ಭಾವೇಣ।**
**ಬಾಹಿಜರಮರಣವೇಯಣಡಾಹವಿಮುಕ್ಕಾ ಸಿವಾ ಹೋಂತಿ ॥೧೨೫॥**

**ಭಾವಾರ್ಥ:** ಭವ್ಯಾತ್ಮನು ಶುದ್ಧಭಾವದಿಂದ ಜ್ಞಾನಮಯವೂ, ನಿರ್ಮಲವೂ, ಶೀತಲವೂ ಆದ ನೀರನ್ನು ಕುಡಿದು, ವ್ಯಾಧಿ, ಮುಪ್ಪು, ಮರಣಗಳ ವೇದನೆಯರೂಪ ಬಾಯಾರಿಕೆಯಿಂದ ಬಿಡುಗಡೆಯಾಗಿ ಶಿವಸ್ವರೂಪನಾಗುತ್ತಾನೆ.

ಆಪ್ತಸ್ವರೂಪದಲ್ಲಿ ಹೇಳಿದ್ದಾರೇನೆಂದರೆ:

**ರಾಗದ್ವೇಷಾದಯೋ ಯೇನ ಜಿತಾಃ ಕರ್ಮಮಹಾಭಟಾಃ।**
**ಕಾಲಚಕ್ರವಿನಿರ್ಮುಕ್ತಃ ಸ ಜಿನಃ ಪರಿಕೀರ್ತಿತಃ ॥೨೧॥**

**ಭಾವಾರ್ಥ:** ಯಾರು ರಾಗದ್ವೇಷಗಳನ್ನು ಮತ್ತು ಕರ್ಮರೂಪ ಮಲ್ಲರನ್ನು ಜಯಿಸಿದವರೂ, ಮರಣದಿಂದ ರಹಿತರೂ ಆಗಿರುವರೋ ಅವರೇ ಜಿನರೆಂದು ಹೇಳಿಸಿಕೊಳ್ಳುತ್ತಾರೆ.



## ತನ್ನಾತ್ಮನಲ್ಲಿಯೂ, ಜಿನೇಂದ್ರನಲ್ಲಿಯೂ ಭೇದವಿಲ್ಲ

**ಸುದ್ಧಪ್ಪಾ ಅರು ಜಿಣವರಹಂ ಭೇಉ ಮ ಕಿಮುಪಿ ವಿಯಾಣಿ।**
**ಮೋಕ್ಖಹ ಕಾರಣ ಜೋಈಯಾ ಣಿಚ್ಛಇ ಏಉ ವಿಯಾಣಿ ॥ ೨೦ ॥**

**ಅನ್ವಯಾರ್ಥ :** ಜೋಈಯಾ–ಎಲೈ ಯೋಗೀಶ್ವರನೇ! ಸುದ್ಧಪ್ಪಾ ಅರು ಜಿಣವರಹಂ ಕಿಮುಪಿ ಭೇಉ ಮ ವಿಯಾಣಿ–ನಿನ್ನ ಶುದ್ಧಾತ್ಮನಲ್ಲಿಯೂ ಮತ್ತು ಜಿನದೇವನಲ್ಲಿಯೂ ಯಾವ ಭೇದವನ್ನು ಚಿಂತಿಸದೆ, ಮೋಕ್ಖಹ ಕಾರಣ ಣಿಚ್ಛಇ ಏಉ ವಿಯಾಣಿ– ಇದೆಲ್ಲವು ನಿಶ್ಚಯ ನಯದಿಂದ ಮೋಕ್ಷಕ್ಕೆ ಕಾರಣವೆಂದು ತಿಳಿ.

**ಭಾವಾರ್ಥ :** ಮೋಕ್ಷವು ಕೇವಲ ತನ್ನಾತ್ಮನ ಶುದ್ಧ ಅವಸ್ಥೆಯು. ನಿಶ್ಚಯನಯದಿಂದ ಅದರ ಪ್ರಾಪ್ತಿಯ ಉಪಾಯವು ತನ್ನಾತ್ಮನ ಅನುಭವ ಮಾತ್ರ ಆಗಿರುವುದು. ಶ್ರೀ ಅರಹತ್ಪರಮೇಶ್ವರನಂತೆ ಅಥವಾ ಪರಮಾತ್ಮ ನಂತೆ ತನ್ನನ್ನು ತಿಳಿಯುತ್ತಿರಬೇಕು.

ಹೀಗೆ ವಿಚಾರಿಸುವುದರಿಂದ ಅನಾದಿಕಾಲದಿಂದ ಬಂಧವಾದ ಮಿಥ್ಯಾತ್ವ ಭಾವನೆಯ ಅಭಾವವಾಗುತ್ತದೆ. ಮಿಥ್ಯಾತ್ವಭಾವವು ಕೂಡಾ ಅನಾದಿ ಕಾಲದಿಂದಲೇ ಇತ್ತು. ನಾನು ಮನುಷ್ಯನೆಂದೂ, ನಾರಕಿಯೆಂದೂ, ತಿರ್ಯಂಚ ನೆಂದೂ, ದೇವನೆಂದೂ, ರಾಗಿಯೆಂದೂ, ದ್ವೇಷಿಯೆಂದೂ, ಕ್ರೋಧಿಯೆಂದೂ, ಮಾನಿಯೆಂದೂ, ಮಾಯಿಯೆಂದೂ, ಲೋಭಿಯೆಂದೂ, ಕಾಮಿಯೆಂದೂ, ಸುರೂಪಿಯೆಂದೂ, ಬಲಿಷ್ಠನೆಂದೂ, ರೋಗಿಯೆಂದೂ, ನಿರೋಗಿಯೆಂದೂ, ಬಾಲಕನೆಂದೂ, ಯುವಕನೆಂದೂ, ವೃದ್ಧನೆಂದೂ, ಮರಣವನ್ನೈದುವೆನೆಂದೂ ಹೀಗೆ ಎಂಟು ಕರ್ಮಗಳ ಉದಯದ ವಿಪಾಕದಿಂದುಂಟಾಗುತ್ತಿದ್ದ ವಿಭಾವ ಅವಸ್ಥೆಗಳನ್ನು ಈ ಅಜ್ಞಾನಿ ಜೀವನು ತನ್ನ ಮೂಲ ಅವಸ್ಥೆಗಳೆಂದೇ ತಿಳಿಯು ತ್ತಾನೆ ಮತ್ತು ಕರ್ಮಕೃತ ರಚನೆಯಲ್ಲಿ ಅಹಂಬುದ್ಧಿಯುಂಟಾಗಿ ಶರೀರ ಸಂಬಂಧವಾದ ಸುಖದಲ್ಲಿ ಸುಖಿಯೆಂದೂ, ದುಃಖದಲ್ಲಿ ದುಃಖಿಯೆಂದೂ ಭಾವಿಸುತ್ತಾನೆ. ಉದಾ : ಯಾವ ಸಿಂಹದ ಮರಿಯು ಸಿಂಹವಾಗಿದ್ದು ಕೂಡಾ ದೀನ ಪಶುಗಳಂತೆ ಆಚರಿಸುವ ಹಾಗೆ ಅಜ್ಞಾನದಿಂದ ಅವನು ತನ್ನನ್ನು

ದೀನ, ಹೀನ, ಸಂಸಾರೀಯೆಂದು ತಿಳಿದು ಆಚರಿಸುವಂತೆಯೇ ಸರಿ. ಶ್ರೀ ಗುರುದೇವನ ಪ್ರಸಾದದಿಂದಲೋ ಅಥವಾ ಶಾಸ್ತ್ರಜ್ಞಾನದಿಂದಲೋ ಸ್ವತಃ ಜ್ಞಾನಜ್ಯೋತಿಯು ಬೆಳಗಿದೊಡನೆ, ಪರಮಾತ್ಮಸ್ವರೂಪನಾಗಿರುವೆನೆಂಬ ಪ್ರತೀತಿಯುಂಟಾಗುತ್ತದೆ. ಆಗ ಪರಮಾತ್ಮ ಸ್ವಭಾವಕ್ಕೂ ನನ್ನ ಸ್ವಭಾವಕ್ಕೂ ಸ್ವಲ್ಪವೂ ಅಂತರವಿಲ್ಲವೇದೂ, ಸಂಸಾರ ಪ್ರಪಂಚದಿಂದ ರಹಿತನೆಂದೂ ಕರ್ಮಗಳಿಂದ ಅಲಿಪ್ತನೆಂದೂ, ಪರಮವೀತರಾಗಿಯೆಂದೂ, ಪರಮಾನಂದ ಮಯನೆಂದೂ, ಪರಮಾತ್ಮನಲ್ಲಿರುವ ಅನಂತಜ್ಞಾನಾದಿಗುಣಗಳು ನನ್ನಾತ್ಮ ನಲ್ಲಿರುವುವೆಂದೂ, ಅಮೂರ್ತಿ ಅಖಂಡ ಜ್ಯೋತಿಸ್ವರೂಪನಾಗಿರುತ್ತೇನೆಂದೂ ಅವನು ಭಾವಿಸುತ್ತಿರುತ್ತಾನೆ.

ನಾನೇ ನನ್ನ ಶುದ್ಧ ಪರಿಣತಿಯ ಕರ್ತೃವು. ಶುದ್ಧ ಪರಿಣಾಮವೇ ನೈಜವಾದ ಧರ್ಮವು. ಅದಕ್ಕೆ ಶುದ್ಧ ಪರಿಣಾಮವೇ ಕಾರಣವು. ಇದೇ ಸಂಪ್ರದಾನವು, ಅಪಾದಾನವು, ಅಧಿಕರಣವು ಅಥವಾ ಈ ಎಲ್ಲಾ ಕಾರಕಗಳ ವಿಚಾರದಿಂದ ರಹಿತನಾದ ಅಭೇದಸ್ವರೂಪನಾಗಿರುತ್ತೇನೆ. ನಾನು ಸ್ವಯಂ ರಾಗಾದಿಭಾವಗಳ ಅಥವಾ ಪುಣ್ಯಪಾಪಕರ್ಮಗಳ ಕರ್ತೃವೂ ಅಲ್ಲವು. ಕೇವಲ ಪರಿಶುದ್ಧವೂ, ಅತೀಂದ್ರಿಯವೂ, ಸಹಜವೂ ಆದ ಆನಂದವನ್ನನುಭವಿಸುವವ ನಾಗಿರುವೆನಲ್ಲದೆ ಸಾಂಸಾರಿಕ ಸುಖದುಃಖಗಳ ಭೋಕ್ತೃವು ನಾನಲ್ಲವು.

ನಾನು ಸಿದ್ಧಾತ್ಮನಂತೆ ಪರಮ ನಿಶ್ಚಲನೂ, ಭೋಗಗಳ ಚಂಚಲತೆ ಯಿಂದ ರಹಿತನೂ, ಮನ, ವಚನ, ಕಾಯಾದಿ ಹದಿನೈದು ಯೋಗಗಳಿಂದ ಶೂನ್ಯನೂ, ಕರ್ಮ ಮತ್ತು ನೋಕರ್ಮಗಳನ್ನು ಆಕರ್ಷಣೆ ಮಾಡದವನೂ, ಅಜೀವಾದಿ ತತ್ವಮಯನಾಗದೆ ಇರುವವನೂ, ಸದಾ ಶುದ್ಧ ಜೀವತ್ವವನ್ನು ಧರಿಸಿರುವ ಜೀವನೂ ಆಗಿರುತ್ತೇನೆ. ಸುಖ, ಅಸ್ತಿತ್ವ, ಚೈತನ್ಯ (ಸ್ವಾನು ಭೂತಿ), ಜ್ಞಾನ ಈ ನಾಲ್ಕು ಗುಣಗಳು ನನ್ನ ಯಥಾರ್ಥವಾದ ಪ್ರಾಣಗಳಾಗಿ ರುತ್ತವೆ. ಇವುಗಳಿಂದಲೇ ಜೀವಿಸಿಕೊಂಡಿರುವೆನು.

ಸಿದ್ಧ ಪರಮಾತ್ಮನು ಕೃತಕೃತ್ಯನಾಗಿರುವಂತೆ ನಾನೂ ಕೃತಕೃತ್ಯನಾಗಿ ರುತ್ತೇನೆ. ಅವರಿಗೆ ಸಂಸಾರ ರುಚಿಯು ರುಚಿಸದಿರುವಂತೆ ನನಗೂ ರುಚಿ ಸದು. ಅವರು ಸುಖದುಃಖಗಳನ್ನು ಕೊಡದಿರುವಂತೆ ನಾನೂ ಸುಖದುಃಖ

ಗಳನ್ನು ಕೊಡಲಾರೆ. ಪ್ರಪಂಚದಿಂದ ಸರ್ವಥಾ ಭಿನ್ನನಾಗಿರುವಂತೆ, ನಾನೂ ಭಿನ್ನನೇ ಆಗಿರುತ್ತೇನೆ. ಅಸಂಖ್ಯಾತ ಪ್ರದೇಶೀ ಅಖಂಡರಾಗಿರುವಂತೆ, ನಾನೂ ಅಸಂಖ್ಯಾತ ಪ್ರದೇಶೀ ಅಖಂಡನೇ ಆಗಿರುತ್ತೇನೆ. ಅಂತಿಮ ಶರೀರ ಪ್ರಮಾಣ ಆಕಾರಧಾರಿಯಾಗಿರುವಂತೆ, ನಾನೂ ನನ್ನ ಶರೀರ ಪ್ರಮಾಣ ಆಕಾರಧಾರಿಯೇ ಆಗಿರುತ್ತೇನೆ. ಆದರೆ ಪ್ರದೇಶಗಳ ಸಂಖ್ಯೆಯಲ್ಲಿ ಕಡಿಮೆಯಾಗಿಲ್ಲವು. ಅವರು (ಸಿದ್ಧರು) ಸಕಲ ಗುಣಸ್ಥಾನ ಶ್ರೇಣಿಗಳಿಂದ ಹೊರಗಿರುವಂತೆ, ನಾನು ಕೂಡಾ ಗುಣಸ್ಥಾನಗಳಿಂದ ದೂರವರ್ತಿಯಾಗಿರುತ್ತೇನೆ. ಹದಿನಾಲ್ಕು ಮಾರ್ಗಣೆಗಳನ್ನು ದಾಟಿರುವಂತೆ, ನಾನು ಆ ಮಾರ್ಗಣಾಸ್ಥಾನಗಳಿಂದ ಭಿನ್ನನೇ ಆಗಿರುತ್ತೇನೆ.

ಸಿದ್ಧಾತ್ಮರು ತೃಷ್ಣಾದಾಹದಿಂದ ರಹಿತರಾಗಿರುವಂತೆ, ನಾನೂ ತೃಷ್ಣಾದಾಹದಿಂದ ರಹಿತನಾಗಿರುತ್ತೇನೆ. ಕಾಮವಾಸನೆಯಿಂದ ರಹಿತರಾಗಿರುವಂತೆ ನಾನೂ ಕಾಮವಾಸನೆಯಿಂದ ರಹಿತನಾಗಿರುತ್ತೇನೆ. ಸ್ತ್ರೀಲಿಂಗ, ಪುಲ್ಲಿಂಗ, ನಪುಂಸಕ ಲಿಂಗಗಳಿಂದ ರಹಿತರಾಗಿರುವಂತೆ, ನಾನೂ ರಹಿತನಾಗಿರುತ್ತೇನೆ. ಕ್ರೋಧಾದಿ ಕಲಂಕಗಳಿಂದ ರಹಿತನಾಗಿ ಕ್ಷಮಾಮೂರ್ತಿಯಾಗಿರುವಂತೆ, ನಾನೂ ಕ್ರೋಧಾದಿ ಕಲಂಕಗಳಿಲ್ಲದೆ ಕ್ಷಮಾಮೂರ್ತಿ ( ಧಾರಿ ) ಯಾಗಿರುತ್ತೇನೆ. ಕುಲ, ಜಾತಿ, ರೂಪ, ಬಲ, ಧನ, ಅಧಿಕಾರ, ತಪ, ವಿದ್ಯಾ ಈ ಎಂಟು ಮದಗಳಿಲ್ಲದೆ ಪರಮಕೋಮಲ ಪರಮಮಾರ್ದವ ಗುಣಧಾರಿಯಾಗಿರುವಂತೆ, ನಾನೂ ಕೂಡಾ ಮದಗಳಿಂದ ರಹಿತವಾದ ಪೂರ್ಣ ನಿರಭಿಮಾನಿಯೂ, ಪರಮಕೋಮಲ ಮಾರ್ದವ ಧರ್ಮಧಾರಿಯೂ ಆಗಿರುತ್ತೇನೆ. ಮಾಯಾಚಾರರೂಪ ವಕ್ರಭಾವರೂಪ ವಿಕಟಭಾವದಿಂದ ರಹಿತವಾದ ಪರಮ ಸರಳವೂ, ಸ್ವಾಭಾವಿಕವೂ ಆದ ಆರ್ಜವ ಗುಣಧಾರಿಯಾಗಿರುವಂತೆ, ನಾನೂ ಕೂಡಾ ಕಪಟ ಮಾಯಾಜಾಲದಿಂದ ಶೂನ್ಯವಾದ ಪರಮ ನಿಷ್ಕಪಟವೂ, ಸರಳವೂ ಆದ ಆರ್ಜವ ಸ್ವಭಾವಧಾರಿಯಾಗಿರುತ್ತೇನೆ.

ಸಿದ್ಧ ಪರಮಾತ್ಮರು ಅಸತ್ಯರೂಪ ವಕ್ರ ಭಾವನೆಯಿಂದ ರಹಿತವಾದ ಪರಮ ಸತ್ಯಮೂರ್ತಿಯಾಗಿರುವಂತೆ, ನಾನು ಕೂಡಾ ಅಸತ್ಯ ಕಲ್ಪನೆಯಿಲ್ಲದ ಪರಮ ಪವಿತ್ರವಾದ ಸತ್ಯಧರ್ಮದ ಅಧಿಪತಿಯಾಗಿರುತ್ತೇನೆ. ಲೋಭಮಲ

ದಿಂದ ರಹಿತ. ಪರಮ ನಿರ್ಮಲ ಶೌಚ ಗುಣಧಾರಿಯಾಗಿರುವಂತೆ, ನಾನೂ ಸಕಲ ಆಸೆಯಿಲ್ಲದ ಪರಮ ಸಂತೋಷಿಯೂ, ಶುದ್ಧ ಸ್ವಭಾವದ ಸ್ವಾಮಿಯೂ ಆಗಿರುತ್ತೇನೆ. ಮನಸ್ಸು ಮತ್ತು ಇಂದ್ರಿಯಗಳ ಸಂಬಂಧವಾದ ಪ್ರಪಂಚ ದಿಂದಲೂ, ಉದಯಾಭಾವದಿಂದಲೂ ರಹಿತವಾದ ಪರಿಪೂರ್ಣ ಸಂಯಮ ಧರ್ಮದ ಅಧಿನಾಯಕನಾಗಿರುವಂತೆ, ನಾನೂ ಮನಸ್ಸು ಮತ್ತು ಇಂದ್ರಿಯ ಗಳ ಚಂಚಲತೆಯಿಲ್ಲದಿರುವ ಸಂಪೂರ್ಣ ಪರಮದಯಾ ಧರ್ಮದಿಂದ ಪರಿ ಪೂರ್ಣ ಪರಮಸಂಯಮ ಗುಣಧಾರಿಯಾಗಿದ್ದೇನೆ. ತನ್ನ ಸ್ವಾನುಭೂತಿ ತಪಸ್ಸನ್ನು ನಿರಂತರ ತಪಿಸುತ್ತ ಪರಮ ತಪೋಧರ್ಮಧಾರಿಗಳಾಗಿರುವಂತೆ, ನಾನೂ ಕೂಡಾ ಸ್ವಾತ್ಮಾಭಿಮುಖನಾಗಿ ತನ್ನಾತ್ಮರಮಣರೂಪ ಅಗ್ನಿಯಲ್ಲಿ ನಿರಂತರ ತನ್ನನ್ನು ತಪಿಸುತ್ತಾ ಇಚ್ಛೆ ಇಲ್ಲದ ತಪೋಗುಣದ ಸ್ವಾಮಿಯಾಗಿ ರುತ್ತೇನೆ. ಪರಮ ಶಾಂತಭಾವದಿಂದ ಪರಿಪೂರ್ಣರಾಗಿ ಪರಮ ನಿರ್ಭಯ ಗುಣವನ್ನು ಧರಿಸಿ, ವಿಶ್ವದಲ್ಲಿ ಪರಮ ಪ್ರಶಾಂತವೂ ಅಭಯ ದಾನವನ್ನು ವಿಶಾಲಗೊಳಿಸುತ್ತಾ ಶ್ರೇಷ್ಠ ತ್ಯಾಗಧರ್ಮದ ಮೂರ್ತಿಯಾಗಿರುವಂತೆ, ನಾನೂ ಕೂಡಾ ಜಗತ್ತಿಗೆ ಚಂದ್ರನೋಪಾದಿಯಲ್ಲಿ ಆಹ್ಲಾದಕರ ಶಾಂತರಸ ಅಮೃತ ವನ್ನು ಸುರಿಸುತ್ತಾ ಸಕಲ ಜೀವಕೋಟಿಗೆ ಅಭಯವನ್ನುಂಟುಮಾಡುವ ತ್ಯಾಗ ಧರ್ಮ ಸ್ವರೂಪನಾಗಿರುತ್ತೇನೆ. ಏಕಾಕಿಯೂ, ನಿಸ್ಪೃಹರೂಪ ನಿತ್ಯ ನಿರಂ ಜನನಾಗಿದ್ದು ಶ್ರೇಷ್ಠ ಆಕಿಂಚನ್ಯ ಧರ್ಮಧಾರಿಯಾಗಿರುವಂತೆ, ನಾನು ಕೂಡಾ ಪರಮ ಏಕಾಂತ ಸ್ವಭಾವದಲ್ಲಿದ್ದು ಪರವಸ್ತುಗಳಿರದ ರಹಿತ ಆಕಿಂಚನ್ಯ ಧರ್ಮಗಳಿಗೆ ಒಡೆಯನಾಗಿರುತ್ತೇನೆ. ಪರಮಪಾವನ ಶೀಲಸ್ವಭಾವದಲ್ಲಿಯೂ ತನ್ನ ಪರಬ್ರಹ್ಮ ಸ್ವಭಾವದಲ್ಲಿ ರಮಿಸುತ್ತಾ ಪರಮ ಶ್ರೇಷ್ಠ ಬ್ರಹ್ಮಚರ್ಯ ಮೂರ್ತಿಯಾಗಿರುವಂತೆ, ನಾನು ಕೂಡಾ ನನ್ನ ಶುದ್ಧ ಸ್ವಭಾವದಲ್ಲಿ ನಿರ್ವಿಕಾರ ನಾಗಿದ್ದು ಬ್ರಹ್ಮಭಾವದ ಭೋಗಿಯಾಗಿ ಬ್ರಹ್ಮಚರ್ಯ ಗುಣದ ಅಧಿಪತಿ ಯಾಗಿರುತ್ತೇನೆ. ಸತ್ತಾಧಾರಿಯಾಗಿದ್ದು ಸ್ವಭಾವ ಮತ್ತು ಗುಣಗಳ ದೃಷ್ಟಿ ಯಿಂದ ನನ್ನ ಮತ್ತು ಸಿದ್ಧಪರಮಾತ್ಮನಲ್ಲಿ ಏಕತ್ವವೇ ಇರುತ್ತದೆ. ನಾನು ಮತ್ತು ಅವನು, ಅವನು ಮತ್ತು ನಾನೆಂಬ ಭಾವನೆಯು ಯೋಗಿಯಲ್ಲಿ ನಿರಂ ತರವು ಅನುಭವವಾಗುತ್ತಿರುತ್ತದೆ. ಅದೇ ಮೋಕ್ಷದ ಸಾಧಕವಾಗಿರುತ್ತದೆ.

ಪರಮಾತ್ಮಪ್ರಕಾಶದಲ್ಲಿ ಹೇಳಿರುತ್ತಾರೆ:

**ಜೇಹಉ ಣಿಮ್ಮಲು ಣಾಣಮಉ, ಸಿದ್ಧಿಹಿಂ ಣಿವಸಇ ದೇಉ ।**
**ತೇಹಉ ಣಿವಸಇ ಬಂಭುಪರು, ದೇಹಹಂ ಮಂಕರಿ ಭೇಉ ॥ ೨೬ ॥**

**ಭಾವಾರ್ಥ :** ಪರಮಾತ್ಮದೇವನು ನಿರ್ಮಲ ಜ್ಞಾನಮಯವಾದ ಸಿದ್ಧ ಗತಿಯಲ್ಲಿ ನಿವಾಸಿಸಿಕೊಂಡಿರುವಂತೆಯೇ, ಪರಬ್ರಹ್ಮ ಪರಮಾತ್ಮನು ಈ ನನ್ನ ಶರೀರದಲ್ಲಿ ವಾಸಿಸಿಕೊಂಡಿರುವುದರಿಂದ ಭೇದವಿಲ್ಲವು.

ಬೃಹದ್ ಸಾಮಾಯಿಕ ಪಾಠದಲ್ಲಿ ವರ್ಣಿಸಿರುತ್ತಾರೆ :

**ಗೌರೋ ರೂಪಧರೋ ದೃಢಃ ಪರಿದೃಢಃ ಸ್ಥೂಲಃ ಕೃಶಃ ಕರ್ಕಶೋ,**
**ಗೀರ್ವಾಣೋ ಮನುಜಃ ಪಶುರ್ನರಕಭೂಃ ಷಂಡಃ**
**ಪುಮಾನಾಂಗನಾ ।**
**ಮಿಥ್ಯಾತ್ವಂ ವಿದಧಾಸಿ ಕಲ್ಪನಮಿದಂ ಮೂಢೋಽವಿಬುಧ್ಯಾತ್ಮನೋ**
**ನಿತ್ಯಂ ಜ್ಞಾನಮಯಸ್ವಭಾವಮಮಲಂ ಸರ್ವವ್ಯಪಾಯ**
**ಚ್ಯುತಂ ॥ ೭೦ ॥**

**ಭಾವಾರ್ಥ :** ಎಲೈ ಮೂಢ ಪ್ರಾಣಿಯೇ! ನೀನು ನಿನ್ನ ಆತ್ಮನನ್ನು ನಿತ್ಯನೆಂದೂ, ಜ್ಞಾನಮಯನೆಂದೂ, ನಿರ್ಮಲನೆಂದೂ ಮತ್ತು ಸಕಲ ಆಪತ್ತುಗಳಿಂದ ಬಿಡುಗಡೆಯಾದವನೆಂದೂ ತಿಳಿಯದೆ, ನಾನು ಬೆಳ್ಳಗಿರುವೆನೆಂದೂ, ರೂಪವಂತನೆಂದೂ, ಬಲಿಷ್ಠನೆಂದೂ, ನಿರ್ಬಲನೆಂದೂ, ದಷ್ಟಪುಷ್ಟನೆಂದೂ, ಕಠೋರನೆಂದೂ, ದೇವನೆಂದೂ, ಮನುಷ್ಯನೆಂದೂ, ತಿರ್ಯಂಚನೆಂದೂ, ನಾರಕಿಯೆಂದೂ, ಪುಲ್ಲಿಂಗನೆಂದೂ, ಸ್ತ್ರೀಲಿಂಗನೆಂದೂ ಮೊದಲಾಗಿ ಮಿಥ್ಯಾ ಕಲ್ಪನೆಯನ್ನೇಕೆ ಮಾಡುತ್ತಿರುವಿ?

**ಮೋಕ್ಷಪಾಹುಡದಲ್ಲಿ ಹೇಳಿದೆ :**

**ಜೋ ಇಚ್ಛಇ ಣಿಸ್ಸರಿದುಂ ಸಂಸಾರ ಮಹಣ್ಣವಾಉ ರುದ್ದಾಓ ।**
**ಕಮ್ಮಿಂಧ ಣಾಣ ಡಹಣಂ ಸೋ ಝಾಯಇ ಅಪ್ಪಯಂ**
**ಸುದ್ಧಂ ॥ ೨೬ ॥**

**ಭಾವಾರ್ಥ :** ಯಾವ ಜೀವನು ಭಯಾನಕವಾದ ಸಂಸಾರದಿಂದ ಪಾರಾಗಲು ಪ್ರಯತ್ನಿಸುತ್ತಿರುವನೋ, ಅವನು ಶುದ್ಧಾತ್ಮನನ್ನೇ ಧ್ಯಾನಿಸುತ್ತಿರ

ಬೇಕು. ಅದರಿಂದಲೇ ಕರ್ಮವೆಂಬ ಕಟ್ಟಿಗೆ (ಸೌದೆ) ಯು ಭಸ್ಮೀಭೂತ ವಾಗುವುದು.



## ಆತ್ಮನೇ ಜಿನನು, ಇದು ಸಿದ್ಧಾಂತದ ಸಾರವು

**ಜೋ ಜಿಣು ಸೋ ಅಪ್ಪಾ ಮುಣಹು ಇಹ ಸಿಂದ್ಧಂತಹು ಸಾರು ।**
**ಇಉ ಜಾಣೇವಿಣ ಜೋಯಹು ಛಂಡಹು ಮಾಯಾಚಾರು ॥೨೧॥**

**ಅನ್ವಯಾರ್ಥ :** ಜೋ ಜಿಣು ಸೋ ಅಪ್ಪಾ ಮುಣಹು–ಯಾವ ಜಿನ ದೇವನಿರುವನೋ ಅವನೇ ಈ ಆತ್ಮನೆಂದು ಮನನಮಾಡು. ಇಹ ಸಿದ್ಧಂ ತಹು ಸಾರು–ಇದೇ ಸಿದ್ಧಾಂತ ಶಾಸ್ತ್ರದ ಸಾರವಾಗಿದೆ. ಇಉ ಜಾಣೇವಿಣ– ಹೀಗೆಂದು ತಿಳಿದು, ಜೋಯಹು–ಎಲೈ ಯೋಗೀ ಜನಗಳೇ! ಮಾಯಾ ಚಾರು ಛಂಡಹು–ಛಲ ಕಪಟಭಾವನೆಯನ್ನು ತ್ಯಜಿಸಿರಿ.

**ಭಾವಾರ್ಥ :** ತೀರ್ಥಂಕರ ಪರಮ ಜಿನದೇವರ ಮುಖ ಕಮಲದಿಂದ ಹೊರಟ ದಿವ್ಯಧ್ವನಿಯೇ ಸಿದ್ಧಾಂತದ ಪ್ರಧಾನ ಪ್ರವಾಹವಾಗಿದೆ. ಆ ವಾಣಿ ಯನ್ನು ಗಣಧರಾದಿ ಮಹಾಮುನಿಗಳು ಧಾರಣೆಮಾಡಿ ದ್ವಾದಶಾಂಗ ಶಾಸ್ತ್ರ ರೂಪವಾಗಿ ರಚಿಸುತ್ತಾರೆ. ಕ್ರಮವಾಗಿ ಅನ್ಯ ಆಚಾರ್ಯರುಗಳು ಗ್ರಂಥ ರೂಪವಾಗಿಯೂ, ಅದನ್ನೇ ಪ್ರಥಮಾನುಯೋಗ, ಕರಣಾನುಯೋಗ, ಚರ ಣಾನುಯೋಗ, ದ್ರವ್ಯಾನುಯೋಗಗಳೆಂದು ನಾಲ್ಕು ವಿಭಾಗವಾಗಿಯೂ ರಚಿ ಸಿರುವರು. ಈ ನಾಲ್ಕು ಅನುಯೋಗಗಳ ಸಾರವೇನೆಂದರೆ ತನ್ನಾತ್ಮನನ್ನು ಪರಮಾತ್ಮನಂತೆ ತಿಳಿಯುವುದು, ಭಾವಿಸುವುದು.

ಶ್ರೀ ಸ್ವಾಮಿ ಸಮಂತಭದ್ರ ಆಚಾರ್ಯರು ರತ್ನಕರಂಡಕ ಶ್ರಾವಕಾ ಚಾರದಲ್ಲಿ ಹೇಳಿದುತ್ತಾರೆ :

**ಪ್ರಥಮಾನುಯೋಗಮರ್ಥಾಖ್ಯಾನಂ ಚರಿತಂ ಪುರಾಣಮಪಿ ಪುಣ್ಯಂ ।**
**ಬೋಧಿಸಮಾಧಿನಿಧಾನಂ ಬೋಧತಿ ಬೋಧಃ ಸಮೀಚೀನಃ॥ ೪೩ ॥**

ಭಾವಾರ್ಥ : ಯಾವ ಗ್ರಂಥಗಳಲ್ಲಿ ಧರ್ಮ, ಅರ್ಥ, ಕಾಮ, ಮೋಕ್ಷ ಗಳೆಂಬ ನಾಲ್ಕು ಪುರುಷಾರ್ಥಗಳ ವರ್ಣನೆಯು, ಮಹಾ ಪುರುಷರ ಜೀವನ ಚರಿತ್ರೆಯು, 24 ತೀರ್ಥಂಕರರು, 12 ಚಕ್ರವರ್ತಿಗಳು, 9 ಜನ ಬಲಭದ್ರರು 9 ಜನ ನಾರಾಯಣರು, 9 ಜನ ಪ್ರತಿನಾರಾಯಣರು ಈ ತ್ರಿಷಷ್ಠಿಶಲಾಕಾ ಪುರುಷರ ಚರಿತ್ರೆಯು ವರ್ಣಿಸಲ್ಪಟ್ಟಿರುವುದೋ, ಆ ಗ್ರಂಥಗಳಿಗೆ ಪ್ರಥಮಾನು ಯೋಗವೆಂದು ಹೇಳುತ್ತಾರೆ. ಇಂಥಹ ಗ್ರಂಥಗಳನ್ನು ಓದುವುದರಿಂದ ಪುಣ್ಯ ಬಂಧವೂ, ರತ್ನತ್ರಯಗಳ ಪ್ರಾಪ್ತಿಯೂ, ಸಮಾಧಿಯ ಭಂಡಾರವೂ, ಸಮ್ಯ ಗ್ಜ್ಞಾನ ಪ್ರದರ್ಶಕವೂ ಉಂಟಾಗುತ್ತದೆ. ಇದರಿಂದ ತನ್ನ ಶುದ್ಧಾತ್ಮನನ್ನು ಪರಮಾತ್ಮರೂಪನನ್ನಾಗಿ ಮಾಡುವ ಅವಕಾಶ ಉಂಟಾಗುತ್ತದೆ. ಹೀಗೆ ಅನೇಕ ದೃಷ್ಟಾಂತಗಳ ಮೂಲಕ ವರ್ಣಿಸಲ್ಪಟ್ಟ ಪ್ರಥಮಾನುಯೋಗ ಶಾಸ್ತ್ರ ಗ್ರಂಥಗಳ ಸ್ವಾಧ್ಯಾಯದಿಂದ ತನ್ನನ್ನು ಶುದ್ಧನೆಂದರಿತು, ಪರಮ ವೈರಾಗ್ಯ ಭಾವನೆಯುಳ್ಳವನಾಗಿ, ಆತ್ಮಧ್ಯಾನಿಯಾಗಿ ನಿರ್ವಾಣಪದವಿಯನ್ನು ಪಡೆ ಯಲು ಸಾಧ್ಯವಾಗುವುದು. ಆದ್ದರಿಂದ ಪ್ರಥಮಾನುಯೋಗ ಶಾಸ್ತ್ರಗಳೂ ಕೂಡಾ ಆತ್ಮ ತತ್ವವನ್ನು ಪ್ರಕಾಶಪಡಿಸುವಂಥವುಗಳಾಗಿವೆ.

**ಲೋಕಾಲೋಕವಿಭಕ್ತೇರ್ಯುಗಪರಿವೃತ್ತೇಶ್ಚತುರ್ಗತೀನಾಂ ಚ ।**
**ಆದರ್ಶಮಿವ ತಥಾಮತಿರವೈತಿ ಕರಣಾನುಯೋಗಂ ಚ ॥ ೪೪ ॥**

ಭಾವಾರ್ಥ : ಯಾವ ಗ್ರಂಥಗಳಲ್ಲಿ ಲೋಕ ಅಲೋಕಗಳ ವಿಭಾಗ, ಕಾಲದ್ರವ್ಯದ ಗುಣಗಳ ಪರಿವರ್ತನೆ, ನಾಲ್ಕು ಗತಿಗಳಲ್ಲಿರುವ ಜೀವಗಳ ಭಿನ್ನ ಭಿನ್ನ ಅವಸ್ಥೆಗಳ ವರ್ಣನೆ, ಮಾರ್ಗಣಾಸ್ಥಾನ ಮತ್ತು ಗುಣಸ್ಥಾನ ವರ್ಣ ನೆಯು ಮಾಡಲ್ಪಟ್ಟಿರುವುದೋ ಆ ಗ್ರಂಥಗಳಿಗೆ ಕರಣಾನುಯೋಗವೆಂದು ಹೆಸರು. ಅವುಗಳ ಸ್ವಾಧ್ಯಾಯದಿಂದ ಸಮ್ಯಗ್ಜ್ಞಾನ ಜ್ಯೋತಿಯ ಪ್ರಾಪ್ತಿ ಯಾಗುವುದು. ಇದರಲ್ಲಿ ಕರ್ಮಗಳ ಸಂಯೋಗದಿಂದ ಸಂಸಾರಾವಸ್ಥೆಯು ಪ್ರಾಪ್ತಿಯಾಗುವುದೆಂದೂ, ಕರ್ಮಗಳ ಸಂಯೋಗವು ದೂರವಾಗದೆ ಭವಭ್ರಮ ಣೆಯು ದೂರವಾಗದೆಂದೂ ವರ್ಣಿಸಿರುತ್ತಾರೆ ಮತ್ತು ವಿಭಾವ ಪರಿಣಾಮದ ಪರಿಣತಿಯ ಸಂಬಂಧವಾದ ಸೂಕ್ಷ್ಮವರ್ಣನೆಯನ್ನೂ ಮಾಡಿರುತ್ತಾರೆ.

**ಗೃಹಮೇಧ್ಯನಗಾರಾಣಾಂ ಚಾರಿತ್ರೋತ್ಪತ್ತಿವೃದ್ಧಿರಕ್ಷಾಂಗಂ ।**
**ಚರಣಾನುಯೋಗಸಮಯಂ ಸಮ್ಯಗ್ಜ್ಞಾನಂ ವಿಜಾನಾತಿ ॥೪೫॥**

**ಭಾವಾರ್ಥ :** ಯಾವ ಗ್ರಂಥಗಳಲ್ಲಿ ಗೃಹಸ್ಥರ ಮತ್ತು ಮುನಿಗಳ ಚಾರಿತ್ರದ ಪ್ರಾಪ್ತಿ, ವೃದ್ಧಿ ಮತ್ತು ರಕ್ಷಣೆಯ ಉಪಾಯಗಳನ್ನೂ, ಸಮ್ಯಗ್ಜ್ಞಾನದ ಪ್ರಕಟಣೆಯನ್ನೂ ವರ್ಣಿಸಿರುವರು. ಅದು ಚರಣಾನುಯೋಗ ಶಾಸ್ತ್ರವು. ಇದರಲ್ಲಿಯೂ ನಿಶ್ಚಯ ಚಾರಿತ್ರರೂಪಸ್ವಾನುಭವವನ್ನೂ ಅದಕ್ಕೆ ನಿಮಿತ್ತ ಸಾಧನರೂಪ ಶ್ರಾವಕರ ಮತ್ತು ಯತಿಗಳ ವ್ಯವಹಾರ ಚಾರಿತ್ರದ ಪ್ರತಿಪಾದನೆಯ ಉಪಾಯವನ್ನೂ ಮಾಡಿರುತ್ತಾರೆ. ಯಾವಾಗ ತನ್ನಾತ್ಮನಿಗೆ ಪರಮಾತ್ಮರೂಪ ಅನುಭವವುಂಟಾದೊಡನೆ ಸಮ್ಯಕ್ಚಾರಿತ್ರವುದ್ಭವಿಸುವುದು.

**ಜೀವಾಜೀವಸುತತ್ತ್ವೇ ಪುಣ್ಯಾಪುಣ್ಯೇಚ ಬಂಧಮೋಕ್ಷೌ ಚ ।**
**ದ್ರವ್ಯಾನುಯೋಗದೀಪಃ ಶ್ರುತವಿದ್ಯಾಲೋಕಮಾತನುತೇ ॥೪೬॥**

**ಭಾವಾರ್ಥ :** ಯಾವ ಗ್ರಂಥವು ದೀಪೋಪಾದಿಯಲ್ಲಿ ಜೀವ ಅಜೀವ ತತ್ವಗಳನ್ನೂ, ಪುಣ್ಯಪಾಪಗಳನ್ನೂ, ಬಂಧ ಮತ್ತು ಮೋಕ್ಷತತ್ವಗಳನ್ನೂ ಹಾಗೆಯೇ ಭಾವ ಶ್ರುತಜ್ಞಾನವನ್ನೂ ಪ್ರಕಟಪಡಿಸುವುದೋ ಅದಕ್ಕೆ ದ್ರವ್ಯಾನುಯೋಗಶಾಸ್ತ್ರವೆಂದು ಹೆಸರು. ಇದರಲ್ಲಿ ವ್ಯವಹಾರನಯದಿಂದ ಸಪ್ತ ತತ್ವಗಳ ಸ್ವರೂಪವನ್ನು ವರ್ಣಿಸಿರುತ್ತಾರೆ. ನಿಶ್ಚಯ ನಯದಿಂದ "ಈ ಆತ್ಮನೇ ಪರಮಾತ್ಮನಾಗಿರುತ್ತಾನೆ. ಇದನ್ನು ಗ್ರಹಣೆಮಾಡಲು ಯೋಗ್ಯವಾಗಿರುತ್ತದೆ" ಎಂಬ ವಿಷಯುವನ್ನು ಪ್ರಕಾಶಪಡಿಸಿರುತ್ತದೆ. ಇದರಲ್ಲಿ ಶುದ್ಧಾತ್ಮ ಜ್ಞಾನವೇ ಮೋಕ್ಷೋಪಾಯವೆಂದು ಸ್ಪಷ್ಟೀಕರಿಸಿರುತ್ತಾರೆ.

ಯಾವ ಆತ್ಮನಿಗೆ ಮೋಕ್ಷಮಾರ್ಗದತ್ತ ಗಮನ ಮಾಡಬೇಕೆಂಬೇಚ್ಛೆಯಿರುವುದೋ, ಅವನು ನಾಲ್ಕು ಅನುಯೋಗ ಗ್ರಂಥಗಳ ಮರ್ಮವನ್ನು ತಿಳಿಯಲು ಪ್ರಯತ್ನಿಸಬೇಕು. ಶುದ್ಧ ಪರಮಾತ್ಮನಂತೆ ಅನುಭವಮಾಡಿಕೊಳ್ಳಬೇಕು.

ಸಮಯಸಾರದಲ್ಲಿ ಹೇಳಿದ್ದಾರೆ :

**ಜೋ ಹಿ ಸುದೇಣಭಿಗಚ್ಛದಿ ಅಪ್ಪಾಣಮಿಣಂ ತು ಕೇವಲಂ ಸುದ್ಧಂ।**
**ತಂ ಸುದಕೇವಲೀಮಿಸಿಣೋ ಭಣಂತಿ ಲೋಗಪ್ಪದೀವಯರಾ ॥೯॥**

**ಭಾವಾರ್ಥ :** ಯಾರು ದ್ವಾದಶಾಂಗ ವಾಣಿಯ ಮೂಲಕ ತನ್ನಾತ್ಮನನ್ನು "ಪರವಸ್ತುಗಳ ಸಂಯೋಗವಿಲ್ಲದ ಪರಮ ವಸ್ತು" ಎಂಬ ಅನುಭವವನ್ನು ಮಾಡಿಕೊಳ್ಳುತ್ತಾನೆಯೋ ಅವನು ನಿಶ್ಚಯನಯದಿಂದ ಶ್ರುತಕೇವಲಿಯೆಂದು ಹೇಳಿಸಿಕೊಂಡಿದ್ದಾನೆ. ಛಲ ಕಪಟಭಾವನೆಯಿಲ್ಲದೆ, ಯಥಾರ್ಥವಾಗಿ ತನ್ನಾತ್ಮನಿಗೆ ಶುದ್ಧಾತ್ಮಜ್ಞಾನದಿಂದಲೇ ಪರಮಾತ್ಮ ದೇವತ್ವ ಪ್ರಾಪ್ತವಾಗುವುದೆಂಬುದೇ ಸಕಲ ಶಾಸ್ತ್ರಗಳ ಸಾರವಾಗಿದೆ.



## ನಾನೇ ಪರಮಾತ್ಮನು

**ಜೋ ಪರಮಪ್ಪಾ ಸೋ ಜಿ ಹಉಂ ಜೋ ಹಉಂ ಸೋ ಪರಮಪ್ಪು।**
**ಇಉ ಜಾಣೇವಿಣು ಜೋಇಆ ಅಣ್ಣು ಮ ಕರಹು ವಿಯಪ್ಪು ॥೨೨॥**

**ಅನ್ವಯಾರ್ಥ :** ಜೋಇಆ-ಎಲೈ ಯೋಗೀಶ್ವರನೇ! ಜೋ ಪರಮಪ್ಪಾ ಸೋ ಜಿ ಹಉಂ-ಯಾವ ಪರಮಾತ್ಮನಿರುವನೋ ಅವನೇ ನಾನು. ಜೋ ಹಉಂ ಸೋ ಪರಮಪ್ಪು-ಯಾವ ನಾನಿರುವೆನೋ ಅವನೇ ಪರಮಾತ್ಮನು. ಇಉಜಾಣೇ ವಿಣು-ಎಂದು ತಿಳಿದು, ಅಣ್ಣು ವಿಯಪ್ಪು ಮ ಕರಹು-ಅನ್ಯ ಯಾವ ವಿಕಲ್ಪಗಳನ್ನು ಮಾಡಬೇಡ.

**ಭಾವಾರ್ಥ :** ವ್ಯವಹಾರ ಕಲ್ಪನೆಗಳನ್ನು ತ್ಯಜಿಸಿ, ಕೇವಲ ಶುದ್ಧ ನಿಶ್ಚಯನಯದಿಂದ ತನ್ನಾತ್ಮನನ್ನು ತಿಳಿಯುವಾಗ, ಸ್ವತಃ ಪರಮಾತ್ಮನೇ ಜ್ಞಾನಕ್ಕೆ ಗೋಚರನಾಗುವನು. ತನ್ನ ಶರೀರವೆಂಬ ಮಂದಿರದಲ್ಲಿ ಪರಮಾತ್ಮನ ಸಾಕ್ಷಾತ್ ದರ್ಶನವಾಗುವುದು. ಶಾಸ್ತ್ರಜ್ಞಾನವು ಸಂಕೇತ ಮಾತ್ರವಾಗಿದೆ. ಅದರಲ್ಲಿ ತಲ್ಲೀನವಾದರೆ ಪರಮಾತ್ಮನ ದರ್ಶನವು ಆಗಲಾರದು.

ಈ ಆತ್ಮನನ್ನು ಶಬ್ದಾದಿಗಳ ಮೂಲಕ, ಮನಸ್ಸಿನ ಮೂಲಕ ವಿಚಾರಿಸಿದರೂ ಅರಿಯಲು ಸಾಧ್ಯವಾಗಲಾರದು. ಯಾಕೆಂದರೆ ಶಬ್ದವು ಕ್ರಮಕ್ರಮವಾಗಿಯೇ ಒಂದೊಂದೆ ಗುಣ ಮತ್ತು ಪರ್ಯಾಯಗಳನ್ನು ವಿಚಾರಿಸಬಹುದು. ಆತನು ಅನಂತಗುಣ ಮತ್ತು ಪರ್ಯಾಯಗಳ ಒಂದು ಅಖಂಡವಾದ ದ್ರವ್ಯವಾಗಿರುತ್ತದೆ. ಇದರ ನಿಜವಾದ ಬೋಧವಾಗಬೇಕಾದರೆ ಶಾಸ್ತ್ರೀಯ ಚರ್ಚೆ

ಯನ್ನೂ, ಸಕಲ ಮಾರ್ಗಣಾಸ್ಥಾನ ಗುಣಸ್ಥಾನಗಳ ವಿಚಾರವನ್ನೂ ನಿಲ್ಲಿಸಿ, ಎಲ್ಲ ಕರ್ಮ ಬಂಧ ಮತ್ತು ಮೋಕ್ಷಗಳ ಉಪಾಯಗಳ ಪ್ರಪಂಚವನ್ನು ತ್ಯಜಿಸಿ, ಸಕಲ ಇಚ್ಛೆಗಳನ್ನು ದೂರೀಕರಿಸಿ, ಪಂಚೇಂದ್ರಿಯ ಸಂಬಂಧ ವಿಷಯ ಗಳಿಂದ ದಾಟಿ, ಮಾನಸಿಕ ವಿಚಾರವನ್ನು ತಡೆದು, ಅಸಂಗನಾಗಿ ತನ್ನನ್ನು ತನ್ನಾತ್ಮನಿಂದಲೇ ಗ್ರಹಿಸಬೇಕು. ಆ ತತ್ವವು ನಿರ್ವಿಕಲ್ಪಕವೂ, ಅಭೇದವೂ ಆಗಿರುತ್ತದೆ.

ಆದ್ದರಿಂದ ನಿರ್ವಿಕಲ್ಪನಾಗುವುದರಿಂದಲೇ ಆತ್ಮನು ತನ್ನ ಕೈಯಲ್ಲಿ ಬಂದಂತಾಗುವುದು. ಎಷ್ಟರವರೆಗೆ ಕಿಂಚಿತ್ (ಅಲ್ಪ) ಮಿಥ್ಯಾ ನಿದಾನರೂಪ ಶಲ್ಯಗಳು, ಇಚ್ಛೆಗಳು, ಮಿಥ್ಯಾವಾಸನೆಗಳು ಇರುವುವೋ ಅಷ್ಟರವರೆಗೆ ಆತ್ಮನ ದರ್ಶನವಾಗಲಾರದು. ಯಾಕೆಂದರೆ, ಹನ್ನೊಂದು ಅಂಗಗಳ, ಒಂಭತ್ತು ಪೂರ್ವಧಾರಿಗಳಾದ ದ್ರವ್ಯಲಿಂಗಿ ಮುನಿಗಳು ಘೋರ ತಪಸ್ಸನ್ನು ತಪಿಸು ತ್ತಿದ್ದರೂ ಕೂಡಾ ಅಜ್ಞಾನಿ ಮಿಥ್ಯಾದೃಷ್ಟಿಯಾಗಿಯೇ ಇರುತ್ತಾರೆ. ಅವರ ಅಂತರಂಗದಲ್ಲಿ ಯಾವುದಾದರೊಂದು ಮಿಥ್ಯಾತ್ವರೂಪ ಶಲ್ಯವೂ ಮತ್ತು ನಿದಾನ ಶಲ್ಯವೂ ಸೂಕ್ಷ್ಮವಾಗಿಯೇ ಇರುವುದೆಂದು ಕೇವಲಿಗಳಿಗೆ ಮಾತ್ರ ತಿಳಿಯಲು ಸಾಧ್ಯವಿದೆ. ಶಾಸ್ತ್ರಜ್ಞಾನವು ಆತ್ಮ ಸ್ವರೂಪವನ್ನು ತಿಳಿಯು ವುದಕ್ಕೆ ಅತ್ಯಾವಶ್ಯಕವಾಗಿರುತ್ತದೆ. ತಿಳಿಯುವುದರ ಜೊತೆಯು ಹಿಂದೆ ವ್ಯವ ಹಾರ ನಯದ ವರ್ಣನೆಯನ್ನು ಬಿಟ್ಟು ಶುದ್ಧ ನಿಶ್ಚಯ ನಯದ ಮೂಲಕ ತನ್ನಾತ್ಮನ ಮನನಮಾಡುವುದೇ ಶ್ರೇಷ್ಠವಾದ ಅವಲಂಬನೆಯಾಗಿದೆ. ಮನನ ಮಾಡುತ್ತಾ ಮಾಡುತ್ತಾ ಮನನವು ನಿಂತು ಉಪಯೋಗವು ಸ್ಥಿರವಾಗು ವುದು. ಆಗ ಸ್ವಾನುಭವವುಂಟಾಗುವುದು. ಆತ್ಮನ ಪರಮಾತ್ಮ ಸ್ವರೂಪ ದರ್ಶನವಾಗುವುದು. ಪರಮಾನಂದಮಯ ರುಚಿಯು ಗೋಚರವಾಗು ವುದು. ನಾನೇ ಪರಮಾತ್ಮ ಸ್ವರೂಪನೆಂದು ಸಿದ್ಧವಾಗುವುದು. ಪರೋಪ ದೇಶದಿಂದುಟಾದ ಫಲದ ರುಚಿಯನ್ನು ತಿಳಿಯಲು ಸಾಧ್ಯವಾಗಲಾರದು. ಅನುಭವಿಸಲಾರೆವು. ನಮ್ಮ ಮೊದಲನೆಯ ಕರ್ತವ್ಯವು ಆ ಫಲದ ಗುಣ ದೋಷಗಳ ವಿಚಾರವನ್ನು ಆತ್ಮರುಚಿಯುನ್ನರಿತ ಜ್ಞಾನಿಗಳಿಂದಲೇ ಕೇಳಿ ತಿಳಿಯಬೇಕು. ಆಗ ಅದು (ಫಲ) ಗುಣಧಾರಿಯಾಗುವುದು. ಯದಿ ಆ ಫಲ ವನ್ನು ಭೋಗಿಸದೆ (ತಿನ್ನದೆ), ಅದರ ರುಚಿಯನ್ನು ಹೇಗೆ ತಾನೇ ತಿಳಿಯಲು

ಸಾಧ್ಯವಾದೀತು ? (ಸಾಧ್ಯವಾಗಲಾರದೆಂದು ಅಭಿಪ್ರಾಯವು.) ಆ ಫಲದ ಗುಣಗಳನ್ನು ಸಹಸ್ರಾರು ಜನರಿಂದ ಕೇಳಿದರೂ, ಅನೇಕ ಶಾಸ್ತ್ರಗಳಿಂದ ತಿಳಿದಿದ್ದರೂ ಕೂಡಾ, ನಾವು ಅದರ ನಿಜವಾದ ಸ್ವಾದವನ್ನರಿಯಲು ಸಾಧ್ಯವಾಗಲಾರದು. ಆ ಫಲದ ಸ್ವಾದವು ಹೇಗೆ ಅನುಭವಗಮ್ಯವೋ, ಅದರಂತೆಯೇ ಪರಮಾತ್ಮನು ಅನುಭವಗಮ್ಯನೇ.

ಸಮಯಸಾರ ಕಲಶದಲ್ಲಿ ಹೇಳಿರುತ್ತಾರೆ:

**ಭೂತಂ ಭಾಂತಮಭೂತಮೇವ ರಭಸಾ ನಿರ್ಭಿದ್ಯ ಬಂಧಂ ಸುಧೀ–**
**ರ್ಯದ್ಯಂತಃ ಕಿಲ ಕೋಽಪ್ಯಹೋ ಕಲಯತಿ ವ್ಯಾಹತ್ಯ ಮೋಹಂ**
**ಹಠಾತ್ ।**
**ಆತ್ಮಾತ್ಮಾನುಭವೈಕಗಮ್ಯಮಹಿಮಾ ವ್ಯಕ್ತೋಽಯಮಾಸ್ತೇ ಧ್ರುವಂ,**
**ನಿತ್ಯಂ ಕರ್ಮಕಲಂಕಪಂಕವಿಕಲೋ ದೇವಃ ಸ್ವಯಂ**
**ಶಾಶ್ವತಃ ॥೧೨–೧॥**

**ಭಾವಾರ್ಥ :** ಯಾವನಾದರೊಬ್ಬ ಬುದ್ಧಿಶಾಲಿಯಾದ ವಿವೇಕಿಯು ಭೂತ, ಭವಿಷ್ಯತ್, ವರ್ತಮಾನ ಕಾಲಗಳ ಕರ್ಮಬಂಧವನ್ನು ತನ್ನಿಂದ ದೂರೀಕರಿಸಿ, ಮೋಹರಾಜನನ್ನು ಬಲತ್ಕಾರದಿಂದಲೇ ಹೊಡೆದೋಡಿಸಿ, ತನ್ನಂತರಂಗದಲ್ಲಿ ತನ್ನನ್ನು ನೋಡುತ್ತಾನೆಯೋ. ಅವನಿಗೇನೆ ಸಾಕ್ಷಾತ್ ಅನುಭವವುಂಟಾಗುವುದು. ಹೇಗೆಂದರೆ ನಾನೇ ಸಕಲ ಕರ್ಮಕಲಂಕವೆಂಬ ಕೆಸರಿನಿಂದ ರಹಿತನೂ, ಅವಿನಾಶಿಯೂ, ಏವಂ ಪರಮಾತ್ಮನಾದ ದೇವನೂ ಆಗಿರುತ್ತೇನೆ. ಆದರ ಮಹತ್ವವು ಅನುಭವಿಗೇನೆ ವಿದಿತವಾಗುವುದು.

ತತ್ವಾನುಶಾಸನದಲ್ಲಿ ಹೇಳಿರುತ್ತಾರೆ :

**ಕರ್ಮಜೇಭ್ಯಃ ಸಮಸ್ತೇಭ್ಯೋ ಭಾವೇಭ್ಯೋ ಭಿನ್ನಮನ್ವಹಂ।**
**ಜ್ಞಸ್ವಭಾವಮುದಾಸೀನಂ ಪಶ್ಯೇದಾತ್ಮಾನಮಾತ್ಮನಾ ॥೧೬೪॥**

**ಭಾವಾರ್ಥ :** ನಾನು ಸದಾಕಾಲದಲ್ಲಿ ಕರ್ಮನಿಮಿತ್ತದಿಂದ ಅಥವಾ ಸಮತಾಭಾವನೆಗಳಿಂದ ಭಿನ್ನನಾಗಿರುವನೆಂದು ತಿಳಿದು ತನ್ನಿಂದಲೇ ತನ್ನನ್ನು ನೋಡಬೇಕು. ಇದೇ ಪರಮ ಉದಾಸೀನನಾದೊಂದು ಜ್ಞಾಯಕಸ್ವಭಾವವಾಗಿರುತ್ತದೆ.

# ಅಸಂಖ್ಯಾತಪ್ರದೇಶಿ ಆತ್ಮನು ಲೋಕಪ್ರಮಾಣ ನಾಗಿದ್ದಾನೆ

**ಸುದ್ಧಪಏಸಹ ಪೂರಿಯಉ ಲೋಯಾಯಾಸಪಮಾಣು ।**
**ಸೋ ಅಪ್ಪಾ ಅಣುದಿಣ ಮುಣಹು ಪಾವಹು ಲಹು**
**ಣಿವ್ವಾಣು ॥ ೨೩ ॥**

**ಅನ್ವಯಾರ್ಥ :** ಲೋಯಾಯಾಸಪಮಾಣು ಸುದ್ಧಪಏಸಹ ಪೂರಿಯಉ–ಲೋಕಾಕಾಶ ಪ್ರಮಾಣ ಅಸಂಖ್ಯಾತವೂ ಶುದ್ಧವೂ ಆದ ಆತ್ಮ ಪ್ರದೇಶಗಳಿಂದ ಪರಿಪೂರ್ಣನಾದವನೇ, ಸೋ ಅಪ್ಪಾ–ಈ ತನ್ನ ಆತ್ಮನು, ಅಣುದಿಣ ಮುಣಹು–ಎಂದು ರಾತ್ರಿ ಹಗಲು (ಸದಾ) ಮನನಮಾಡು. ಣಿವ್ವಾಣು ಲಹು ಪಾವಹು–ಪರಿಶುದ್ಧ ನಿರ್ವಾಣವನ್ನೇ ಪಡೆಯುವಿ.

**ಭಾವಾರ್ಥ :** ಇದೇ ಮೊದಲು ಹೇಳಿಕೊಂಡು ಬಂದಿರುವುದೇನೆಂದರೆ ಆತ್ಮದರ್ಶನವು ನಿರ್ವಾಣ ಮಾರ್ಗವೆಂದು. ಆತನ ಆಕಾರವು ಲೋಕಾಕಾಶ ಪ್ರಮಾಣವೂ, ಅಸಂಖ್ಯಾತ ಪ್ರದೇಶವೂ ಆಗಿರುತ್ತದೆ. ಪ್ರತಿಯೊಂದು ಅಸ್ತಿತ್ವವನ್ನಿಟ್ಟುಕೊಂಡಿರುವ ವಸ್ತುವು ಒಂದಿಲ್ಲೊಂದು ಆಕಾರವನ್ನು ಇಟ್ಟುಕೊಂಡಿರುತ್ತದೆ. ಆಕಾರವಿಲ್ಲದ ವಸ್ತುವು ವಸ್ತುವಲ್ಲವು, ಕಿಂತು ಅವಸ್ತುವೆ. ಪ್ರತಿಯೊಂದು ದ್ರವ್ಯದಲ್ಲಿ ಸಾಮಾನ್ಯವಾದ ಆರು ಗುಣಗಳು ಇದ್ದೇ ಇರುತ್ತವೆ.

೧. **ಧ್ರೌವ್ಯತ್ವ :** ಪ್ರತಿಯೊಂದು ದ್ರವ್ಯವು ಉತ್ಪಾದ, ವ್ಯಯ, ಧ್ರೌವ್ಯ ರೂಪ ಅಸ್ತಿತ್ವದಿಂದ್ಯುಕ್ತವಾಗಿರುತ್ತದೆ. ಪರ್ಯಾಯಗಳ ಉತ್ಪತ್ತಿ, ವಿನಾಶಗಳ ಅಪೇಕ್ಷೆಯಿಂದ ಉತ್ಪಾದ ವ್ಯಯಗಳಿರುವುದರ ಅಪೇಕ್ಷೆಯಿಂದ ಧ್ರೌವ್ಯವಾಗಿರುತ್ತದೆ.

೨. **ವಸ್ತುತ್ವ :** ಸಾಮಾನ್ಯ ವಿಶೇಷ ಸ್ವಭಾವಗಳಿಂದ ಯುಕ್ತವಾದ ಪ್ರತಿಯೊಂದು ವಸ್ತುವು ಕಾರ್ಯಕಾರಿಯಾಗಿದೆ. ನಿಷ್ಪ್ರಯೋಜನವಾಗಿಲ್ಲವು,

೩. **ದ್ರವ್ಯತ್ವ :** ಸ್ವಭಾವ ಅಥವಾ ವಿಭಾವ ಪರ್ಯಾಯಗಳಲ್ಲಿ ಪ್ರತಿಯೊಂದು ದ್ರವ್ಯವು ಪರಿಣಮನ ಶೀಲವಾಗಿದ್ದರೂ ಕೂಡಾ ಅಖಂಡವೇ ಆಗಿರುತ್ತದೆ.

೪. **ಪ್ರಮೇಯತ್ವ :** ವಸ್ತುವು ಸರ್ವರಿಂದಲೂ ತಿಳಿಯುವುದಕ್ಕೆ ಯೋಗ್ಯವಾಗಿರುತ್ತದೆ. ಯದಿ ತಿಳಿಯಲು ಸಾಧ್ಯವಿಲ್ಲದಿದ್ದರೆ ಅದರ ಸತ್ತೆಯನ್ನು ಯಾರು ಹೇಳುವರು ?

೫. **ಅಗುರುಲಘುತ್ವ :** ವಸ್ತುವು ತನ್ನಲ್ಲಿರುವ ಗುಣಗಳನ್ನು ಕಡಿಮೆ ಮಾಡಿಕೊಳ್ಳದಿರುವಂತೆ, ತನ್ನ ಮರ್ಯಾದೆಯಿಂದ ಹೀನಾಧಿಕವಾಗುವುದಿಲ್ಲವು.

೬. **ಪ್ರದೇಶತ್ವ :** ಪ್ರತಿಯೊಂದು ದ್ರವ್ಯವು ಒಂದಿಲ್ಲೊಂದು ಆಕಾರವನ್ನು ಇಟ್ಟುಕೊಂಡಿರುತ್ತದೆ. ಪ್ರದೇಶಗಳನ್ನು ಇಟ್ಟುಕೊಂಡು ಕ್ಷೇತ್ರವನ್ನು ಆಕ್ರಮಿಸಿರುತ್ತದೆ. ಎಷ್ಟು ಆಕಾಶವನ್ನು ಒಂದು ಅವಿಭಾಗೀ ಪುದ್ಗಲ ಪರಮಾಣುವು ತಡೆಮಾಡುತ್ತದೆಯೋ, ಅಷ್ಟು ಸೂಕ್ಷ್ಮ ಆಕಾಶಕ್ಕೆ ಪ್ರದೇಶವೆಂದು ಹೇಳುತ್ತಾರೆ. ಹೀಗೆ ಲೋಕ ವ್ಯಾಪಿಗಳಾದ ಆರು ದ್ರವ್ಯಗಳ ಅಳತೆಮಾಡಿದರೆ, ಒಂದು ಜೀವ ದ್ರವ್ಯ, ಧರ್ಮಾಸ್ತಿಕಾಯ, ಅಧರ್ಮಾಸ್ತಿಕಾಯ, ಲೋಕಾಕಾಶ – ಈ ನಾಲ್ಕೂ ಅಸಂಖ್ಯಾತ ಪ್ರದೇಶಗಳುಳ್ಳವುಗಳಾಗಿವೆ. ಆಕಾಶ ದ್ರವ್ಯವು ಅನಂತ ಪ್ರದೇಶಧಾರಿಯೂ ಮತ್ತು ಕಾಲಾಣುವು ಒಂದು ಪ್ರದೇಶಧಾರಿಯೂ ಆಗಿರುತ್ತದೆ.

ಲೋಕಾಕಾಶವು ಅನಂತ ಆಕಾಶದ ಮಧ್ಯದಲ್ಲಿ ಇರುತ್ತದೆ. ಇದರಲ್ಲಿ ಆರು ದ್ರವ್ಯಗಳು ತುಂಬಿರುತ್ತವೆ. ಧರ್ಮಾಧರ್ಮ ದ್ರವ್ಯಗಳು ಒಂದೊಂದೂ ಲೋಕವ್ಯಾಪ್ತಿಯಾಗಿರುತ್ತವೆ. ಕಾಲಾಣುಗಳು ಅಸಂಖ್ಯಾತಗಳಿದ್ದರೂ ಬೇರೆ ಬೇರೆಯಾಗಿಯೇ ಲೋಕದಲ್ಲಿ ಪೂರ್ಣವಾಗಿವೆ. ( ತುಂಬಿರುತ್ತವೆ. ) ಪುದ್ಗಲ ಪರಮಾಣುವು ಮತ್ತು ಸ್ಕಂಧವು ಸರ್ವತ್ರ ಇವೆ. ಸೂಕ್ಷ್ಮ ಶರೀರಧಾರೀ ಏಕೇಂದ್ರಿಯ ಜೀವವು ಎಲ್ಲ ಕಡೆಗಳಲ್ಲಿರುತ್ತದೆ. ಬಾದರವೂ ಮಾತ್ರ ಕೆಲ ಕೆಲವಡೆಗಳಲ್ಲಿರುತ್ತವೆ. ಈ ಆರು ದ್ರವ್ಯಗಳು ಇಲ್ಲದ ಸ್ಥಾನವೇ ಇಲ್ಲವು. ಜೀವ ದ್ರವ್ಯವು ಅಖಂಡವಸ್ತುವಾಗಿದ್ದರೂ ಕೂಡಾ ಅಳತೆಯಲ್ಲಿ ಲೋಕಾಕಾಶ ಪ್ರಮಾಣ ಅಸಂಖ್ಯಾತ ಪ್ರದೇಶಿಯಾಗಿರುತ್ತದೆ. ಜೈನ ಸಿದ್ಧಾಂತ ಶಾಸ್ತ್ರದಲ್ಲಿ ಅಲ್ಪ ಅಥವಾ ಬಹುತ್ವದ ಜ್ಞಾನಮಾಡಿಕೊಳ್ಳಲು 21 ಭೇದಗಳನ್ನು ಹೇಳಿದ್ದಾರೆ. ಸಂಖ್ಯಾತವು ಜಘನ್ಯ, ಮಧ್ಯಮ, ಉತ್ಕೃಷ್ಟವೆಂದು 3 ವಿಧವು. ಅಸಂಖ್ಯಾತವು ಪರೀತಾಸಂಖ್ಯಾತ, ಯುಕ್ತಾಸಂಖ್ಯಾತ, ಅಸಂಖ್ಯಾತಾಸಂಖ್ಯಾತ

ವೆಂದು ಮೂರು ವಿಧವಾಗಿರುತ್ತದೆ. ಪ್ರತಿಯೊಂದು ಜಘನ್ಯ, ಮಧ್ಯಮ, ಉತ್ಕೃಷ್ಟವೆಂದು 3 ಪ್ರಕಾರವಾಗಿದೆ. ಹೀಗೆ $3 \times 3 = 9$ ಪ್ರಕಾರವಾಗಿದೆ. ಅನಂತವು ಪರೀತಾನಂತ, ಯುಕ್ತಾನಂತ, ಅನಂತಾನಂತವೆಂದು 3 ವಿಧವಾಗಿ ಇರುತ್ತದೆ. ಪ್ರತಿಯೊಂದು ಜಘನ್ಯ, ಮಧ್ಯಮ, ಉತ್ಕೃಷ್ಟವೆಂದು 3 ಪ್ರಕಾರ ವಾಗಿದೆ. ಹೀಗೆ $3 \times 3 = 9$ ಪ್ರಕಾರವಾಗಿದೆ. ಮಾನವನ ಬುದ್ಧಿಯು ಅಲ್ಪವಿರುವುದರಿಂದಲೇ ಹೀನಾಧಿಕದ ಅನುಮಾನವಮಾಡಿಕೊಳ್ಳಲು $3+9+9 = 21$ ಭೇದಗಳ ಗಣನೆಯನ್ನು ಮಾಡಿರುತ್ತಾರೆ.

ಪ್ರತಿಯೊಂದು ಆತ್ಮವು ಅಖಂಡವೂ, ಅಸಂಖ್ಯಾತ ಪ್ರದೇಶಿಯೂ ಆಗಿ ರುತ್ತದೆ. ಪರಮಶುದ್ಧವೂ ಆಗಿರುತ್ತದೆ. ಸ್ವಭಾವಾಪೇಕ್ಷೆಯಿಂದ ಸ್ಫಟಿಕ ಮಣಿಯಂತೆ ನಿರ್ಮಲವೂ, ಕರ್ಮ, ನೋಕರ್ಮ ಮತ್ತು ರಾಗಾದಿ ಭಾವ ಕರ್ಮಮಲದಿಂದ ರಹಿತವೂ, ರತ್ನದಂತೆ ಪರಮ ಪ್ರಕಾಶಮಯವೂ, ಜ್ಞಾನ ಮಯವೂ, ನೀರಿನಂತೆ ಸರ್ವರಿಂದ ತಿಳಿಯುವುದಕ್ಕೆ ಯೋಗ್ಯವೂ, ಆಕಾಶ ದಂತೆ ನಿರ್ಲೇಪವೂ ಆಗಿರುತ್ತದೆಂದು ಧ್ಯಾನಿಸುತ್ತಾ ತನ್ನ ಶರೀರದಲ್ಲಿಯೇ ನೋಡಬೇಕು. ಒಂದು ವೇಳೆ ಈ ಆತ್ಮನು ಶರೀರದಲ್ಲಿ ವ್ಯಾಪ್ತನಾಗಿದ್ದರೂ, ಶರೀರ ಪ್ರಮಾಣ ಅಧಿಕಾರಿಯಾಗಿದ್ದರೂ ಪ್ರದೇಶಗಳಲ್ಲಿ ಅಸಂಖ್ಯಾತನೇ ಆಗಿರುತ್ತಾನೆ.

ಈ ಆತ್ಮನಲ್ಲಿ ಸಂಕೋಚ ವಿಸ್ತಾರ ಶಕ್ತಿಯಿರುತ್ತಿದ್ದರೂ ನಾಮಕರ್ಮದ ಉದಯದಿಂದ ಶರೀರ ಪ್ರಮಾಣ ಆಕಾರ ಪ್ರಾಪ್ತನಾಗಿರುತ್ತಾನೆ. ಉದಾ: ದೀಪದ ಪ್ರಕಾಶವು ಚಿಕ್ಕ ಅಥವಾ ದೊಡ್ಡ ಪಾತ್ರೆಯಲ್ಲಿಟ್ಟರೂ ಪಾತ್ರೆಯ ಆಕಾರ ರೂಪವಾಗಿಯೇ ಆಗುತ್ತದೆ. ಹಾಗೆಯೇ ಸಾಧಕನು ತನ್ನಲ್ಲಿ ಆತ್ಮನ ಆಕಾರವನ್ನು ಶುದ್ಧವಾದೇ ತಿಳಿಯಬೇಕು, ನೋಡಬೇಕು. ತನ್ನ ಮೂರ್ತಿ ಯಂತೆ ಆತ್ಮನ ಮೂರ್ತಿಯನ್ನು ತದಾಕಾರವಾಗಿಯೇ ನೋಡಬೇಕು. ಯಾವ ಆಸನದಲ್ಲಿ ಕುಳಿತುಕೊಂಡೋ ಅಥವಾ ನಿಂತುಕೊಂಡೋ ಧ್ಯಾನಗೆಯ್ಯಲಿ, ಆ ಆಸನಗಳ ರೂಪವಾಗಿಯೇ ನೋಡಬೇಕು. ಸಿದ್ಧಪರಮಾತ್ಮನ ಆಕಾರವೂ ಕೂಡಾ ಅಂತಿಮ ಶರೀರ ಪ್ರಮಾಣ ಪದ್ಮಾಸನಾದಿ ಆಕಾರ ರೂಪವಾಗಿ ಇರುತ್ತದೆ. ಅಮೂರ್ತಿ ದ್ರವ್ಯಗಳ ಪ್ರದೇಶವು ಅಮೂರ್ತಿಕವೂ ಮತ್ತು

ಮೂರ್ತಿಕ ಪುದ್ಗಲ ದ್ರವ್ಯಗಳ ಪ್ರದೇಶವು ಮೂರ್ತಿಕವೂ ಆಗಿರುತ್ತದೆ. ಜೀವನು ವರ್ಣ, ಗಂಧ, ರಸ, ಸ್ಪರ್ಶಗಳಿಂದ ರಹಿತವಾದ ಮೂರ್ತಿಕವಾಗಿರುತ್ತದೆ. ಅವರ ಸಕಲ ಪ್ರದೇಶಗಳೂ ಕೂಡಾ ಅಮೂರ್ತಿಕಗಳೇ ಆಗಿರುತ್ತವೆ.

ಗೋಮಟಸಾರ ಜೀವಕಾಂಡದಲ್ಲಿ ಹೇಳಿದೆ:

**ಆಗಾಸಂ ವಜ್ಜಿತ್ತಾ ಸವ್ವೇ ಲೋಗಮ್ಮಿ ಚೇವ ಣತ್ಥಿ ಬಹಿಂ।**
**ವಾವೀ ಧಮ್ಮಾಧಮ್ಮಾ ಅವಿಟ್ಠಿದಾ ಅಚಲಿದಾ ಣಿಚ್ಚಾ ॥೫೮೨॥**

**ಲೋಗಸ್ಸ ಅಸಂಖೇಜ್ಜದಿಭಾಗಪ್ಪಹುದಿಂ ತು ಸವ್ವಲೋಗೋತ್ತಿ।**
**ಅಪ್ಪಪದೇಸವಿಸಪ್ಪಣಸಂಹಾರೆ ವಾವಡೋ ಜೀವೋ ॥೫೮೩॥**

**ಪೋಗ್ಗಲದವ್ವಾಣಂ ಪುಣ ಏಯಪದೇಸಾದಿ ಹೋಂತಿ ಭಜಣಿಜ್ಜಾ।**
**ಏಕ್ಕೇಕ್ಕೋ ದು ಪದೇಸೋ ಕಾಲಾಣೂಣಂ ಧುವೋ ಹೋದಿ॥೫೮೪॥**

**ಸಂಖೇಜ್ಜಾ ಸಂಖೇಜ್ಜಾಣಂತಾ ವಾ ಹೋಂತಿ ಪೋಗ್ಗಲಪದೇಸಾ।**
**ಲೋಗಾಗಾಸೇವ ಠಿದೀ ಏಗಪದೇಸೋ ಅಣುಸ್ಸ ಹವೇ ॥೫೮೫॥**

**ಲೋಗಾಗಾಸಪದೇಸಾ ಛದ್ದವ್ವೇಹಿಂ ಫುಡಾ ಸದಾ ಹೋಂತಿ।**
**ಸವ್ವಮಲೋಗಾಗಾಸಂ ಅಣ್ಣೇಹಿಂ ವಿವಜ್ಜಿಯಂ ಹೋದಿ ॥೫೮೬॥**

**ಭಾವಾರ್ಥ:** ಧರ್ಮಾಧರ್ಮ ದ್ರವ್ಯಗಳು ಸ್ಥಿರವೂ, ಚಂಚಲರಹಿತವೂ ಮತ್ತು ಲೋಕವ್ಯಾಪಿಯೂ ಆಗಿರುತ್ತವೆ. ಲೋಕಾಕಾಶದಿಂದಾಚೆಗೆ ಇವು ಇಲ್ಲವು. ಜೀವನು ತನ್ನ ಪ್ರದೇಶಗಳ ಸಂಕೋಚ ಮತ್ತು ವಿಸ್ತಾರಗಳ ಕಾರಣ ಲೋಕದ ಅಸಂಖ್ಯಾತಭಾಗ ಮೊದಲುಗೊಂಡು ಸಕಲ ಲೋಕವನ್ನು ಆವರಿಸುತ್ತಾನೆ. ಪುದ್ಗಲ ದ್ರವ್ಯವು ಒಂದು ಪ್ರದೇಶ ಮೊದಲುಗೊಂಡು ಸರ್ವತ್ರವಿರುತ್ತದೆ. ಸ್ಕಂಧಗಳ ಅಪೇಕ್ಷೆಯಿಂದ ಅದರ ಪ್ರದೇಶಗಳ ಪರಮಾಣು ಗಣನೆಯಿಂದ ಸಂಖ್ಯಾತ, ಅಸಂಖ್ಯಾತ ಹಾಗೆ ಅನಂತಗಳಾಗುತ್ತವೆ. ಕಾಲಾಣುಗಳು ಒಂದೊಂದು ಪ್ರದೇಶಗಳಲ್ಲಿದ್ದು ಧ್ರುವವೂ, ಅಸಂಖ್ಯಾತ್ಯವೂ ಆಗಿರುತ್ತವೆ. ಲೋಕಾಕಾಶ ಪ್ರದೇಶವು ಆರು ದ್ರವ್ಯಗಳಿಂದ ತುಂಬಿಹೋಗಿರುತ್ತದೆ. ಅಲೋಕಾಕಾಶದಲ್ಲಿ ಆಕಾಶವಲ್ಲದೆ ಉಳಿದ ಐದು ದ್ರವ್ಯಗಳಿರುವುದಿಲ್ಲವು. ಹೀಗೆ ನಿತ್ಯವಾದ ಲೋಕದಲ್ಲಿ ತನ್ನಾತ್ಮನನ್ನು ಶುದ್ಧಾಕಾರದಲ್ಲಿಯೇ ನೋಡಬೇಕು.

ತತ್ತ್ವಾನುಶಾಸನದಲ್ಲಿ ಹೇಳಿದೆ :

**ತಥಾ ಹಿ ಚೇತನೋಽಸಂಖ್ಯಪ್ರದೇಶೋ ಮೂರ್ತಿವರ್ಜಿತಃ ।**
**ಶುದ್ಧಾತ್ಮಾ ಸಿದ್ಧರೂಪೋಽಸ್ಮಿ ಜ್ಞಾನದರ್ಶನಲಕ್ಷಣಃ ॥ ೧೪೭ ॥**

**ಭಾವಾರ್ಥ :** ಈ ಆತ್ಮನು ಚೈತನ್ಯಮಯನೂ, ಅಸಂಖ್ಯಾತ ಪ್ರದೇಶಿಯೂ, ವರ್ಣಾದಿ ಮೂರ್ತಿ ರಹಿತನೂ, ಶುದ್ಧ ಸ್ವರೂಪಿಯೂ, ಸಿದ್ಧಾತ್ಮರಂತೆ ಜ್ಞಾನದರ್ಶನ ಲಕ್ಷಣವುಳ್ಳವನೂ ಆಗಿರುತ್ತಾನೆಂದು ತನ್ನಾತ್ಮನನ್ನು ಧ್ಯಾನಿಸಬೇಕು.



## ಆತ್ಮನು ವ್ಯವಹಾರದಿಂದ ಶರೀರಪ್ರಮಾಣನು

**ಣಿಚ್ಛಇ ಲೋಯಪಮಾಣ ಮುಣಿ ವವಹಾರಇ ಸುಸರೀರು ।**
**ಏಹಉ ಅಪ್ಪಸಹಾಉ ಮುಣಿ ಲಹು ಪಾವಹು ಭವತೀರು ॥೨೪॥**

**ಅನ್ವಯಾರ್ಥ :** ಣಿಚ್ಛಇ ಲೋಯಪಮಾಣ ವವಹಾರಇ ಸುಸರೀರು ಮುಣಿ–ಆತ್ಮನು ಲೋಕಪ್ರಮಾಣನೆಂದೂ ಮತ್ತು ವ್ಯವಹಾರ ನಯದಿಂದ ತನ್ನ ಶರೀರ ಪ್ರಮಾಣವುಳ್ಳವನೆಂದೂ ತಿಳಿ. ಏಹಉ ಅಪ್ಪಸಹಾಉ ಮುಣಿ– ಹೀಗೆ ತನ್ನಾತ್ಮನ ಸ್ವಭಾವವನ್ನು ಮನಗೈಯುತ್ತಿದ್ದರೆ, ಭವತೀರು ಲಹು ಪಾವಹು – ಈ ಜೀವನು ಸಂಸಾರ ದಡವನ್ನು ಶೀಘ್ರವೇ ಪಡೆಯುವನು. ಅರ್ಥಾತ್ ಅತಿ ಬೇಗನೆ ಸಂಸಾರಸಾಗರದಿಂದ ಪಾರಾಗುವನೆಂದು ಭಾವವು.

**ಭಾವಾರ್ಥ :** ಈ ಆತ್ಮದೇವನು ಪ್ರತಿಯೊಂದು ಸಂಸಾರಿ ಜೀವದ ಶರೀರದಲ್ಲಿ ವ್ಯಾಪಿಸಿಕೊಂಡು ಸಂಕೋಚ ವಿಸ್ತಾರ ರೂಪದಿಂದ ಶರೀರ ಪ್ರಮಾಣನಾಗುತ್ತಾನೆ. ಸಂಕೋಚ ವಿಸ್ತಾರ ಶಕ್ತಿಯು ನಾಮಕರ್ಮದ ಉದಯದಿಂದ ಕಾರ್ಯಮಾಡುತ್ತಿರುತ್ತದೆ. ಒಬ್ಬ ಚಿಕ್ಕ ಬಾಲಕನು ತನ್ನ ಜನನ ಸಮಯದಲ್ಲಿ ತನ್ನ ಅಲ್ಪ ಶರೀರದಲ್ಲಿ ಅಷ್ಟೇ ಪ್ರಮಾಣದಲ್ಲಿ ತನ್ನನ್ನಿಟ್ಟುಕೊಂಡಿರುತ್ತಾನೆ. ಹೇಗೇಗೆ ಶರೀರವು ಬೆಳೆಯುತ್ತಿರುವುದೋ ಹಾಗೆ ಆತ್ಮನೂ ಕೂಡಾ ವಿಸ್ತರಿಸುತ್ತಾನೆ. ಲೋಕದಲ್ಲಿ ಅತಿ ಚಿಕ್ಕದಾದ ಶರೀರವು ಲಬ್ಧ್ಯಪರ್ಯಾಪ್ತಕ ಸೂಕ್ಷ್ಮನಿಗೋದ ಜೀವಗಳಿಗೇನೇ ಇರುವುದು. ಅದು ಘನಾಂಗುಲದ ಅಸಂ

ಖ್ಯಾತ ಭಾಗದಿಂದ ಕೂಡಿದೆ. ಹಾಗೆ ಎಲ್ಲದಕ್ಕಿಂತ ದೊಡ್ಡ ಶರೀರವು ಮಹಾಮತ್ಸ್ಯಕ್ಕೇನೇ ಇರುತ್ತದೆ. ಅದು ಕೊನೆಯ ಸಮುದ್ರವಾದ ಸ್ವಯಂಭು ರಮಣ ಸಮುದ್ರದಲ್ಲಿಯೇ ವಾಸಿಸುತ್ತದೆ. ಮಧ್ಯಮಲೋಕದಲ್ಲಿ ಅಸಂಖ್ಯಾತ ದ್ವೀಪ ಸಮುದ್ರಗಳಿರುತ್ತವೆ. ಅವು ಒಂದಕ್ಕೊಂದು ದ್ವಿಗುಣದ್ವಿಗುಣವಾಗಿವೆ. ಇವುಗಳ ಮಧ್ಯದಲ್ಲಿ ಒಂದು ಲಕ್ಷ (1,00,000) ಯೋಜನ ವಿಸ್ತಾರವುಳ್ಳ ಜಂಬೂದ್ವೀಪವು ಶೋಭಿಸುತ್ತಿದೆ.

ಈ ಮಹಾ ಮತ್ಸ್ಯದ ಪ್ರಮಾಣವು ಒಂದು ಸಾವಿರ (1000) ಯೋಜನ ಉದ್ದವಾಗಿದೆ. ಒಂದು ಸೂಕ್ಷ್ಮನಿಗೋದ ಶರೀರಧಾರೀ ಜೀವವು ಸಂಸಾರ ದಲ್ಲಿ ಭ್ರಮಿಸುತ್ತ ಒಮ್ಮೊಮ್ಮೆ ಮಹಾಮತ್ಸ್ಯದ ಜನ್ಮವನ್ನು ತಾಳುವುದು. ಹಾಗೆ ಮಹಾಮತ್ಸ್ಯವು ಸಂಸಾರದಲ್ಲಿ ಭ್ರಮಿಸುತ್ತಾ ಒಂದು ಕಾಲದಲ್ಲಿ ನಿಗೋದ ಪರ್ಯಾಯವನ್ನು ಧರಿಸಬಹುದು. ಆದರೂ ಕೂಡಾ ಆತ್ಮಪ್ರದೇಶ ಗಳು ಅಸಂಖ್ಯಾತಕ್ಕಿಂತ ಕಡಿಮೆಯಾಗಲಾರವು. ಉದಾ : ಐವತ್ತು ಗಜ ವಸ್ತ್ರ ವನ್ನು ಮಡಿಕೆಯಾಗಿ ಮಾಡಿದರೆ ಒಂದು ಗಜಪ್ರಮಾಣದಲ್ಲಿ ಮಾಡಬಹುದು. ಆದರೂ ಐವತ್ತು ಗಜಕ್ಕಿಂತ ಕಡಿಮೆಯಾಗದಂತೆ ಆತ್ಮನ ಪ್ರದೇಶಗಳು ಸಂಕೋಚದಿಂದ ಕಡಿಮೆ ಪ್ರದೇಶವುಳ್ಳ ಶರೀರದಲ್ಲಿ ಬರುವ ನಿಶ್ಚಯನಯಾ ಪೇಕ್ಷೆಯಿಂದ ಜೀವನು ಅಸಂಖ್ಯಾತ ಪ್ರದೇಶಿಯೇ ; ವ್ಯವಹಾರ ನಯದಿಂದ ಶರೀರ ಪ್ರಮಾಣದಷ್ಟೇ ಇರುತ್ತಾನೆ. ಶರೀರದಲ್ಲಿರುತ್ತಿದ್ದರೂ ಕೂಡಾ ಏಳು ಪ್ರಕಾರದ ಸಮುದ್ಘಾತಾವಸ್ಥೆಯಲ್ಲಿಯೂ, ಜೀವನು ಪ್ರದೇಶಗಳನ್ನು ವಿಸ ದೀಕರಿಸಿಕೊಂಡೇ ಶರೀರದಿಂದ ಹೊರಗಾದರೂ ಶರೀರಪ್ರಮಾಣನಾಗುತ್ತಾನೆ.

ಗೋಮಟಸಾರ ಜೀವಕಾಂಡದಲ್ಲಿ ಹೇಳಿದ್ದಾರೆ :

**ಮೂಲಶರೀರಮಛಂಡಿಯ ಉತ್ತರದೇಹಸ್ಸ ಜೀವಪಿಂಡಸ್ಸ ।**
**ಣಿಗ್ಗಮಣಂ ದೇಹಾದೋ ಹೋದಿ ಸಮುಗ್ಘಾದಣಾಮಂ ತು ॥೬೬೭॥**

**ವೇಯಣಕಷಾಯವೇಗುವ್ವಿಯೋ ಯ ಮರಣಂತಿಯೋ**
**ಸಮುಗ್ಘಾದೋ ।**
**ತೇಜಾಹಾರೋ ಛಟ್ಠೋ ಸತ್ತಮಹೋ ಕೇವಲೀಣಂ ತು ॥೬೬೮॥**

**ಆಹಾರವಾರಣಂತಿಯದುಗಂಪಿ ಣಿಯಮೇಣ ಏಗದಿಸಿಗಂ ತು ।**
**ದಸದಿಸಿ ಗದಾ ಹು ಸೇಸಾ ಪಂಚ ಸಮುಗ್ಘಾದಯಾ**
**ಹೋಂತಿ ॥ ೬೬೮ ॥**

**ಭಾವಾರ್ಥ :** ಮೂಲ ಶರೀರವನ್ನು ಬಿಡದೆ ಶರೀರದಿಂದ ತೈಜಸ ಕಾರ್ಮಣ ಸಹಿತವಾಗಿ ಆತ್ಮಪ್ರದೇಶಗಳು ಹೊರಹೊರಡುವುದಕ್ಕೆ ಸಮುದ್ಘಾತ ವೆಂದು ಹೆಸರು. ಅದರಲ್ಲಿ ಏಳು ವಿಧಗಳಿವೆ.

೧. **ವೇದನಾಸಮುದ್ಘಾತ :** ತೀವ್ರ ರೋಗಾದಿಕಷ್ಟಗಳಿಂದ ಶರೀರ ವನ್ನು ಬಿಡದೆ ಆತ್ಮಪ್ರದೇಶಗಳು ಹೊರಹೊರಡುವುವು.

೨. **ಕಷಾಯಸಮುದ್ಘಾತ :** ತೀವ್ರ ಕಷಾಯಗಳ ಉದಯದಿಂದ ಪರರ ಘಾತಕ್ಕಾಗಿ ಪ್ರದೇಶಗಳು ಹೊರಹೊರಡುವುವು.

೩. **ವಿಕ್ರಿಯಾಸಮುದ್ಘಾತ :** ತನ್ನ ಶರೀರವನ್ನು ಚಿಕ್ಕ ದೊಡ್ಡ ಆಕಾರಗಳಲ್ಲಿ ಪರಿವರ್ತಿಸಿಕೊಳ್ಳುತ್ತಾ ಒಂದು ಶರೀರದಿಂದ ಭಿನ್ನ ಮತ್ತು ಅನೇಕ ಶರೀರಗಳನ್ನು ಮಾಡಿಕೊಳ್ಳದೆ ಆತ್ಮ ಪ್ರದೇಶಗಳು ವಿಸ್ತರಿಸುವುವು. ಉದಾ : ಅದು ದೇವ, ನಾರಕಿ, ಭೋಗಭೂಮಿವಾಸಿಗಳು ಮತ್ತು ಚಕ್ರವರ್ತಿ ಗಳು ಮತ್ತು ಋದ್ಧಿಧಾರಿಗಳಾದ ಯೋಗೀಶ್ವರರು ಇವರುಗಳಿಗೆ ಉಂಟಾ ಗುತ್ತದೆ.

೪. **ಮಾರಣಾಂತಿಕಸಮುದ್ಘಾತ :** ಮರಣದ ಅಂತಿಮ ಮುಹೂರ್ತ ದಲ್ಲಿ ಸತ್ತು ಎಲ್ಲಿ ಜನ್ಮವನ್ನು ತಾಳುವುದಿದೆಯೋ ಆ ಕ್ಷೇತ್ರವನ್ನು ಸ್ಪರ್ಶಿಸಲು, ಆತ್ಮಪ್ರದೇಶಗಳು ಹೊರಹೊರಟು ಪುನಃ ಮರಳಿ ಬಂದು ಮರಣವನ್ನು ಹೊಂದುವುವು.

೫. **ತೈಜಸಸಮುದ್ಘಾತ :** ಇದರಲ್ಲಿ ಅಶುಭ ತೈಜಸ್ಸು ಮತ್ತು ಶುಭ ತೈಜಸ್ಸೆಂದು ಎರಡು ವಿಧ ಇರುತ್ತದೆ. ಯಾವುದಾದರೊಂದು ಅನಿಷ್ಟ ಕಾರಣ ವನ್ನು ನೋಡಿ, ಕ್ರೋಧದಿಂದ ಸಂತಪ್ತ ಸಂಯಮಿ ಮಹಾಮುನಿಗಳ ಶರೀರ ದಿಂದ, ಮೂಲ ಶರೀರವನ್ನು ಬಿಡದೆ ಸಿಂಧೂರವರ್ಣವುಳ್ಳದ್ದೂ, ಹನ್ನೆರಡು ಯೋಜನ ಉದ್ದವುಳ್ಳದುದೂ, ಒಂಭತ್ತು ಯೋಜನ ಅಗಲವುಳ್ಳದುದೂ,

ಸೂಚ್ಯಾಂಗುಲದ ಅಸಂಖ್ಯಾತಭಾಗದಿಂದೊಡಗೂಡಿದುದೂ ಆದ ಅಶುಭ ಆಕೃತಿಯು ಪುರುಷಾಕಾರ ರೂಪನಾಗಿ ಹೊರಟು ವಿರುದ್ಧ ವಸ್ತುವನ್ನು ಭಸ್ಮೀಭೂತವನ್ನಾಗಿ ಮಾಡಿ ಮತ್ತೆ ಆ ಮುನಿಯನ್ನೂ ಕೂಡಾ ಸುಟ್ಟು ಬಿಡುತ್ತದೆ. ಇದು ಆತನನ್ನು ದುರ್ಗತಿಗೆ ಕೊಂಡೊಯ್ಯುವ ಅಶುಭ ತೈಜಸ್ಸಾಗಿದೆ.

ರೋಗದುರ್ಭಿಕ್ಷಾದಿಗಳಿಂದ ಪೀಡಿತವಾದ ಪ್ರಪಂಚವನ್ನು ನೋಡಿ ಕರುಣಾಮಯನಾದ ಸಂಯಮಿ ಮಹಾಮುನಿಯ ಬಲಭುಜದಿಂದ ಪೂರ್ವೋಕ್ತ ಪ್ರಮಾಣವುಳ್ಳದೂ, ಶುಭ ಆಕಾರವುಳ್ಳದೂ. ಪುರುಷಾಕಾರವೂ ಆದ ಶರೀರ ಹೊರಟು, ಅನಿಷ್ಟಗಳೆಲ್ಲವನ್ನು ದೂರೀಕರಿಸಿ, ಪುನಃ ಹಿಂದಿರುಗಿ ಶರೀರವನ್ನು ಪ್ರವೇಶಿಸುವುದೇ ಶುಭತೈಜಸ್ಸಾಗಿದೆ.

೬. **ಆಹಾರಕ ಸಮುದ್ಘಾತ :** ಋದ್ಧಿಧಾರಿಗಳಾದ ಮುನಿಗಳಿಗೆ ತತ್ವದಲ್ಲಿ ಸಂಶಯವುಂಟಾದೊಡನೆ ಅವರ ಮಸ್ತಕದಿಂದ ಶುದ್ಧ ಸ್ಫಟಿಕದಂತೆ ನಿರ್ಮಲವೂ, ಒಂದು ಹಸ್ತ ಪ್ರಮಾಣವೂ, ಪುರುಷಾಕಾರವೂ ಆದ ಆಕಾರವು ಹೊರಟು ಕೇವಲಿಗಳಿರುವಲ್ಲಿಗೆ ಹೋಗಿ. ಅವರ ದರ್ಶನವಾದೊಡನೆ ಸಂಶಯವು ದೂರವಾಗಿ ಅಂತರ್ಮುಹೂರ್ತ ಸಮಯದಲ್ಲಿಯೇ ಹಿಂದಿರುಗಿಬರುವುದು.

೭. **ಕೇವಲೀಸಮುದ್ಘಾತ:** ಆಯುಷ್ಯಕರ್ಮದ ಸ್ಥಿತಿಯು ಕಡಿಮೆಯಾಗಿದ್ದು, ಉಳಿದ ಕರ್ಮಗಳ ಸ್ಥಿತಿಯು ಅಧಿಕವಾಗಿರುವಾಗ, ಕೇವಲಜ್ಞಾನಿಗಳ ಆತ್ಮಪ್ರದೇಶವು ಲೋಕವ್ಯಾಪಿಯಾಗಿ ಪುನಃ ಶರೀರಪ್ರಮಾಣವಾಗುವುದು. ಆಹಾರಕ ಮತ್ತು ಮಾರಣಾಂತಿಕ ಸಮುದ್ಘಾತಗಳಲ್ಲಿ ಪ್ರದೇಶಗಳು ಒಂದೇ ದಿಕ್ಕಿನತ್ತ ವಿಸ್ತರಿಸಿ ಗತಿಸುತ್ತವೆ. ಉಳಿದವು ಹತ್ತುದಿಕ್ಕಿನತ್ತ ಗಮನವಾಗುವುದು.

ಮೇಲಿನ ಈ ಏಳು ಕಾರಣಗಳಲ್ಲದೆ ಜೀವನು ಶರೀರ ಪ್ರಮಾಣನಾಗಿಯೇ ಇರುತ್ತಾನೆ; ಮತ್ತೆ ಸಿದ್ಧ ಪರಮಾತ್ಮನು ಅಂತಿಮ ಶರೀರಪ್ರಮಾಣನಾಗಿರುತ್ತಾನೆ. ನಾಮಕರ್ಮವು ನಾಶವಾಗುವುದಕ್ಕಿಂತ ಮೊದಲೇ ಅದರ ಉದಯವಿಲ್ಲದಿರುವುದರಿಂದ ಪ್ರದೇಶಗಳ ಸಂಕೋಚ ವಿಸ್ತಾರಗಳಾಗುವುದಿಲ್ಲವು.

ಶ್ರೀ ಪೂಜ್ಯಪಾದರು ಇಷ್ಟೋಪದೇಶದಲ್ಲಿ ಹೇಳಿರುತ್ತಾರೆ:

**ಸ್ವಸಂವೇದನಸುವ್ಯಕ್ತಸ್ತನುಮಾತ್ರೋ ನಿರತ್ಯಯಃ ।**
**ಅತ್ಯಂತಸೌಖ್ಯವಾನಾತ್ಮಾ ಲೋಕಾಲೋಕವಿಲೋಕನಃ ॥ ೨೧ ॥**

**ಭಾವಾರ್ಥ:** ಈ ಆತ್ಮನು ಲೋಕಾಲೋಕಗಳನ್ನು ತಿಳಿಯುವವನೂ ಅತ್ಯಂತ ಸುಖಿಯೂ, ನಿತ್ಯನೂ ಆಗಿದ್ದಾನೆ. ಇವನು ಸ್ವಾನುಭವದಿಂದಲೇ ಆತ್ಮನ ದರ್ಶನಮಾಡುವುದರಿಂದ ಮತ್ತು ಪರಮಾನಂದ ಪದವಾದ ಶುದ್ಧ ಆತ್ಮದೇವನನ್ನು ಶರೀರಪ್ರಮಾಣಧಾರಿಯೆಂದು ಧ್ಯಾನಿಸುವುದರಿಂದ ಇವನಿಗೆ ಮೋಕ್ಷಲಕ್ಷ್ಮಿಯು ಪ್ರಾಪ್ತಿಯಾಗುವಳು.

## ಸಮ್ಯಕ್ತ್ವವಿಲ್ಲದೆ ಜೀವನು ೮೪ ಲಕ್ಷ ಯೋನಿಗಳಲ್ಲಿ ಭ್ರಮಿಸುತ್ತಾನೆ

**ಚಉರಾಸೀಲಕ್ಖಹ ಫಿರಿಉ ಕಾಲ ಅಣಾಇ ಅಣಂತು ।**
**ಪರ ಸಮತ್ತ ಣ ಲದ್ಧು ಜಿಉ ಏಹಉ ಜಾಣಿ ಣಿಭಂತು ॥ ೨೫ ॥**

**ಅನ್ವಯಾರ್ಥ:** ಅಣಾಇ ಕಾಲ–ಅನಾದಿಕಾಲದಿಂದ. ಚವುರಾಸೀ ಲಕ್ಖಹ ಫಿರಿಉ–ಈ ಜೀವನು ಎಂಭತ್ತು ನಾಲ್ಕು ಲಕ್ಷ ಯೋನಿಗಳಲ್ಲಿ ಸುತ್ತುತ್ತ ಬರುತ್ತಿರುವನು. ಅಣಂತು–ಮತ್ತೆ ಅನಂತಕಾಲದವರೆಗೂ ಕೂಡಾ ಸಮ್ಯಕ್ತ್ವ ವಿಲ್ಲದೆ ಭ್ರಮಿಸಬಹುದು. ಪರ ಸಮತ್ತ ಣ ಲದ್ಧು–ಈವರೆವಿಗೂ ಸಮ್ಯಕ್ತ್ವ ವನ್ನು ಪಡೆಯಲಿಲ್ಲವೆಂದು, ಜಿಉ–ಎಲೈ ಜೀವನೇ! ಣಿಭಂತು ಏಹಉ ಜಾಣಿ –ನಿಶ್ಚಯವೆಂದು ತಿಳಿಯಬೇಕು.

**ಭಾವಾರ್ಥ:** ಈ ಲೋಕವು ಸತ್ ಪದಾರ್ಥಗಳ ಸಮೂಹವಾಗಿರು ವುದರಿಂದ ಸಂಸಾರವು ಅನಾದಿಯೂ, ಅನಂತವೂ ಆಗಿರುತ್ತದೆ. ಈ ಸಂಸಾರಿ ಜೀವನು ಅನಾದಿಕಾಲದಿಂದ ಕರ್ಮಬಂಧನದಿಂದ ಬದ್ಧನಾಗಿ ಹೊಸ ಕರ್ಮ ಗಳನ್ನು ಬಂಧಿಸಿಕೊಳ್ಳುತ್ತಾ ಹಳೆಯ ಕರ್ಮಗಳನ್ನು ಕಳೆದುಕೊಳ್ಳುತ್ತಿರು ತ್ತಾನೆ. ಮೋಹನೀಯಕರ್ಮದ ಉದಯದಿಂದ ಮಿಥ್ಯಾದೃಷ್ಟಿಯಾಗಿಯೂ,

ಅಜ್ಞಾನಿಯಾಗಿಯೂ, ಅಸಂಯಮಿಯಾಗಿಯೂ ಆಗುತ್ತಿರುತ್ತಾನೆ. ಅವನಿಗೆ ಶರೀರ ಮತ್ತು ಇಂದ್ರಿಯಗಳ ಸಂಬಂಧವಾದ ಸುಖಗಳಲ್ಲಿ, ಆ ಸುಖಗಳಿಗೆ ಸಹಕಾರಿಯಾದ ಪದಾರ್ಥಗಳಲ್ಲಿ ತೀವ್ರವಾದ ಮೋಹವು ಇರುವುದರಿಂದಲೇ ಸಂಸಾರದಲ್ಲಿ ನಾನಾಶರೀರಗಳನ್ನು ಧರಿಸಿ ಭ್ರಮಿಸುತ್ತಿರುತ್ತಾನೆ. ಕ್ರಮವಾಗಿ ಸಮ್ಯಗ್ದರ್ಶನವು ಆತ್ಮನ ಸ್ವಭಾವವೆಂಬ ಮತ್ತು ಇಂದ್ರಿಯ ಸುಖವು ನಾಶಶೀಲ ವೆಂಬ ತಿಳುವಳಿಕೆಯುಂಟಾಗಿ, ಸಂಸಾರ ಶರೀರ ಭೋಗಗಳಿಂದ ವೈರಾಗ್ಯ ವನ್ನು ಹೊಂದಿ ಮೋಕ್ಷಲಕ್ಷ್ಮಿಯ ಪ್ರಾಪ್ತಿಯತ್ತ ಉತ್ಸಾಹವುಳ್ಳವನಾಗು ತ್ತಾನೆ. ಸಮ್ಯಕ್ತ್ವಭಾವನೆಯ ಪ್ರಕಾಶದಿಂದ ಸಂಸಾರ ಪರಿಭ್ರಮಣೆಯಿಂದ ಹೇಸಿಕೆಯುಂಟಾಗಿ, ಒಂದು ಸರ್ತಿ ಸಮ್ಯಕ್ತ್ವಪ್ರಾಪ್ತವಾದೊಡನೆ, ಈ ಜೀವನು ಸಂಸಾರ ಅವಸ್ಥೆಯಲ್ಲಿ ಅರ್ಧಪುದ್ಗಲ ಪರಿವರ್ತನೆ ಕಾಲಕ್ಕಿಂತ ಹೆಚ್ಚು ಕಾಲ ಇರಲಾರನು. ಒಂದುವೇಳೆ ಅಲ್ಲಿಯೂ ಕೂಡಾ ಅನಂತಕಾಲ ಸೀಮಿತವಾಗಿದ್ದರೂ, ಸಮ್ಯಕ್ತ್ವಿಯು ಬಹುಬೇಗನೆ ನಿರ್ವಾಣ ಸುಖದ ಭಾಗಿ ಯಾಗುತ್ತಾನೆ.

ಈ ಜೀವನು ಸಮ್ಯಕ್ತ್ವಭಾವನೆಯಿಲ್ಲದೆ, ನರಕಭಾವಗಳಲ್ಲಿ ಹತ್ತು ಸಾವಿರ ವರ್ಷ ಮೊದಲುಗೊಂಡು ಮುವತ್ತುಮೂರು ಸಾಗರ ಆಯುಷ್ಯದವರೆ ವಿಗೂ, ತಿರ್ಯಂಚಗತಿಯಭಾವಗಳಲ್ಲಿ ಒಂದು ಅಂತರ್ಮುಹೂರ್ತ ಮೊದಲು ಗೊಂಡು ಮೂರು ಪಲ್ಯ ಆಯುಷ್ಯದವರೆವಿಗೂ, ಮನುಷ್ಯಗತಿಭಾವಗಳಲ್ಲಿ ಒಂದು ಅಂತರ್ಮುಹೂರ್ತ ಮೊದಲುಗೊಂಡು ಮೂರು ಪಲ್ಯ ಆಯುಷ್ಯದವರೆ ವಿಗೂ ಮತ್ತು ದೇವಗತಿಭಾವಗಳಲ್ಲಿ ಹತ್ತು ಸಾವಿರ ವರ್ಷ ಮೊದಲುಗೊಂಡು ಒಂಭತ್ತನೆಯ ಗ್ರೈವೇಯಕದ ಮುವತ್ತೊಂದು ಸಾಗರ ಆಯುಷ್ಯ ಪರ್ಯಂತರ ವರೆವಿಗೂ ಇರುವ ಸಕಲ ಜನ್ಮಗಳನ್ನು ಬಾರಿಬಾರಿಗೂ ಧರಿಸಿದ್ದಾಗಿರುತ್ತದೆ. ಒಂಭತ್ತನೆಯ ಗ್ರೈವೇಯಕದಿಂದ ಮೇಲೆ ಒಂಭತ್ತು ಅನುದಿಶೆಗಳಲ್ಲಿಯೂ ಮತ್ತು ಪಂಚಾಣುತ್ತರೆಗಳಲ್ಲಿಯೂ ಮತ್ತು ಮೋಕ್ಷದಲ್ಲಿಯೂ ಸಮ್ಯಗ್ದೃಷ್ಟಿ ಜೀವನೇ ಆಗಿರುತ್ತಾನೆ. ಒಟ್ಟಿಗೆ ಎಂಭತ್ತು ನಾಲ್ಕು ಲಕ್ಷ ಯೋನಿಗಳಲ್ಲಿ ಸಂಸಾರೀ ಜೀವಿಗಳೇ ಉತ್ಪನ್ನರಾಗುವುದರಿಂದಲೇ ಯೋನಿಗಳೆಂದು ಹೇಳು ತ್ತಾರೆ. ಅವು ಮುಖ್ಯವಾಗಿ ಒಂಭತ್ತೇ.

ಶ್ರೀ ಗೋಮಟಸಾರ ಜೀವಕಾಂಡದಲ್ಲಿ ಹೇಳುತ್ತಾರೆ :

**ಸಾಮಣ್ಣೇಣ ಯು ಣಿವಂಣವ ಜೋಣೀಓ ಹವಂತಿ ವಿತ್ಥಾರೇ |**
**ಲಕ್ಖಾಣ ಚದುರಸೀದೀ ಜೋಣೀಓ ಹೋಂತಿ ಣಿಯಮೇಣ ||೮||**

**ಣಿಚ್ಚಿ ಧರಧಾದುಸತ್ತ ಯು ತರುದಸ ವಿಯುಲಿಂದಿಯೇಸು ಛಚ್ಚೇವ |**
**ಸುರಣಿರಯತಿರಿಯಚಉರೋ ಚೋದ್ದಸ ಮಣುವಿ**
**ಸದಸಹಸ್ಸಾ ||೯||**

**ಭಾವಾರ್ಥ** : ಸಾಮಾನ್ಯವಾಗಿ ಯೋನಿಗಳು ಒಂಭತ್ತು ವಿಧವು. ಸಚಿತ್ತ, ಅಚಿತ್ತ. ಮಿಶ್ರ ಹೀಗೆ ಮೂರು, ಶೀತ, ಉಷ್ಣ ಮತ್ತು ಮಿಶ್ರ ಹೀಗೆ ಮೂರು. ಸಂವೃತ, ವಿವೃತ ಮತ್ತು ಮಿಶ್ರ ಹೀಗೆ ಮೂರು. ಪ್ರತಿಯೊಂದು ಯೋನಿಗಳಲ್ಲಿ ಮೂರು ಮೂರು ಇದ್ದೇ ಇರುತ್ತವೆ ಉದಾ : ಸಚಿತ್ತ, ಶೀತ ಮತ್ತು ಸಂವೃತವಾಗಬಹುದು ಅಥವಾ ಅಚಿತ್ತ, ಶೀತ, ಸಂವೃತವೂ ಆಗ ಬಹುದು ಇತ್ಯಾದಿ. ಇದರಲ್ಲಿ ಎಂಭತ್ತುನಾಲ್ಕು ಲಕ್ಷ ಭೇದಗಳು ಗುಣಗಳ ತರತಮದ ಅಪೇಕ್ಷೆಯಿಂದಿರುತ್ತವೆ. ಅವು ಈ ಪ್ರಕಾರವಾಗಿವೆ :

| | | |
|---|---|---|
| ೧. | ನಿತ್ಯ ನಿಗೋದ ಸಾಧಾರಣ ವನಸ್ಪತಿ ಜೀವಗಳು | ೭ ಲಕ್ಷ ಯೋನಿಗಳು |
| ೨. | ಚತುರ್ಗತಿ ಅಥವಾ ಇತರ ನಿಗೋದ ಸಾಧಾರಣ ವನಸ್ಪತಿ ಜೀವಗಳು | ೭ ಲಕ್ಷ ಯೋನಿಗಳು. |
| ೩. | ಪೃಥ್ವಿಕಾಯಿಕ ಜೀವಗಳು | ೭ ಲಕ್ಷ ಯೋನಿಗಳು. |
| ೪. | ಜಲಕಾಯಿಕ ಜೀವಗಳು | ೭ ಲಕ್ಷ ಯೋನಿಗಳು. |
| ೫. | ಅಗ್ನಿಕಾಯಿಕ ಜೀವಗಳು | ೭ ಲಕ್ಷ ಯೋನಿಗಳು. |
| ೬. | ವಾಯುಕಾಯಿಕ ಜೀವಗಳು | ೭ ಲಕ್ಷ ಯೋನಿಗಳು. |
| ೭. | ಪ್ರತ್ಯೇಕ ವನಸ್ಪತಿ ಜೀವಗಳು | ೧೦ ಲಕ್ಷ ಯೋನಿಗಳು. |
| ೮. | ದ್ವೀಂದ್ರಿಯ ಜೀವಗಳು | ೨ ಲಕ್ಷ ಯೋನಿಗಳು. |
| ೯. | ತ್ರೀಂದ್ರಿಯ ಜೀವಗಳು | ೨ ಲಕ್ಷ ಯೋನಿಗಳು. |
| ೧೦. | ಚತುರಿಂದ್ರಿಯ ಜೀವಗಳು | ೨ ಲಕ್ಷ ಯೋನಿಗಳು. |
| ೧೧. | ದೇವತೆಗಳು | ೪ ಲಕ್ಷ ಯೋನಿಗಳು. |
| ೧೨. | ನಾರಕೀ ಜೀವಗಳು | ೪ ಲಕ್ಷ ಯೋನಿಗಳು. |

೧೩. ಪಂಚೇಂದ್ರಿಯ ತಿರ್ಯಂಚ ಜೀವಗಳು ೪ ಲಕ್ಷ ಯೋನಿಗಳು.
೧೪. ಮನುಷ್ಯರು ೧೪ ಲಕ್ಷ ಯೋನಿಗಳು.

ಒಟ್ಟು ೮೪ ಲಕ್ಷ ಯೋನಿಗಳು.

ಶ್ರೀ ರತ್ನಕರಂಡಕ ಶ್ರಾವಕಾಚಾರದಲ್ಲಿ ಸಮ್ಯಕ್ತ್ವದ ಮಹಿಮೆಯನ್ನು ವರ್ಣಿಸಿರುತ್ತಾರೆ.

**ನ ಸಮ್ಯಕ್ತ್ವಸಮಂ ಕಿಂಚಿತ್ ತ್ರೈಕಾಲ್ಯೇ ತ್ರಿಜಗತ್ಯಪಿ ।**
**ಶ್ರೆಯೋಽಶ್ರೇಯಶ್ಚ ಮಿಥ್ಯಾತ್ವಸಮಂ ನಾನ್ಯತ್ತನೂಭೃತಾಂ ॥ ೩೪ ॥**

**ಸಮ್ಯಗ್ದರ್ಶನಶುದ್ಧಾ ನಾರಕತಿರ್ಯಙ್‌ನಪುಂಸಕಸ್ತ್ರೀತ್ವಾನಿ ।**
**ದುಷ್ಕುಲವಿಕೃತಾಲ್ಪಾಯುರ್ದರಿದ್ರತಾಂ ಚ ವ್ರಜಂತಿ ನಾಪ್ಯ**
**ವ್ರತಿಕಾ ॥ ೩೫ ॥**

**ಭಾವಾರ್ಥ :** ಜೀವಿಗಳಿಗೆ ಮೂರು ಲೋಕ ಮತ್ತು ಮೂರು ಕಾಲಗಳಲ್ಲಿ ಸಮ್ಯಕ್ತ್ವಕ್ಕೆ ಸಮಾನವಾದ ಹಿತಕಾರಿಯೂ ಮತ್ತು ಉಪಕಾರಕವೂ ಆದ ವಸ್ತು ಬೇರೆ ಯಾವುದೂ ಇಲ್ಲವು. ಮಿಥ್ಯಾತ್ವಕ್ಕೆ ಸಮಾನವಾದ ಹಾನಿಕರವೂ, ಅಮಂಗಲವೂ ಆದ ಅನ್ಯವಸ್ತುವು ಮತ್ತೊಂದಿಲ್ಲವು. ಪವಿತ್ರ ಸಮ್ಯಕ್ತ್ವವನ್ನು ನಿರ್ದೋಷವಾಗಿ ಪಾಲಿಸುವ ಜೀವನು ಅಹಿಂಸಾದಿ ವ್ರತಗಳಿಂದ ರಹಿತನಾದರೂ ಕೂಡ ಸತ್ತು ನಾರಕಿಯಾಗಿ, ಪಶುವಾಗಿ, ನಪುಂಸಕನಾಗಿ, ಸ್ತ್ರೀಪರ್ಯಾಯದಲ್ಲಿ, ನೀಚಕುಲದಲ್ಲಿ, ವಿಕಲಾಂಗನಾಗಿ, ಅಲ್ಪಾಯುವಾಗಿ, ದರಿದ್ರಿಯಾಗಿ ಜನಿಸುವುದಿಲ್ಲವು. ಯದಿ ಸಮ್ಯಕ್ತ್ವೋತ್ಪತ್ತಿಗಿಂತ ಮೊದಲೇ ನರಕ ಅಥವಾ ತಿರ್ಯಂಚ ಆಯುಷ್ಯವನ್ನು ಬಂಧಿಸಿಕೊಂಡಿದ್ದರೆ, ಮೊದಲನೆಯ ನರಕದಲ್ಲಾಗಲೀ ಭೋಗಭೂಮಿಯಲ್ಲಾಗಲೀ ಜನ್ಮವನ್ನು ತಾಳವನು.

ಸಾಧಾರಣ ನಿಯಮವಿರುವುದೇನೆಂದರೆ ಸಮ್ಯಕ್ತ್ವವಂತರಾದ ನಾರಕಿಗಳಾಗಲಿ, ದೇವತೆಗಳಾಗಲಿ ಮರಣವನ್ನು ಹೊಂದಿ ಮನುಷ್ಯ ಗತಿಯಲ್ಲಿಯೇ ಜನಿಸುವರು. ಸಮ್ಯಕ್ತ್ವವಂತ ಮನುಷ್ಯ ಮತ್ತು ತಿರ್ಯಂಚಗಳು ಸತ್ತು

ಸ್ವರ್ಗವಾಸಿಗಳಾಗುವರಲ್ಲದೆ ಸ್ತ್ರೀ ಮತ್ತು ದೇವಾಂಗನೆಯರಾಗದೆ ಕ್ರಮದಿಂದ ಮೋಕ್ಷವನ್ನೇ ಪಡೆಯುವರು.

## ಶುದ್ಧಾತ್ಮ ಮನನವೇ ಮೋಕ್ಷ ಮಾರ್ಗವು

**ಸುದ್ಧು ಸಚ್ಚೇಯಣು ಬುದ್ಧು ಜಿಣು ಕೇವಲಣಾಣಸಹಾಉ।**
**ಸೋ ಅಪ್ಪಾ ಅಣುದಿಣು ಮುಣಹು ಜಇ ಚಾಹಉ ಸಿವಲಾಹು॥೨೬॥**

**ಅನ್ವಯಾರ್ಥ :** ಜಇ ಸಿವಲಾಹು ಚಾಹಉ – ಒಂದು ವೇಳೆ ಮೋಕ್ಷವನ್ನು ಪಡೆಯಬೇಕೆಂದಿದ್ದರೆ. ಅಣುದಿಣು ಸೋ ಅಪ್ಪಾ ಮುಣಹು ಹಗಲಿರುಳು ಆತ್ಮನನ್ನೇ ಚಿಂತಿಸು. ಸುದ್ಧು-ಆತ್ಮನು ಶುದ್ಧ ವೀತರಾಗನಾದ ನಿರಂಜನನು, ಕರ್ಮಮಲರಹಿತನು, ಸಚ್ಚೇಯಣು–ಜ್ಞಾನ ಚೇತನಾಮಯನ, ಬುದ್ಧು–ಬುದ್ಧನೂ, ಜಿಣು–ಸಂಸಾರ ವಿಜಯಿಯಾದ ಜಿನೇಂದ್ರನು, ಕೇವಲಣಾಣ ಸಹಾಉ–ಸಂಪೂರ್ಣ ನಿರಾವರಣ ಜ್ಞಾನ ಸ್ವಭಾವಧಾರಿಯು ಎಂದು ತಿಳಿ.

**ಭಾವಾರ್ಥ :** ನಿರ್ವಾಣವು ಪರಮ ಕಲ್ಯಾಣಮಯವೂ, ಪರಮಾನಂದಮಯವೂ ಆಗಿರುವುದರಿಂದಲೇ ಶಿವ ಎಂದು ಹೇಳಿರುತ್ತಾರೆ. ಜೀವನಿಗೆ ಈ ಪರಿಶುದ್ಧ ಪದವಿಯ ಪ್ರಾಪ್ತಿಯಾಯಿತೆಂದರೆ ಪುನಃ ಅಶುದ್ಧನಾಗಲಾರನು. ಉದಾ : ಹುರಿಯಲ್ಪಟ್ಟ ಕಡಲೆಯಲ್ಲಿ ಅಂಕುರೋತ್ಪತ್ತಿಯು ಆಗದಿರುವಂತೆ, ಅಂತಹ ಶಿವ ಪದವಿಯ ಲಾಭೋಪಾಯಕ್ಕೆ ರಾತ್ರಿ ಹಗಲು ತನ್ನಾತ್ಮ ಚಿಂತನೆಯೇ ಮೂಲ ಉಪಾಯವಾಗಿರುವುದು. ಆತ್ಮನು ಸ್ವಯಂ ಮೋಕ್ಷ ಸ್ವರೂಪನೂ, ಪರಮಾತ್ಮರೂಪನೂ ಆಗಿರುತ್ತಾನೆ. ತನ್ನ ಶರೀರವೆಂಬ ಮಂದಿರದಲ್ಲಿ ಆತ್ಮನೆಂಬ ದೇವನನ್ನು ನೋಡುತ್ತಿರಬೇಕು. ಇದರಲ್ಲಿ ಕಾರ್ಮಣ, ತೈಜಸ್ಸು, ಔದಾರಿಕ, ವೈಕ್ರಿಯಿಕ ಮತ್ತು ಆಹಾರಕಾದಿ ಐದು ಪುದ್ಗಲ ರಚಿತವಾದ ಶರೀರಗಳ ಸಂಬಂಧವಾಗಲೀ, ಸಂಕಲ್ಪ ಮತ್ತು ವಿಕಲ್ಪ ರೂಪ ಮನಸ್ಸಾಗಲಿ, ಪುದ್ಗಲ ರಚಿತ ವಚನಗಳಾಗಲಿ, ಕರ್ಮಗಳ ಉದಯ ದಿಂದುಂಟಾದ ಭಾವ, ರಾಗ, ದ್ವೇಷ, ಮೋಹ ಮೊದಲಾದವುಗಳಾಗಲಿ ಯಾವುವೂ ಇಲ್ಲವು. ಆತ್ಮನು ಪರಮ ವೀತರಾಗನಾಗಿರುತ್ತಾನೆ. ಇದರಲ್ಲಿ

ಕರ್ತೃ, ಕರ್ಮ, ಕರಣಾದಿ ಆರು ಕಾರಕಗಳೆಂಬ ವಿಕಲ್ಪಗಳಾಗಲಿ, ಗುಣ ಗುಣಿಗಳೆಂಬ ಭೇದವಾಗಲಿ ಇಲ್ಲವು. ಇವನು ಅಖಂಡನೂ, ಅಭೇದ್ಯನೂ, ಸಾಮಾನ್ಯ ಪದಾರ್ಥವೂ ಆಗಿರುತ್ತಾನೆ. ಇವನು ಜ್ಞಾನ ಸ್ವಭಾವವುಳ್ಳವನಾಗಿಯೂ, ಸಹಜ ಸಾಮಾಯಿಕ ಜ್ಞಾನಭಂಡಾರದಂತೆಯೂ ಇರುತ್ತಾನೆ. ಈ ವಸ್ತುವಿನಲ್ಲಿ ಅಜ್ಞಾನವಿಲ್ಲದ ನಿರ್ಮಲವಾದ ಕನ್ನಡಿಯೋಪಾದಿಯಲ್ಲಿ, ಸ್ವ-ಪರ ವಸ್ತುಗಳ ಪ್ರಕಾಶಕವಾಗಿರುತ್ತದೆ.

ಈ ಆತ್ಮನು ತನ್ನ ಪರಿಶುದ್ಧ ಜ್ಞಾನಸ್ವಭಾವದ ಆನಂದ ರುಚಿಯನ್ನು ಅನುಭವಿಸುವ ಜ್ಞಾನಚೇತನಾಮಯನೂ, ಸ್ವಾನುಭವರೂಪನೂ, ಪುಣ್ಯ ಪಾಪಕರ್ಮಗಳೆಂಬ ಪ್ರಪಂಚದಿಂದ, ಸುಖದುಃಖಗಳನ್ನು ಭೋಗಿಸುವ ವಿಕಲ್ಪದಿಂದ ದೂರನೂ ಆಗಿರುತ್ತಾನೆ. ಕರ್ಮ ಚೇತನಾ ಮತ್ತು ಕರ್ಮಫಲ ಚೇತನಾ ಇವೆರಡು ಅಜ್ಞಾನಮಯವಾಗಿರುತ್ತವೆ. ಆತ್ಮನಾದರೋ ಜ್ಞಾನಮಯನಾಗಿ ಸತ್ಯಸಿದ್ಧ ಬುದ್ಧನೂ, (ತನ್ನಿಂದ ತನ್ನನ್ನು ತಿಳಿಯುವ) ಸ್ವಯಂ ಬುದ್ಧನೂ, ಯಥಾರ್ಥ ಜಿನನೂ ಆಗಿರುವನೆಂದು ತಿಳಿಯಬೇಕು ಮತ್ತು ಸಮವಸರಣಾದಿ ಲಕ್ಷ್ಮಿಯಿಂದ್ಯುಕ್ತನಾದ ಜಿನನನ್ನು ವ್ಯವಹಾರ ಜಿನನೆಂದೂ ಜಿನರಾಜನ ಆತ್ಮನನ್ನು ನಿಶ್ಚಲ ಜಿನನೆಂದೂ ತಿಳಿಯಬೇಕು.

ಈ ಪ್ರಕಾರವಾಗಿ ನಿಜಾತ್ಮನನ್ನು ಪರಮಶುದ್ಧನಾದವನೆಂದು ಮನನಗೈಯ್ಯುತ್ತಿರಲು, ಅನೇಕ ಚಮತ್ಕಾರಾದಿಗಳುಂಟಾಗಬೇಕೆಂಬ, ಅನೇಕ ಋದ್ಧಿಗಳುಂಟಾಗಿ ಲೋಕದಲ್ಲಿ ಬಹುಮಾನತೆಯುಂಟಾಗಲೆಂಬ ಲೌಕಿಕ ದುರಾಶೆಗಳನ್ನು ಇಟ್ಟುಕೊಳ್ಳದೆ, ಕೇವಲ ತನ್ನಾತ್ಮನವಿಕಾಸಭಾವನೆಯಿಂದ ಕೂಡಿದವನಾಗಿ ತನ್ನಾತ್ಮನನ್ನೇ ಚಿಂತಿಸುತ್ತಿರಬೇಕು. ಹೀಗೆ ಧ್ಯಾನ ಶಕ್ತಿಯು ವೃದ್ಧಿಯಾಗುವುದರಿಂದ ಸ್ವಯಂ ಕರ್ಮಗಳ ನಿರ್ಜರೆಯಾಗುತ್ತಲೂ ಹೊಸ ಕರ್ಮಗಳ ಸಂವರೆಯೂ ಆಗುವುದು.

ಈ ಆತ್ಮನು ಸ್ವಯಂ ಪರಿಶುದ್ಧನಾಗುತ್ತ ಶಿವಸ್ವರೂಪಿಯಾಗುವನು.

ಸಮಯಸಾರ ಕಲಶದಲ್ಲಿ ಹೇಳಿರುತ್ತಾರೆ :

**ಚಿಚ್ಛಕ್ತಿವ್ಯಾಪ್ತಸರ್ವಸ್ವಸಾರೋ ಜೀವ ಇಯಾನಯಂ।**
**ಅತೋಽತಿರಿಕ್ತಾಃ ಸರ್ವೇಽಪಿ ಭಾವಾಃ ಪೌದ್ಗಲಿಕಾ ಅಮೀ ॥೩-೨॥**

**ಸಕಲಮಪಿ ವಿಹಾಯಾಹ್ನಾಯ ಚಿಚ್ಛಕ್ತಿರಿಕ್ತಂ**
**ಸ್ಫುಟತರಮವಗಾಹ್ಯ ಸ್ವಂ ಚ ಚಿಚ್ಛಕ್ತಿಮಾತ್ರಂ ||**
**ಇಮಮುಪರಿ ಚರಂತಂ ಚಾರು ವಿಶ್ವಸ್ಯ ಸಾಕ್ಷಾತ್**
**ಕಲಯತು ಪರಮಾತ್ಮಾತ್ಮಾನಮಾತ್ಮನ್ಯನಂತಂ || ೪–೨ ||**

ಭಾವಾರ್ಥ : ಈ ಜೀವನು ಚೈತನ್ಯಶಕ್ತಿಯಿಂದ ಸರ್ವಾಂಗ ಸಂಪೂರ್ಣನಾಗಿದ್ದಾನೆ. ಸಕಲರಾಗಾದಿಭಾವಗಳು ಪುದ್ಗಲರಚನೆಗಳಾಗಿವೆ. ವರ್ತಮಾನದಲ್ಲಿ ಚೈತನ್ಯ ಶಕ್ತಿಯ ಹೊರತಾಗಿ ಎಲ್ಲ ಪಾಪಗಳನ್ನು ತ್ಯಜಿಸಿ, ಚೈತನ್ಯ ಶಕ್ತಿಯನ್ನು ಮಾತ್ರ ಭಾವದಲ್ಲಿ ಪ್ರವೇಶಿಸಿ ಪ್ರಪಂಚಕ್ಕೆ ಪ್ರಕಾಶವನ್ನು ಬೀರುವ ತನ್ನಾತ್ಮನು ಅನಂತಗುಣಭಂಡಾರಿಯಾಗಿರುವನೆಂದು ಧ್ಯಾನಿಸಬೇಕು.

ಮೋಕ್ಷಪಾಹುಡದಲ್ಲಿ ಹೇಳಿದೆ :

**ಅಪ್ಪಾ ಚರಿತ್ತವಂತೋ ದಂಸಣಣಾಣೇಣ ಸಂಜುದೋ ಅಪ್ಪಾ |**
**ಸೋ ಝಾಯವ್ವೋ ನಿಚ್ಚಂ ಣಾಊಣಂ ಗುರೂಪಸಾಏಣ || ೬೪ ||**

ಭಾವಾರ್ಥ : ಈ ಆತ್ಮನು ದರ್ಶನಜ್ಞಾನಮಯನೆಂದೂ, ವೀತರಾಗ ಚಾರಿತ್ರವಂತನೆಂದೂ, ಗುರುಪ್ರಸಾದದಿಂದರಿತು ಸದಾಕಾಲದಲ್ಲಿ ಧ್ಯಾನಿಸತಕ್ಕದ್ದು.



## ನಿರ್ಮಲ ಆತ್ಮಭಾವನೆಯಿಂದಲೇ ಮೋಕ್ಷಪ್ರಾಪ್ತಿಯು

**ಜಾಮ ಣ ಭಾವಹು ಜೀವ ತುಹುಂ ಣಿಮ್ಮಲಅಪ್ಪಸಹಾಉ |**
**ತಾಮ ಣ ಲಬ್ಭಇ ಸಿವಗಮಣು ಜಹಿಂ ಭಾವಹು ತಹಿಂ**
**ಜಾಉ || ೨೭ ||**

ಅನ್ವಯಾರ್ಥ : ಜೀವ–ಎಲೈ ಜೀವನೇ ! ಜಾಮ ತುಹುಂ ಣಿಮ್ಮಲ ಅಪ್ಪಸಹಾಉ ಣ ಭಾವಹು–ನೀನು ಎಷ್ಟರವರೆಗೆ ನಿರ್ಮಲಾತ್ಮನ ಸ್ವಭಾವ

ವನ್ನು ಚಿಂತಿಸಲಾರೆಯೋ, ತಾವು ಸಿವಗಮಣು ಣ ಲಬ್ಭಇ–ಅಷ್ಟಸವರೆಗೆ ನೀನು ಮೋಕ್ಷವನ್ನು ಪಡೆಯಲಾರೆ. ಜಹಿಂ ಭಾವಹು ತಹಿಂ ಜಾಉ–ಎಲ್ಲಿಗೆ ಹೋಗಬೇಕೋ ಅಲ್ಲಿಗೆ ಹೋಗು.

**ಭಾವಾರ್ಥ :** ಪುನಃ ಅದನ್ನೇ ದೃಢಪಡಿಸುತ್ತಾರೆ. ಪರಿಶುದ್ಧಾತ್ಮ ಭಾವನೆಯೇ ಸಂಸಾರಸಾಗರವನ್ನು ಪಾರುಗೊಳಿಸುವ ನೌಕೆಯಂತಿರುತ್ತದೆ. ಅದು ನಿಶ್ಚಯ ರತ್ನತ್ರಯ ಸ್ವರೂಪವೂ, ಶುದ್ಧಾತ್ಮನ ಭವರೂಪವೂ ಆಗಿರುತ್ತದೆ. ಇದೇ ಸಂವರ ಮತ್ತು ನಿರ್ಜರಾ ತತ್ವವು. ಈ ಭಾವನೆಯ ಪ್ರಾಪ್ತಿಗಾಗಿ ಯಾವಯಾವ ಸಾಧನಗಳು ಮಾಡಲ್ಪಡುವುವೋ ಅವೆಲ್ಲವು ವ್ಯವಹಾರ ಧರ್ಮಗಳೆಂದೇ ಭಾವಿಸಿರಿ ಅಥವಾ ನಿಮಿತ್ತಕಾರಣಗಳೆಂದರೂ ಸರಿಯೇ. ಕೆಲವು ಅಜ್ಞಾನೀ ಜೀವಿಗಳು ನಿಜವಾದ ಧರ್ಮವನ್ನು ಬಿಟ್ಟು, ಕೇವಲ ವ್ಯವಹಾರ ಧರ್ಮದಲ್ಲಿಯೇ ತನ್ಮಯರಾಗಿರುತ್ತಾರೆ. ಅವರಿಗೆ ಒಂದು ಹೆಜ್ಜೆಯೂ ಮೋಕ್ಷಮಾರ್ಗದಲ್ಲಿ ನಡೆಯಲು ಸಾಧ್ಯವಾಗಲಾರದು.

ನಿಶ್ಚಯ ಧರ್ಮವು ಅಂತರಂಗದಲ್ಲಿಲ್ಲದೆ ಬಾಹ್ಯದಲ್ಲಿಲ್ಲವು. ಆದರೂ ಅದನ್ನು ಜಾಗೃತಾವಸ್ಥೆಗೆ ತರುವುದಕ್ಕಾಗಿ ಗೃಹಸ್ಥರಿಗೆ ಉಪದೇಶವನ್ನಿತ್ತಿರುವುದೇನೆಂದರೆ- “ಶ್ರೀ ಜಿನಮಂದಿರಕ್ಕೆಹೋಗಿ. ದೇವದರ್ಶನ, ಗುರು ಸೇವೆ ಮೊದಲಾದವುಗಳನ್ನು ಮಾಡಬೇಕು. ಶಾಸ್ತ್ರಭವನದಲ್ಲಿ ಶಾಸ್ತ್ರಸ್ವಾಧ್ಯಾಯವನ್ನು ಮಾಡಬೇಕು, ನಿರ್ವಾಣ ಸ್ಥಾನಗಳಾದ ಸಮ್ಮೇದಶಿಖರ, ಊರ್ಜಯಂತಗಿರಿ (ಗಿರಿನಾರ), ಪಾವಾಪುರೀ, ಶ್ರವಣಬೆಳಗೊಳ, ಮಾಂಗಿತುಂಗೀ, ಮುಕ್ತಾಗಿರಿ ಮೊದಲಾದ ಪರಮಪಾವನ ತೀರ್ಥಕ್ಷೇತ್ರಗಳ ಯಾತ್ರೆ ಮಾಡಬೇಕು. ಏಕಾಂತ ಸ್ಥಾನಗಳಾದ ವನ, ಉಪವನ, ನದೀತಟ, ಪರ್ವತ ಮೊದಲಾದ ಸ್ಥಾನಗಳಲ್ಲಿ ಸಾಮಾಯಿಕವನ್ನು ಮಾಡಬೇಕು. ಉಪವಾಸ, ಪ್ರೋಷಧೋಪವಾಸವನ್ನು ಮಾಡಬೇಕು”. ಇವೇ ಮೊದಲಾದ ಕಾರ್ಯಗಳೆಲ್ಲಾ ನಿಮಿತ್ತಮಾತ್ರಗಳಾಗಿವೆ. ಕೆಲವು ಜನ ಅಜ್ಞಾನಿಗಳು ಮೇಲೆ ಹೇಳಿದ ನಿಮಿತ್ತಮಾತ್ರದ ಕಾರ್ಯಗಳೇ ಮೋಕ್ಷಮಾರ್ಗವೆಂದು ತಿಳಿಯುವರು. ಅದು ಮಹಾ ಅಜ್ಞಾನವೆಂದೇ ಹೇಳಬೇಕು. ಜಿನಮಂದಿರಾದಿಗಳು, ತೀರ್ಥಕ್ಷೇತ್ರಾದಿಗಳು, ಜಿನಪ್ರತಿಮೆಗಳು ಇವುಗಳ ಅವಲಂಬನೆಯಿಂದಲೇ ತನ್ನಂತರಂಗದಲ್ಲಿ

ಆತ್ಮದರ್ಶನ ಅಥವಾ ಪೂಜನ ಅಥವಾ ಆತ್ಮರೂಪ ತೀರ್ಥಗಳ ಯಾತ್ರೆಯನ್ನು ಮಾಡಿದಾಗಲೇ ನಿಮಿತ್ತ ಪ್ರಾಪ್ತಿಯು ಸಫಲವಾಗುವುದು.

ಇದೇ ಪ್ರಕಾರವಾಗಿ ಸಾಧು ಸಂತರು ಉಪದೇಶವನ್ನಿತ್ತಿರುವುದೇ ನೆಂದರೆ: ನಿರ್ಜನಸ್ಥಾನಗಳಾದ ವನ, ಪರ್ವತ, ಗುಹೆ, ನದೀತಟ, ಶೂನ್ಯ ಗೃಹಗಳು ಮೊದಲಾದ ಏಕಾಂತ ಸ್ಥಾನಗಳಲ್ಲಿ ಕುಳಿತುಕೊಂಡು ಧ್ಯಾನಾ ಭ್ಯಾಸವನ್ನು ಮಾಡುತ್ತಿರಬೇಕು. ಇಚ್ಛೆಗಳನ್ನು ವೃದ್ಧಿಗೊಳಿಸದಂತೆ ಇಂದ್ರಿಯ ಗಳನ್ನು ಮರ್ದಿಸುತ್ತಿರುವಿಕೆಯು, ಚಾತುರ್ಮಾಸವನ್ನಲ್ಲದೆ ಇತರ ದಿವಸಗಳಲ್ಲಿ ನಗರದ ಹೊರಭಾಗದಲ್ಲಿ ಐದು ದಿವಸಗಳ ನಂತರ ಇರದಿರುವಿಕೆಯು, ಗ್ರಾಮಗಳಲ್ಲಿ ಒಂದು ದಿವಸಕ್ಕಿಂತ ಅಧಿಕ ಸಮಯ ಇರದಿರುವಿಕೆಯು, ಗೃಹ ಸ್ಥನ ಮನೆಯಲ್ಲಿ ಆಹಾರವನ್ನು ಸ್ವೀಕರಿಸಿ ವನಕ್ಕೆ ಹೊರಟುಹೋಗುವಿಕೆಯು, ನಗ್ನನಾಗಿ ಶೀತ, ಉಷ್ಣ, ಸೊಳ್ಳೆ, ನೊಣ, ನಗ್ನತ್ವ, ಸ್ತ್ರೀ ಮೊದಲಾದ 22 ಪರೀಷಹಗಳನ್ನು ಸಹಿಸುವಿಕೆಯು, ಮೌನದಿಂದಿರುವಿಕೆಯು, ಮನ, ವಚನ, ಕಾಯಗಳೆಂಬ ಗುಪ್ತತ್ರಯಗಳನ್ನು ಪಾಲಿಸುವಿಕೆಯು, ಗಮನಮಾಡುವಾಗ ನೋಡಿಕೊಂಡು ನಡೆಯುವಿಕೆಯು, ಮುನಿಸಂಘದಲ್ಲಿಯೇ ಇರುವಿಕೆಯು, ಶಾಸ್ತ್ರ ಗ್ರಂಥಗಳನ್ನು ಓದಿ ತತ್ವಚಿಂತಕನಾಗುವಿಕೆಯು, ತೀರ್ಥಯಾತ್ರಾದಿ ಗಳನ್ನು ಮಾಡುವಿಕೆಯು ಮೊದಲಾದವುಗಳೆಲ್ಲವೂ ನಿಮಿತ್ತಗಳಾಗಿವೆ. ಇವೆ ಲ್ಲವುಗಳನ್ನು ಒಂದುಗೂಡಿಸಿದ ಸಾಧುವು ಶುದ್ಧಾತ್ಮಾನುಭವವನ್ನು ಮಾಡಿ ಕೊಳ್ಳಬೇಕು. ಯಾವ ಅಜ್ಞಾನಿ ಸಾಧುವು ಈ ಎಲ್ಲ ಬಾಹ್ಯಕ್ರಿಯೆಗಳನ್ನೇ ಮೋಕ್ಷ ಮಾರ್ಗವೆಂದು ಪರಿಭಾವಿಸಿ ಸಂತೋಷಪಡುತ್ತಾ, ತನ್ನಾತ್ಮನ ಶುದ್ಧ ಸ್ವಭಾವದ ದರ್ಶನ, ಮನನ ಮತ್ತು ಅನುಭವಾದಿಗಳನ್ನು ಪಡೆಯದಿದ್ದರೆ ಅವನು ಮೋಕ್ಷಮಾರ್ಗಿಯಲ್ಲವು. ಅವನು ಸಂಸಾರಕ್ಕೆ ಕಾರಣವಾದ ಪುಣ್ಯ ವನ್ನು ಬಂಧಿಸಿಕೊಂಡು ಭವಸಾಗರ ಪರಂಪರೆಯಲ್ಲಿಯೇ ಭ್ರಮಿಸುವಂತವ ನಾಗುವನು.

ನಿಜವಾಗಿ ತನ್ನಾತ್ಮನು ನಿರ್ಮಲವಾದ ಭೂಮಿಯಲ್ಲಿ ಸಂಚರಿಸುವುದೇ ಚಾರಿತ್ರವಾಗಿರುತ್ತದೆ. ಇದೇ ಮೋಕ್ಷಮಾರ್ಗವೆಂದು ನಿಶ್ಚಯಿಸಿಕೊಂಡು ತತ್ವಗಳ ಪ್ರಾಪ್ತಿಯ ಉಪಾಯವನ್ನು ಮಾಡಬೇಕು.

ಸಮಾಧಿಶತಕದಲ್ಲಿ ಹೇಳಿರುತ್ತಾರೆ:

**ಗ್ರಾಮೋಽರಣ್ಯಮಿತಿ ದ್ವೇಧಾ ನಿವಾಸೋಽನಾತ್ಮದರ್ಶಿನಾಂ |**
**ದೃಷ್ಟಾತ್ಮನಾಂ ನಿವಾಸಸ್ತು ವಿವಿಕ್ತಾತ್ಮೈವ ನಿಶ್ಚಲಃ || ೭೩ ||**

**ಭಾವಾರ್ಥ :** ಯಾವನು ತನ್ನ ಆತ್ಮನನ್ನು ತಾನು ನೋಡುವುದಿಲ್ಲವೋ ಅವನು ಬಹಿರಾತ್ಮನು. ಅವನಿಗೆ ಎರಡು ವಿಧದ ವಿಕಲ್ಪಗಳುಂಟಾಗುವುವು. ಗ್ರಾಮದಲ್ಲಿ ವಾಸಿಸಬಾರದು; ವನದಲ್ಲಿ ವಾಸಿಸಬೇಕು. ವನದಲ್ಲಿ ವಾಸಿಸುವುದರಿಂದ ಹಿತವಾಗುವುದೆಂಬ ಭಾವನೆಯಿಂದ ವನವಾಸವೇ ಸಂತೋಷಪ್ರದವಾಗಿರುತ್ತದೆ. ಆದರೆ ಆತ್ಮದರ್ಶನಮಾಡುವವನ ನಿವಾಸವು ಪರಭಾವಗಳಿಂದ ಭಿನ್ನವೂ, ನಿಶ್ಚಲವೂ ಆದ ಶುದ್ಧಾತ್ಮವಾಗಿರುತ್ತದೆ. ಅವನು ಮಾತ್ರ ನಿಮಿತ್ತಮಾತ್ರದಿಂದ ಸಂತುಷ್ಟನಾಗದೆ, ಆತ್ಮ ನಿವಾಸವೇ ತನ್ನ ನಿಜವಾದ ವಾಸ, ಆಸನವೆಂದು ಭಾವಿಸುತ್ತಾನೆ ಮತ್ತು ತಿಳಿಯುತ್ತಾನೆ.

ಮೋಕ್ಷ ಪಾಹುಡದಲ್ಲಿ ಹೇಳಿರುತ್ತಾರೆ:

**ಜೋ ಇಚ್ಛಇ ಣಿಸ್ಸರಿದುಂ ಸಂಸಾರಮಹಣ್ಣವಾಉ ರುದ್ದಾಓ |**
**ಕಮ್ಮಿಂಧಣಾಣ ಡಹಣಂ ಸೋ ಝಾಯಇ ಅಪ್ಪಯಂ ಸುದ್ಧಂ ||೨೬**

**ಭಾವಾರ್ಥ :** ಯಾರು ಭಯಾನಕ ಸಂಸಾರ ಸಮುದ್ರದಿಂದ ಪಾರಾಗಲು ಇಚ್ಛಿಸುವರೋ, ಕರ್ಮರೂಪ ಸೌದೆಯನ್ನು ಸುಟ್ಟು ಹಾಕಲು ಉದ್ದೇಶಿಸುವರೋ ಅವರಿಗೆ ಶುದ್ಧಾತ್ಮ ಧ್ಯಾನವು ಅತ್ಯಾವಶ್ಯಕವಾಗಿದೆ. ಅದೇ ಮೋಕ್ಷ ಮಾರ್ಗವು. ಆತ್ಮರಸಿಕನೇ ಮೋಕ್ಷಮಾರ್ಗಿಯಾಗಿರುತ್ತಾನೆ.

## ತ್ರಿಲೋಕ ಪೂಜ್ಯ ಜಿನನೂ ಆತ್ಮನೇ ಆಗಿರುತ್ತಾನೆ

**ಜೋ ತಇಲೋಯಹಂ ಝೇಉ ಜಿಣು ಸೋ ಅಪ್ಪಾ ಣಿರು ವುತ್ತು |**
**ಣಿಚ್ಛಯಣಇ ಏಮಇ ಭಣಿಉ ಏಹಉ ಜಾಣಿ ಣಿಭಂತು || ೨೮ ||**

**ಅನ್ವಯಾರ್ಥ :** ಜೋ ತಇಲೋಯಹಂ ಝೇಉ ಜಿಣು-ಯಾರು ತ್ರಿಲೋಕವರ್ತಿ ಪ್ರಾಣಿಗಳಿಂದ ಧ್ಯಾನಿಸಲು ಯೋಗ್ಯನಾದ ಜಿನೇಂದ್ರನಿರು

ತ್ತಾಸೆಯೋ, ಸೋ ಅಪ್ಪಾ ಜಿರು ವುತ್ತು-ಈ ಆತ್ಮನೇ ನಿಶ್ಚಯ ನಯದಿಂದ ಹೇಳಲಾಗಿದೆ. ಣಿಚ್ಛಯಣಇ ಏಮುಇ ಭಣಿಉ-ನಿಶ್ಚಯ ನಯದಿಂದ ಹೇಗೆ ಹೇಳುವುದೆಂದು, ಏಹಉ ಣಿಭಂತು ಜಾಣೆ-ನಿಃಸಂದೇಹವಾಗಿ ನಂಬು.

**ಭಾವಾರ್ಥ:** ಯಥಾರ್ಥವಾಗಿ ಈ ಆತ್ಮನೇ ಜಿನೇಂದ್ರನಾಗಿರುವನು. ಆತನನ್ನು ಮೂರು ಲೋಕದ ಭಕ್ತ ಜನರು ಧ್ಯಾನಿಸುತ್ತಾರೆ. ಪೂಜಿಸುತ್ತಾರೆ. ಇದನ್ನು ಇಂದ್ರಾದಿಗಳೂ ಒಪ್ಪಿಕೊಳ್ಳುತ್ತಾರೆಂದು ಪ್ರಸಿದ್ಧವಾಗಿರುತ್ತದೆಂಬುದು ಈ ಗಾಥೆಯಲ್ಲಿ ಹೇಳಿದೆ. ಇವರೆಲ್ಲರು ಅರಹಂತ ದೇವರನ್ನು ನಮಸ್ಕರಿಸುತ್ತಾರೆ.

**ಭವಣಾಲಯ ಚಾಲೀಸಾ ವಿಂತರ ದೇವಾಣ ಹೋಂತಿ ಬತ್ತೀಸಾ।**
**ಕಪ್ಪಾವುರ ಚೌವೀಸಾ ಚಂದೋ ಸೂರೋ ಣರೋ ತಿರಿಓ ॥**

**ಭಾವಾರ್ಥ:** ಭವನವಾಸೀ ದೇವತೆಗಳಲ್ಲಿ ಅಸುರಕುಮಾರ, ನಾಗಕುಮಾರ, ವಿದ್ಯುತ್‌ಕುಮಾರ, ಸುವರ್ಣಕುಮಾರ, ಅಗ್ನಿಕುಮಾರ, ವಾತಕುಮಾರ, ಸ್ತನಿತಕುಮಾರ, ಉದಧಿಕುಮಾರ, ದ್ವೀಪಕುಮಾರ, ದಿಕ್ಕುಮಾರ ಎಂದು ಹತ್ತು ವಿಧವು. ಪ್ರತಿಯೊಂದರಲ್ಲಿ ಎರಡೆರಡು ಜನ ಇಂದ್ರರು, ಎರಡೆರಡು ಜನ ಪ್ರತೀಂದ್ರರು-ಹೀಗೆ ಒಟ್ಟಿಗೆ ನಲವತ್ತು ಜನ ಭವನವಾಸಿ ಇಂದ್ರರು. ವ್ಯಂತರ ದೇವತೆಗಳಲ್ಲಿ ಕಿನ್ನರ, ಕಿಂಪುರುಷ, ಮಹೋರಗ, ಗಂಧರ್ವ, ಯಕ್ಷ, ರಾಕ್ಷಸ, ಭೂತ ಮತ್ತು ಪಿಶಾಚಿಗಳೆಂದು ಎಂಟು ವಿಧವು. ಇವರಲ್ಲಿಯೂ ಪ್ರತಿಯೊಬ್ಬರಲ್ಲಿ ಎರಡೆರಡು ಜನ ಇಂದ್ರರು ಮತ್ತು ಪ್ರತೀಂದ್ರರು-ಹೀಗೆ ಮುವತ್ತೆರಡು ಜನ ವ್ಯಂತರೇಂದ್ರರು. ಕಲ್ಪಗಳಲ್ಲಿ ಮೊದಲನೆಯ 4 ರಲ್ಲಿ 4 ಇಂದ್ರರು 4 ಪ್ರತೀಂದ್ರರು, ಮಧ್ಯಭಾಗದ 8 ರಲ್ಲಿ 4 ಇಂದ್ರರು 4 ಪ್ರತೀಂದ್ರರು, ಕೊನೆಯ 4 ರಲ್ಲಿ 4 ಇಂದ್ರರು 4 ಪ್ರತೀಂದ್ರರು. - ಹೀಗೆ ಒಟ್ಟು 12 ಇಂದ್ರರು ಮತ್ತು 12 ಪ್ರತೀಂದ್ರರು ಸೇರಿ ಇಪ್ಪತ್ತುನಾಲ್ಕು ಇಂದ್ರರು. ಜೋತಿಷ್ಕ ದೇವತೆಗಳಲ್ಲಿ ಇಂದ್ರನಾದ ಚಂದ್ರ, ಪ್ರತೀಂದ್ರನಾದ ಸೂರ್ಯ ಹೀಗೆ ಇಬ್ಬರು ಇಂದ್ರರು. ಮಾನವರಲ್ಲಿ ಇಂದ್ರನೆಂದೆನ್ನಿಸಿಕೊಳ್ಳುವ ಚಕ್ರವರ್ತಿ ಮತ್ತು ತಿರ್ಯಂಚ ಪ್ರಾಣಿಗಳಲ್ಲಿ ಇಂದ್ರ ಅಷ್ಟಾಪದವು. ಹೀಗೆ ಒಟ್ಟಿಗೆ $40 + 32 + 24 + 2 + 1 + 1 = 100$ ಜನ ಇಂದ್ರರು ಪರಮಾತ್ಮನನ್ನು ನಮಿಸುತ್ತಾರೆ ಮತ್ತು ಪೂಜಿಸುತ್ತಾರೆ.

ಆ ನಮಸ್ಕಾರವು ವ್ಯವಹಾರ ನಮಸ್ಕಾರವೆಂದೂ, ನಿಶ್ಚಯ ನಮಸ್ಕಾರವೆಂದೂ ಎರಡು ಪ್ರಕಾರವಾಗಿದೆ. ಶರೀರಾದಿ ಬಾಹ್ಯ ಪದಾರ್ಥಗಳ ಪ್ರಶಂಸೆಯ ಮೂಲಕ ಸ್ತುತಿ, ಸ್ತೋತ್ರಾದಿಗಳಿಗೆ ವ್ಯವಹಾರ ನಮಸ್ಕಾರವೆಂದೂ, ಆತ್ಮೀಕ ಗುಣಗಳ ಸ್ತುತಿಗೆ ನಿಶ್ಚಯ ನಮಸ್ಕಾರವೆಂದೂ ಹೇಳುತ್ತಾರೆ. ಉದಾಹರಣೆ: ಅರಹಂತರ ಶರೀರವು ಪರಮ ದೇದಿಪ್ಯಮಾನವಾಗಿರುತ್ತದೆಂದೂ, ೧೦೦೮ ಶುಭ ಲಕ್ಷಣದಿಂದ್ಯುಕ್ತವಾಗಿರುವುದೆಂದೂ ನಿರಕ್ಷರಾತ್ಮಕ ದಿವ್ಯಧ್ವನಿಯು ಹೊರಡುವುದೆಂದೂ, ಸಮವಸರಣ ಮಹಾಸಭೆಯಲ್ಲಿ ವಿರಾಜಮಾನರಾಗಿರುವರೆಂದೂ, ಹನ್ನೆರಡು ಸಭೆಗಳಲ್ಲಿ ಕುಳಿತಿರುವ ಪ್ರಾಣಿಗಳಿಗೆ ಧರ್ಮೋಪದೇಶವನ್ನು ಮಾಡುವವರೆಂದೂ-ಇವೇ ಮೊದಲಾಗಿ ಸ್ತುತಿಸುವುದು ವ್ಯವಹಾರ ಸ್ತುತಿಯಾಗಿರುತ್ತದೆ.

ಶ್ರೀ ಅರಹಂತ ಪರಮ ದೇವನು ಅನಂತ ದರ್ಶನ, ಅನಂತಜ್ಞಾನ, ಅನಂತ ಸುಖ, ಅನಂತ ವೀರ್ಯಧಾರಿಯೆಂದೂ, ಪರಮ ವೀತರಾಗನೆಂದೂ, ಪರಮಾನಂದಮಯನೆಂದೂ, ಅಸಂಖ್ಯಾತ ಪ್ರದೇಶಿಯೆಂದೂ, ಅಮೂರ್ತಿಯೆಂದೂ ಇತ್ಯಾದಿ, ಆತ್ಮಾಶ್ರಿತವಾದ ಸ್ತುತಿಯೇ ನಿಶ್ಚಯ ಸ್ತುತಿ ಅಥವಾ ನಿಶ್ಚಯ ನಮಸ್ಕಾರವಾಗಿರುತ್ತದೆ. ಅರಹಂತ ಸಿದ್ಧಾದಿ ಪಂಚಪರಮೇಷ್ಠಿ ಆತ್ಮರುಗಳ ಸ್ತುತಿಯೇ ಪ್ರತಿಯೊಂದು ಆತ್ಮನ ಸ್ತುತಿಯಾಗಿದೆ. ಯಾಕೆಂದರೆ ನಿಶ್ಚಯ ನಯದಿಂದ ಪ್ರತಿಯೊಂದು ಆತ್ಮವು ಆತ್ಮೀಕ ಗುಣಗಳನ್ನು ಹೊಂದಿರುವ ಭಂಡಾರವಾಗಿದೆ. ನಿಶ್ಚಯದಿಂದ ಪ್ರಪಂಚದ ಸಕಲ ಜೀವಗಳು ಸಮಾನ ಗುಣಗಳುಳ್ಳವುಗಳಾಗಿವೆ. ಆದ್ದರಿಂದ ಮೂರು ಲೋಕದ ಪ್ರಾಣಿವರ್ಗವು ಯಾರನ್ನು ಧ್ಯಾನಿಸುತ್ತವೆಯೋ, ಪೂಜಿಸುತ್ತವೆಯೋ,. ವಂದಿಸುತ್ತವೆಯೋ ಅವರೇ ಪರಮಾತ್ಮರುಗಳು. ಅವರೇ ನಾನಾಗಿರುತ್ತೇನೆ. ನಾನೇ ತ್ರಿಲೋಕ ಪೂಜ್ಯ ಪರಮಾತ್ಮ ಜಿನೇಂದ್ರನಾಗಿರುತ್ತೇನೆಂದು ನಿಃಸಂದೇಹವಾಗಿ ತಿಳಿಯುವುದೇ ಮೋಕ್ಷಮಾರ್ಗವಾಗಿರುತ್ತದೆ.

ಸಮಯಸಾರದಲ್ಲಿ ಹೇಳಿದ್ದಾರೆ:

**ವವಹಾರಣಓ ಭಾಸದಿ ಜೀವೋ ದೇಹೋ ಯ ಹವದಿ ಖಲು ಇಕ್ಕೋ**
**ಣ ದು ಣಿಚ್ಛಯಸ್ಸ ಜೀವೋ ದೇಹೋ ಯ ಕದಾವಿ**
**ಏಕಟ್ಠೋ ॥ ೩೨ ॥**

ಇಣಮಣ್ಣಂ ಜೀವಾದೋ ದೇಹಂ ಪುಗ್ಗಲಮಯಂ ಥುಣಿತ್ತು
ಮುಣೀ ।
ಮಣ್ಣದಿ ಹು ಸಂಥುದೋ ವಂದಿದೋ ಮಏ ಕೇವಲೀ
ಭಯವಂ ॥ ೩೩ ॥

ತಂ ಣಿಚ್ಛಯೇಣ ಜುಜ್ಜದಿ ಣ ಸರೀರಗುಣಾ ಹಿ ಹೋಂತಿ
ಕೇವಲಿಣೋ ।
ಕೇವಲಿಗುಣೋ ಥುಣದಿ ಜೋ ಸೋ ತಚ್ಚಂ ಕೇವಲಿಂ ಥುಣದಿ॥೩೪॥

ಜೋ ಮೋಹಂ ತು ಜಿಣಿತ್ತಾ, ಣಾಣ ಸಹಾವಾಧಿಯಂ ಮುಣದಿ
ಆದಂ ।
ತಂ ಜಿದ ಮೋಹಂ ಸಾಹುಂ ಪರಮಟ್ಠವಿಯಾಣಯಾ ವೇಂತಿ ॥೩೫॥

**ಭಾವಾರ್ಥ :** ವ್ಯವಹಾರ ನಯದಿಂದ ಶರೀರ ಮತ್ತು ಆತ್ಮ ಒಂದಾಗಿದೆ. ನಿಶ್ಚಯನಯದಿಂದ ಶರೀರ ಮತ್ತು ಆತ್ಮ ಭಿನ್ನವಾಗಿದೆ. ಮುನಿ ಸಮೂಹವು ಕೇವಲೀ ಭಗವಂತನ ಪುದ್ಗಲಮಯವಾದ ಶರೀರದ ಸ್ತುತಿಯನ್ನು ವ್ಯವಹಾರ ನಯದಿಂದ ಮಾಡಿರುವುದರಿಂದಲೇ ನಾವೆಲ್ಲರೂ ಕೇವಲೀ ಭಗವಂತನ ಸ್ತುತಿಯನ್ನೂ, ವಂದನೆಯನ್ನೂ ಮಾಡುತ್ತೇವೆ. ಆದರೆ ನಿಶ್ಚಯ ನಯದ ಅಪೇಕ್ಷೆಯಿಂದ ಸರಿಯಲ್ಲವು. ಕಾರಣ ಶರೀರ ಗುಣಗಳು ಕೇವಲೀ ಭಗವಂತನ ಆತ್ಮಗುಣಗಳಲ್ಲವು. ನಿಶ್ಚಯನಯದಿಂದ ಯಾವ ಕೇವಲಿ ಪರಮಾತ್ಮನ ಸ್ತುತಿ ಸ್ತೋತ್ರವಿದೆಯೋ ಅದೇ ಕೇವಲಿ ಪರಮಾತ್ಮನ ಯಥಾರ್ಥ ಸ್ತುತಿಯಾಗಿರುತ್ತದೆ.

## ಮಿಥ್ಯಾದೃಷ್ಟಿಯ ವ್ರತಾದಿಗಳು ಮೋಕ್ಷಮಾರ್ಗ ವಲ್ಲವು

ವಯತವಸಂಜಮಮೂಲಗುಣ ಮೂಢಹ ಮೋಕ್ಖ ಣಿವುತ್ತು ।
ಜಾವ [redacted] ಜಾಣಇ ಇಕ್ಕ ಪರು ಸುದ್ಧಉಭಾಉಪವಿತ್ತು ॥೨೯॥

**ಅನ್ವಯಾರ್ಥ :** ಜಾವ ಇಕ್ಕ ಪರು ಸುದ್ಧಉಪವಿತ್ತು ಭಾಉ ಣ ಜಾಣಇ–ಎಷ್ಟರವರೆಗೆ ಪರಿಶುದ್ಧ ಪರಮಪವಿತ್ರ ಆದ ಭಾವದ ಅನುಭವ ವುಂಟಾಗಲಾರದೋ, ಮೂಢಹ ವಯತವಸಂಜಮ ಮೂಲಗುಣ ಮೋಕ್ಖ ಣಿವುತ್ತು–ಅಷ್ಟರವರೆಗೆ ಮಿಥ್ಯಾದೃಷ್ಟೀ ಅಜ್ಞಾನೀ ಜೀವನಿಂದ ಮಾಡಲ್ಪ ಡುವ ವ್ರತ, ತಪ, ಸಂಯಮ ಮತ್ತು ಮೂಲಗುಣಗಳ ಪಾಲನೆಯೂ ಕೂಡಾ ಮೋಕ್ಷಪ್ರಾಪ್ತಿಯ ಉಪಾಯಗಳೆಂದು ಹೇಳಲಾಗುವುದಿಲ್ಲವು.

**ಭಾವಾರ್ಥ :** ನಿಶ್ಚಯನಯದಿಂದ ಆತ್ಮಭಾವನೆಯೇ ಮೋಕ್ಷಮಾರ್ಗ ವಾಗಿದೆ. ಶುದ್ಧೋಪಯೋಗ ಭಾವನೆಯನ್ನು ಭಾವಿಸದ ಅಥವಾ ಶುದ್ಧ ತತ್ವ ಗಳ ಅನುಭವಮಾಡಿಕೊಳ್ಳದ ಚಾರಿತ್ರವು ಮೋಕ್ಷಮಾರ್ಗಕ್ಕನುಕೂಲವಾಗ ಲಾರದು. ಕಿಂತು ಸಂಸಾರಕ್ಕೆ ಮಾರ್ಗವೂ, ಪುಣ್ಯಬಂಧವೂ ಆಗಿರುತ್ತದೆ. ಮಿಥ್ಯಾದೃಷ್ಟಿ ಆತ್ಮಜ್ಞಾನಶೂನ್ಯನಾದ ಬಹಿರಾತ್ಮನು ಬಾಹ್ಯದಲ್ಲಿ ಮುನಿವೇಷ ವನ್ನು ಧರಿಸಿದ್ದರೂ, ಪಂಚಮಹಾವ್ರತಗಳನ್ನು ಧರಿಸಿದ್ದರೂ, ಹನ್ನೆರಡು ತಪಸ್ಸುಗಳನ್ನು ಪಾಲಿಸುತ್ತಿದ್ದರೂ, ಇಂದ್ರಿಯ ಸಂಯಮ, ಪ್ರಾಣಿಸಂಯಮ ಗಳನ್ನು ಪಾಲಿಸುತ್ತಿದ್ದರೂ ಮತ್ತು ಇಪ್ಪತ್ತೆಂಟು ಮೂಲಗುಣಗಳನ್ನು ಪರಿ ಪಾಲಿಸುತ್ತಿದ್ದರೂ ಕೂಡ ಸಂವರೆ ಮತ್ತು ನಿರ್ಜರೆ ತತ್ವಗಳನ್ನು ಪ್ರಾಪ್ತ ಮಾಡಿಕೊಳ್ಳದೆ ಮುಕ್ತಿಯನ್ನು ಪಡೆಯಲಾರನು. ಅಂಥಹ ದ್ರವ್ಯಲಿಂಗೀ ಮುನಿಯು ಪುಣ್ಯವನ್ನು ಸಂಪಾದಿಸಿ, ಒಂಭತ್ತನೆಯ ಗ್ರೈವೇಯಕದವರೆಗೆ ಹೋಗಿ ಅಹಮಿಂದ್ರನಾಗಬಹುದು. ಆದರೆ ಸಂಸಾರ ಬಂಧನದಿಂದ ಬಿಡುಗಡೆ ಯಾಗುವ ಸಮ್ಯಗ್ದರ್ಶನವನ್ನು ಪಡೆಯದೆ ಅನಂತಸಂಸಾರಸಾಗರದಲ್ಲಿ ಭ್ರಮಿ ಸುವನು. ವ್ಯವಹಾರ ಚಾರಿತ್ರವನ್ನು ನಿಮಿತ್ತ ಮಾತ್ರ ಅವಲಂಬನೆಯಾಗಿರಿಸಿ ಕೊಂಡು, ನಿಶ್ಚಯ ಚಾರಿತ್ರವನ್ನು ಉಪಾದಾನ ಕಾರಣವೆಂದು ತಿಳಿದು, ಸ್ವಾನುಭವದ ಅಭ್ಯಾಸವನ್ನು ಮಾಡಿಕೊಂಡದ್ದೇ ಆದರೆ ಮೋಕ್ಷಮಾರ್ಗ ವನ್ನು ನಿಶ್ಚಯ ಮಾಡಿಕೊಳ್ಳಬಹುದು.

ಶ್ರೀ ಕುಂದಕುಂದಾಚಾರ್ಯರು ಪ್ರವಚನಸಾರದಲ್ಲಿ ಇಪ್ಪತ್ತೆಂಟು ಮೂಲ ಗುಣಗಳನ್ನು ಹೇಳಿರುತ್ತಾರೆ :

**ವದಸಮಿದಿಂದಿಯರೋಧೋ ಲೋಚಾವಸ್ಸಯಮಚೇಲಮಣ್ಹಾಣಂ ।**
**ಖಿದಿಸಯಣಮದಂತವಣಂ ಠಿದಿಭೋಯಣ ಮೆ ಗಭತ್ತಂ ಚ ॥ ೮ ॥**

**ಏದೇ ಖಲು ಮೂಲಗುಣಾ ಸಮಣಾಣಂ ಜಿಣವರೇಹಿಂ ಪಣ್ಣತ್ತಾ।**
**ತೇಸು ಪಮತ್ತೋ ಸಮಣೋ ಛೇದೋ ವಟ್ಠಾವಗೋ ಹೋದಿ ॥೯॥**

ಭಾವಾರ್ಥ : ಅಹಿಂಸಾ, ಸತ್ಯ, ಅಚೌರ್ಯ, ಬ್ರಹ್ಮಚರ್ಯ, ಪರಿಗ್ರಹ ತ್ಯಾಗಗಳೆಂಬೈದು ಮಹಾವ್ರತಗಳು. ಈರ್ಯಾಸಮಿತಿ, ಭಾಷಾಸಮಿತಿ, ಏಷಣಾಸಮಿತಿ, ಆದಾನ ನಿಕ್ಷೇಪಣಸಮಿತಿ ಮತ್ತು ವ್ಯುತ್ಸರ್ಗಸಮಿತಿಗಳೆಂಬ ಐದು ಸಮಿತಿಗಳು. ಇಂದ್ರಿಯಗಳ ನಿರೋಧ ಐದು. ಸಮತಾ, ವಂದನಾ, ಸ್ತುತಿ, ಪ್ರತಿಕ್ರಮಣ, ಸ್ವಾಧ್ಯಾಯ, ಕಾಯೋತ್ಸರ್ಗಗಳೆಂಬ ಆರು ಅವಶ್ಯಕ ಕ್ರಿಯೆಗಳು ಮತ್ತು ೧. ಕೇಶಲೋಚ, ೨. ನಗ್ನತ್ವ, ೩. ಅಸ್ನಾನ (ಸ್ನಾನ ಮಾಡದಿರುವಿಕೆ), ೪. ಸ್ವಚ್ಛಭೂಮಿಯಲ್ಲಿ ಮಲಗುವಿಕೆ, ೫. ಅದಂತಧಾವನ (ಹಲ್ಲುಗಳನ್ನುಜ್ಜದಿರುವಿಕೆ), ೬. ನಿಂತುಕೊಂಡು ಆಹಾರ ಸೇವಿಸುವಿಕೆ, ೭. ಹಗಲಿನಲ್ಲಿ ಒಮ್ಮೆ ಶುದ್ಧ ಆಹಾರಸೇವಿಸುವಿಕೆ. ಇವು 5 + 5 + 5 + 6 + 7 = 28 ಸಾಧುಗಳ ಮೂಲಗುಣಗಳಾಗಿವೆಯೆಂದು ಸರ್ವಜ್ಞದೇವನು ಅಪ್ಪಣೆ ಕೊಡಿಸಿರುವನು. ಯದಿ ಇವುಗಳಲ್ಲಿ ಪ್ರಮಾದಗಳುಂಟಾದರೆ ಛೇದೋಪಸ್ಥಾಪನಾ ಅಥವಾ ಪ್ರಾಯಶ್ಚಿತ್ತಾದಿಗಳಿಂದ ಶುದ್ಧರಾಗಬೇಕು.

ಸಮಯಸಾರದಲ್ಲಿ ಹೇಳಿದ್ದಾರೆ ;

**ವದಸಮಿದೀಗುತ್ತೀಓ ಸೀಲತವಂ ಜಿಣವರೇಹಿಂ ಪಣ್ಣತಂ।**
**ಕುವ್ವಂತೋವಿ ಅಭವಿಓ ಅಣ್ಣಾಣೀ ಮಿಚ್ಛದಿಟ್ಠೀಯ ॥೨೯೧॥**
**ಮೋಕ್ಖಂ ಅಸದ್ದಹಂತೊ ಅಭವಿಯಸತ್ತೊ ದು ಜೊ ಅಧೀಏಜ್ಜ।**
**ಪಾಠೋ ಣ ಕರೇದಿ ಗುಣಂ ಅಸದ್ದಹಂತಸ್ಸ ಣಾಣಂ ತು ॥೨೯೨॥**

ಭಾವಾರ್ಥ : ಅಭವ್ಯಜೀವನು ವ್ರತ, ಸಮಿತಿ, ಗುಪ್ತಿ, ಶೀಲ, ತಪಸ್ಸುಗಳನ್ನು ಪಾಲಿಸುತ್ತಿದ್ದರೂ ಆತ್ಮಜಾನವಿಲ್ಲದೆ ಅಜ್ಞಾನಿ ಮತ್ತು ಮಿಥ್ಯಾದೃಷ್ಟಿಯಾಗಿಯೇ ಇರುವನೆಂದು ಸರ್ವಜ್ಞ ಪರಮದೇವರು ಅಪ್ಪಣೆ ಇತ್ತಿರುತ್ತಾರೆ. ಅಷ್ಟೇಅಲ್ಲ, ಮೋಕ್ಷ ಸ್ವರೂಪದಲ್ಲಿ ಶ್ರದ್ಧೆ ಇಲ್ಲದ ಆಭವ್ಯನು ಎಷ್ಟೋ ಶಾಸ್ತ್ರಗಳನ್ನು ಓದಿದರೂ ಗುಣಕಾರಿಯಾಗಲಾರದು. ಯಾಕೆಂದರೆ ಆತನಿಗೆ ಆತ್ಮನ ಸಮ್ಯಗ್ಜ್ಞಾನದತ್ತ ವಿಶ್ವಾಸವೇ ಉಂಟಾಗುವುದಿಲ್ಲವು.

ಭಾವಪಾಹುಡದಲ್ಲಿ ಹೇಳಿದ್ದಾರೇನಂದರೆ ಭಾವದಲ್ಲಿ ಆತ್ಮಜ್ಞಾನಿಯಾದವನೇ ನಿಜವಾದ ಸಾಧುವೆಂದು.

**ದೇಹಾದಿಸಂಗರಹಿಓ ಮಾಣಕಸಾಏಹಿಂ ಸಯಲಪರಿಚತ್ತೋ।**
**ಅಪ್ಪಾ ಅಪ್ಪಮ್ಮಿ ರಓ ಸ ಭಾವಲಿಂಗೀ ಹವೇ ಸಾಹೂ ॥೫೬॥**

**ಭಾವಾರ್ಥ :** ಶರೀರಾದಿಮೋಹ ಮಮತ್ವರಹಿತನೂ, ಮಾನಕಷಾಯ ದಿಂದ ದೂರದಿಂದಿರುವವನೂ ಮತ್ತು ತನ್ನಾತ್ಮನಲ್ಲಿ ಲವಲೀನನಾದವನೂ ಭಾವಲಿಂಗಿ ಮುನಿಯೆಂದು ತಿಳಿಯಬೇಕು.

## ವ್ರತಿಗೆ ನಿರ್ಮಲಾತ್ಮನ ಅನುಭವವು ಅತ್ಯಾವಶ್ಯಕವು

**ಜೋ ಣಿಮ್ಮಲ ಅಪ್ಪಾ ಮುಣಇ ವಯಸಂಜಮುಸಂಜುತ್ತು ।**
**ತೋ ಲಹು ಪಾವಇ ಸಿದ್ಧ ಸುಹು ಇಉ ಜಿಣಣಾಹಹ ವುತ್ತು ॥೩೦॥**

**ಅನ್ವಯಾರ್ಥ:** ಜೋ ವಯಸಂಜಮುಸಂಜುತ್ತು ಣಿಮ್ಮಲ ಮುಣಇ -ವ್ರತಸಂಯಮಗಳಿಂದ್ಯುಕ್ತನಾಗಿ ನಿರ್ಮಲಾತ್ಮನ ಅನುಭವವನ್ನು ಮಾಡಿ ಕೊಂಡರೇನೆ, ಸಿದ್ಧ ಸುಹು ಲಹು ಪಾವಇ-ಅವನು ಮೋಕ್ಷಸುಖಾಧಿಕಾರಿ ಯಾಗುವನು, ಇಉ ಜಿಣಣಾಹಹ ವುತ್ತು-ಎಂಬುದು ತೀರ್ಥಂಕರ ಪರಮ ದೇವನ ಕಥನವಾಗಿದೆ.

**ಭಾವಾರ್ಥ :** ಪ್ರತಿಯೊಂದು ಕಾರ್ಯದ ಸಿದ್ಧಿಯಾಗಬೇಕಾದರೆ ಉಪಾದಾನ ಮತ್ತು ನಿಮಿತ್ತ ಕಾರಣಗಳು ಬೇಕು. ಉಪಾದಾನ ಕಾರಣ ವಾದರೋ ಅವಸ್ಥೆಗಳನ್ನು ಬದಲಾಯಿಸಿ ಅವಸ್ಥಾಂತರವಾಗುತ್ತದೆ. ಆದರೂ ಮೂಲ ದ್ರವ್ಯವು ಹಾನಿಯಾಗುವುದಿಲ್ಲವು. ನಿಮಿತ್ತ ಕಾರಣವು ದೂರವಾಗಿ ರುತ್ತದೆ. ಮಣ್ಣಿನ ಕೊಡವಿದೆಂದು ತಿಳಿಯೋಣ. ಘಟ ರೂಪ ಕಾರ್ಯದ ಉಪಾದಾನ ಕಾರಣವು ಮೃತ್ (ಮಣ್ಣು). ಮಣ್ಣಿನ ಪಿಂಡವೇ ಘಟದ ರೂಪ ವಾಗಿ ರೂಪಾಂತರಿಸಿದೆ. ನಿಮಿತ್ತ ಕಾರಣ ಚಕ್ರ, ದೊಣ್ಣೆ ಮತ್ತು ಕುಂಭ ಕಾರಾದಿಗಳು ಘಟಾದಿಗಳನ್ನು ಮಾಡಲು ಸಹಾಯಕಗಳಾಗಿವೆ. ಘಟದ ರಚನೆಯಾದ ನಂತರ ಆ ಎಲ್ಲ ನಿಮಿತ್ತಕಾರಣಗಳು ದೂರವಾಗಿರುತ್ತವೆ.

ಇದೇ ಪ್ರಕಾರವಾಗಿ ಮೋಕ್ಷರೂಪ ಕಾರ್ಯಕ್ಕೋಸ್ಕರ ತನ್ನಾತ್ಮ ಶುದ್ಧಾತ್ಮನ ಧ್ಯಾನವೇ ಉಪಾದಾನ ಕಾರಣವಾಗಿರುತ್ತದೆ. ನಿಮಿತ್ತಕಾರಣ

ಗಳಾದ ವ್ಯವಹಾರರೂಪ ವ್ರತ, ಸಂಯಮ, ತಪಸ್ಸು ಮೊದಲಾದವು ನಿಮಿತ್ತ ಮಾತ್ರವಾಗಿರುತ್ತದೆ. ಅವುಗಳ ನಿಮಿತ್ತ ಕಾರಣವಾದವುಗಳ ಅವಲಂಬನೆ ಯಿಂದ ಯಾವಾಗ ಆತ್ಮಧ್ಯಾನವು ವೃದ್ಧಿಯಾಗುವುದೋ, ಪರಿಣಾಮಗಳಲ್ಲಿ ನಿರ್ಮಲತೆಯು ಹೆಚ್ಚುವುದೋ, ಆಗ ಸಂವರ ಮತ್ತು ನಿರ್ಜರಾತತ್ವಗಳಾಗು ವುವು. ಆದುದರಿಂದ ಸ್ಪಷ್ಟಿಕರಿಸಿದ್ದೇನೆಂದರೆ: ವ್ರತ, ಸಂಯಮ ಸಹಿತವಾದ ನಿರ್ಮಲಾತ್ಮನ ಧ್ಯಾನವೇ ಸಿದ್ಧಸುಖದ ಸಾಧನವಾಗುವುದು. ವ್ಯವಹಾರ ಚಾರಿತ್ರವು ಕೂಡ ಮನ, ವಚನ, ಕಾಯಗಳನ್ನು ವಶಪಡಿಸಿಕೊಳ್ಳುವುದೇ ಆಗಿದೆ. ಇದು ಪರಮ ಅತ್ಯಾವಶ್ಯಕವಾಗಿದೆ. ಯಾಕೆಂದರೆ ಇವು ಮೂರು ಚಂಚಲವಾಗಿದ್ದರೆ ಧ್ಯಾನವು ಸಿದ್ಧಿಸದು.

ಆತ್ಮಧ್ಯಾನವು ಸಿದ್ಧಿಸಬೇಕಾದರೆ ಏಕಾಂತದಲ್ಲಿದ್ದು ಶರೀರವನ್ನು ನಿಶ್ಚಲಮಾಡಿಕೊಳ್ಳಬೇಕು, ಮೌನದಿಂದಿರಬೇಕು. ಶಾಸ್ತ್ರ ಗ್ರಂಥಗಳ ಅಧ್ಯ ಯನ ಮಾಡಬೇಕು ಮತ್ತು ಜಪಾದಿಗಳನ್ನು ಮಾಡಬೇಕು. ಮಾನಸಿಕ ವಿಕಾರಗಳನ್ನು ತ್ಯಜಿಸಿ ಕೇವಲ ತನ್ನ ಶುದ್ಧಾತ್ಮನಲ್ಲಿ ಶ್ರುತಜ್ಞಾನದ ಬಲ ದಿಂದಾಗಲಿ ನಿಶ್ಚಯನಯದ ಪ್ರಭಾವದಿಂದಾಗಲಿ ಉಪಯೋಗಗಳನ್ನು ಸ್ಥಿರಪಡಿಸಿಕೊಂಡೊಡನೆ ಮೋಕ್ಷಸಾಧನವಾಗುವುದು. ಆಗ ವೀತರಾಗತೆ ಯುಂಟಾಗಿ, ಅದರಿಂದಲೇ ಆತ್ಮನು ಕರ್ಮಮಲದಿಂದ ರಹಿತನಾಗುವನು. ಹೀಗೆ ಧ್ಯಾನಾವಸ್ಥೆಯಲ್ಲಿ ಅನೇಕ ವಿಚಾರಗಳುಂಟಾಗುತ್ತವೆ.

ಗೃಹಸ್ಥ ಸಂಬಂಧ ವಿಚಾರಗಳಾದ ಹಿಂಸೆ, ಸುಳ್ಳು, ಕಳ್ಳತನ, ಕುಶೀಲ ಮತ್ತು ಪರಿಗ್ರಹಗಳ ಚಿಂತನೆಯು ಧ್ಯಾನಕ್ಕೆ ಹಾನಿಕಾರಕಗಳಾದ್ದರಿಂದಲೇ ಸಾಧು ಜನರು ಪಂಚಪಾಪಗಳನ್ನು ಪೂರ್ಣರೀತಿಯಾಗಿ ತ್ಯಜಿಸಿ ಯಾವ ವಿಧದ ವ್ಯವಹಾರಗಳನ್ನು ಮಾಡುವುದಿಲ್ಲವು. ಅವರು ಕೇವಲ ಧಾರ್ಮಿಕ ವ್ಯವಹಾರಗಳನ್ನೇ ಮಾಡುತ್ತಾರೆ. ಉದಾ: ಶಾಸ್ತ್ರಪಠಣ, ಉಪದೇಶ, ವಿಹಾರ, ಶಿಷ್ಯರಿಗೆ ವಿದ್ಯಾಭ್ಯಾಸ, ಸಂತೋಷ ಪೂರ್ವಕ ಆಹಾರ ಸೇವನೆ ಮತ್ತು ಧ್ಯಾನಾವಸ್ಥೆಯಲ್ಲಿ ಶುಭವಿಚಾರ ಇವುಗಳನ್ನು ಮಾಡುತ್ತಾರೆ. ಈ ಕಾರ್ಯಗಳು ಧ್ಯಾನವನ್ನು ಸ್ಥಿರಗೊಳಿಸಲು ನಿಮಿತ್ತ ಸಾಧಕಗಳಾಗಿವೆ. ಆದರೆ ಈ ವಿಚಾರಗಳನ್ನು ತಡೆಯದೆ ಧ್ಯಾನವು ಸಿದ್ಧಿಸಲಾರದು.

ಒಂದುವೇಳೆ ಯಾರಾದರೂ ವ್ಯವಹಾರ ಚಾರಿತ್ರವನ್ನು ಪಾಲಿಸದೆ ಕೇವಲ ಲೌಕಿಕ ವ್ಯವಹಾರದಲ್ಲಿಯೇ ಮಗ್ನನಾದರೆ ಆತ್ಮಚಿಂತನೆಯಲ್ಲಿ ಉಪಯೋಗಗಳು ಸ್ಥಿರವಾಗಿರಲಾರವು. ಆದ್ದರಿಂದ ಪರಿಗ್ರಹ ತ್ಯಾಗಿಗಳಾದ ನಿರ್ಗ್ರಂಥ ಮುನಿಗಳಿಗೆ ಧರ್ಮಧ್ಯಾನ ಮತ್ತು ಶುಕ್ಲಧ್ಯಾನವು ಸಿದ್ಧಿಸುವುದು. ಗೃಹಸ್ಥರಿಗೂ ಕೂಡಾ ಮನ, ವಚನ, ಕಾಯಗಳನ್ನು ಸ್ಥಿರಗೊಳಿಸುವ ಸಲುವಾಗಿ ಹನ್ನೆರಡು ವ್ರತಗಳನ್ನು ಪಾಲಿಸುವುದು ಅತ್ಯಾವಶ್ಯಕವಾಗಿರುತ್ತದೆ. ಪರಿಗ್ರಹಗಳು ಕಡಿಮೆಯಾದಷ್ಟು ಚಿಂತೆಗಳು ಕೂಡಾ ಕಡಿಮೆಯಾಗುವುವು. ಕೇವಲ ವ್ಯವಹಾರ ಚಾರಿತ್ರದಿಂದಾಗಲಿ, ಮುನಿಗಳ ಅಥವಾ ಶ್ರಾವಕರ ವೇಷದಿಂದಾಗಲಿ ಮೋಕ್ಷಸಾಧನವಾಗಲಾರದು. ಮೋಕ್ಷವು ಆತ್ಮನ ಸಂಪೂರ್ಣ ಸ್ವಭಾವವಾಗಿರುವಾಗ ಅದೇ ಸ್ವಭಾವ ಭಾವನೆಯೇ ಆತ್ಮದರ್ಶನವೂ, ನಿಶ್ಚಯ ರತ್ನತ್ರಯವೂ ಮತ್ತು ಸ್ವಾನುಭವರೂಪವೂ ಆಗಿರುತ್ತದೆ. ಆ ಸ್ವಾನುಭವದ ಪ್ರಾಪ್ತಿಗೆ ವ್ಯವಹಾರ ಚಾರಿತ್ರವು ನಿಮಿತ್ತವಾಗಿರುತ್ತದೆ.

ಸಮಯಸಾರದಲ್ಲಿ ಹೇಳಿರುತ್ತಾರೆ:

**ಣವಿ ಏಸ ಮೋಕ್ಖಮಗ್ಗೋ ಪಾಖಂಡೀ ಗಿಹಮಯಾಣಿ ಲಿಂಗಾಣಿ।**
**ದಂಸಣಣಾಣಚರಿತ್ತಾಣಿ ಮೋಕ್ಖಮಗ್ಗಂ ಜಿಣಾ ವಿಂತಿ ॥೪೩೨॥**
**ಜಹ್ಮಾ ಜಹಿತ್ತು ಲಿಂಗೇ ಸಾಗರಣಗಾರಿ ಏಹಿ ವಾ ಗಹಿದೆ।**
**ದಂಸಣಣಾಣಚರಿತ್ತೆ ಅಪ್ಪಾಣಂ ಜುಂಜ ಮೊಕ್ಖಪಹೇ ॥೪೩೩॥**

**ಭಾವಾರ್ಥ:** ಮುನಿಗಳ ಅಥವಾ ಗೃಹಸ್ಥರ ವೇಷಾದಿಗಳಾಗಲೀ ವ್ಯವಹಾರ ಚಾರಿತ್ರವಾಗಲಿ ಮೋಕ್ಷಮಾರ್ಗವಲ್ಲವು. ಕಿಂತು ಸಮ್ಯಗ್ದರ್ಶನ, ಸಮ್ಯಗ್ಜ್ಞಾನ ಮತ್ತು ಸಮ್ಯಕ್ಚಾರಿತ್ರಗಳೇ ಮೋಕ್ಷಮಾರ್ಗವೆಂದು ತೀರ್ಥಂಕರರ ಪರಮದೇವರು ಉಪದೇಶಿಸಿರುವರು. ಮೇಲೆ ಹೇಳಲ್ಪಟ್ಟಿರುವ ಚಾರಿತ್ರಗಳ ಮೋಹಮಮತೆಯನ್ನು ತ್ಯಜಿಸಿ, ತನ್ನನ್ನು ನಿಶ್ಚಯ ರತ್ನತ್ರಯಮಯ ಮೋಕ್ಷಮಾರ್ಗದಲ್ಲಿ ತನ್ಮಯವನ್ನಾಗಿಮಾಡು.

ಸಮಯಸಾರ ಕಲಶದಲ್ಲಿ ಹೇಳಿರುತ್ತಾರೆ:

**ವ್ಯವಹಾರವಿಮೂಢದೃಷ್ಟಯಃ ಪರಮಾರ್ಥಂ ಕಲಯಂತಿ ನೋ ಜನಾಃ।**
**ತುಷಬೋಧವಿಮುಗ್ಧಬುದ್ಧಯಃ ಕಲಯಂತೀಹ ತುಷಂ ನ ತಂದುಲಂ ॥೪೮-೧೦॥**

**ಭಾವಾರ್ಥ :** ಯಾವ ಮನುಷ್ಯನು ವ್ಯವಹಾರಚಾರಿತ್ರವನ್ನೇ ಮೋಕ್ಷ ಮಾರ್ಗವೆಂದೂ, ಪರಮಾರ್ಥ ಸ್ವರೂಪವೆಂದೂ, ನಿಶ್ಚಯ ರತ್ನತ್ರಯುವೆಂದೂ ಮತ್ತು ಸ್ವಾನುಭವರೂಪವೆಂದೂ ಪರಿಭಾವಿಸುತ್ತಿರುವ ಮತ್ತು ಮೋಕ್ಷರೂಪ ವನ್ನರಿಯದಿರುವ ಮೂಢನು ಮಹಾಮೂಢನೇ. ಉದಾ : ಹೊಟ್ಟನ್ನೇ ಭತ್ತ ವೆಂಬ ಭ್ರಾಂತಿಯಿಂದ ಅಕ್ಕಿಯ ಪ್ರಾಪ್ತಿಗಾಗಿ ಹೊಟ್ಟನ್ನು ಕುಟ್ಟುತ್ತಿದ್ದರೆ ಅಕ್ಕಿ ಯನ್ನು ಪಡೆಯದಂತೆ, ವ್ಯವಹಾರ ಚಾರಿತ್ರವು ಹೊಟ್ಟಿನಂತೆಯೂ, ನಿಶ್ಚಯ ಚಾರಿತ್ರವು ಭತ್ತದಂತೆಯೂ ಇರುತ್ತದೆ. ನಿಶ್ಚಯ ಚಾರಿತ್ರವಿಲ್ಲದೆ ವ್ಯವಹಾರ ಚಾರಿತ್ರವು ಹೊಟ್ಟಿನಂತೆ ವ್ಯರ್ಥವಾದುದು.

## ಕೇವಲ ವ್ಯವಹಾರ ಚಾರಿತ್ರವು ವ್ಯರ್ಥವು

**ವಯತವಸಂಜಮುಸೀಲು ಜಿಯ ಏ ಸವ್ವೇ ಅಕಇಚ್ಛು।**
**ಜಾಮ ಣ ಜಾಣಇ ಇಕ್ಕ ಪರು ಸುದ್ಧಉ ಭಾಉ ಪವಿತ್ತು ॥೩೧॥**

**ಅನ್ವಯಾರ್ಥ :** ಜಿಯ–ಎಲೈ ಜೀವನೇ! ಜಾಣಇ ಇಕ್ಕ ಪರು ಸುದ್ಧಉ ಪವಿತ್ತು ಭಾಉ ಣ ಜಾಣಇ–ಎಷ್ಟರವರೆಗೆ ಉತ್ಕೃಷ್ಟವಾದ ಶುದ್ಧ ವೀತರಾಗಭಾವನೆಯ ಅನುಭವ ಉಂಟಾಗುವುದಿಲ್ಲವೋ, ವಯತವು ಸಂಜಮುಸೀಲು ಏ ಸವ್ವೇ ಅಕ ಇಚ್ಛು–ಅಷ್ಟರವರೆಗೆ ವ್ರತ, ತಪ, ಸಂಯಮ, ಶೀಲಾದಿಗಳನ್ನು ಪಾಲಿಸುವುದು ವ್ಯರ್ಥವೇ. (ಅರ್ಥಾತ್ ಪುಣ್ಯವನ್ನು ಸಂಪಾದಿಸಿ ಸಂಸಾರವನ್ನು ಬೆಳೆಸುವಂತವುಗಳಾಗಿವೆ.)

**ಭಾವಾರ್ಥ :** ನಿಶ್ಚಯ ಚಾರಿತ್ರವಿಲ್ಲದೆ ಕೇವಲ ವ್ಯವಹಾರ ಚಾರಿತ್ರವು ಮೋಕ್ಷಪ್ರಾಪ್ತಿಗೆ ಕಾರಣವಾಗಲಾರದು. ನಿರ್ವಾಣ ಪದವಿಯು ಪ್ರಾಪ್ತ ವಾಗಬೇಕಾದರೆ ಸಂಪೂರ್ಣ ಕರ್ಮಗಳ ಕ್ಷಯದಿಂದಾಗುವುದು. ಅದರ ಪ್ರಾಪ್ತಿಯಾಗಬೇಕಾದರೆ ಪ್ರಧಾನ ಉಪಾಯವು ವೀತರಾಗ ಭಾವನೆಯೇ ಆಗಿರುತ್ತದೆ.

ವ್ಯವಹಾರ ವ್ರತಾದಿಗಳ ಪಾಲನೆಯಲ್ಲಿ ಮನ, ವಚನ, ಕಾಯಗಳ ಶುಭ ಪ್ರವೃತ್ತಿಯಾಗುವುದು. ಇದು ಶುಭ ಯೋಗ ಅಥವಾ ಮಂದಕಷಾಯ

ಆಗಿದೆ. ಸಮ್ಯಗ್ದರ್ಶನವಿಲ್ಲದೆ ಆ ಮಂದಕಷಾಯ ವಾಸ್ತವವಾಗಿ ಶುಭೋಪ ಯೋಗವಾಗದಿದ್ದರೂ ಕೂಡ, ಮಂದಕಷಾಯದಿಂದ ಶುಭ ಪ್ರವೃತ್ತಿ, ದಯಾ ಭಾವನೆ, ಪರೋಪಕಾರ ಬುದ್ಧಿ, ಶಾಸ್ತ್ರ ಗ್ರಂಥಗಳ ವಿಚಾರ, ಜೀವಾದಿ ತತ್ವ ಗಳ ಚಿಂತನೆ ಮೊದಲಾದವುಗಳುಂಟಾಗುವುದು ಮತ್ತು ಅಶುಭ ಭಾವವುಂಟಾ ಗುವುದಿಲ್ಲ. ಆಗ ಇದು ಪುಣ್ಯ ಬಂಧಕ್ಕೆ ಕಾರಣವಾಗಿದೆ.

ದ್ರವ್ಯ ಸಂಗ್ರಹದಲ್ಲಿ ಹೇಳಿರುತ್ತಾರೆ :

**ಅಸುಹಾದೋ ವಿಣಿವಿತ್ತೀ ಸುಹೇ ಪವಿತ್ತೀ ಯ ಜಾಣ ಚಾರಿತ್ತಂ।**
**ವದಸಮಿದಿಗುತ್ತಿರೂವಂ ವವಹಾರಣಯಾ ದು ಜಿಣ**
**ಭಣಿಯಂ ॥ ೪೫ ॥**

**ಭಾವಾರ್ಥ :** ಅಶುಭ ಕ್ರಿಯೆಯಿಂದ ಬಿಡುಗಡೆಯಾಗಿ ಶುಭ ಕಾರ್ಯ ಗಳಲ್ಲಿ ಪ್ರವರ್ತಿಸುವುದು ವ್ಯವಹಾರ ನಯದಿಂದ ಚಾರಿತ್ರವೆಂದು ಸರ್ವಜ್ಞ ದೇವನು ಉಪದೇಶವನ್ನಿತ್ತಿರುವನು. ಅದು ಐದು ಮಹಾವ್ರತ, ಐದು ಸಮಿತಿ, ಮೂರು ಗುಪ್ತಿರೂಪವಾಗಿಯೂ, ಪರಾಶ್ರಿತವೂ, ತನ್ನಾತ್ಮನಿಂದ ಭಿನ್ನವಾದುದರಿಂದ ಬಂಧಕಾರಕವೂ ಆಗಿರುತ್ತದೆ. ನಿಶ್ಚಯ ಚಾರಿತ್ರ ವಾದರೋ ಸ್ವಆಶ್ರಯವೂ, ಶುದ್ಧ ಭಾವನಾಯುಕ್ತವೂ ಆದುದರಿಂದ ನಿರ್ವಾಣ ಕಾರಣವೂ ಆಗಿರುತ್ತದೆ. ಒಂದು ವೇಳೆ ಯಾವನಾದರೊಬ್ಬನು ಸಮ್ಯಗ್ದೃ ಷ್ಟಿಯಾಗದೆ ಕೇವಲ ವ್ಯವಹಾರ ಚಾರಿತ್ರವನ್ನೇ ಮೋಕ್ಷ ಮಾರ್ಗವೆಂದು ಭಾವಿಸುವುದಾದರೆ, ಅದು ಮಹಾ ಅಜ್ಞಾನವೆಂದೇ ಹೇಳಬೇಕು. ಇದೇ ಸಂಸಾರದ ಮಾರ್ಗವಾಗಿರುತ್ತದೆ.

ಬಾಹ್ಯ ಅವಲಂಬನೆಗಳನ್ನೋ ಅಥವಾ ನಿಮಿತ್ತ ಕಾರಣಗಳನ್ನೋ ಉಪಾದಾನ ಕಾರಣಗಳೆಂದು ಭಾವಿಸುವುದು ಮಿಥ್ಯಾತ್ವವೇ ಆಗಿರುತ್ತದೆ. ಯದಿ ಕೋಟ್ಯಾಂತರ ಜನ್ಮಗಳಲ್ಲಿಯು ವ್ಯವಹಾರ ಚಾರಿತ್ರವನ್ನು ಪಾಲಿಸುತ್ತ ಬರುತ್ತಿದ್ದರೂ ಕೂಡ, ಅವನು ಮೋಕ್ಷ ಮಾರ್ಗದಲ್ಲಿಲ್ಲವೆಂದೇ ತಿಳಿಯಬೇಕು. ಅನಾದಿ ಮಿಥ್ಯಾದೃಷ್ಟಿ ಜೀವನು ಶುದ್ಧಾತ್ಮಾನುಭಾವದ ಪ್ರಭಾವದಿಂದ ಸಮ್ಯ ಕ್ತ್ವವಂತನಾಗಿ, ಸಂಯಮಿಯಾಗಿ ಅದೇ ಭಾವದಿಂದ ನಿರ್ವಾಣ ಪದಭಾಗಿ ಯಾಗಬಹುದು.

ಸಮಯಸಾರ ಕಲಶದಲ್ಲಿ ಹೇಳಿದ್ದಾರೆ :

**ವೃತ್ತಂ ಜ್ಞಾನಸ್ವಭಾವೇನ ಜ್ಞಾನಸ್ಯ ಭವನಂ ಸದಾ।**
**ಏಕದ್ರವ್ಯಸ್ವಭಾವತ್ವಾನ್ಮೋಕ್ಷಹೇತುಸ್ತದೇವ ತತ್ ॥ ೭ ॥**
**ವೃತ್ತಂ ಕರ್ಮಸ್ವಭಾವೇನ ಜ್ಞಾನಸ್ಯ ಭವನಂ ನ ಹಿ।**
**ದ್ರವ್ಯಾಂತರಸ್ವಭಾವತ್ವಾನ್ಮೋಕ್ಷಹೇತುರ್ನ ಕರ್ಮ ತತ್ ॥ ೮-೪ ॥**

**ಭಾವಾರ್ಥ :** ಆತ್ಮಜ್ಞಾನವು ಸ್ವಾಭಾವಿಕವಾಗಿ ವರ್ತನಾಶೀಲವಾಗಿ ಸದಾ ಆತ್ಮ ಸ್ವಭಾವದಲ್ಲಿರುವುದು. ಅದು ಮೋಕ್ಷ ಮಾರ್ಗದ ಸಾಧನವಾಗಿ ರುತ್ತದೆ. ಕಾರಣ ಸಕಲ ಉಪಯೋಗವು ಆತ್ಮದ್ರವ್ಯದ ಸ್ವಭಾವದಲ್ಲಿಯೇ ತನ್ಮಯವಾಗಿರುತ್ತದೆ. ಶುಭ ಕ್ರಿಯಾಕಾಂಡಗಳಲ್ಲಿ ವರ್ತಿಸುವ ಆತ್ಮಜ್ಞಾನ ದಲ್ಲಿ ಪರಿಣಮನವಿಲ್ಲವು. ಅದು ಪರವಸ್ತುಗಳ ಸ್ವಭಾವದ ವಿಷಯವಾಗಿ ಲಕ್ಷ್ಯವಿಟ್ಟುಕೊಂಡು, ಆತ್ಮಿಕ ವಿಷಯದಲ್ಲಿ ಲಕ್ಷ್ಯವಿಲ್ಲದಿರುವುದರಿಂದ ಅದು ಮೋಕ್ಷಕ್ಕೆ ಕಾರಣವಾಗಲಾರದು.

ಮೋಕ್ಷ ಪಾಹುಡದಲ್ಲಿ ಹೇಳಿರುತ್ತಾರೆ:

**ಜೋ ಪುಣ ಪರದವ್ವರಓ ಮಿಚ್ಛಾದಿಟ್ಠೀ ಹವೇಇ ಸೋ ಸಾಹೂ।**
**ಮಿಚ್ಛತ್ತಪರಿಣದೋ ಉಣ ಬಜ್ಝದಿ ದುಟ್ಠಟ್ಠಕಮ್ಮೇಹಿಂ ॥ ೧೫ ॥**

**ಭಾವಾರ್ಥ :** ಆತ್ಮದ್ರವ್ಯವನ್ನು ಬಿಟ್ಟು ಪರದ್ರವ್ಯಗಳಲ್ಲಿ ರಮಿಸುವಾತನು ಮಿಥ್ಯಾದೃಷ್ಟಿಯು. ಅದರ ಶ್ರದ್ಧಾನದಿಂದ ಪರಿಣಮಿಸುತ್ತ ಎಂಟು ಕರ್ಮಗಳ ಬಂಧನದಲ್ಲಿ ಬಂಧಿತನಾಗುತ್ತಾನೆ.



## ಪುಣ್ಯ ಪಾಪಗಳೆರಡು ಸಂಸಾರವೇ ಆಗಿರುತ್ತದೆ.

**ಪುಣ್ಣಿಂ ಪಾವಇ ಸಗ್ಗ ಜಿಉ ಪಾವಇ ಣರಯಣಿವಾಸು।**
**ವೇ ಛಂಡಿವಿ ಅಪ್ಪಾ ಮುಣಇ ತಉ ಲಬ್ಭಇ ಸಿವವಾಸು ॥ ೩೨ ॥**

**ಅನ್ವಯಾರ್ಥ :** ಜಿಉ ಪುಣ್ಣಿಂ ಸಗ್ಗ ಪಾವಇ-ಈ ಜೀವನು ಪುಣ್ಯ ದಿಂದ ಸ್ವರ್ಗವನ್ನೂ, ಪಾವಇ ಣರಯಣಿವಾಸು-ಪಾಪದಿಂದ ನರಕವನ್ನೂ

ಪಡೆಯುವನು. ವೇ ಛಂಡಿವಿ ಅಪ್ಪಾ ಮುಣಇ–ಆದ್ದರಿಂದ ಪುಣ್ಯ ಪಾಪಗಳಲ್ಲಿ ಮೋಹ ಮಮತೆಯನ್ನು ಬಿಟ್ಟು ತನ್ನಾತ್ಮನನ್ನು ಚಿಂತಿಸುವ, ತಉ ಸಿವವಾಸು ಲಬ್ಭಇ–ಆತ್ಮನೇ ಮೋಕ್ಷ ಮಂದಿರವನ್ನು ಪ್ರವೇಶಿಸುವನು.

**ಭಾವಾರ್ಥ** : ಪುಣ್ಯ ಪಾಪಗಳೆರಡು ಮತ್ತು ಕರ್ಮಗಳು ಸಂಸಾರ ಪರಿಭ್ರಮಣಕ್ಕೆ ಕಾರಣಗಳಾಗಿವೆ. ಈ ಎರಡು ವಿಧ ಕರ್ಮ ಬಂಧನಕ್ಕೆ ಕಷಾಯ ಭಾವಗಳು ಕಾರಣವಾಗಿರುತ್ತವೆ. ಮಂದ ಕಷಾಯ ಭಾವದಿಂದ ಪುಣ್ಯಕರ್ಮವೂ, ತೀವ್ರ ಕಷಾಯ ಭಾವದಿಂದ ಪಾಪಕರ್ಮವೂ ಬಂಧವಾಗುತ್ತದೆ. ಸಾತಾ ವೇದನೀಯ, ಶುಭ ಆಯು, ಶುಭನಾಮ. ಉಚ್ಛಗೋತ್ರಾದಿಗಳು ಪುಣ್ಯಕರ್ಮಗಳಾಗಿವೆ. ಪ್ರಾಣಿಗಳಲ್ಲಿ ದಯಾಭಾವನೆಯೂ, ಆಹಾರ, ಔಷಧ, ಅಭಯ ಮತ್ತು ಶಾಸ್ತ್ರಗಳೆಂಬ ನಾಲ್ಕು ಪ್ರಕಾರದ ದಾನವೂ. ಮುನಿಗಳ ಮತ್ತು ಶ್ರಾವಕರ ವ್ಯವಹಾರ ಚಾರಿತ್ರವೂ, ಕ್ಷಮಾ ಭಾವನೆಯೂ, ಸಂತೋಷವೂ, ಸಂತೋಷ ಪೂರ್ವಕವಾದ ಆರಂಭವೂ, ಅಲ್ಪ ಮಮತ್ವ ಪರಿಣಾಮವೂ. ಮಾರ್ದವ ಭಾವನೆಯೂ, ಸಹನತೆಯಿಂದ ಕಷ್ಟ ಸಹಿಷ್ಣುತೆಯೂ, ಮನ ವಚನ ಕಾಯಗಳ ಸರಳತೆಯೂ, ಕಪಟವಿಲ್ಲದ ವರ್ತನೆಯೂ. ಪರರ ಗುಣಗಳ ಪ್ರಶಂಸೆಯೂ, ತನ್ನ ದೋಷಗಳ ನಿಂದೆಯೂ, ನಿರಹಂಕಾರತೆಯೂ ಇವೇ ಮೊದಲಾದ ಶುಭ ಭಾವನೆಗಳಿಂದ ಪುಣ್ಯ ಕರ್ಮಗಳ ಬಂಧನವಾಗುತ್ತದೆ. ಅಸಾತಾ ವೇದನೀಯ, ಅಶುಭ ಆಯುಷ್ಯ, ಅಶುಭ ನಾಮ, ನೀಚ ಗೋತ್ರ ಮತ್ತು ಜ್ಞಾನಾವರಣಾದಿ ನಾಲ್ಕು ಘಾತಿ ಕರ್ಮಗಳು ಪಾಪ ಕರ್ಮಗಳಾಗಿವೆ. ಜ್ಞಾನ ಸಾಧನಗಳಲ್ಲಿ ವಿಘ್ನವನ್ನುಂಟುಮಾಡುವುದೂ, ದುಃಖ, ಶೋಕಾಕುಲಿತನಾಗುವುದೂ, ರೋದಿಸುವುದೂ, ಪರರಿಗೆ ದುಃಖವನ್ನುಂಟು ಮಾಡುವುದೂ, ಪರಘಾತವನ್ನೆಸಗುವುದೂ, ಸತ್ಯದೇವ, ಸತ್ಯಗುರು, ಸತ್ಯಶಾಸ್ತ್ರ ಮತ್ತು ಸತ್ಯಧರ್ಮ ಮೊದಲಾದವುಗಳನ್ನು ನಿಂದಿಸುವುದೂ, ತೀವ್ರ ಕಷಾಯ ಭಾವನೆ ಹೊಂದುವುದೂ, ಅನ್ಯಾಯಪೂರ್ವಕ ಆರಂಭ ಮಾಡುವುದೂ, ಮಿತಿ ಮೀರಿದ ಮಮತ್ವ ಪರಿಣಾಮವನ್ನು ಹೊಂದುವುದೂ, ಛಲ ಕಪಟವಾದ ನಡತೆಯಿಂದಿರುವುದೂ, ಮನ, ವಚನ, ಕಾಯಗಳ ವಕ್ರತೆಯಿಂದಿರುವುದೂ, ಕಲಹಭಾವನೆಯಿಂದಿರುವುದೂ, ಪರನಿಂದೆಮಾಡುವುದೂ, ಆತ್ಮಪ್ರಶಂಸೆಮಾಡಿಕೊಳ್ಳುವುದೂ, ಅಹಂಕಾರಪಡುವುದೂ, ದಾನಾದಿಕಾರ್ಯ

ಗಳಲ್ಲಿ ವಿಘ್ನವನ್ನುಂಟುಮಾಡುವುದೂ, ಅಶುಭ ಚಿಂತನೆಮಾಡುವುದೂ, ಅಸತ್ಯವೂ, ಕಠೋರವೂ ಆದ ವಚನವನ್ನಾಡುವುದೂ ಮತ್ತು ಪಂಚಪಾಪಗಳಲ್ಲಿ ತನ್ಮಯನಾಗಿರುವುದೂ ಇವೆಲ್ಲವೂ ಪಾಪಕರ್ಮಗಳಬಂಧಕ್ಕೆ ಕಾರಣಗಳಾಗಿವೆ.

ಈ ಪುಣ್ಯಪಾಪಗಳ ಫಲದಿಂದ ದೇವ, ಮನುಷ್ಯ, ತಿರ್ಯಂಚ ಮತ್ತು ನರಕ ಈ ನಾಲ್ಕು ಗತಿಗಳಲ್ಲಿ ಜನ್ಮತಾಳಿ ಸಂಸಾರ ಸಂಬಧವಾದ ದುಃಖಗಳನ್ನು ಅನುಭವಿಸಬೇಕಾಗುತ್ತದೆ. ವ್ರತ, ತಪ, ಶೀಲ, ಸಂಯಮಗಳ ಪಾಲನೆಯಿಂದ ಶುಭರಾಗವೂ ಅದರಿಂದ ಪುಣ್ಯಬಂಧವೂ ಆಗುತ್ತದೆ. ಆದರೆ ಆದರಿಂದ ಪಾಪಕರ್ಮಗಳ ನಾಶವು ಆಗಲಾರದು. ಆದುದರಿಂದ ಪುಣ್ಯಪಾಪ ಕರ್ಮಗಳೆರಡನ್ನು ಬೇಡಿಗಳೆಂದು ತಿಳಿದು, ಅವುಗಳಿಗೆ ಕಾರಣಗಳಾದ ಭಾವಗಳ ಮೋಹವನ್ನು ತ್ಯಜಿಸಿ, ಶುದ್ಧ ಆತ್ಮೀಕ ಭಾವಗಳ ಚಿಂತನೆಯ ಅನುಭವಗಳಲ್ಲಿರುವುದು ಶುದ್ಧೋಪಯೋಗವು ಸರ್ವ ಶ್ರೇಷ್ಠವಾಗಿದೆ ಮತ್ತು ಮೋಕ್ಷಕ್ಕೆ ಕಾರಣವಾಗಿದೆ.

ಈ ಪುಣ್ಯ ಪಾಪಗಳ ಬಂಧಕ್ಕೆ ಕಷಾಯ ಭಾವನೆಗಳು ಕಾರಣಗಳಾಗಿವೆ. ಅವುಗಳ ಸ್ವಭಾವವು ಜಡವಾಗಿದೆ. ಅವುಗಳ ಫಲಗಳು ಸುಖದುಃಖ ರೂಪವಾಗಿಯೂ, ಆತ್ಮೀಕ ಸುಖಕ್ಕೆ ವಿರೋಧಗಳಾಗಿಯೂ, ಬಂಧಮಾರ್ಗಕ್ಕೆ ಕಾರಣಗಳಾಗಿಯೂ ಆಗಿರುತ್ತವೆಂದು ಪರಿಭಾವಿಸಿ ಪುಣ್ಯ ಮತ್ತು ಪಾಪಗಳಿಂದ ಪೂರ್ಣ ರೀತ್ಯಾ ವೈರಾಗ್ಯ ಭಾವನೆಯುಳ್ಳವರಾಗಬೇಕು. ಆತ್ಮದರ್ಶನ ಭಾವನೆಯನ್ನು ಮಾಡಬೇಕು. ಕಿಂತು ವ್ಯವಹಾರ ಚಾರಿತ್ರವು ಮೋಕ್ಷಕ್ಕೆ ಕಾರಣವೆಂದು ಭಾವಿಸಬಾರದು.

ವ್ಯವಹಾರ ಚಾರಿತ್ರವು ಬಂಧಕ್ಕೆ ಕಾರಣವೆಂದು ತಿಳಿದು ತ್ಯಜಿಸಲು ಪ್ರಯತ್ನಿಸಬೇಕು. ಉದಾ : ಮೆಟ್ಟಲುಗಳನ್ನು ಏರುತ್ತ ಏರುತ್ತ ಮೇಲೆ ಮೇಲೆ ಹೋದ ಹಾಗೆಲ್ಲ ಕೆಳ ಕೆಳಗಿನ ಮೆಟ್ಟಲುಗಳನ್ನು ಬಿಡುತ್ತ ಬಿಡುತ್ತ ನಿಶ್ಚಯ ಚಾರಿತ್ರವನ್ನು ಪಡೆದು ವ್ಯವಹಾರ ಚಾರಿತ್ರವನ್ನು ವಿಸ್ಮರಿಸುವವನಾಗಿ ಮೇಲಿರುವ ಭವನವನ್ನು ಪ್ರವೇಶಿಸಿದೊಡನೆ, ಹತ್ತಿ (ಏರಿ) ಬಂದ ಸೋಪಾನಗಳನ್ನು ಸ್ಮರಿಸುವುದಿಲ್ಲವು. ಕೇವಲ ಮೆಟ್ಟಲುಗಳು ಮೇಲ್ಮೇಲೆ ಹತ್ತಿ ಹೋಗಲು ನಿಮಿತ್ತ'ಕಾರಣಗಳಾಗಿರುವಂತೆ, ವ್ಯವಹಾರ ಚಾರಿತ್ರವು ನಿಶ್ಚಯ

ಚಾರಿತ್ರದ ಸಾಧನಕ್ಕೆ ನಿಮಿತ್ತಕಾರಣಗಳಾಗಿರುವುವು. ನಿಶ್ಚಯ ಚಾರಿತ್ರವು ಹಸ್ತಗತವಾದೊಡನೆ ವ್ಯವಹಾರ ಚಾರಿತ್ರ ರಾಗವು ನೆಲೆ ನಿಲ್ಲಲಾರದು.

ಸಮಯಸಾರದಲ್ಲಿ ಹೇಳಿರುತ್ತಾರೆ:

**ಕಮ್ಮಮಸುಹಂ ಕುಸೀಲಂ ಸುಹಕಮ್ಮಂ ಚಾವಿ ಜಾಣ ಸುಹಸೀಲಂ।**
**ಕಹ ತಂ ಹೋದಿ ಸುಸೀಲಂ ಜಂ ಸಂಸಾರಂ ಪವೇಸೇದಿ ॥೧೫೨॥**

**ಸೋವಣ್ಣಿಯಮ್ಮಿ ಣಿಯಲಂ ಬಂಧದಿ ಕಾಲಾಯಸಂ ಚ ಜಹ ಪುರಿಸಂ।**
**ಬಂಧದಿ ಏವಂ ಜೀವಂ ಸುಹಮಸುಹಂ ವಾ ಕದಂ ಕಮ್ಮಂ ॥೧೫೩॥**

**ತಮ್ಹಾ ದು ಕುಸಿಲೇಹಿಂ ಯ ರಾಯಂ ಮಾಕಾಹಿ ಮಾವ ಸಂಸಗ್ಗಂ।**
**ಸಾಹೀಣೋ ಹಿ ವಿಣಾಸೋ ಕುಸೀಲಸಂಸಗ್ಗರಾಯೇಹಿಂ ॥೧೫೪॥**

**ಭಾವಾರ್ಥ:** ಅಶುಭ ಕರ್ಮವು ಕುಶೀಲನಂತೆಯೂ, ಶುಭಕರ್ಮವು ಸುಶೀಲನಂತೆ (ಒಳ್ಳೆಯವನಂತೆ) ಯೂ ವ್ಯವಹಾರಿಗಳು ಹೇಳುತ್ತಾರೆ. ಆದರೆ ಆಚಾರ್ಯರು ಮಾತ್ರ ಶುಭಕರ್ಮಗಳನ್ನು ಸುಶೀಲವೆಂದು ಹೇಳುವುದಿಲ್ಲವು. ಯಾಕೆಂದರೆ ಅವು ಕೂಡ ಸಂಸಾರದಲ್ಲಿಯೇ ಸುತ್ತಿಸುತ್ತವೆ. ಉದಾ: ಕಬ್ಬಿಣದ ಬೇಡಿಯು ಪುರುಷನನ್ನು ಬಂಧಿಸುವಂತೆ, ಚಿನ್ನದ ಬೇಡಿಯು ಕೂಡಾ ಪುರುಷನನ್ನು ಬಂಧಿಸುತ್ತದೆ. ಹೀಗೆ ಶುಭಾಶುಭಕಾರ್ಯಗಳು ಜೀವನನ್ನು ಬಂಧಿಸುವವುಗಳಾದ್ದರಿಂದ ಅವೆರಡನ್ನು ಸುಶೀಲವೆಂದು ಹೇಗೆ ತಾನೇ ಹೇಳುವುದು.

ಆದ್ದರಿಂದಲೇ ಪುಣ್ಯಪಾಪಗಳೆರಡನ್ನು ಕುಶೀಲಗಳೆಂದೇ ತಿಳಿದು ಅವುಗಳಿಂದ ದೂರವಿರಲು ಪ್ರಯತ್ನಿಸಬೇಕು.

ಸಮಯಸಾರ ಕಲಶದಲ್ಲಿ ಹೇಳಿದೆ:

**ಹೇತುಸ್ವಭಾವಾನುಭವಾಶ್ರಯಾಣಾಂ ಸದಾಪ್ಯಭೇದಾನ್ನ ಹಿ ಕರ್ಮಭೇದಃ।**
**ತದ್ಬಂಧಮಾರ್ಗಾಶ್ರಿತಮೇಕಮಿಷ್ಟಂ ಸ್ವಯಂ ಸಮಸ್ತಂ ಖಲು ಬಂಧಹೇತುಃ ॥೩-೪॥**

**ಭಾವಾರ್ಥ :** ಪುಣ್ಯ ಮತ್ತು ಪಾಪಗಳೆರಡರ ಕಾರಣವು, ಸ್ವಭಾವವು, ಫಲವು ಮತ್ತು ಆಸ್ರವವು ಒಂದೇ ರೂಪವಾಗಿರುತ್ತವೆ. ಅವುಗಳಲ್ಲಿ ಭೇದ ವಿಲ್ಲವು. ಅವೆರಡು ಬಂಧಮಾರ್ಗಗಳಾಗಿವೆಯೆಂದು ಶೀಮರ್ಾನಿಸಿಕೊಳ್ಳಬೇಕು. (ನಿಶ್ಚಯಿಸಿಕೊಳ್ಳಬೇಕು.)



## ನಿಶ್ಚಯ ಚಾರಿತ್ರವು ಮೋಕ್ಷಕ್ಕೆ ಕಾರಣವು

**ವಉತವುಸಂಜಮುಸೀಲ ಜಿಯ ಇಯ ಸವ್ವಇ ವವಹಾರು ।**
**ಮೋಕ್ಖಹ ಕಾರಣ ಏಕ್ಕು ಮುಣಿ ಜೋ ತಇಲೋಯಹು ಸಾರು॥೩೩॥**

**ಅನ್ವಯಾರ್ಥ :** ಜಿಯ–ಎಲೈ ಜೀವನೇ! ವಉತವುಸಂಜಮುಸೀಲ ಇಯ ಸವ್ವಇ ವವಹಾರು–ವ್ರತ, ತಪ, ಸಂಯಮ, ಶೀಲಗಳೆಲ್ಲವೂ ವ್ಯವಹಾರ ಚಾರಿತ್ರಗಳಾಗಿವೆ. ಮೋಕ್ಖಹ ಕಾರಣ ಎಕ್ಕು ಮುಣಿ–ಮೋಕ್ಷಕ್ಕೆ ಕಾರಣ ವಾದರೋ ನಿಶ್ಚಯ ಚಾರಿತ್ರವೆಂದೇ ತಿಳಿ. ಜೋ ತಇಲೋಯಹು ಸಾರು–ಅದೇ ಮೂರು ಲೋಕದಲ್ಲಿ ಶ್ರೇಷ್ಠವಾದ ವಸ್ತುವಾಗಿರುತ್ತದೆ.

**ಭಾವಾರ್ಥ :** ಮೋಕ್ಷವು ಮೂರು ಲೋಕದಲ್ಲಿ ಶ್ರೇಷ್ಠವಾದ ವಸ್ತು ವಾಗಿರುತ್ತದೆ. ಅಲ್ಲಿ ಆತ್ಮನ ನೈಜ (ಸ್ವಾಭಾವಿಕ) ವಾದ ಗುಣಗಳು ಪ್ರಕಟ ವಾಗುತ್ತವೆ (ಪ್ರಕಟಪಡಿಸಿಕೊಳ್ಳುತ್ತಾನೆ). ಕರ್ಮಬಂಧನದಿಂದ ನಿರ್ಮುಕ್ತ ನಾಗಿ ಪರಮಾನಂದಮಯವಾದ ಸುಖವನ್ನು ಅನುಭವಿಸುತ್ತಾನೆ. ಮೋಕ್ಷ ಪ್ರಾಪ್ತಿಯ ಉಪಾಯವು ಸಮ್ಯಗ್ದರ್ಶನ, ಸಮ್ಯಗ್ಜ್ಞಾನ, ಸಮ್ಯಕ್ಚಾರಿತ್ರ ರೂಪವಾಗಿರುತ್ತದೆ. ಉದಾ : ಯಾವುದರ ಕಾರ್ಯವು (ಸಾಧ್ಯವು) ಇರು ವುದೋ ಅಂಥಹ ಕಾರಣವು (ಸಾಧನವು) ಇರುವುದು. ಆತ್ಮನ ಅನುಭವಕ್ಕಾಗಿ ಬಾಹ್ಯಸಾಧನಗಳಾದ ವ್ರತ, ತಪ ಮೊದಲಾದ ವ್ಯವಹಾರ ಚಾರಿತ್ರಗಳನ್ನು ಪಾಲಿಸುವುದು ನಿಮಿತ್ತಮಾತ್ರಗಳಾಗಿವೆ. ಅವು ನಿರ್ವಾಣದ ಸಾಧನಗಳಾಗ ಲಾರವು.

ಆಚಾರ್ಯವರ್ಯರು ಪುನಃಪುನಃ ಪ್ರೇರೇಪಿಸುತ್ತಿರುತ್ತಾರೆ. ಎಲೈ ಯೋಗಿಯೇ! ನೀನು ಮನ, ವಚನ, ಕಾಯಗಳ ಸಂಬಂಧವಾದ ಎಲ್ಲಾ ಕ್ರಿಯೆ

ಗಳನ್ನು ಮೋಕ್ಷಪ್ರಾಪ್ತಿಯ ಉಪಾಯವೆಂದು ಭಾವಿಸಬೇಡ. ಎಲ್ಲಿ ವಿಕಲ್ಪ ಗಳು ಇರುತ್ತವೆಯೋ ಅಥವಾ ಪರಪದಾರ್ಥಗಳಲ್ಲಿ ದೃಷ್ಟಿಯಿರುತ್ತದೆಯೋ ಅಲ್ಲಿ ಶುಭರಾಗವು ಇರುವುದು. ಅದು ಬಂಧಕ್ಕೆ ಕಾರಣವಾಗಿರುವುದಲ್ಲದೆ ಕರ್ಮಗಳ ನಿರ್ಜರೆಗೆ ಕಾರಣಗಳಾಗುವುದಿಲ್ಲವು. ಆದ್ದರಿಂದ ನೀನು ಪ್ರಾಪಂಚಿಕ ಚಿಂತೆಯನ್ನು ತ್ಯಜಿಸಿ, ನಿಶ್ಚಯಮಯನಾಗಿ, ತನ್ನಾತ್ಮನತ್ತ ದೃಷ್ಟಿಯಿಟ್ಟು, ಅದನ್ನೇ ಧ್ಯಾನಿಸು; ಮನನಮಾಡು; ಅದರಲ್ಲಿಯೇ ಸಂತೋಷಪಡುತ್ತಾ ಆತ್ಮಾನುಭವವೆಂಬ ಅಮೃತವನ್ನು ಪಾನಮಾಡು.

ವ್ಯವಹಾರ ಚಾರಿತ್ರವನ್ನು ವ್ಯವಹಾರ ಮಾತ್ರವೇಂದೇ ಭಾವಿಸು. ಅದು ನಿಶ್ಚಯವಿಲ್ಲದೆ ಫಲಕಾರಿಯಾಗಲಾರದು. ವ್ಯವಹಾರದಲ್ಲಿ ಮುನಿಯಾಗಲಿ ಅಥವಾ ಶ್ರಾವಕನಾಗಲಿ ಸಂಯಮವನ್ನು ಶಾಸ್ತ್ರೋಕ್ತ ರೀತ್ಯಾ ಪರಿಪಾಲಿಸುತ್ತಿದ್ದರೂ ನಾನು ಮುನಿಯೆಂದೂ, ಕ್ಷುಲ್ಲಕನೆಂದೂ, ಐಲಕನೆಂದೂ, ಬ್ರಹ್ಮಚಾರಿಯೆಂದೂ, ಶ್ರಾವಕನೆಂದೂ, ಧರ್ಮಾತ್ಮನೆಂದೂ ಅಹಂಕಾರಪಡಬಾರದು. ಹಾಗೆ ಚಿಂತಿಸುತ್ತಿರುವುದು ಮುನಿತ್ವಕ್ಕಾಗಲಿ, ಗೃಹಸ್ಥತ್ವಕ್ಕಾಗಲಿ ಶೋಭೆಯುಂಟಾಗಲಾರದು. ಶುದ್ಧಾತ್ಮಾನುಭವವೇ ಮುನಿತ್ವವೂ, ಶ್ರಾವಕತ್ವವೂ ಆಗಿರುತ್ತದೆ. ಅದೇ ಜಿನಧರ್ಮವೆಂದೂ ನಿಶ್ಚಯಿಸಿಕೊಂಡು ಶರೀರಾದಿ ಕ್ರಿಯೆಗಳಲ್ಲಿ ಅಭಿಮಾನಪಡಬಾರದು. ನಿಶ್ಚಯನಯದ ಪ್ರಾಧಾನತೆಯಿಂದ ತನ್ನನ್ನು ಸಿದ್ಧಾತ್ಮನಂತೆ ಪರಿಶುದ್ಧನೂ, ಸಕಲ ಕರ್ಮರಹಿತನೂ, ವಿಕಲ್ಪರಹಿತನೂ, ಮತಿಜ್ಞಾನಾದಿ ಭೇದವಿಲ್ಲದವನೂ, ಸ್ವಾಭಾವಿಕ ಜ್ಞಾನಾನಂದಮಯನೂ, ಪರಭಾವನೆಗಳಿಂದ ಉದಾಸೀನನೂ ಎಂಬುದಾಗಿ ತಿಳಿದ ಆತ್ಮನೇ ನಿರ್ವಾಣ ಮಂದಿರವನ್ನು ಪ್ರವೇಶಿಸುವವನೆಂದು ತಿಳಿಯಬೇಕು.

ಭಾವ ಪಾಹುಡದಲ್ಲಿ ಹೇಳಿರುತ್ತಾರೆ:

**ಜೀವವಿಮುಕ್ಕೋ ಸಬಓ ದಂಸಣಮುಕ್ಕೋ ಯ ಹೋಇ ಚಲಸವಓ।**
**ಸಬಓ ಲೋಯಅಪುಜ್ಜೋ ಲೋಉತ್ತರಯಮ್ಮಿ ಚಲಸವಓ॥೧೪೩॥**

**ಜಹ ತಾರಯಣಚಂದೋ ಮಯರಾಓ ಮಂಪಉಲಾಣ ಸವ್ವಾಣಂ।**
**ಅಹಿಓ ತಹ ಸಮ್ಮತ್ತೋರಿಸಿ ಸಾವಯದುವಿಹ ಧಮ್ಮಾಣಂ ॥೧೪೪॥**

**ಭಾವಾರ್ಥ :** ಜೀವವಿಲ್ಲದ ಶರೀರವು ಶವವೆಂದು ಹೇಳಿಸಿಕೊಳ್ಳುವಂತೆ, ಆತ್ಮದರ್ಶನರೂಪ ಸಮ್ಯಕ್ತ್ವವಿಲ್ಲದೆ ಪ್ರಾಣಿಯು (ಜೀವವು) ಸಂಚರಿಸಿಕೊಂಡು ಇರುತ್ತಿದ್ದರೂ ಶವಪ್ರಾಯವೇ; ಅಗ್ನಿದೇವನಿಗೆ ಆಹುತಿಯೆಂದೇ ಭಾವಿಸ ಬೇಕು. ವ್ಯವಹಾರಚಾರಿತ್ರವುಳ್ಳವನು ಪರಮಾರ್ಥ ವಿಷಯದಲ್ಲಿ ಅಪೂಜ್ಯನೇ. ಹೇಗೆಂದರೆ ನಕ್ಷತ್ರಗಳಲ್ಲಿ ಚಂದ್ರನೂ, ಮೃಗಗಳಲ್ಲಿ ಸಿಂಹವೂ ಶೋಭಿಸುವಂತೆ, ಮುನಿ ಮತ್ತು ಶ್ರಾವಕರಿಬ್ಬರ ಧರ್ಮದಲ್ಲಿ ಸಮ್ಯಗ್ದರ್ಶನವು ಶೋಭಿಸುತ್ತದೆ. ಈ ವಿಧದ ಆತ್ಮಾನುಭವವಿಲ್ಲದೆ ಸಕಲ ವ್ಯವಹಾರ ಕಾರ್ಯಗಳು ಮಲಿನವೆಂದೇ ನಿಶ್ಚಯಿಸಿಕೊಳ್ಳಬೇಕು.

ಸಾರಸಮುಚ್ಚಯದಲ್ಲಿ ಹೇಳಿಸುತ್ತಾರೆ :

**ಜ್ಞಾನಭಾವನಯಾ ಜೀವೋ ಲಭತೇ ಹಿತಮಾತ್ಮನಃ ।**
**ವಿನಯಾಚಾರಸಂಪನ್ನೋ ವಿಷಯೇಷು ಪರಾಂಗ್ಮುಖಃ ॥ ೪ ॥**

ಯಾವ ಜೀವನು ಪಂಚೇಂದ್ರಿಯ ಸಂಬಂಧವಾದ ವಿಷಯವಾಸನೆ ಗಳಿಂದ ಉದಾಸೀನನಾಗಿ, ಧರ್ಮವಿನಯ ಮತ್ತು ಧರ್ಮಾಚರಣೆಯಿಂದ್ಯುಕ್ತ ನಾಗಿ ಆತ್ಮಜ್ಞಾನಭಾವನೆಯನ್ನು ಭಾವಿಸುವಾತನೇ ಆತ್ಮಹಿತವನ್ನುಂಟು ಮಾಡಿಕೊಳ್ಳುವನು.



## ನಿನ್ನನ್ನು ನೀನು ಧ್ಯಾನಿಸು

**ಅಪ್ಪಾ ಅಪ್ಪಇ ಜೋ ಮುಣಇ ಜೋ ಪರಭಾವ ಚಏಇ ।**
**ಸೋ ಪಾವಇ ಸಿವಪುರಿಗಮಣು ಜಿಣವರ ಏಉ ಭಣೇಇ ॥ ೩೪ ॥**

**ಅನ್ವಯಾರ್ಥ :** ಜೋ ಪರಭಾವ ಚಏಇ-ಯಾವನು ಪರಭಾವವನ್ನು ಬಿಡುವವನೋ, ಜೋ ಅಪ್ಪಇ ಅಪ್ಪಾ ಮುಣಇ-ತನ್ನಿಂದಲೇ ತನ್ನನ್ನು ಅನು ಭವಮಾಡಿಕೊಳ್ಳುವನೋ, ಸೋ ಸಿವಪುರಿಗಮಣು ಪಾವಇ-ಅವನೇ ಮೋಕ್ಷ ನಗರವನ್ನು ಪ್ರವೇಶಿಸುವವನೆಂದು, ಜಿಣವರ ಏಉ ಭಣೇಇ-ತೀರ್ಥಂಕರ ಪರಮದೇವರು ಉಪದೇಶಿಸಿರುವರು.

**ಭಾವಾರ್ಥ :** ಯಾರು ಆತ್ಮನನ್ನು ಆತ್ಮನಿಂದಲೇ ನಿಶ್ಚಲನಾಗಿ ಗ್ರಹಣ ಮಾಡುವನೋ ಅವನೇ ಆತ್ಮದರ್ಶನ ಗೈಯುವವನೂ, ಕರ್ಮನಿರ್ಜರೆ ಮಾಡುವವನೂ ಮತ್ತು ಮೋಕ್ಷಲಕ್ಷ್ಮಿಯನ್ನು ಪಡೆಯುವವನೂ ಆಗುತ್ತಾನೆ. ಯಾವಾಗ ಪರರ ಮನೆಗೆ ಹೋಗುತ್ತಿದ್ದ ಸ್ತ್ರೀಯು ತನ್ನ ಮನೆಯಲ್ಲಿ ನಿಶ್ಚಿತಳಾಗಿ ಕುಳಿತುಕೊಳ್ಳುವಳೋ, ಆಗ ಪರರ ಮನೆಗೆ ಹೋಗುವುದು ಸ್ವತಃ ನಿಂತುಹೋಗುವಂತೆ, ಆತ್ಮನು ಯಾವಾಗ ತನ್ನ ಮೂಲಸ್ವಭಾವದಲ್ಲಿ ದೃಢನಾಗುವನೋ ಆಗ ಸ್ವತಃವೇ ಸಕಲಪರಭಾವಗಳ ತ್ಯಾಗವಾಗುವುದು.

ಯಾವ ವಿಕಲ್ಪ ಭಾವಗಳು ಪರದ್ರವ್ಯಗಳ ಸಂಬಂಧದಿಂದಾಗುವುದೋ ಅವೆಲ್ಲವೂ ಪರಭಾವಗಳೇ. ಕರ್ಮಗಳ ಉದಯದಿಂದ ಯಾವ ಭಾವಕರ್ಮಗಳಾದ ರಾಗಾದಿಗಳು ಶುಭಾಶುಭಗಳಾಗುವುವೋ ಮತ್ತು ನೋಕರ್ಮಶರೀರಾದಿಗಳಾಗುವುವೋ, ಅವೆಲ್ಲವು ಪರಭಾವಗಳೇ ಆಗಿರುತ್ತವೆ. ಕೇವಲ ಕರ್ಮರಹಿತನಾದ ಆತ್ಮನಲ್ಲಿ ಇವುಗಳ ದರ್ಶನವಾಗಲಾರದು. ತನ್ನಾತ್ಮನಲ್ಲದೆ ಅನ್ಯ ಸಂಸಾರೀಜೀವಗಳಾಗಲಿ, ಸಿದ್ಧರಾಗಲಿ, ಸಕಲ ಪುದ್ಗಲಪರಮಾಣುಗಳಾಗಲಿ, ಸ್ಕಂಧಗಳಾಗಲಿ, ಧರ್ಮಾಧರ್ಮಾಸ್ತಿಕಾಯಗಳಾಗಲಿ, ಕಾಲಾಣುಗಳಾಗಲಿ, ಆಕಾಶವಾಗಲಿ ಇವೆಲ್ಲವು ಪರಭಾವಗಳೇ ಆಗಿರುತ್ತವೆ. ಆತ್ಮನು ನಿರ್ವಿಕಲ್ಪನೂ, ಅಭೇದ್ಯನೂ, ಸಂಗರಹಿತನೂ, ನಿರ್ಲೇಪನೂ ಆಗಿರುತ್ತಾನೆಂಬುದು ನಿರ್ವಿಕಲ್ಪಕ ಭಾವಗಳಲ್ಲಿಯೇ ಅಂತರ್ಭವಿಸುತ್ತದೆ.

ಭೂತ, ಭವಿಷ್ಯತ್, ವರ್ತಮಾನ ರೂಪ ತ್ರಿಕಾಲಗಳ ಸಂಬಂಧವಾದ ಕರ್ಮಗಳಿಂದಲೂ, ವಿಕಲ್ಪಗಳಿಂದಲೂ ತಾನು ಭಿನ್ನನೆಂದೇ ಭಾವಿಸಬೇಕು. ಒಂದು ವೇಳೆ ಆತ್ಮನು ಅನಂತಗುಣಗಳ ಮತ್ತು ಪರ್ಯಾಯಗಳ ಸಮೂದಾಯರೂಪವಾಗಿದ್ದರೂ ಕೂಡ ಧ್ಯಾನಾವಸ್ಥೆಯಲ್ಲಿ ಗುಣಗುಣೀ ಭೇದಗಳ ವಿಚಾರವನ್ನೂ ಕೂಡ ತಡೆದು ಕೇವಲ ಆತ್ಮ ರಸಾಮೃತ ಸ್ವಾದದಲ್ಲಿಯೇ ಮಗ್ನನಾಗಬೇಕು. ಬಾಹ್ಯ ನಿಮಿತ್ತಗಳ ಗ್ರಹಣವು ಮನಸ್ಸಿನ ಚಂಚಲತೆಯು ದೂರವಾಗುವುದಕ್ಕಾಗಿಯೂ, ಅಷ್ಟೇ ಅಲ್ಲ ಮನಸ್ಸಿನ ಚಿಂತಾತರಂಗಗಳು ಮನೆಮಾಡಿಕೊಳ್ಳದೆ ಇರುವುದಕ್ಕಾಗಿಯೂ, ನಿರ್ಗ್ರಂಥ ಮುನಿಗಳಿಗೆ ಶುದ್ಧೋಪಯೋಗದ ಪ್ರಾಪ್ತಿಯಾಗುವುದು. ಕಾರಣ ಮನಸ್ಸು ಪರಿಗ್ರಹಗಳ ಚಂಚಲತೆಯಿಂದಲೂ, ಆರಂಭಾದಿಗಳ ವಿಕಾರದಿಂದಲೂ ಭಿನ್ನವಾಗಿರುತ್ತದೆ.

ನಿಜವಾಗಿಯು ಏಕಾಂತದಲ್ಲಿರುವಿಕೆ, ಆರೋಗ್ಯಶರೀರ, ಶೀತ, ಉಷ್ಣ, ದಂಶ ಮಶಕಾದಿ ಬಾಧೆಗಳನ್ನು ಸಹನೆಮಾಡಿಕೊಳ್ಳುವುದೇ ಮೊದಲಾದ ನಿಮಿತ್ತ ಕಾರಣಗಳು ಧ್ಯಾನದಲ್ಲಿ ಉಪಯುಕ್ತಗಳಾಗಿವೆ. ಅಭ್ಯಾಸಮಾಡುವವರಿಗೆ ಪರೀಷಹಗಳು ಬಾರದಂತೆ ಬುದ್ಧಿವಂತಿಕೆಯಿಂದ ಧ್ಯಾನವನ್ನು ಮಾಡಬೇಕಾಗುವುದು. ಅಭ್ಯಾಸದ ವೃದ್ಧಿಯಾಗುತ್ತಿರಲು, ಪರೀಷಹಗಳುಂಟಾಗುತ್ತಿದ್ದರೂ ಕೂಡ ನಿಶ್ಚಲನಾಗುವನು. ಪೂರ್ಣರೀತ್ಯಾ ಆತ್ಮನಲ್ಲಿಯೇ ರಮಿಸುವುದೇ ಮೋಕ್ಷಮಾರ್ಗವಾಗಿದೆ.

ಸಮಾಧಿಶತಕದಲ್ಲಿ ಹೇಳಿರುತ್ತಾರೆ:

**ಯದಗ್ರಾಹ್ಯಂ ನ ಗೃಹ್ಣಾತಿ ಗೃಹೀತಂ ನಾಪಿ ಮುಂಚತಿ ।**
**ಜಾನಾತಿ ಸರ್ವಥಾ ಸರ್ವಂ ತತ್ಸ್ವಸಂವೇದ್ಯಮಸ್ಮ್ಯಹಂ ॥ ೨೦ ॥**

**ಯೇನಾತ್ಮಾನಾಽನುಭೂಯೇಽಹಮಾತ್ಮನೈವಾತ್ಮನಾತ್ಮನಿ ।**
**ಸೋಽಹಂ ನ ತನ್ನ ಸಾ ನಾಸೌ ನೈಕೋ ನ ದ್ವೌ ನ ವಾ ಬಹು ॥೨೩॥**

**ಯದಭಾವೆ ಸುಷುಪ್ತೋಽಹಂ ಯದ್ಭಾವೇ ವ್ಯುತ್ಥಿತಃ ಪುನಃ ।**
**ಅತೀಂದ್ರಿಯ ಮನಿರ್ದೇಶ್ಯಂ ತತ್ಸ್ವಸಂವೇದ್ಯಮಸ್ಮ್ಯಹಂ ॥ ೨೪ ॥**

**ಕ್ಷೀಯಂತೇತ್ರೈವ ರಾಗಾದ್ಯಾ ಸ್ತತ್ವತೋ ಮಾಂ ಪ್ರಪಶ್ಯತಃ ।**
**ಬೋಧಾತ್ಮಾನಂ ತತಃ ಕಶ್ಚಿನ್ನ ಮೇ ಶತ್ರುರ್ನ ಚ ಪ್ರಿಯಂ ॥ ೨೫ ॥**

**ಭಾವಾರ್ಥ:** ಯಾವ ಸಾಧಕನು ಗ್ರಹಣೆಗೆ ಯೋಗ್ಯವಾದ ಪರದ್ರವ್ಯಗಳನ್ನು ಗ್ರಹಣೆಮಾಡದೆ ಇರುವುದೇ ತನ್ನ ಗುಣದ ಸ್ವಭಾವವಾಗಿದೆಯೆಂದು ತೀರ್ಮಾನಿಸಿಕೊಂಡು ಅದನ್ನು ಎಂದೆಂದಿಗೂ ತ್ಯಜಿಸುವುದಿಲ್ಲವು. ನಾನು ಸಕಲವನ್ನು ತಿಳಿಯುವ ಸ್ವಭಾವವುಳ್ಳವನಾಗಿರುತ್ತೇನಲ್ಲದೆ, ನಾನು ಸ್ತ್ರೀಯಾಗಲಿ, ಪುರುಷನಾಗಲಿ, ನಪುಂಸಕನಾಗಲಿ ಅಲ್ಲವೆಂದು ನಿಶ್ಚಯಿಸಿಕೊಳ್ಳುತ್ತಾನೆ.

ಯಾವ ಪರಿಜ್ಞಾನವಿಲ್ಲದೆ ಅನಾದಿಕಾಲದಿಂದ ಮೋಹನಿದ್ರೆಯಲ್ಲಿದ್ದೆನೋ ಅಂತಹ ಅಜ್ಞಾನಿಯಾದ ನಾನು ಈಗ ತಿಳಿದು ಎಚ್ಚರಗೊಂಡು ಅತೀಂದ್ರಿಯನಾಗಿಯೂ, ಕೇವಲ ಸ್ವಸಂವೇದನ ಯೋಗ್ಯನಾಗಿಯೂ ಆಗಿರು

ತ್ತೇನೆಂದು ತಿಳಿಯುತ್ತೇನೆ. ಯಾವಾಗಲು ನಾನು ಯಥಾರ್ಥ ತತ್ವ ದೃಷ್ಟಿಯಿಂದ ನನ್ನನ್ನು ಜ್ಞಾನ ಸ್ವರೂಪದಿಂದ ನೋಡಿದೊಡನೆ ಸಕಲ ರಾಗಾದಿಭಾವಗಳು ನಾಶವಾಗುತ್ತವೆ. ಆಗ ನನಗೆ ಯಾವ ಶತ್ರುಗಳಾಗಲಿ, ಮಿತ್ರರಾಗಲಿ ಇಲ್ಲವೆಂಬ ಸಮತಾಭಾವನೆಯು ಉದಯಿಸುವುದು.



## ವ್ಯವಹಾರದಲ್ಲಿ ನವಪದಾರ್ಥಗಳ ತಿಳುವಳಿಕೆ ಅತ್ಯಾವಶ್ಯಕವು

**ಛಹದವ್ವಹ ಜೇ ಜಿಣ ಕಹಿಆ ಣವ ಪಯತ್ಥ ಜೇ ತತ್ತ ।**
**ವವಹಾರೇ ಜಿಣಉತ್ತಿಯಾ ತೇ ಜಾಣಯುಹಿ ಪಯತ್ತ ॥ ೩೫ ॥**

**ಅನ್ವಯಾರ್ಥ:** ಜಿಣ ಜೇ ಛಹದವ್ವಹ ಣವ ಪಯತ್ತ ಜೇ ತತ್ತ ಕಹಿಆ – ತೀರ್ಥಂಕರ ಪರಮದೇವರು ಉಪದೇಶವನ್ನಿತ್ತಿರುವುದೇನೆಂದರೆ ಯಾವ ಆರು ದ್ರವ್ಯಗಳು, ಒಂಭತ್ತು ಪದಾರ್ಥಗಳು ಮತ್ತು ಏಳು ತತ್ವಗಳಿವೆಯೋ, ವವಹಾರೇ ಜಿಣಉತ್ತಿಯಾ – ಅವುಗಳನ್ನು ವ್ಯವಹಾರ ನಯದಿಂದಲೇ ಹೇಳಿರುತ್ತಾರೆ. ಪಯತ್ತ ತೇ ಜಾಣಿಯಹಿ–ಪ್ರಯತ್ನ ಪೂರ್ವಕ ಅವುಗಳನ್ನು ತಿಳಿಯುವುದು ಯೋಗ್ಯವಾಗಿರುತ್ತದೆ.

**ಭಾವಾರ್ಥ:** ನಿಶ್ಚಯ ನಯದಿಂದ ಆತ್ಮಾನುಭವವು ನಿರ್ವಾಣದ ಉಪಾಯವಾಗಿರುತ್ತದೆ. ಈ ಆತ್ಮನು ನಿಜವಾಗಿ ಶುದ್ಧನಾಗಿದ್ದರೂ ಅನಾದಿ ಕಾಲದಿಂದ ಕರ್ಮಬಂಧ ನಿಮಿತ್ತದಿಂದ ಅಶುದ್ಧನಾಗಿರುವನೆಂದು ನಿಶ್ಚಯಿಸಿಕೊಳ್ಳಬೇಕು.

ಈ ಅಶುದ್ಧತೆಯುಂಟಾಗುವುದು ಹೇಗೆ? ನಾಶವಾಗುವುದು ಹೇಗೆ? ಎಂಬ ವಿಷಯವಾಗಿ ತೀರ್ಥಂಕರ ಪರಮದೇವರು ವ್ಯವಹಾರ ನಯದಿಂದ ವಿವರಿಸಿರುವರು. ಯಾಕೆಂದರೆ ಪರವಸ್ತುಗಳ ಆಶ್ರಯದ ಮೂಲಕವೇ ಆತ್ಮಕಥನವು ವ್ಯವಹಾರ ನಯದಿಂದಲೇ ಮಾಡಬೇಕಾದರೆ ಷಡ್ದ್ರವ್ಯಗಳನ್ನು, ಸಪ್ತತತ್ವಗಳನ್ನು ಮತ್ತು ನವಪದಾರ್ಥಗಳನ್ನು ಆವಶ್ಯಕವಾಗಿ ತಿಳಿಯು

ನಿಜವಾಗಿಯು ಏಕಾಂತದಲ್ಲಿರುವಿಕೆ, ಆರೋಗ್ಯಶರೀರ, ಶೀತ, ಉಷ್ಣ, ದಂಶ ಮಶಕಾದಿ ಬಾಧೆಗಳನ್ನು ಸಹನೆಮಾಡಿಕೊಳ್ಳುವುದೇ ಮೊದಲಾದ ನಿಮಿತ್ತ ಕಾರಣಗಳು ಧ್ಯಾನದಲ್ಲಿ ಉಪಯುಕ್ತಗಳಾಗಿವೆ. ಅಭ್ಯಾಸಮಾಡುವವರಿಗೆ ಪರೀಷಹಗಳು ಬಾರದಂತೆ ಬುದ್ಧಿಮಂತಿಕೆಯಿಂದ ಧ್ಯಾನವನ್ನು ಮಾಡಬೇಕಾಗುವುದು. ಅಭ್ಯಾಸದ ವೃದ್ಧಿಯಾಗುತ್ತಿರಲು, ಪರೀಷಹಗಳುಂಟಾಗುತ್ತಿದ್ದರೂ ಕೂಡ ನಿಶ್ಚಲನಾಗುವನು. ಪೂರ್ಣರೀತ್ಯಾ ಆತ್ಮನಲ್ಲಿಯೇ ರಮಿಸುವುದೇ ಮೋಕ್ಷಮಾರ್ಗವಾಗಿದೆ.

ಸಮಾಧಿಶತಕದಲ್ಲಿ ಹೇಳಿರುತ್ತಾರೆ:

**ಯದಗ್ರಾಹ್ಯಂ ನ ಗೃಹ್ಣಾತಿ ಗೃಹೀತಂ ನಾಪಿ ಮುಂಚತಿ ।**
**ಜಾನಾತಿ ಸರ್ವಥಾ ಸರ್ವಂ ತತ್ಸ್ವಸಂವೇದ್ಯಮಸ್ಮ್ಯಹಂ ॥ ೨೦ ॥**

**ಯೇನಾತ್ಮಾನಾಽನುಭೂಯೇಽಹಮಾತ್ಮನೈವಾತ್ಮನಾತ್ಮನಿ ।**
**ಸೋಽಹಂ ನ ತನ್ನ ಸಾ ನಾಸೌ ನೈಕೋ ನ ದ್ವೌ ನ ವಾ ಬಹು ॥ ೨೩ ॥**

**ಯದಭಾವೆ ಸುಷುಪ್ತೋಽಹಂ ಯದ್ಭಾವೇ ವ್ಯುತ್ಥಿತಃ ಪುನಃ ।**
**ಅತೀಂದ್ರಿಯಮನಿರ್ದೇಶ್ಯಂ ತತ್ಸ್ವಸಂವೇದ್ಯಮಸ್ಮ್ಯಹಂ ॥ ೨೪ ॥**

**ಕ್ಷೀಯಂತೇಽತ್ರೈವ ರಾಗಾದ್ಯಾಸ್ತತ್ತ್ವತೋ ಮಾಂ ಪ್ರಪಶ್ಯತಃ ।**
**ಬೋಧಾತ್ಮಾನಂ ತತಃ ಕಶ್ಚಿನ್ನ ಮೇ ಶತ್ರುರ್ನ ಚ ಪ್ರಿಯಂ ॥ ೨೫ ॥**

**ಭಾವಾರ್ಥ:** ಯಾವ ಸಾಧಕನು ಗ್ರಹಣೆಗೆ ಯೋಗ್ಯವಾದ ಪರದ್ರವ್ಯಗಳನ್ನು ಗ್ರಹಣೆಮಾಡದೆ ಇರುವುದೇ ತನ್ನ ಗುಣದ ಸ್ವಭಾವವಾಗಿದೆಯೆಂದು ತೀರ್ಮಾನಿಸಿಕೊಂಡು ಅದನ್ನು ಎಂದೆಂದಿಗೂ ತ್ಯಜಿಸುವುದಿಲ್ಲವು. ನಾನು ಸಕಲವನ್ನು ತಿಳಿಯುವ ಸ್ವಭಾವವುಳ್ಳವನಾಗಿರುತ್ತೇನಲ್ಲದೆ, ನಾನು ಸ್ತ್ರೀಯಾಗಲಿ, ಪುರುಷನಾಗಲಿ, ನಪುಂಸಕನಾಗಲಿ ಅಲ್ಲವೆಂದು ನಿಶ್ಚಯಿಸಿಕೊಳ್ಳುತ್ತಾನೆ.

ಯಾವ ಪರಿಜ್ಞಾನವಿಲ್ಲದೆ ಅನಾದಿಕಾಲದಿಂದ ಮೋಹನಿದ್ರೆಯಲ್ಲಿದ್ದೆನೋ ಅಂತಹ ಅಜ್ಞಾನಿಯಾದ ನಾನು ಈಗ ತಿಳಿದು ಎಚ್ಚರಗೊಂಡು ಅತೀಂದ್ರಯನಾಗಿಯೂ, ಕೇವಲ ಸ್ವಸಂವೇದನ ಯೋಗ್ಯನಾಗಿಯೂ ಆಗಿರು

ತ್ತೇನೆಂದು ತಿಳಿಯುತ್ತೇನೆ. ಯಾವಾಗಲು ನಾನು ಯಥಾರ್ಥ ತತ್ವ ದೃಷ್ಟಿಯಿಂದ ನನ್ನನ್ನು ಜ್ಞಾನ ಸ್ವರೂಪದಿಂದ ನೋಡಿದೊಡನೆ ಸಕಲ ರಾಗಾದಿಭಾವಗಳು ನಾಶವಾಗುತ್ತವೆ. ಆಗ ನನಗೆ ಯಾವ ಶತ್ರುಗಳಾಗಲಿ, ಮಿತ್ರರಾಗಲಿ ಇಲ್ಲವೆಂಬ ಸಮತಾಭಾವನೆಯು ಉದಯಿಸುವುದು.



## ವ್ಯವಹಾರದಲ್ಲಿ ನವಪದಾರ್ಥಗಳ ತಿಳುವಳಿಕೆ ಅತ್ಯಾವಶ್ಯಕವು

**ಛಹದವ್ವಹ ಜೇ ಜಿಣ ಕಹಿಆ ಣವ ಪಯತ್ಥ ಜೇ ತತ್ತ ।**
**ವವಹಾರೇ ಜಿಣಉತ್ತಿಯಾ ತೇ ಜಾಣಿಯುಹಿ ಪಯತ್ತ ॥ ೩೫ ॥**

**ಅನ್ವಯಾರ್ಥ :** ಜಿಣ ಜೇ ಛಹದವ್ವಹ ಣವ ಪಯತ್ತ ಜೇ ತತ್ತ ಕಹಿಆ – ತೀರ್ಥಂಕರ ಪರಮದೇವರು ಉಪದೇಶವನ್ನಿತ್ತುರುವುದೇನೆಂದರೆ ಯಾವ ಆರು ದ್ರವ್ಯಗಳು, ಒಂಭತ್ತು ಪದಾರ್ಥಗಳು ಮತ್ತು ಏಳು ತತ್ವಗಳಿವೆಯೋ, ವವಹಾರೇ ಜಿಣಉತ್ತಿಯಾ – ಅವುಗಳನ್ನು ವ್ಯವಹಾರ ನಯದಿಂದಲೇ ಹೇಳಿರುತ್ತಾರೆ. ಪಯತ್ತ ತೇ ಜಾಣಿಯುಹಿ–ಪ್ರಯತ್ನ ಪೂರ್ವಕ ಅವುಗಳನ್ನು ತಿಳಿಯುವುದು ಯೋಗ್ಯವಾಗಿರುತ್ತದೆ.

**ಭಾವಾರ್ಥ :** ನಿಶ್ಚಯ ನಯದಿಂದ ಆತ್ಮಾನುಭವವು ನಿರ್ವಾಣದು ಪಾಯವಾಗಿರುತ್ತದೆ. ಈ ಆತ್ಮನು ನಿಜವಾಗಿ ಶುದ್ಧನಾಗಿದ್ದರೂ ಅನಾದಿ ಕಾಲದಿಂದ ಕರ್ಮಬಂಧ ನಿಮಿತ್ತದಿಂದ ಅಶುದ್ಧನಾಗಿರುವನೆಂದು ನಿಶ್ಚಯಿಸಿಕೊಳ್ಳಬೇಕು.

ಈ ಅಶುದ್ಧತೆಯುಂಟಾಗುವುದು ಹೇಗೆ? ನಾಶವಾಗುವುದು ಹೇಗೆ? ಎಂಬ ವಿಷಯವಾಗಿ ತೀರ್ಥಂಕರ ಪರಮದೇವರು ವ್ಯವಹಾರ ನಯದಿಂದ ವಿವರಿಸಿರುವರು. ಯಾಕೆಂದರೆ ಪರವಸ್ತುಗಳ ಆಶ್ರಯದ ಮೂಲಕವೇ ಆತ್ಮ ಕಥನವು ವ್ಯವಹಾರ ನಯದಿಂದಲೇ ಮಾಡಬೇಕಾದರೆ ಷಡ್ದ್ರವ್ಯಗಳನ್ನು, ಸಪ್ತತತ್ವಗಳನ್ನು ಮತ್ತು ನವಪದಾರ್ಥಗಳನ್ನು ಅವಶ್ಯಕವಾಗಿ ತಿಳಿಯು

ಬೇಕು. ಸಾಧಕನು ಆಧ್ಯಾತ್ಮ ಶಾಸ್ತ್ರದಲ್ಲಿ ಪ್ರವೇಶಿಸುವುದಕ್ಕಿಂತ ಮೊದಲು ಮೋಕ್ಷಶಾಸ್ತ್ರ (ತತ್ವಾರ್ಥಸೂತ್ರ) ಮತ್ತು ಅದರ ಟೀಕೆಗಳಾದ ತತ್ತ್ವರತ್ನ ಪ್ರದೀಪಿಕೆ, ಸರ್ವಾರ್ಥಸಿದ್ಧಿ, ರಾಜವಾರ್ತಿಕ, ಶ್ಲೋಕವಾರ್ತಿಕ ಗ್ರಂಥಗಳನ್ನೂ ಮತ್ತು ಗೋಮಟಸಾರ ಮೊದಲಾದ ವ್ಯವಹಾರ ಪ್ರಧಾನಗಳಾದ ಗ್ರಂಥಗಳನ್ನು ತಿಳಿಯುವುದು ಅತ್ಯಾವಶ್ಯಕವಾಗಿದೆ. ಇವುಗಳ ಶ್ರದ್ಧಾನಕ್ಕೇನೆ ವ್ಯವಹಾರ ಸಮ್ಯಕ್ತ್ವವೆಂದು ಹೇಳಲ್ಪಡುವುದು. ಅದು ಆತ್ಮ ಪ್ರತೀತಿರೂಪ ಸಮ್ಯಕ್ತ್ವಕ್ಕೆ ನಿಮಿತ್ತ ಕಾರಣಗಳಾಗಿವೆ.

ಗೋಮಟಸಾರ ಜೀವಕಾಂಡದಲ್ಲಿ ಹೇಳಿದ್ದಾರೆ:

**ಛಪ್ಪಂಚಣವವಿಹಾಣಂ ಅತ್ಥಾಣಂ ಜಿಣವರೋವಇಟ್ಠಾಣಂ।**
**ಆಣಾಏ ಅಹಿಗಮೇಣ ಯ ಸದ್ದಹಣಂ ಹೋಇ ಸಮ್ಮತ್ತಂ ॥೫೬೦॥**

**ಭಾವಾರ್ಥ:** ತೀರ್ಥಂಕರ ಪರಮದೇವರು ಉಪದೇಶವಿತ್ತ ಪ್ರಕಾರ ಆರು ದ್ರವ್ಯ, ಐದು ಅಸ್ತಿಕಾಯ, ಒಂಭತ್ತು ಪದಾರ್ಥಾದಿಗಳ ಶ್ರದ್ಧಾನವು ಆಜ್ಞೆಯಿಂದಾಗಲಿ, ಶಾಸ್ತ್ರಗಳ ಪಠಣಪಾಠಣಗಳಿಂದಾಗಲಿ ಅಥವಾ ತರ್ಕದಿಂದಾಗಲಿ ತಿಳಿದುಕೊಳ್ಳುವುದು ವ್ಯವಹಾರ ಸಮ್ಯಕ್ತ್ವವು.

**ಉವಜೋಗೋ ವಣ್ಣ ಚಊ ಲಕ್ಖಣಮಿಹ ಜೀವಪೋಗ್ಗಲಾಣಂ ತು।**
**ಗದಿಠಾಣೋಗ್ಗಹವತ್ತಣಕಿರಿಯುವಯಾರೋ ದು**
**ಧಮ್ಮಚಊ ॥೫೬೪॥**

**ಭಾವಾರ್ಥ:** ಜ್ಞಾನೋಪಯೋಗ, ದರ್ಶನೋಪಯೋಗ ಲಕ್ಷಣವುಳ್ಳದ್ದೇ ಜೀವದ್ರವ್ಯವು. ಸ್ಪರ್ಶ, ರಸ, ಗಂಧ, ವರ್ಣಗಳಿಂದ್ಯುಕ್ತವಾದುದೇ ಪುದ್ಗಲದ್ರವ್ಯವು. ಈ ಜೀವಪುದ್ಗಲಗಳ ಗಮನಾದಿಗೆ ಉದಾಸೀನ ರೂಪದಿಂದ ಸಹಕಾರಿಯಾಗಿರುವುದೇ ಧರ್ಮದ್ರವ್ಯವು. ಇವುಗಳ ನಿಲ್ಲುವಿಕೆಗೆ ಸಹಕಾರಿಯಾದ ದ್ರವ್ಯವೇ ಅಧರ್ಮ ದ್ರವ್ಯವು. ಎಲ್ಲಾ ದ್ರವ್ಯಗಳಿಗೆ ಸ್ಥಾನವನ್ನು ಕೊಡುವುದೇ ಆಕಾಶದ್ರವ್ಯವು. ದ್ರವ್ಯಗಳ ಪರಿವರ್ತನೆಗೆ ನಿಮಿತ್ತ ಕಾರಣವಾದುದೇ ಕಾಲದ್ರವ್ಯವು. ಹೀಗೆ ಆರು ದ್ರವ್ಯಗಳಿಂದ ಭರಿತವಾದುದೇ ಲೋಕವು. ಯಾವುದು ಸತ್ ಸ್ವರೂಪವಾಗಿರುವುದೋ ಅದು ದ್ರವ್ಯವೆಂದು

ಹೇಳಿಸಿಕೊಳ್ಳುವುದು. ಜೀವದ್ರವ್ಯವು ಜ್ಞಾನೋಪಯೋಗ, ದರ್ಶನೋಪ ಯೋಗಮಯವೆಂದು ನಿಶ್ಚಯವಾಯಿತು.

ಶರೀರಾದಿಗಳು ಪುದ್ಗಲ ದ್ರವ್ಯದ ರಚನೆಯಸ್ತಿತ್ವವು. ಇದು ಪ್ರತ್ಯಕ್ಷ ಗೋಚರವಾಗಿದೆ. ಉಳಿದ ನಾಲ್ಕು ದ್ರವ್ಯಗಳು ಅಮೂರ್ತಿಗಳಾಗಿವೆ. ಇವುಗಳ ಪ್ರಕಟನೆಯು ಅನುಮಾನದಿಂದಲೇ ಸಾಧ್ಯವು. ಜೀವ ಮತ್ತು ಪುದ್ಗಲವು ಈ ನಾಲ್ಕು ಕಾರ್ಯಗಳನ್ನು ಮಾಡುತ್ತವೆ. ಅವುಗಳಲ್ಲಿ ಉಪಾದಾನ ಕಾರಣವು ಅವು ಸ್ವಯಂ ಆಗಿರುತ್ತವೆ. ಉಳಿದ ನಾಲ್ಕು ದ್ರವ್ಯಗಳು ನಿಮಿತ್ತ ಕಾರಣಗಳಾಗಿವೆ. ಗಮನ ಸಹಕಾರಿ ಮತ್ತು ಲೋಕಾಕಾಶವ್ಯಾಪಿಯಾದ ಧರ್ಮದ್ರವ್ಯವೂ, ಸ್ಥಿತಿಗೆ ಸಹಕಾರಿ ಮತ್ತು ಲೋಕಾಕಾಶವ್ಯಾಪಿಯಾದ ಅಧರ್ಮ ದ್ರವ್ಯವೂ, ಅವಕಾಶವನ್ನು ಕೊಡುವ ಆಕಾಶದ್ರವ್ಯವೂ, ಪರಿವರ್ತನೆಯನ್ನುಂಟುಮಾಡುವ ಕಾಲದ್ರವ್ಯವೂ ಇವೆಲ್ಲವೂ ಅಸಂಖ್ಯಾತಗಳಾಗಿವೆ. ಒಂದೊಂದು ಆಕಾಶ ಪ್ರದೇಶದಲ್ಲಿ ಒಂದೊಂದು ಕಾಲಾಣುಗಳು ಇರುತ್ತವೆ. ಜೀವಗಳು ಅನಂತ ಮತ್ತು ಪುದ್ಗಲವು ಅನಂತವಾಗಿರುತ್ತವೆ. ಅನಂತ ಆಕಾಶದ ಮಧ್ಯದಲ್ಲಿ ಲೋಕವು ಇದೆ. ಲೋಕದಲ್ಲಿ ಸರ್ವತ್ರಶೇಷ ಐದು ದ್ರವ್ಯಗಳಿರುತ್ತವೆ. ಸೂಕ್ಷ್ಮ ಪೃಥ್ವಿ, ಜಲ, ಅಗ್ನಿ, ವಾಯು, ವನಸ್ಪತಿ ಮೊದಲಾದವುಗಳು ಸರ್ವತ್ರ ಇರುತ್ತವೆ. ಸ್ಥೂಲ ಏಕೇಂದ್ರಿಯಾದಿಗಳು ಕೆಲ ಕೆಲವೆಡೆಗಳಲ್ಲಿರುತ್ತವೆ. ಪರಮಾಣು ಮತ್ತು ಸ್ಕಂಧರೂಪ ಪುದ್ಗಲಗಳು ಎಲ್ಲಾ ಕಡೆಗಳಲ್ಲಿರುತ್ತವೆ.

ಈ ಆರು ದ್ರವ್ಯಗಳ ಅಸ್ತಿತ್ವವು ಎಂದೆಂದಿಗೂ ನಾಶವಾಗಲಾರದು. ಅವುಗಳ ಮಧ್ಯದಲ್ಲಿ ಸಕಲ ಸಂಸಾರಿ ಜೀವಗಳು ಕರ್ಮಬಂಧದಿಂದೊಡಗೂಡಿ ಅಶುದ್ಧಗಳಾಗಿರುತ್ತವೆ. ಅವುಗಳನ್ನೂ ಕೂಡ ಶುದ್ಧ ನಿಶ್ಚಯ ನಯದ ದೃಷ್ಟಿಯಿಂದ ವಿಚಾರಿಸಿದ್ದೇ ಆದರೆ, ಅವು ಶುದ್ಧಗಳೆಂದೇ ಪ್ರತಿಭಾಸವಾಗುತ್ತವೆ. ಇದೇ ಪ್ರಕಾರದ ದೃಷ್ಟಿಯಿಂದ ಪುದ್ಗಲ ದ್ರವ್ಯವು ಕೂಡಾ ಪರಮಾಣು ರೂಪ ಶುದ್ಧಗಳೆಂದೇ ಭಾಸವಾಗುತ್ತದೆ. ಸಮತಾಭಾವನೆಯು ಪ್ರತಿಬಿಂಬಿಸಬೇಕಾದರೆ ಈ ಆರು ದ್ರವ್ಯಗಳ ಮೂಲ ಸ್ವಭಾವವನ್ನು ಶುದ್ಧವೆಂದೂ, ಭಿನ್ನಭಿನ್ನವೆಂದೂ ನೋಡುವಾಗ ರಾಗದ್ವೇಷಗಳು ನಿಲ್ಲಲಾರವು.

ಸಮಾಧಿಶತಕದಲ್ಲಿ ಹೇಳಿರುತ್ತಾರೆ:

**ಯಸ್ಯ ಸಸ್ಪಂಥಮಾಭಾತಿ ನಿಃಸ್ಪಂದೇನ ಸಮಂ ಜಗತ್ ।**
**ಅಪ್ರಜ್ಞಮಕ್ರಿಯಾಭೋಗಂ ಸ ಶಮಂ ಯಾತಿ ನೇತರಃ ॥ ೬೭ ॥**

**ಭಾವಾರ್ಥ:** ಚಂಚಲಮಯವಾದ ಜಗತ್ತು ಯಾವನ ದೃಷ್ಟಿಯಲ್ಲಿ ಶುದ್ಧ ನಿಶ್ಚಯನಯದ ಬಲದಿಂದ ಚಲನರಹಿತವೂ, ಸ್ಥಿರವೂ, ವಿಕಲ್ಪರಹಿತವಾದ ನಿರ್ವಿಕಲ್ಪಕ್ರಿಯಾ ಅಥವಾ ಭೋಗರಹಿತ ನಿರ್ವಿಕಲ್ಪವೂ ಹೀಗೆಂದು ತೋರುವುದೋ ಅವನೇ ಸಮಭಾವನೆಯನ್ನು ಪಡೆಯುವನು. ಅಂತಹ ಮೋಕ್ಷಮಾರ್ಗದಲ್ಲಿರುವವನಿಗೆ ಷಡ್ದ್ರವ್ಯಗಳ ಅಸ್ತಿತ್ವದ ಬಗ್ಗೆ ದೃಢ ನಿಶ್ಚಯವಾಗುವುದು. ಆಗ ಭ್ರಮೆಯಿಲ್ಲದ ಜ್ಞಾನವುಂಟಾಗುವುದು. ಆಗ ಪರದ್ರವ್ಯಗಳ ಮತ್ತು ಪರಭಾವಗಳಲ್ಲಿ ಉದಾಸೀನತೆಯುಂಟಾಗಿ ಸ್ವದ್ರವ್ಯದಲ್ಲಿ ಪ್ರವರ್ತಿಸುವವನಾಗುವನು.

**ಸಪ್ತತತ್ವಗಳು:** ಜೀವ, ಅಜೀವ, ಆಸ್ರವ, ಬಂಧ, ಸಂವರ, ನಿರ್ಜರೆ ಮತ್ತು ಮೋಕ್ಷಗಳೆಂಬ ಏಳು ತತ್ವಗಳು. ಜೀವತತ್ವದಲ್ಲಿ ಸಕಲ ಅನಂತ ಜೀವಗಳ ಗ್ರಹಣೆಯಾಗುತ್ತದೆ. ಅಜೀವ ತತ್ವದಲ್ಲಿ ಉಳಿದ ಐದು ದ್ರವ್ಯಗಳ ಗ್ರಹಣೆಯಾಗುತ್ತದೆ. ಕಾಲಾಣುಗಳು ಒಂದೊಂದು ಪ್ರದೇಶದಲ್ಲಿ ಒಂದೊಂದಾಗಿರುವುದರಿಂದ ಕಾಯರಹಿತಗಳಾಗಿವೆ. ಉಳಿದ ಐದು ದ್ರವ್ಯಗಳು ಬಹುಪ್ರದೇಶಿಗಳಾಗಿವೆ. ಇವೆಲ್ಲವು ಪರಮಾಣುಗಳಲ್ಲಿ ಸೇರಿಕೊಳ್ಳುವ ಶಕ್ತಿಯಿರುವುದರಿಂದ ಕಾಲದ್ರವ್ಯವನ್ನು ಬಿಟ್ಟು ಉಳಿದ ಐದು ದ್ರವ್ಯಗಳಿಗೆ ಅಸ್ತಿಕಾಯಗಳೆಂದು ಹೇಳಿರುವರು.

ಕಾರ್ಮಣ ವರ್ಗಣೆಗಳ ಬರುವಿಕೆಗೆ ಆಸ್ರವವೆಂದೂ, ಕಾರ್ಮಣ ಶರೀರದೊಡನೆ ಬೆರೆಯುವುದಕ್ಕೆ ಬಂಧವೆಂದು ಹೇಳುತ್ತಾರೆ. ಈ ಆಸ್ರವ ಬಂಧಗಳೆರಡು ಒಂದೇ ಸಮಯದಲ್ಲಾಗುವುದರಿಂದ ಅವೆರಡರ ಕಾರಣ ಭಾವವು ಒಂದೇ ಆಗಿರುತ್ತದೆ. ಮಿಥ್ಯಾದರ್ಶನವು 5 ವಿಧವು. 6 ವಿಧ ಜೀವನಿಕಾಯಗಳಲ್ಲಿ ಹಿಂಸೆಯನ್ನು ಬಿಡದಿರುವುದು ಮತ್ತು ಷಡಿಂದ್ರಿಯ (ಪಂಚೇಂದ್ರಿಯ ಮತ್ತು ಮನಸ್ಸು) ಗಳ ಸಂಯಮವಿಲ್ಲದೇ ಇರುವುದೇ ಅವಿರತಿ. ಇದು 6+6 = 12 ವಿಧವು. ಕಷಾಯಗಳು ಅನಂತಾನುಬಂಧಿ ಮೊದ

ಲಾಗಿ 16. ನೋಕಷಾಯಗಳು ಹಾಸ್ಯ ಮೊದಲಾಗಿ 9. ಹೀಗೆ ಕಷಾಯಗಳು ಒಟ್ಟು 16+9=25 ವಿಧವು. ಯೋಗಗಳು ಮನೋಯೋಗ 4. ವಚನ ಯೋಗ 4 ಮತ್ತು ಕಾಯಯೋಗ 7. ಹೀಗೆ 4+4+7=15 ವಿಧವು ಒಟ್ಟು 5+12+25+15=57 ಭಾವಗಳು ಆಸ್ರವ ಮತ್ತು ಬಂಧಕ್ಕೆ ಕಾರಣಗಳಾಗಿವೆ.

ಸಂಕ್ಷೇಪವಾಗಿ ಯೋಗ ಮತ್ತು ಕಷಾಯಗಳಿಂದ ಆಸ್ರವ, ಬಂಧಗಳಾಗುವವೆಂಬುದನ್ನು ವರ್ಣಿಸುತ್ತಾರೆ-

ಮನ, ವಚನ, ಕಾಯಗಳ ಪ್ರವೃತ್ತಿಯಿಂದಲೇ ಆತ್ಮಪ್ರದೇಶಗಳು ಕಂಪಿಸುವಾಗ ಕಾರ್ಮಣ ವರ್ಗಣೆಗಳು ಆಕರ್ಷಿಸಲ್ಪಟ್ಟು ಬಂಧಿತವಾಗುತ್ತವೆ. ಜ್ಞಾನಾವರಣಾದಿ ಎಂಟು ಕರ್ಮಗಳ ಸ್ವಭಾವವು ಆತ್ಮನೊಡನೆ ಬಂಧವಾಗುವುದಕ್ಕೆ ಪ್ರಕೃತಿಬಂಧವೆಂದೂ, ಆ ಕರ್ಮ ಪುದ್ಗಲಗಳು ಆತ್ಮನ ಸಮಸ್ತ ಪ್ರದೇಶಗಳಲ್ಲಿ ಸೇರಿ ಏಕರೂಪವನ್ನು ಹೊಂದುವುದಕ್ಕೆ ಪ್ರದೇಶಬಂಧವೆಂದೂ ತಿಳಿಯುವುದು. ಪ್ರಕೃತಿಬಂಧ ಮತ್ತು ಪ್ರದೇಶಬಂಧಗಳೆರಡು ಯೋಗಗಳಿಂದಾಗುವುದು. ಕರ್ಮಗಳ ಇಂತಿಷ್ಟುಕಾಲದ ಅವಧಿಗೆ ಸ್ಥಿತಿ ಬಂಧವೆಂದೂ, ಫಲವನ್ನು ಕೊಡುವ ಶಕ್ತಿಯು ಬಂಧವಾಗುವುದಕ್ಕೆ ಅನುಭಾಗಬಂಧವೆಂದೂ ತಿಳಿಯುವುದು. ಸ್ಥಿತಿ ಬಂಧ ಮತ್ತು ಅನುಭಾಗಬಂಧಗಳೆರಡು ಕಷಾಯಗಳಿಂದಾಗುತ್ತವೆ.

ಆ ಕರ್ಮಗಳ ಬರುವಿಕೆಯನ್ನು ತಡೆಯುವುದೇ ಸಂವರತತ್ವವು. ಸಮ್ಯಗ್ದರ್ಶನ, ಅಹಿಂಸಾದಿ ಐದು ವ್ರತಗಳು, ಕಷಾಯ ಭಾವನೆಯಿಲ್ಲದ ವೀತರಾಗ ಭಾವನೆ ಮತ್ತು ಯೋಗಗಳ ಸ್ಥಿರತೆ ಮೊದಲಾದವು ಸಂವರ ಭಾವನೆಗಳಾಗಿವೆ. ಅವುಗಳನ್ನು ಪಡೆಯಲು ಪ್ರಯತ್ನಿಸಬೇಕು.

ಪೂರ್ವ ಬದ್ಧಕರ್ಮಗಳು ಅಲ್ಪಸ್ವಲ್ಪವಾಗಿ ಉದುರಿಹೋಗುವುದೇ ನಿರ್ಜರಾತತ್ವವು. ಅದು ಸವಿಪಾಕ ನಿರ್ಜರೆಯೆಂದೂ, ಅವಿಪಾಕ ನಿರ್ಜರೆಯೆಂದೂ ಎರಡು ವಿಧವು. ಫಲವನ್ನು ಕೊಟ್ಟು ಉದುರಿಹೋಗುವುದೇ ಸವಿಪಾಕ ನಿರ್ಜರೆಯು. ಫಲವನ್ನು ಕೊಡುವುದಕ್ಕಿಂತ ಮೊದಲೇ ಉದುರಿಹೋಗುವುದೇ ಅವಿಪಾಕ ನಿರ್ಜರೆಯು. ಇವುಗಳ ಮುಖ್ಯ ಉಪಾಯವು

ತಪಧ್ಯಾನಾದಿಗಳೇ ಆಗಿರುತ್ತವೆ. ಸಂವರೆ ಮತ್ತು ನಿರ್ಜರೆಗಳ ಮೂಲಕ ಸಕಲ ಕರ್ಮಗಳು ನಾಶವಾಗಿ ಹೋಗುವುದೇ ಮೋಕ್ಷವು. ಈ ಏಳು ತತ್ವಗಳಲ್ಲಿ ಪುಣ್ಯ ಮತ್ತು ಪಾಪಗಳನ್ನು ಸೇರಿಸುವುದರಿಂದ ನವ (ಒಂಭತ್ತು) ಪದಾರ್ಥಗಳಾಗುತ್ತವೆ. ಪುಣ್ಯ ಪಾಪಗಳು ಆಸ್ರವ ಮತ್ತು ಬಂಧ ತತ್ವಗಳಲ್ಲಿ ಗರ್ಭಿತವಾಗಿವೆ. ವ್ಯವಹಾರನಯದಿಂದ ಈ ನವಪದಾರ್ಥಗಳಲ್ಲಿ ಜೀವ, ಸಂವರ, ನಿರ್ಜರಾ, ಮೋಕ್ಷ ಈ ನಾಲ್ಕು ಪದಾರ್ಥಗಳು ಗ್ರಹಿಸುವುದಕ್ಕೆ ಯೋಗ್ಯವಾಗಿವೆ. ಉಳಿದ ಐದು ಪದಾರ್ಥಗಳು ತ್ಯಜಿಸುವುದಕ್ಕೆ ಯೋಗ್ಯವಾಗಿವೆ. ನಿಶ್ಚಯ ನಯದಿಂದ ತನ್ನಾತ್ಮ ತತ್ವವು ಗ್ರಹಣೆಗೆ ಯೋಗ್ಯವಾಗಿದೆಯೆಂದು ನಿಶ್ಚಯಿಸಬೇಕು.

ಸಮಯಸಾರದಲ್ಲಿ ಹೇಳಿದ್ದಾರೆ :

**ಭೂದತ್ಥೇಣಾಭಿಗದಾ ಜೀವಾಜೀವಾ ಯ ಪುಣ್ಣ ಪಾವಂ ಚ ।**
**ಆಸವಸಂವರಣಿಜ್ಜರಬಂಧೋ ಮೋಕ್ಖೋ ಯ ಸಮ್ಮತ್ತಂ ॥೧೫॥**

**ಭಾವಾರ್ಥ :** ನಿಶ್ಚಯ ನಯದಿಂದ ತಿಳಿಯಲ್ಪಟ್ಟ ಒಂಭತ್ತು ಪದಾರ್ಥಗಳು ಸಮ್ಯಕ್ತ್ವಗಳಾಗುತ್ತವೆ. ಅರ್ಥಾತ್ ಈ ಒಂಭತ್ತು ಪದಾರ್ಥಗಳು ಜೀವ, ಅಜೀವಗಳ ಸಂಯೋಗದಿಂದಿರುವುವು. ಆಸ್ರವಾದಿ ಏಳು ಪದಾರ್ಥಗಳು ಜೀವ ಮತ್ತು ಕರ್ಮವರ್ಗಣೆಯ ಸಂಯೋಗದಿಂದಾಗುತ್ತವೆ. ಇವುಗಳಲ್ಲಿ ಕರ್ಮಮಲರಹಿತವಾದ ಜೀವವೊಂದೇ ಗ್ರಹಣೆಗೆ ಯೋಗ್ಯವಾಗಿದೆಯೆಂಬ ನಂಬಿಕೆಯೇ ನಿಶ್ಚಯನಯದಿಂದ ಸಮ್ಯಕ್ತ್ವವಾಗಿರುತ್ತದೆ.



## ಸರ್ವ ಪದಾರ್ಥಗಳಲ್ಲಿ ಚೈತನ್ಯವುಳ್ಳದ್ದು ಜೀವವು

**ಸವ್ವ ಅಚೇಯಣ ಜಾಣಿ ಜಿಯ ಎಕ್ಕ ಸಚೇಯಣ ಸಾರು ।**
**ಜೋ ಜಾಣೇವಿಣ ಪರಮಮುಣಿ ಲಹು ಪಾವಇ ಭವಪಾರು ॥೩೬॥**

**ಅನ್ವಯಾರ್ಥ :** ಸವ್ವ ಅಚೇಯಣ ಜಾಣಿ–ಪುದ್ಗಲಾದಿ ಐದು ದ್ರವ್ಯಗಳನ್ನೂ, ಅವುಗಳಲ್ಲುಂಟಾಗುವ ಪದಾರ್ಥಗಳನ್ನೂ ಅಚೇತನವೆಂದೇ ತಿಳಿ.

ಎಕ್ಕ ಜಿಯ ಸಚೇಯಣ ಸಾರು– ಜೀವವೊಂದೇ ಸಚೇತನವೂ, ಸಾರಭೂತವೂ, ಪರಮಶ್ರೇಷ್ಠವೂ ಆದ ಪದಾರ್ಥವಾಗಿರುತ್ತದೆಂದು, ಪರಮಮುಣಿ ಜೋ ಜಾಣೇವಿಣ ಲಹು ಭವಪಾರು ಪಾವಇ– ಪರಮ ಮುನಿಗಳು ಜೀವ ತತ್ವವನ್ನೇ ಅನುಭವಮಾಡಿಕೊಂಡು ಶೀಘ್ರವೇ ಸಂಸಾರ ಸಾಗರದಿಂದ ಪಾರಾಗುತ್ತಾರೆ.

**ಭಾವಾರ್ಥ :** ಆರು ದ್ರವ್ಯಗಳಲ್ಲಿ ಆತ್ಮನು ಸಚೇತನವಾದುದಾಗಿದೆ. ಆ ಆತ್ಮನು ತನ್ನನ್ನೂ, ಎಲ್ಲವನ್ನು ತಿಳಿಯುವುದಕ್ಕೆ ಯೋಗ್ಯವಾದ ಜ್ಞೇಯ ಪದಾರ್ಥವನ್ನೂ ಕೂಡ ತಿಳಿಯುತ್ತಾನೆ. ಪುದ್ಗಲಾದಿ ಐದು ದ್ರವ್ಯಗಳು ಚೇತನಾರಹಿತವಾದ ಜಡಪದಾರ್ಥಗಳಾಗಿವೆ. ನವಪದಾರ್ಥಗಳಲ್ಲಿಯೂ ಕೂಡ ಯದಿ ಶುದ್ಧ ನಿಶ್ಚಯ ನಯದಿಂದ ವಿಚಾರಿಸಿದ್ದಾದರೆ, ಆತ್ಮನೊಬ್ಬನೇ ಭಿನ್ನನಾಗಿರುವನೆಂದು ತೋರುವುದು. ಉದಾ : ಅನ್ನದಲ್ಲಿ ಸಕ್ಕರೆಯನ್ನು ಸೇರಿಸಿ ಒಂಭತ್ತು ವಿಧದ ಮಿಠಾಯಿ ಪದಾರ್ಥಗಳನ್ನು ಮಾಡಿದರೂ ಕೂಡ, ಅವುಗಳಲ್ಲಿ ಸಕ್ಕರೆಯ ಮಧುರತೆಯನ್ನು ತಿಳಿಯುವವನು ಸಕ್ಕರೆಯನ್ನು ಭಿನ್ನ ವೆಂದೇ ತಿಳಿಯುವಂತೆ, ನಿಶ್ಚಯ ನಯದಿಂದ ನವಪದಾರ್ಥಗಳಲ್ಲಿಯೂ ಕೂಡ ತನ್ನನ್ನು ಭಿನ್ನನೆಂದೇ ತಿಳಿಯುತ್ತಾನೆ.

ಜ್ಞಾನಿಯು ತನ್ನಾತ್ಮನನ್ನು ಪರಪದಾರ್ಥಗಳಿಂದ ಭಿನ್ನನೆಂದೂ, ಎಂಟು ಕರ್ಮಗಳು ಜಡವಾದವುಗಳೆಂದೂ, ಶರೀರವು ಜಡವೆಂದೂ, ಕರ್ಮ ನಿಮಿತ್ತದಿಂದುಟಾಗುವ ಔಪಪಾದಿಕ ವಿಕಾರಿಭಾವಗಳೂ ಕೂಡ ಆತ್ಮನ ಸ್ವಭಾವವಲ್ಲವೆಂದೂ, ಮತಿ ಮೊದಲಾದ ಕ್ರಮವರ್ತಿ ಕರ್ಮ ಸಂಯೋಗ ದಿಂದುಟಾಗುವ ಜ್ಞಾನಗಳು ಆತ್ಮನ ಸ್ವಭಾವವಲ್ಲವೆಂದೂ, ಆತ್ಮದ್ರವ್ಯವು ಮಾತ್ರ ದ್ರವ್ಯರೂಪವೂ ಮತ್ತು ಅಖಂಡ ಸಿದ್ಧ ಪರಮಾತ್ಮನಂತೆ ಶುದ್ಧ ವೆಂದೂ ತಿಳಿಯುತ್ತಿರಬೇಕು. ಈ ಪ್ರಕಾರ ಪರಮ ಮುನಿಗಳು ಶುದ್ಧಾ ತ್ಮನ ಧ್ಯಾನದಿಂದಲೇ ಬಹುಬೇಗ ಸಂಸಾರ ಸಾಗರದಿಂದ ಪಾರಾಗುತ್ತಾರೆ.

ವಜ್ರವೃಷಭನಾರಾಚ ಸಂಹನನವು ಮೋಕ್ಷದ ಸಾಧನವಾಗಿರುತ್ತದೆ. ಅದಿಲ್ಲದೆ ಅಂತಹ ಶಕ್ತಿಯು ಪ್ರಕಟವಾಗುವುದಿಲ್ಲವು. ಕ್ಷಪಕಶ್ರೇಣಿ ಹತ್ತ ಬೇಕಾದರೂ, ಘಾತಿಕರ್ಮಗಳನ್ನು ನಾಶಮಾಡಿ ಕೇವಲಜ್ಞಾನವನ್ನು ಪಡೆಯಬೇಕಾದರೂ ಮೇಲ್ಕಂಡ ಸಂಹನನವು ಅತ್ಯಾವಶ್ಯಕವು. ಆದುದ

ರಿಂದ ಇಪ್ಪತ್ತುನಾಲ್ಕು ಪರಿಗ್ರಹಗಳನ್ನು ನಿಷೇಧಿಸಿದೆ. ಕ್ಷೇತ್ರ, ಮನೆ, ಧನ, ರಜತ (ಬೆಳ್ಳಿ), ಸುವರ್ಣ (ಬಂಗಾರ), ದಾಸೀ, ದಾಸ, ವಸ್ತ್ರ, ಪಾತ್ರ ಈ ಬಾಹ್ಯಪದಾರ್ಥಗಳು ಹತ್ತು ವಿಧವು. ಇವುಗಳು ಕೂಡಾ ಆತ್ಮನಿಂದ ತೀರಾ ಭಿನ್ನಗಳಾಗಿವೆ. ಇವುಗಳನ್ನು ತ್ಯಜಿಸಿದರೇನೆ ಬಾಹ್ಯ ಪರಿಗ್ರಹಗಳ ಚಿಂತೆಯು ಪೀಡಿಸಲಾರದು. (ಮನಸ್ಸನ್ನು ಕಲುಕಿಸಲಾರದು.) ಮಿಥ್ಯಾತ್ವ, ಕ್ರೋಧ, ಮಾನ, ಮಾಯಾ, ಲೋಭ, ಹಾಸ್ಯ, ರತಿ, ಅರತಿ, ಶೋಕ, ಭಯ, ಜುಗುಪ್ಸಾ, ಸ್ತ್ರೀವೇದ, ಪುಂವೇದ, ನಪುಂಸಕವೇದ ಈ ಹದಿನಾಲ್ಕು ಅಂತ ರಂಗ ಪರಿಗ್ರಹಗಳ ಮಮತೆಯನ್ನು ಬುದ್ಧಿಪೂರ್ವಕ ತ್ಯಜಿಸಬೇಕಾಗುವುದು.

ಯದಿ ಕರ್ಮೋದಯದಿಂದ ವಿಕಾರಗಳುಂಟಾದರೆ ಅವು ಗ್ರಹಣೆಗೆ ಯೋಗ್ಯವೆಂದು ತಿಳಿದ ಜ್ಞಾನೀ ಸಾಧುಗಳು ಅವುಗಳನ್ನು ಸ್ವಾಗತಿಸಲಾರರು. ಅಪರಿಗ್ರಹವು ನಗ್ನನಾದ ಬಾಲಕನಂತೆ ಯಾವ ಸಾಧುವು ಅಪ್ರಮತ್ತ ಗುಣ ಸ್ಥಾನದ ಸಾತಿಶಯ ಭಾವಗಳನ್ನು ಪಡೆದು, ಕ್ಷಾಯಿಕ ಸಮ್ಯಕ್ತ್ವದಿಂದ ವಿಭೂ ಷಿತನಾಗಿ, ಕ್ಷಪಕ ಶ್ರೇಣಿಯನ್ನು ಆರೋಹಣಗೈದು ಶುಕ್ಲಧ್ಯಾನದಿಂದ ಅದೇ ಭವದಲ್ಲಿ ನಿರ್ವಾಣ ಪದವಿಯನ್ನು ಪಡೆಯುವನು. ಬಾಹ್ಯ ಚಾರಿತ್ರವು ಮಾತ್ರ ನಿಮಿತ್ತ ಕಾರಣವಾಗಿರುತ್ತದೆ. ಶುದ್ಧ ಅನುಭವರೂಪ ಪರಮ ಸಾಮಾಯಿಕವು ಅಥವಾ ಯಥಾಖ್ಯಾತ ಚಾರಿತ್ರವು ಉಪಾದಾನ ಕಾರಣ ವಾಗಿರುತ್ತದೆ. ನಿಮಿತ್ತ ಕಾರಣವಿದ್ದರೇನೆ ಉಪಾದಾನ ಕಾರಣವು ವೃದ್ಧಿ ಯಾಗುವುದು. ಆದರೆ ಸಾಧಕನ ದೃಷ್ಟಿಯು ತನ್ನ ಉಪಾದಾನ ರೂಪ ಆತ್ಮೀಕ ಭಾವದ ಅಧಿಷ್ಠಾನದ ಮೇಲೆಯೇ ನಿಂತಿರುವುದು. ಮುಖ್ಯವಾದ ಅಭಿಪ್ರಾಯವೇನೆಂದರೆ ವ್ಯವಹಾರ ಸಮ್ಯಕ್ತ್ವದ ಕಾರಣಗಳಲ್ಲಿಯು ಕೂಡಾ ಸಾರಭೂತವಾದ ತನ್ನ ಶುದ್ಧಾತ್ಮನ ಗ್ರಹಣೆಯು ಕಾರ್ಯಕಾರಿಯಾಗಿರುತ್ತ ದೆಂದು ಭಾವವು.

ಸಮಯಸಾರ ಕಲಶದಲ್ಲಿ ಹೇಳಿರುತ್ತಾರೆ:

**ಚಿರಮಿತಿ ನವತತ್ವಚ್ಛನ್ನಮುನ್ನೀಯಮಾನಂ।**
**ಕನಕಮಿವ ನಿಮಗ್ನಂ ವರ್ಣಮಾಲಾಕಲಾಪೆ॥**
**ಅಥ ಸತತವಿವಿಕ್ತಂ ದೃಶ್ಯತಾಮೇಕರೂಪಂ।**
**ಪ್ರತಿಪದಮಿದಮಾತ್ಮಜ್ಯೋತಿರುದ್ಯೋತಮಾನಂ ॥೮-೧॥**

ಭಾವಾರ್ಥ: ಸುವರ್ಣದ ಮಾಲೆಯಲ್ಲಿ ಸುವರ್ಣವು ಭಿನ್ನವಾಗಿರುವಂತೆ, ಅನಾದಿಕಾಲದಿಂದ ಪದಾರ್ಥಗಳಲ್ಲಿ ಅವಿತುಕೊಂಡಿರುವ ತನ್ನ ಆತ್ಮ ಜ್ಯೋತಿಯನ್ನು ಬೇರ್ಪಡಿಸಿಕೊಂಡು, ಪರವಸ್ತುಗಳಿಂದ ಭಿನ್ನನೂ ಮತ್ತು ಪ್ರಕಾಶನಮಾನನೂ ಎಂದು ತಿಳಿಯುತ್ತಾ ಶುದ್ಧಾತ್ಮನನ್ನು ತನ್ನಲ್ಲಿಯೇ ದರ್ಶನಗೈಯುತ್ತಿರಬೇಕು.

ಮೋಕ್ಷ ಪಾಹುಡದಲ್ಲಿ ಹೇಳಿರುತ್ತಾರೆ:

**ಹೋಊಣ ದಿಢಚರಿತ್ತೋ ದಿಢಸಮ್ಮತ್ತೇಣ ಭಾವಿಯಮಈಓ।**
**ಝಾಯಂತೋ ಅಪ್ಪಾಣಂ ಪರಮಪಯಂ ಪಾವಏ ಜೋಈ ॥೪೯॥**
**ಚರಣಂ ಹವಇಂ ಸಧಮ್ಮೋ ಧಮ್ಮೋ ಸೋ ಹವಇ ಅಪ್ಪಸಮಭಾವೋ**
**ಸೋ ರಾಗರೋಸರಹಿಓ ಜೀವಸ್ಸ ಅಣಣ್ಣಪರಿಣಾಮೋ ॥೫೦॥**

ಭಾವಾರ್ಥ: ಯಾವ ಯೋಗಿವರ್ಯನು ಚಾರಿತ್ರದಲ್ಲಿ ಪೂರ್ಣರೀತ್ಯಾ ಪರಿಪಕ್ವನಾಗಿ, ಪರಿಪೂರ್ಣ ನಿರ್ಮಲ ಚಾರಿತ್ರದ ಭಾವನೆಯನ್ನು ಭಾವಿಸುತ್ತಾ, ತನ್ನಾತ್ಮನನ್ನು ಧ್ಯಾನಿಸುತ್ತಿದ್ದರೇನೆ ಮೋಕ್ಷವನ್ನು ಪಡೆಯುವನು. ಆತ್ಮನ ನೈಜವಾದ ಧರ್ಮದ ಸ್ವಭಾವವು ಚಾರಿತ್ರವೇ ಆಗಿರುತ್ತವೆ. ಆತ್ಮ ಧರ್ಮವು ಆತ್ಮ ಸ್ವಭಾವವೇ ಆಗಿರುತ್ತದೆ. ಈ ಭಾವನೆಯಿಂದಲೇ ಮೋಕ್ಷ ಪ್ರಾಪ್ತಿಯಾಗುತ್ತದೆ.



## ವ್ಯವಹಾರ ಮೋಹವನ್ನು ತ್ಯಜಿಸುವುದು ಅತ್ಯಾವಶ್ಯಕವು

**ಜಇ ಣಿಮ್ಮಲು ಅಪ್ಪಾ ಮುಣಹಿ ಛಂಡಿವಿ ಸಹು ವವಹಾರು।**
**ಜಿಣ ಸಾಮಿಉ ಏಮಇ ಭಣಇ ಲಹು ಪಾವಹು ಭವಪಾರು ॥೩೭॥**

ಅನ್ವಯಾರ್ಥ: ಜಿಣ ಸಾಮಿಉ ಏಮಇ ಭಣಇ–ತೀರ್ಥಂಕರ ಪರಮ ದೇವರು ಹೇಳುತ್ತಾರೆ. ಜಇ ಸಹು ವವಹಾರು ಛಂಡಿವಿ ಣಿಮ್ಮಲು ಅಪ್ಪಾ ಮುಣಹಿ–ಒಂದು ವೇಳೆ ನೀನು ಸಕಲ ವ್ಯವಹಾರಗಳನ್ನು ಬಿಟ್ಟು ನಿರ್ಮಲಾ

ತ್ಮನ ಅನುಭವವನ್ನು ಮಾಡಿಕೊಂಡರೆ, ಲಘು ಭವಪಾರು ಪಾವಹು-ಬೇಗನೆ ಭವಸಮುದ್ರದಿಂದ ಪಾರಾಗಬಹುದು.

**ಭಾವಾರ್ಥ:** ಇಲ್ಲಿ ಸರ್ವಜ್ಞ ದೇವನು ಆಜ್ಞೆಯಿತ್ತಿರುವುದೇನೆಂದರೆ ನಿರ್ಮಲಾತ್ಮನ ಅನುಭವವನ್ನು ಸಂಪಾದಿಸಿಕೊಳ್ಳಬೇಕು. ಈ ಅನುಭವವು ಪ್ರಾಪ್ತಿಯಾಗಬೇಕಾದರೆ ಎಲ್ಲಾ ಪರವಸ್ತುಗಳ ಆಶ್ರಯವನ್ನು ಬಿಟ್ಟು ಇವೆಲ್ಲವು ಆತ್ಮಹಿತಕಾರಿಯಲ್ಲವೆಂದು ನಿಶ್ಚಯಿಸಿಕೊಳ್ಳಬೇಕು. ವ್ಯವಹಾರ ಧರ್ಮವು, ವ್ಯವಹಾರ ಸಮ್ಯಗ್ದರ್ಶನ ಜ್ಞಾನ ಚಾರಿತ್ರಗಳ ವಿಷಯವು ಇವೆಲ್ಲವನ್ನು ತ್ಯಜಿಸಲು ಪ್ರಯತ್ನಿಸಬೇಕು. ಸಮ್ಯಗ್ದೃಷ್ಟಿಯಾದ ಶ್ರಾವಕನಾಗಲಿ ಅಥವಾ ಮುನಿಯಾಗಲಿ ಕೇವಲ ತನ್ನ ಶುದ್ಧಾತ್ಮನನ್ನೇ ತನ್ನ ಹಿತಕಾರಿಯೆಂದರಿತು ಅನ್ಯವಸ್ತುಗಳ ಸಂಪರ್ಕವನ್ನು ತ್ಯಜಿಸುವುದು ಯೋಗ್ಯವೆಂದು ತಿಳಿಯುತ್ತಾನೆ.

ಒಂದು ವೇಳೆ ಜ್ಞಾನದ ಪವಿತ್ರತೆಗಾಗಿ ಸಪ್ತ ತತ್ವಗಳ ಚಿಂತನೆಯು, ಜಿನಶಾಸ್ತ್ರಗಳ ಪಠಣ, ಪಾಠಣ, ಮನನ ಮತ್ತು ಉಪದೇಶಿಸುವಿಕೆಯು, ಅಹಿಂಸಾದಿ ಐದು ವ್ರತಗಳನ್ನು ಏಕದೇಶದಿಂದಾಗಲಿ, ಸರ್ವದೇಶದಿಂದಾಗಲಿ ಪಾಲಿಸುವಿಕೆಯು, ಮಂತ್ರಗಳ ಜಪಿಸುವಿಕೆಯು, ಉಪವಾಸವನ್ನಾಚರಿಸುವಿಕೆಯು, ರಸವಸ್ತುಗಳ ತ್ಯಾಗಮಾಡುವಿಕೆಯು ಇವೆಲ್ಲವು ಕೂಡಾ ವ್ಯವಹಾರ ಧರ್ಮಗಳೆಂದೂ, ಇವುಗಳು ಕರ್ಮಬಂಧಕ್ಕೆ ಕಾರಣಗಳಾಗಿರುತ್ತವೆಂದೂ ತಿಳಿದು ಇವುಗಳನ್ನು ತ್ಯಜಿಸಲು ಸಿದ್ಧನಾಗುವನು. ತನ್ನಾತ್ಮನ ಸಂಪತ್ತಿಯಾದ ಜ್ಞಾನಾನಂದಮಯ ಸಂಪತ್ತಿಯು ಮಾತ್ರ ನನ್ನದೆಂದು ಗ್ರಹಣೆಮಾಡುತ್ತಾನೆ. ಸಕಲ ಚೇತನಾಚೇತನ ಮತ್ತು ಮಿಶ್ರ ಪರಿಣಾಮಗಳು ತ್ಯಜಿಸುವುದಕ್ಕೆ ಯೋಗ್ಯವೆಂದು ತಿಳಿಯುವುದಲ್ಲದೆ, ಸಿದ್ಧಾತ್ಮನನ್ನು ಚಿಂತಿಸುತ್ತಿದ್ದರೂ ಕೂಡ ಅವನನ್ನು ಪರವೆಂದೇ ತಿಳಿದು, ಅವರ ಧ್ಯಾನದಲ್ಲಿ ಶುಭರಾಗವಿದೆಯೆಂದು ಅರಿತು ಬಿಡಲುದ್ಯುಕ್ತನಾಗುತ್ತಾನೆ. ಮತ್ತೇನು ಗುಣಗುಣೀಯ ಭೇದವೂ ಕೂಡ ಪರಿಗ್ರಹವೇ ಆಗಿದೆ. ವ್ಯವಹಾರವೆಂಬ ವಿಚಾರದಲ್ಲಿ ವಿಕಲ್ಪವಿದೆ; ವಿಕಲ್ಪವಿರುವಲ್ಲಿ ಶುದ್ಧಭಾವವು ಇರಲಾರದು. ಯದ್ಯಪಿ ಈ ವಿಚಾರದ ಅವಲಂಬನೆಯು ಎರಡನೆ ಶುಕ್ಲಧ್ಯಾನದವರೆಗಿದ್ದರೂ ಸಮ್ಯಗ್ದೃಷ್ಟಿಯು ಇದನ್ನು ತ್ಯಜಿಸುವುದಕ್ಕೆ ಯೋಗ್ಯವಾಗಿರುವುದೆಂದೇ ಭಾವಿಸುತ್ತಾನೆ.

ಅಸಂಗಭಾವನಾರೂಪ ಶುದ್ಧ ಶ್ರದ್ಧಾನವು ಯಾವ ಆತ್ಮನಿಗಿರುವುದೋ ಅವನೇ ನಿಜವಾದ ಸಮ್ಯಗ್ದೃಷ್ಟಿಯು ಮತ್ತು ಜ್ಞಾನಿಯು. ಅವನು ಸಂಸಾರ ಸಾಗರವನ್ನು ದಾಟಿಸುವ ಸಮ್ಯಕ್ತ್ವವೆಂಬ ದೋಣಿಯನ್ನು ಹತ್ತಿರುವನು. ವ್ಯವಹಾರ ಸಂಬಂಧವಾದ ಮೋಹದಿಂದ ಕರ್ಮಗಳ ನಾಶವಾಗಲಾರದು. ನಾನು ಮುನಿ, ನಾನು ಮಹಾ ತಪಸ್ವಿ ಎಂಬ ಅಹಂಕಾರಯುಕ್ತವಾದ ವ್ಯವಹಾರ ಮೋಹಿಯು ಮೋಕ್ಷಮಾರ್ಗಿಯಾಗಲಾರನು. ಯದ್ಯಪಿ ಮುನಿಯ ನಗ್ನವೇಷ, ಶ್ರಾವಕನ ವಸ್ತ್ರವೇಷಾದಿಗಳು ನಿಮಿತ್ತಕಾರಣಗಳಾಗಿರುತ್ತವೆ. ಆದರೆ ಮೋಕ್ಷಮಾರ್ಗವಾದರೋ ರತ್ನತ್ರಯ ಧರ್ಮಗಳೇ ಆಗಿರುತ್ತದೆ.

ಸಮಯಸಾರದಲ್ಲಿ ಹೇಳಿದ್ದಾರೆ:

**ಮೋತ್ತೂಣ ಣಿಚ್ಛಯಟ್ಠಂ ವವಹಾರೇ ಣ ವಿದುಸಾ ಪವಟ್ಟಂತಿ।**
**ಪರಮಟ್ಠಮಸ್ಸಿದಾಣಂ ದು ಜದೀಣ ಕಮ್ಮಕ್ಖಓ ಹೋದಿ ॥೧೬೩॥**

**ಭಾವಾರ್ಥ:** ವ್ಯವಹಾರದಲ್ಲಿ ಸಿಲುಕದೆ ನಿಶ್ಚಯಪದಾರ್ಥವನ್ನೇ ಗ್ರಹಿಸುವ ಜ್ಞಾನಿಯಾದ ಸಾಧುವು ಪರಮಾರ್ಥ ಅಥವಾ ತನ್ನಾತ್ಮನಾದ ಶುದ್ಧಾತ್ಮನ ಮೊರೆಹೊಕ್ಕುವನು. ಅವನಿಗೇನೆ ಕರ್ಮಕ್ಷಯವಾಗುವುದು.

**ಪಾಖಂಡಿಯಲಿಂಗೇಸು ವ ಗಿಹಲಿಂಗೇಸು ವ ಬಹುಪ್ಪಯಾರೇಸು।**
**ಕುವ್ವಂತಿ ಜೇ ಮಮತ್ತಿಂ ತೇಹಿಂ ಣ ಣಾದಂ ಸಮಯಸಾರಂ॥೪೩೩॥**

**ಭಾವಾರ್ಥ:** ಯಾವನು ಸಾಧುವೇಷದಲ್ಲಾಗಲಿ, ವ್ಯವಹಾರ ಚಾರಿತ್ರದಲ್ಲಾಗಲಿ, ಶ್ರಾವಕ ಅವಸ್ಥೆಯಲ್ಲಾಗಲಿ, ವ್ಯವಹಾರ ಚಾರಿತ್ರದಲ್ಲಾಗಲೀ, ಮಮತೆಯುಳ್ಳವನಾಗಿರುವನೋ ಅವನನ್ನು ಶುದ್ಧಾತ್ಮನ ಅಂತಸ್ಸಿನಲ್ಲಿರುವವನೆಂದು ಗ್ರಹಿಸುವುದಿಲ್ಲವು.

ಮೋಕ್ಷಪಾಹುಡದಲ್ಲಿ ಹೇಳಿದೆ:

**ಬಾಹಿರಲಿಂಗೇಣ ಜುದೋ ಅಬ್ಭಂತರಲಿಂಗರಹಿಯಪರಿಯಮ್ಮೋ।**
**ಸೋ ಸಗಚರಿತ್ತಭಟ್ಠೋ ಮೋಕ್ಖಪಹವಿಣಾಸಗೋ ಸಾಹೂ ॥೬೧॥**

**ಭಾವಾರ್ಥ :** ಯಾರು ಬಾಹ್ಯ ವೇಷ ಮತ್ತು ಚಾರಿತ್ರದಿಂದ ಮಾತ್ರ ಯುಕ್ತರಾಗಿ ಅಂತರಂಗಚಾರಿತ್ರವಿಲ್ಲದವರಾಗಿ ಇರುವರೋ ಅವರು ಮೋಕ್ಷ ಮಾರ್ಗ ನಾಶಕರೇ.



## ಜೀವಾಜೀವ ಭೇದವನ್ನರಿಯಬೇಕು

**ಜೀವಾಜೀವಹಂ ಭೇಉ ಜೋ ಜಾಣಇ ತಿಂ ಜಾಣಿಯಉ।**
**ಮೋಕ್ಖಹಂ ಕಾರಣ ಏಉ ಭಣಇ ಜೋಇ ಜೋಇಹಿಂ ಭಣಿಉ॥೩೮॥**

**ಅನ್ವಯಾರ್ಥ :** ಜೋಇ–ಎಲೈ ಯೋಗೀಶ್ವರನೇ! ಜೋಇಹಿಂ ಭಣಿಉ–ಮಹಾತ್ಮರು ಉಪದೇಶವನ್ನಿತ್ತಿರುವುದೇನೆಂದರೆ, ಜೀವಾಜೀವಹಂ ಭೇಉ ಜೋ ಜಾಣಇ–ಯಾವನು ಜೀವ ಮತ್ತು ಅಜೀವಗಳ ಅಭ್ಯಂತರವನ್ನು ತಿಳಿಯುತ್ತಾನೆಯೋ, ತಿಂ ಮೋಕ್ಖಹಂ ಕಾರಣ ಜಾಣಿಯಉ–ಅವನೇ ಮೋಕ್ಷಮಾರ್ಗವನ್ನರಿತವನು, ಏವು ಭಣಿಇ–ಎಂದು ಹೇಳಿರುತ್ತಾರೆ.

**ಭಾವಾರ್ಥ :** ಬಂಧ ಮತ್ತು ಮೋಕ್ಷಗಳ ವ್ಯವಹಾರವು ಹೀಗೆ ಸಂಭವಿಸುತ್ತದೆ. ಭಿನ್ನ ಭಿನ್ನ ವಸ್ತುಗಳೆರಡು ಇದ್ದರೇನೆ ಬಂಧ ಮತ್ತು ವಿಮೋಚನೆಗಳ ಸಂಭವವಿಸುತ್ತದೆ. ಉದಾ : ಹಸುವು ಹಗ್ಗದಿಂದ ಕಟ್ಟಲ್ಪಟ್ಟದೆಂದ ಮೇಲೆ ಅದು ಹಗ್ಗದಿಂದ ವಿಮೋಚನೆಯಾಗುವುದೆಂದು ಹೇಳುತ್ತೇವೆ. ಕೇವಲ ಹಸುವಿದ್ದರೆ ಅಥವಾ ಕೇವಲ ಹಗ್ಗವಿದ್ದರೆ ಹಸುವಿನ ಬಂಧನ (ಕಟ್ಟುವಿಕೆ) ವಾಗಲಿ, ವಿಮೋಚನೆಯಾಗಲಿ ಆಗದಿರುವಂತೆ ಲೋಕದಲ್ಲಿ ಜೀವವು ಮಾತ್ರ ವಿದ್ದು ಅಜೀವವು ಇಲ್ಲದಿದ್ದರೆ ಜೀವದ ಬಂಧನವಾಗಲಿ ಅಥವಾ ವಿಮೋಚನೆ ಯಾಗಲಿ ಸಂಭವಿಸುವುದಿಲ್ಲವು.

ಸಂಸಾರಾವಸ್ಥೆಯಲ್ಲಿ ಜೀವ ಮತ್ತು ಅಜೀವಗಳ ಪರಸ್ಪರ ಬಂಧವಿದೆ. ಮೋಕ್ಷಾವಸ್ಥೆಯಲ್ಲಿ ಜೀವನು ಅಜೀವ ಪದಾರ್ಥದಿಂದ ವಿಮೋಚನೆ (ಬಿಡುಗಡೆ) ಯಾಗುವನು. ಹೀಗೆ ಎರಡು ವಿಧದ ಭಿನ್ನ ಭಿನ್ನ ದ್ರವ್ಯಗಳು ಲೋಕದಲ್ಲಿಲ್ಲದಿದ್ದರೆ ಸಂಸಾರ ಮತ್ತು ಮೋಕ್ಷ ಅವಸ್ಥೆಗಳ ಅಸ್ತಿತ್ವವೇ ಸಾಧ್ಯವಾಗುತ್ತಿರಲಿಲ್ಲ. ಈ ಲೋಕವು ಆರು ದ್ರವ್ಯಗಳ ಸಮುದಾಯವಾಗಿರುತ್ತದೆ.

ಅವುಗಳಲ್ಲಿ ಸಚೇತನವಾದ ಜೀವದ್ರವ್ಯವು ಒಂದು. ಉಳಿದ ಐದು ಅಚೇತನ ವಾದ ಅಜೀವದ್ರವ್ಯಗಳಾಗಿರುತ್ತವೆ. ಇವುಗಳಲ್ಲಿ ನಾಲ್ಕು ದ್ರವ್ಯಗಳು (ಧರ್ಮ, ಅಧರ್ಮ, ಆಕಾಶ, ಕಾಲ) ಬಂಧ ರಹಿತವು ಶುದ್ಧಾವಸ್ಥೆಯಲ್ಲಿಯೇ ಸದಾ ಇರುತ್ತದೆ.

ಧರ್ಮ, ಅಧರ್ಮ, ಆಕಾಶ, ಕಾಲ ಈ ನಾಲ್ಕು ದ್ರವ್ಯಗಳ ಸ್ವಭಾವವು ಸದಾ ಪರಿವರ್ತನಶೀಲವಾಗಿರುತ್ತವೆ. ಜೀವ ಮತ್ತು ಅಜೀವ (ಪುದ್ಗಲ) ಗಳಲ್ಲಿಯೂ ವಿಭಾವ ಪರಿಣಾಮ ಶಕ್ತಿಯು ಇದ್ದೇ ಇರುತ್ತದೆ. ಜೀವ ಮತ್ತು ಪುದ್ಗಲಗಳ ಬಂಧದಿಂದ ಜೀವದಲ್ಲಿ ವಿಭಾವ ಅವಸ್ಥೆಯುಂಟಾಗುತ್ತದೆ. ಆ ವಿಭಾವ ನಿಮಿತ್ತದಿಂದ ಪುದ್ಗಲದಲ್ಲಿಯೂ ವಿಭಾವ ಪರಿಣಮನವುಂಟಾಗುತ್ತದೆ. ಪುದ್ಗಲವು ಸ್ವಯಂ ಸ್ಕಂಧ ರೂಪವನ್ನು ತಾಳಿ ವಿಭಾವ ಪರಿಣತಿಯನ್ನು ಹೊಂದುತ್ತದೆ. ಪ್ರತಿಯೊಂದು ಸಂಸಾರೀ ಜೀವವು ಪುದ್ಗಲದಿಂದಲೇ ಗಾಢ ವಾಗಿ ಬಂದಿಸಲ್ಪಡುತ್ತದೆ. ತೈಜಸ ಮತ್ತು ಕಾರ್ಮಣ ಸೂಕ್ಷ್ಮ ಶರೀರಗಳೆರಡು ಅನಾದಿ ಕಾಲದಿಂದ ಜೊತೆಯಲ್ಲಿಯೇ ಇರುತ್ತವೆ. ಇವುಗಳಲ್ಲದೆ ಔದಾರಿಕ, ವೈಕ್ರಿಯಿಕ ಮತ್ತು ಆಹಾರಕ ಶರೀರಗಳು, ಭಾಷಾ ಮತ್ತು ಮನಸ್ಸಿನ ಪುದ್ಗಲಗಳ ಸಂಯೋಗವು ಆಗುತ್ತಲೇ ಇರುತ್ತವೆ.

ಈ ಜೀವನು ಪುದ್ಗಲ ಸಂಬಂಧದಿಂದ ತನ್ನ ಸ್ವರೂಪವನ್ನೇ ಮರೆತು ಬಿಡುತ್ತಾನೆ. ಕರ್ಮಗಳ ಉದಯದ ನಿಮಿತ್ತದಿಂದ ಯಾವ ರಾಗಾದಿ ಭಾವ ಕರ್ಮಗಳು ಮತ್ತು ಶರೀರಾದಿ ನೋಕರ್ಮಗಳಿರುತ್ತವೆಯೋ ಆ ರೂಪದಂತೆ ತನ್ನನ್ನು ಪರಿಭಾವಿಸುತ್ತಾ ಪುದ್ಗಲಗಳ ಮೋಹದಲ್ಲಿ ತನ್ಮಯನಾಗುತ್ತಲಿದ್ದಾನೆ. ಇದರಿಂದ ಕರ್ಮಗಳನ್ನು ಬಂಧಿಸಿಕೊಂಡು ಬಂಧನವನ್ನೇ ಹೆಚ್ಚಿಸಿಕೊಳ್ಳುತ್ತಾ, ಅವುಗಳ ಉದಯದಿಂದ ಅತ್ಯಲ್ಪ ಸುಖವನ್ನು, ಮಹಾ ಘೋರ ದುಃಖವನ್ನು ಅನುಭವಿಸಿಕೊಂಡಿರುತ್ತಾನೆ.

ಜನ್ಮ, ಜರಾ, ಮರಣ, ಇಷ್ಟವಿಯೋಗ, ಅನಿಷ್ಟ ಸಂಯೋಗ ಸಂಬಂಧ ವಾದ ಅಪಾರ ದುಃಖಗಳಾದ ತೃಷ್ಣಾರೂಪ ಘೋರ ಸಂಕಷ್ಟವು ಇರುವಾಗ, ಈತನಿಗೆ ಸದ್ಗುರುವಿನ ಪ್ರಸಾದದಿಂದಾಗಲಿ ಅಥವಾ ಶಾಸ್ತ್ರಗಳ ಸ್ವಾಧ್ಯಾಯ ದಿಂದಾಗಲಿ ಭೇದವಿಜ್ಞಾನವಾಗುವಾಗ, ನಾನೊಂದು ಜೀವ ದ್ರವ್ಯವು ಮತ್ತು

ನನ್ನ ಸ್ವಭಾವವು ಪರಮ ಶುದ್ಧವೂ, ನಿರಂಜನವೂ, ನಿರ್ವಿಕಾರವೂ, ಅಮೂರ್ತಿಕವೂ, ಸಂಪೂರ್ಣ ಜ್ಞಾನ ದರ್ಶನಮಯವೂ ಮತ್ತು ಆನಂದಮಯವೂ ಆಗಿರುತ್ತದೆಂಬ ಜ್ಞಾನೋದಯವಾಗುತ್ತದೆ. ನನ್ನೊಡನೆ ಸಂಯೋಗಿಸಲ್ಪಟ್ಟ ಪುದ್ಗಲವು ನನ್ನ ಸ್ವರೂಪವಲ್ಲವು. ನಾನು ನಿಶ್ಚಯವಾಗಿ ಪುದ್ಗಲಗಳಿಂದಲೂ, ಪುದ್ಗಲಗಳಿಂದುಂಟಾದ ಎಲ್ಲಾ ರಾಗಾದಿಭಾವಗಳಿಂದಲೂ ಭಿನ್ನನಾಗಿದ್ದೇನೆ. ಅವುಗಳೆಲ್ಲವನ್ನು ದೂರೀಕರಿಸಿ ಮೋಕ್ಷಪದವಿಯನ್ನು ಪಡೆಯುವುದು ಸರ್ವಥಾ ಯೋಗ್ಯವಾಗಿರುವುದೆಂಬ ಭೇದವಿಜ್ಞಾನವುಂಟಾಗಿ ಪುದ್ಗಲಗಳಿಂದ ಪರಿಪೂರ್ಣ ವೈರಾಗ್ಯ ಪ್ರಾದುರ್ಭವಿಸಬೇಕು. ಇದೇ ಪ್ರಧಾನವಾದ ಮೋಕ್ಷೋಪಾಯವಾಗಿರುತ್ತದೆ. ದುಃಖದ ಮೂಲ ಕಾರಣಕ್ಕೆ ಕರ್ಮಗಳ ಆಸ್ರವ ಮತ್ತು ಬಂಧನೇ ಮುಖ್ಯವಾಗಿರುತ್ತದೆಂಬ ಬುದ್ಧಿಯು ಇರಬೇಕು. ಇವೆರಡನ್ನು ತ್ಯಜಿಸಿ ಮೋಕ್ಷಕ್ಕೆ ಕಾರಣಗಳಾದ ಸಂವರ ಮತ್ತು ನಿರ್ಜರೆಗಳ ಉಪಾಯವನ್ನೆಸಗಬೇಕು. ಅದೇ ಮೋಕ್ಷೋಪಾಯವಾಯವಾಗಿದೆ. ಅರ್ಥಾತ್ :- ಜೀವ, ಅಜೀವಗಳ ಭೇದವನ್ನರಿಯುವುದೇ ಮೋಕ್ಷಕ್ಕೆ ಕಾರಣವಾಗಿರುತ್ತದೆ.

ತತ್ವಾನುಶಾಸನದಲ್ಲಿ ಹೇಳಿರುತ್ತಾರೆ :

**ತಾಪತ್ರಯೋಪತಪ್ತೇಭ್ಯೋ ಭವ್ಯೇಭ್ಯಃ ಶಿವಶರ್ಮಣೇ ।**
**ತತ್ವಂ ಹೇಯಮುಪಾದೇಯಮಿತಿ ದ್ವೇಧಾಭ್ಯಧಾದಸೌ ॥ ೩ ॥**

**ಬಂಧೋ ನಿಬಂಧನಂ ಚಾಸ್ಯ ಹೇಯಮಿತ್ಯುಪದರ್ಶಿತಂ ।**
**ಹೇಯಂ ಸ್ಯಾದ್ದುಃಖಸುಖಯೋರ್ಯಸ್ಮಾದ್ಬೀಜಮಿದಂ ದ್ವಯಂ ॥೪॥**

**ಮೋಕ್ಷಸ್ತತ್ಕಾರಣಂ ಚೈತದುಪಾದೇಯಮುದಾಹೃತಂ ।**
**ಉಪಾದೇಯಂ ಸುಖಂ ಯಸ್ಮಾದಸ್ಮಾದಾವಿರ್ಭವಿಷ್ಯತಿ ॥ ೫ ॥**

**ಭಾವಾರ್ಥ** . ಜನ್ಮಜರಾಮರಣಗಳೆಂಬ ತಾಪತ್ರಯಗಳ ಸಂತಾಪದಿಂದ ದುಃಖಿಗಳಾದ ಭವ್ಯಜೀವಿಗಳಿಗೆ ಪರಮಾನಂದಮಯವಾದ ಮೋಕ್ಷಸುಖದ ಪ್ರಾಪ್ತಿಯ ಲಾಭವಾಗಬೇಕೆಂಬ ಸದುದ್ದೇಶದಿಂದಲೇ ಸರ್ವಜ್ಞ ಪರಮದೇವರು ಹೇಯೋಪಾದೇಯ ತತ್ವಗಳೆರಡು, ಬಂಧ ಮತ್ತು ಆದಕ್ಕೆ ಕಾರಣಗಳಾದ ಮಿಥ್ಯಾತ್ವಾದಿಗಳಿಗೆ ಬೀಜದಂತಿರುವ ಆಸ್ರವಾದಿಭಾವಗಳು

ತ್ಯಾಜ್ಯಗಳಾಗಿಯೂ, ಮೋಕ್ಷ ಮತ್ತು ಅದರ ಕಾರಣಗಳಾದ ಸಂವರ ಮತ್ತು ನಿರ್ಜರಾಭಾವಗಳು ಗ್ರಹಣೆಗೆ ಯೋಗ್ಯಗಳಾಗಿಯೂ ಇವೆಯೆಂದು ಉಪದೇಶವನ್ನಿತ್ತಿರುವರು.

ಸಮಯಸಾರ ಕಲಶದಲ್ಲಿ ಹೇಳಿರುತ್ತಾರೆ :

**ಜೀವಾದಜೀವಮಿತಿ ಲಕ್ಷಣತೋ ವಿಭಿನ್ನಂ।**
**ಜ್ಞಾನೀ ಜನೋಽನುಭವತಿ ಸ್ವಯಮುಲ್ಲಸಂತಂ।**
**ಅಜ್ಞಾನಿನೋ ನಿರವಧಿಪ್ರವಿಜೃಂಭಿತೋಽಯಂ,**
**ಮೋಹಸ್ತು ತತ್ಕಥಮಹೋ ಬತ ನಾನಟೀತಿ ॥ ೧೧-೨ ॥**

**ಭಾವಾರ್ಥ :** ಜೀವ ದ್ರವ್ಯವು ಅಜೀವ ದ್ರವ್ಯದ ಲಕ್ಷಣದಿಂದ ಭಿನ್ನವಾದ ವಸ್ತುವಾದುದರಿಂದಲೇ ಜ್ಞಾನಿಗಳು ತನ್ನನ್ನು ಸಕಲ ರಾಗಾದಿಗಳಿಂದ ಮತ್ತು ಶರೀರಾದಿಗಳಿಂದ ಭಿನ್ನನೆಂದೂ, ಜ್ಞಾನಮಯನೆಂದೂ, ಜ್ಯೋತಿರ್ಮಯನೆಂದೂ ತಿಳಿಯುತ್ತಾನೆ. ಅನಾದಿ ಕಾಲದಿಂದ ಮೋಹನೀಯ ಕರ್ಮವು ಅಜ್ಞಾನಿಗಳನ್ನು ಕುಣಿಸುತ್ತಿರುವುದನ್ನು ನೋಡಿದರೆ ಖೇದವೆನಿಸುವುದು. ಇದು ಆಶ್ಚರ್ಯದ ಸಂಗತಿಯಾಗಿದೆ.



## ಆತ್ಮನು ಕೇವಲಜ್ಞಾನ ಸ್ವಭಾವಿಯು

**ಕೇವಲ-ಣಾಣ-ಸಹಾಉ ಸೋ ಅಪ್ಪಾ ಮುಣಿ ಜೀವ ತುಹುಂ।**
**ಜಇ ಚಾಹಹಿ ಸಿವ-ಲಾಹು ಭಣಇ ಜೋಇ ಜೋಇಹಿಂ ಭಣಿಉ॥೩೯॥**

**ಅನ್ವಯಾರ್ಥ :** ಜೋಇ–ಎಲೈ ಯೋಗಿಯೇ ! ಜೋಇಹಿಂ ಭಣಿಉ –ಜಿನೇಶ್ವರರು ಅಪ್ಪಣೆ ಇತ್ತಿರುವರು. ತುಹು ಕೇವಲ-ಣಾಣ-ಸಹಾಉ ಸೋ ಅಪ್ಪಾ ಜೀವ ಮುಣಿ–ಕೇವಲಜ್ಞಾನಸ್ವಭಾವಮಯನಾದ ಆತ್ಮನೇ ನಿಜವಾದ ಜೀವನೆಂದು ತಿಳಿ. ಜಇ ಸಿವ-ಲಾಹು ಚಾಹಹಿ–ಯದಿ ನಿನಗೆ ಮೋಕ್ಷಪ್ರಾಪ್ತಿಯ ಲಾಭವಾಗುತ್ತದೆಂದು, ಭಣಇ–ಹೇಳಿದ್ದಾರೆ.

**ಭಾವಾರ್ಥ :** ನಿಶ್ಚಯನಯ ಅಥವಾ ಪುದ್ಗಲ ಸ್ವಭಾವಗಳ ವಿಷಯ ವಾಗಿ ವಿಚಾರಿಸಿಕೊಂಡು ಹೋಗುವವನಿಗೆ, ಜೀವದ್ರವ್ಯವು ಪರದ್ರವ್ಯಗಳ ಸಂಯೋಗದಿಂದ ರಹಿತವಾದುದೆಂದು ತಿಳಿಯುತ್ತದೆ. ಆಗ ಎಂಟು ಕರ್ಮ ಗಳಾಗಲಿ ಶರೀರಾದಿ ನೋಕರ್ಮಗಳಾಗಲಿ ಅಥವಾ ರಾಗದ್ವೇಷಾದಿ ಭಾವ ಕರ್ಮಗಳಾಗಲಿ ವಿಚಾರಕೋಟಿಗೆ ಸಿಲುಕಲಾರದೆ ಸಿದ್ಧಾತ್ಮರಂತೆ ಪ್ರತಿ ಯೊಂದು ಜೀವವು ದೃಷ್ಟಿಗೆ ಬೀಳುವುದು. ಈ ಆತ್ಮನು ವಾಸ್ತವವಾಗಿ ಅನು ಭವವನ್ನು ಮೀರಿದವನು. ಹಾಗಿದ್ದರೂ ವಿಶೇಷಗುಣಗಳ ಮೂಲಕ ಅಚೇ ತನ ದ್ರವ್ಯಗಳಿಂದ ಭಿನ್ನನೆಂದು ತಿಳಿಯಲು ಆರು ವಿಶೇಷಗುಣಗಳನ್ನು ಲಕ್ಷ್ಯ ದಲ್ಲಿಡುವುದು ಅತ್ಯಾವಶ್ಯಕವು.

೧) ಜ್ಞಾನ: ಯಾವುದರಿಂದ ತನ್ನನ್ನು ಮತ್ತು ಸರ್ವ ದ್ರವ್ಯಗಳನ್ನು ಮತ್ತು ಅವುಗಳಲ್ಲುಂಟಾಗುವ ಅನಂತ ಪರ್ಯಾಯಗಳನ್ನು ಒಂದೇ ಕಾಲದಲ್ಲಿ ಕ್ರಮವಿಲ್ಲದೆ ತಿಳಿಯುವ ಆತ್ಮದೀಪವಾದುದೇ ಕೇವಲಜ್ಞಾನವು. ಅದು ಐದು ಇಂದ್ರಿಯಗಳ ಮತ್ತು ಮನಸ್ಸಿನ ಸಹಾಯವಿಲ್ಲದಿರುವುದರಿಂದ ಸಕಲ ಪ್ರತ್ಯಕ್ಷ ಜ್ಞಾನವೆಂದೆನಿಸಿಕೊಳ್ಳುವುದು. ಅದು ಆವರಣ ರಹಿತ (ಮರೆ ಯಿಲ್ಲದ) ಸೂರ್ಯನಂತೆ ಪ್ರಕಾಶಿಸುವುದು. ಇದಕ್ಕೇನೇ ಸರ್ವಜ್ಞತ್ವ ವೆಂದು ಹೇಳುತ್ತಾರೆ. ಈ ಸರ್ವಜ್ಞತ್ವವು ಪ್ರತಿಯೊಂದು ಆತ್ಮನ ಸ್ವಭಾವ ವಾಗಿರುತ್ತದೆ.

**೨) ದರ್ಶನ:** ಯಾವುದರಿಂದ ಸಕಲ ಪದಾರ್ಥಗಳ ಸಾಮಾನ್ಯ ಸ್ವಭಾವವನ್ನು ಯುಗಪತ್ (ಏಕಕಾಲದಲ್ಲಿ) ತಿಳಿಯುವುದೇ ಕೇವಲದರ್ಶನ ಸ್ವಭಾವವು. ಪದಾರ್ಥವು ಸಾಮಾನ್ಯ ಮತ್ತು ವಿಶೇಷರೂಪವಾಗಿರುತ್ತದೆ. ಅದರಲ್ಲಿ ಸಾಮಾನ್ಯ ಅಂಶವನ್ನು ಗ್ರಹಿಸುವ ದರ್ಶನ ವಿಶೇಷವನ್ನು ಗ್ರಹಣ ಮಾಡುವುದೇ ಜ್ಞಾನವಾಗಿರುತ್ತದೆ.

**೩) ಸುಖ:** ಯಾವಗುಣದಿಂದ ಸದಾಕಾಲದಲ್ಲಿ ನಿರಾಕುಲವೂ, ಅದ್ವಿತೀಯವೂ ಆದ ಆನಂದಾಮೃತ ರಸಾಸ್ವಾದವನ್ನು ಅನುಭವಿಸುವುದೇ ಸುಖವು. ಪ್ರತಿಯೊಂದು ಆತ್ಮನು ಅನಂತಸುಖದ ಮಂದಿರದಂತಿರುವನು. ಅಲ್ಲಿ ಯಾವ ಸಂಸಾರಿಕ ಸಂಬಂಧವಾದ ನಾಶಶೀಲವೂ, ಪರವಸ್ತುಗಳಿಂದುಂ

ಟಾಗುವ ಸುಖವೂ ಮತ್ತು ಜ್ಞಾನವೂ ಇರುವುದಿಲ್ಲ. ಉದಾ: ಉಪ್ಪಿನ ಕಲ್ಲು ಕ್ಷಾರರಸದಿಂದಲೂ ಮತ್ತು ಕಲ್ಲುಸಕ್ಕರೆಯ ತುಂಡು ಮಧುರರಸದಿಂದಲೂ ಪರಿಪೂರ್ಣವಾಗಿರುವಂತೆ ಪ್ರತಿಯೊಂದು ಆತ್ಮನೂ ಪರಮಾನಂದದಿಂದ ಪರಿಪೂರ್ಣವಾಗಿರುತ್ತಾನೆ.

೪) **ವೀರ್ಯ:** ಯಾವಶಕ್ತಿಯ ಸಾಮರ್ಥ್ಯದಿಂದ ತನ್ನ ಗುಣಗಳನ್ನು ಅನಂತ ಕಾಲವವರೆವಿಗೆ ಅನುಭವಿಸುತ್ತಿದ್ದರೂ ಖೇದ ಖಿನ್ನನಾಗದೆ ಇರುವುದು ಮತ್ತು ಸ್ವಾಭಾವಿಕ ಶಾಂತರಸದಲ್ಲಿ ಪರಿಣಮಣವಾಗುತ್ತಿರುವುದು ವೀರ್ಯವು. ಪ್ರತಿಯೊಂದು ಜೀವವು ಅನಂತವೀರ್ಯಕ್ಕಧಿಪತಿಯಾಗಿರುತ್ತಾನೆ. ಪುದ್ಗಲವು ವೀರ್ಯದಿಂದ್ಯುಕ್ತವಾಗಿದ್ದರೂ, ಆತ್ಮವೀರ್ಯವು ಅದಕ್ಕಿಂತಲೂ ಅನಂತಗುಣವಾಗಿರುತ್ತದೆ. ಯಾಕೆಂದರೆ ಕರ್ಮಗಳನ್ನು ಕೆಡಿಸಿ ಪರಮಾನಂದ ಪದ ಸ್ವರೂಪನಾದ ಆತ್ಮನು ವೀರ್ಯದಿಂದಲೇ ಪರಿಪೂರ್ಣನಾಗುವನು.

೫) **ಚೈತನ್ಯತ್ವ:** "ಚೈತ್ಯನ್ಯಂ ಅನುಭವನಂ" (ಆಲಾಪ ಪದ್ಧತಿ) ಚೈತನ್ಯತ್ವ ಎಂದರೆ ತನ್ನ ಜ್ಞಾನಸ್ವರೂಪವನ್ನು ಸದಾ ಅನುಭವಿಸುಕೊಂಡಿರುವಿಕೆಯು, ಕರ್ಮ ಮತ್ತು ಅವುಗಳ ಫಲದ ಅನುಭವ ಆಗದಿರುವಿಕೆಯು. ರಾಗದ್ವೇಷಗಳಾದ ಸಂಸಾರೀ ಜೀವಗಳು ರಾಗದ್ವೇಷಪೂರ್ವಕ ಶುಭಾಶುಭ ಕಾರ್ಯಗಳನ್ನೆಸಗುವುದರಲ್ಲಿ ತನ್ಮಯರಾಗಿಯೂ, ಕರ್ಮಗಳ ಫಲವನ್ನು ಅನುಭವಿಸುತ್ತಾ ಸುಖದುಃಖಾದಿಗಳಲ್ಲಿಯೇ ತನ್ಮಯರಾಗುತ್ತಾರೆ. ಕರ್ಮರಹಿತರಾದ ಶುದ್ಧಾತ್ಮರು ಮಾತ್ರ ಜ್ಞಾನ ಚೇತನಾ ಜ್ಞಾನಾನಂದದ ಅನುಭವದಲ್ಲಿ ಇರುವರು.

೬) **ಅಮೂರ್ತತ್ವ:** ಈ ಆತ್ಮನು ಯದ್ಯಪಿ ಅಸಂಖ್ಯಾತಪ್ರದೇಶೀ ಅಖಂಡದ್ರವ್ಯವಾಗಿದ್ದರೂ ಸ್ಪರ್ಶ, ರಸ, ಗಂಧ, ವರ್ಣಗಳಿಂದ ರಹಿತವಾದ ಅಮೂರ್ತಿಯಾಗಿಯೂ, ಇಂದ್ರಿಯಗಳಿಗೆ ಅಗೋಚರನಾಗಿಯೂ, ಆಕಾಶದಂತೆ ನಿರ್ಮಲ ಆಕಾರಧಾರಿಯಾಗಿಯೂ ಮತ್ತು ಜ್ಞಾನಾಕಾರನಾಗಿಯೂ ಇರುತ್ತಾನೆ. ಮೇಲ್ಕಂಡ ಈ ಆರು ವಿಶೇಷಣಗಳಿಂದ ಆತ್ಮನು ಪುದ್ಗಲ, ಧರ್ಮ, ಅಧರ್ಮ, ಆಕಾಶ ಮತ್ತು ಕಾಲಗಳೆಂಬೈದು ಅಚೇತನದ್ರವ್ಯಗಳಿಂದ ಭಿನ್ನನೆಂದು ಭಾಸವಾಗುತ್ತದೆ. ಪ್ರತಿಯೊಂದು ಆತ್ಮನು ಸ್ವಾಭಾವಿಕವಾಗಿ

ಪರಮವೀತರಾಗನೂ, ಶಾಂತನೂ, ನಿರ್ವಿಕಾರನೂ, ತನ್ನ ಪರಿಣತಿಯ ಕರ್ತೃವೂ, ಭೋಕ್ತೃವೂ ಆಗಿರುತ್ತಾನೆ ಮತ್ತು ಪರವಸ್ತುಗಳ ಕರ್ತೃವೂ, ಭೋಕ್ತೃವೂ ಅಲ್ಲವು. ಹೀಗೆ ಪ್ರತಿಯೊಂದು ಆತ್ಮನು ಪರಮಶುದ್ಧ ಪರಮಾತ್ಮನೂ, ಪರಮಸಮದರ್ಶಿಯೂ ಆಗಿರುತ್ತಾನೆ.

ಈ ಪ್ರಕಾರವಾಗಿ ತನ್ನಾತ್ಮನನ್ನು ಮತ್ತು ಪರ ಆತ್ಮರುಗಳನ್ನು ನೋಡುತ್ತಾನೆಯೋ ಅಲ್ಲಿ ಸಂಪೂರ್ಣ ಸ್ವಾಭಾವಿಕ ಸಮಭಾವವು ಪ್ರತಿಭಾಸವಾಗುವುದು. ಇದೇ ಸಮಭಾವಚಾರಿತ್ರವೂ, ಧ್ಯಾನವೂ, ಭಾವಸಂವರೆಯೂ, ಭಾವನಿರ್ಜರೆಯೂ, ಕರ್ಮನಾಶಕಭಾವವೂ ಆಗಿರುತ್ತದೆ. ಇದೇ ನಿರ್ಜರೆಯ ಉಪಾಯವಾಗಿರುವುದೆಂದು ಯೋಗೀಶ್ವರರೂ ಪರಮಮಹರ್ಷಿಗಳೂ ಮತ್ತು ಅರ್ಹತ್ಪರಮದೇವರೂ ಸ್ವಯಂ ಅನುಭವಿಸಿ ಇಂತು ವರ್ಣಿಸಿರುವರು.

ಸಮಯಸಾರ ಕಲಶದಲ್ಲಿ ಹೇಳಿದ್ದಾರೆ :

**ಅನಾದ್ಯನಂತಮಚಲಂ ಸ್ವಸಂವೇದ್ಯಮಬಾಧಿತಂ।**
**ಜೀವಃ ಸ್ವಯಂ ತು ಚೈತನ್ಯಮುಚ್ಚೈಶ್ಚಕಚಕಾಯತೇ ॥೯-೨॥**

**ಭಾವಾರ್ಥ** : ಈ ಜೀವನು ಅನಾದಿಕಾಲದಿಂದ ಅನಂತಕಾಲದವರೆಗೆ ಇರುವವನೂ, ಚಂಚಲತೆಯಿಲ್ಲದ ನಿಶ್ಚಲನೂ, ಸ್ವಯಂ ಚೇತನಾಮಯನೂ, ಸ್ವಾನುಭವಗೋಚರನೂ, ಸದಾಕಾಲದಲ್ಲಿ ಪ್ರಕಾಶಿಸುವವನೂ ಆಗಿರುತ್ತಾನೆ.

ತತ್ವಾನುಶಾಸನದಲ್ಲಿ ಹೇಳಿರುತ್ತಾರೆ :

**ಸ್ವರೂಪಂ ಸರ್ವಜೀವಾನಾಂ ಸ್ವಪರಸ್ಯ ಪ್ರಕಾಶನಂ।**
**ಭಾನುಮಂಡಲವತ್ತೇಷಾಂ ಪರಸ್ಮಾದಪ್ರಕಾಶನಂ ॥ ೨೩೫ ॥**
**ನ ಮುಹ್ಯತಿ ನ ಸಂಶೇತೇ ಸ್ವಾರ್ಥಾನಧ್ಯವಸ್ಯತಿ।**
**ನ ರಜ್ಯತೇ ನ ಚ ದ್ವೇಷ್ಟಿ ಕಿಂತು ಸ್ವಸ್ಥಃ ಪ್ರತಿಕ್ಷಣಂ ॥ ೨೩೭ ॥**

**ಭಾವಾರ್ಥ** : ಸೂರ್ಯಮಂಡಲವು ಪರಪದಾರ್ಥಗಳ ಸಹಾಯವಿಲ್ಲದೆ ಪ್ರಕಾಶಿಸುವಂತೆ ಜೀವವು ಪರಪದಾರ್ಥಗಳ ಮತ್ತು ಪರವಸ್ತುಗಳ ಸಹಾಯವಿಲ್ಲದೆ ಪ್ರಕಾಶಿಸುತ್ತದೆ. ಪ್ರತಿಯೊಂದು ಜೀವವು ಸಂಶಯ, ವಿಪರೀತ ಮತ್ತು ಅನಧ್ಯವಸಾಯಗಳಿಂದ ರಹಿತವಾಗಿ, ರಾಗದ್ವೇಷಗಳನ್ನು ಮಾಡದೆ, ಪ್ರತಿಸಮಯದಲ್ಲಿ ತನ್ನತ (ಅಂತರಂಗದಲ್ಲಿಯೇ) ಮಗ್ನವಾಗುತ್ತದೆ.

## ಪ್ರತಿಯೊಂದು ಸ್ಥಳದಲ್ಲಿ ಜ್ಞಾನಿಗೆ ಆತ್ಮರು ದೃಷ್ಟಿಗೋಚರವಾಗುತ್ತವೆ

**ಕೋ ಸುಸಮಾಹಿ ಕರಉ ಕೋ ಅಂಚಉ, ಛೋಪು-ಅಛೋಪು ಕರಿವಿ ಕೋ ವಂಚಉ**
**ಹಲ ಸಹಿ ಕಲಹು ಕೇಣ ಸಮಾಣಉ, ಜಹಿಂ ಕಹಿಂ ಜೋವಉ ತಹಿಂ ಅಪ್ಪಾಣಉ ॥೪೦॥**

**ಅನ್ವಯಾರ್ಥ :** ಕೋ ಸುಸಮಾಹಿ ಕರಉ–ಯಾರು ಸಮಾಧಿಯನ್ನು ಮಾಡಲಿ, ಕೋ ಅಂಚಉ–ಯಾರು ಅರ್ಚನೆ ಮತ್ತು ಪೂಜೆಯನ್ನುಮಾಡಲಿ, ಛೋಪು-ಅಛೋಪು ಕರಿವಿ–ಯಾರು ಸ್ಪರ್ಶಾಸ್ಪರ್ಶವನ್ನು ಮಾಡಲಿ, ಕೋ ವಂಚಉ– ಯಾರು ಮಾಯಾಚಾರವನ್ನೆಸಗಲಿ, ಕೇಣ ಸಹಿ ಹಲ ಕಲಹು ಸಮಾಣಉ–ಯಾರು ಯಾರೊಡನೆ ಮಿತ್ರತ್ವ, ಕಲಹವನ್ನು ಮಾಡಲಿ, ಜಹಿಂ ಕಹಿಂ ಜೋವಉ ತಹಿಂ ಅಪ್ಪಾಣಉ–ಎಲ್ಲಿ ನೋಡಿದ್ದಲ್ಲಿ ಅಲ್ಲೆಲ್ಲಾ ಆತ್ಮನೇ ಆತ್ಮನಾಗಿ ಕಾಣುತ್ತಾನೆ.

**ಭಾವಾರ್ಥ :** ನಿಶ್ಚಯನಯದಿಂದ ಜ್ಞಾನಿಯು ತನ್ನ ದೃಷ್ಟಿಯನ್ನು ಬೀರುವ ಕಡೆಯಲ್ಲೆಲ್ಲಾ ಅವನಿಗೆ ತನ್ನಾತ್ಮನು ಶುದ್ಧನಾಗಿ ತೋರುವಂತೆಯೇ ಸಕಲ ಜಗತ್ತಿನಲ್ಲಿ ಭರಿತವಾದ ಸೂಕ್ಷ್ಮ ಮತ್ತು ಸ್ಥೂಲ ಶರೀರಧಾರಿಗಳಾದ ಆತ್ಮರುಗಳು ಪರಮಶುದ್ಧ ಜೀವಗಳಾಗಿಯೇ ತೋರುವವು. ಈ ವಿಚಾರದಲ್ಲಿ ಮನುಷ್ಯ, ದೇವ, ನಾರಕ, ತಿರ್ಯಂಚ ಮೊದಲಾದ ಭೇದಗಳು ತೋರದೇ ಆತ್ಮದ್ರವ್ಯದ ಬೋಧವಾಗುತ್ತದೆ. ಹೀಗೆ ಜ್ಞಾನಿಯ ಭಾವಗಳಲ್ಲಿ ಸಮ ಭಾವನೆಯೇ ತಲೆದೋರುವುದು. ಆತ್ಮಾನುಭವದ ಸಮಯದಲ್ಲಿ ತನ್ನಲ್ಲಿಯೇ ಲವಲೀನನಾಗಿಕೊಂಡಿರುತ್ತಾನೆ.

ಈ ಭಾವನೆಯು ಅನುಭವದ ಜನನಿಯು. ಆ ಸಮಯದಲ್ಲಿ ಶುದ್ಧದೃಷ್ಟಿಯಿಂದ ಶುದ್ಧಾತ್ಮನೇ ದೃಷ್ಟಿಗೋಚರನಾಗುತ್ತಾನೆಂದು ಹೇಳಿದ ಮಾತ್ರದಿಂದ ಪುದ್ಗಲಾದಿ ಪಂಚದ್ರವ್ಯಗಳ ಅಭಾವವಾಗುವುದೆಂಬುದನ್ನು ಕಲ್ಪಿಸಬಾರದು. ಜಗತ್ತು ಆರು ದ್ರವ್ಯಗಳಿಂದ ಭರಿತವಾದುದು. ಅವೆಲ್ಲವು ಸತ್ ಪದಾರ್ಥ

ಗಳಾಗಿವೆ. ಎಂದೆಂದಿಗೂ ನಾಶವಾಗಲಾರವು. ಹಾಗಿದ್ದರೂ ಆತ್ಮದರ್ಶನ ಲಕ್ಷ್ಯ ಬಿಂದುವು ಆತ್ಮನಲ್ಲಿಯೇ ಲಕ್ಷ್ಯೀಕರಿಸಿಕೊಂಡಿರುತ್ತದೆ. ಆದುದರಿಂದ ಆತ್ಮನಲ್ಲದೆ ಅನ್ಯವಸ್ತುವು ದೃಷ್ಟಿಗೋಚರವಾಗಲಾರದು. ಹೇಗೆಂದರೆ ಯಾವು ದಾದರೊಂದು ಕ್ಷೇತ್ರ (ಗದ್ದೆ)ಗೆ ಹೋದೊಡನೆ ಅಲ್ಲಿ ಬೆಳೆದ ಕಡಲೆಯತ್ತ ದೃಷ್ಟಿಹೋಗುವುದಲ್ಲದೆ ಗಿಡ, ಎಲೆ, ಬೇರು ಮೊದಲಾದವುಗಳ ಕಡೆಗೆ ಲಕ್ಷ್ಯವು ಹೋಗದೆ, ಇಲ್ಲಿ ಕಡಲೆ ಧಾರಾಳ ಸಿಕ್ಕುವುದೆಂಬ ಲೆಕ್ಕದಲ್ಲಿರುತ್ತಾನೆ.

ಅನೇಕ ರತ್ನಗಳಿಂದ ಖಚಿತವಾದ ಸ್ವರ್ಣಾಭರಣವು ರತ್ನವ್ಯಾಪಾರಿಯ ಸಮೀಪಕ್ಕೆ ವಿಕ್ರಯದ ಸಲುವಾಗಿ ಹೋದೊಡನೆ ವ್ಯಾಪಾರಿಯು ಕೇವಲ ಮಣಿಗಳಲ್ಲಿಯೇ ದೃಷ್ಟಿಯಿಟ್ಟು, ಸ್ವರ್ಣದತ್ತ ಲಕ್ಷ್ಯವಿಡದೆ, ರತ್ನ ಮಣಿ ಗಳ ಬೆಲೆಯನ್ನು ನಿಶ್ಚಯಿಸುವಂತೆಯೂ, ಅದೇ ಆಭರಣವನ್ನು ಚಿನಿವಾರ (ಸರಾಫಿ) ನ ಸಮೀಪಕ್ಕೆ ತೆಗೆದುಕೊಂಡುಹೋದರೆ, ಅವನು ಮಣಿಗಳತ್ತ ಲಕ್ಷ್ಯವಿಡದೆ ಸುವರ್ಣವನ್ನೇ ನೋಡಿ ಸುವರ್ಣದ ಬೆಲೆಯನ್ನು ಕಟ್ಟು ವಂತೆಯೂ, ಆತ್ಮಜ್ಞಾನಿಯ ದೃಷ್ಟಿಯಲ್ಲಿ ಸರ್ವತ್ರ ಆತ್ಮರುಗಳೇ ಗೋಚರ ವಾಗುವವು. ಈ ಭಾವವು ಸಾಮಾಯಿಕ ಚಾರಿತ್ರವಾಗಿರುತ್ತದೆ. ಇದೇ ಶ್ರಾವಕನ ಸಾಮಾಯಿಕ ಶಿಕ್ಷಾವ್ರತವಾಗಿರುತ್ತದೆ.

ಪರಮಶಾಂತ ಸಮಭಾವಿಯಾಗುವುದು ಸಾಕ್ಷಾತ್ ಕರ್ಮಕ್ಷಯಕ್ಕೆ ಕಾರಣವಾದ ಮಹದುಪಾಯವಾಗಿರುತ್ತದೆ. ಅಲ್ಲಿ ಅನ್ಯಕಲ್ಪನೆಗಳಿಗೆ ಸ್ಥಾನವೇ ಇಲ್ಲವು. ಕೇವಲ ಸಮಾಧಿ ಭಾವನೆಯ ಪ್ರಾಪ್ತಿಯ ಚಿಂತನೆಯು ಮುಂದು ವರೆಯುವುದಲ್ಲದೆ ಅನ್ಯಭಾವನೆಗಳಿಗೆ ಸ್ಥಾನವೇ ಇರುವುದಿಲ್ಲವು. ವ್ಯವಹಾರ ದಲ್ಲಿ ರಾಗದ್ವೇಷಭಾವನೆಗಳು ಇಲ್ಲದೆ ನಿವೃತ್ತಿ ಇಲ್ಲವು. ನಿಶ್ಚಯನಯದ ಅಪೇಕ್ಷೆಯಿಂದ ವ್ಯವಹಾರವು ಅಸತ್ಯವೂ, ಮಾಯಾ ರೂಪವೂ ಮತ್ತು ಮಿಥ್ಯಾಭಾವನಾರೂಪವಾಗಿಯೂ ಆಗಿರುತ್ತದೆ.

ಯಾವಾಗ ಸಕಲ ಜೀವಗಳನ್ನು ಸಮಾನ ಭಾವದಿಂದ ವಿಚಾರಿಸುತ್ತಿರ ಲಾಗಿ, ಯಾರೊಡನೆ ಮೈತ್ರಿಭಾವನೆ ಅಥವಾ ಶತ್ರುಭಾವನೆ ಉಂಟಾಗು ವುದು? ಎಂಬ ಅನೇಕ ಭೇದರೂಪ ದೃಷ್ಟಿಯುಂಟಾಗುತ್ತದೆ. ಎಲ್ಲರನ್ನು ಶುದ್ಧ ಏಕರೂಪವಾಗಿ ನೋಡುತ್ತಿರಲು ಶತ್ರುತ್ವ, ಮಿತ್ರತ್ವ ಕಲ್ಪನೆಯು ಉಂಟಾಗು

ವುದೇ ಇಲ್ಲವು. ಎಲ್ಲಾ ವ್ಯವಹಾರ ಧರ್ಮಕರ್ಮಗಳಿಂದ ದೂರವಾದೊಡನೆ ವ್ಯವಹಾರ ನಿಮಿತ್ತಗಳ ಸಾಧನಗಳ ಮೂಲಕ ಉತ್ಪನ್ನವಾಗಬೇಕಾದುದನ್ನು ಪ್ರಾಪ್ತಿಮಾಡಿಕೊಳ್ಳುವನು. ಸಮಭಾವನೆಯಿಂದ ಚಾರಿತ್ರವೂ, ಧರ್ಮವೂ, ಪರಮತತ್ವವೂ ಉಂಟಾಗುತ್ತದೆ. ಇವೆಲ್ಲವನ್ನೂ ಪ್ರಾಪ್ತಿಮಾಡಿಕೊಂಡ ಆ ಭವ್ಯಜೀವನು ಕೃತಾರ್ಥನೂ, ಬಂಧಪರಂಪರೆಯಿಂದ ನಿರ್ಮುಕ್ತನೂ, ನಿರ್ಜರಾ ಮಾರ್ಗಾರೂಢನೂ ಆಗುವನು.

ಸರ್ವಾರ್ಥಸಿದ್ಧಿಯಲ್ಲಿ ಹೇಳಿರುತ್ತಾರೆ :

**ಏಕತ್ವೇನ ಪ್ರಥಮಂ ಗಮನಂ ಸಮಯಃ, ಸಮಯ ಏವ ಸಾಮಾಯಿಕಂ ।**
**ಸಮಯ ಪ್ರವರ್ತನಮಸ್ಯೇತಿ ವಾಪಿಗೃಹ್ಯ ಸಾಮಾಯಿಕಂ**
**॥ ಅ. ೭, ಸೂತ್ರ ೨೧ ॥**

**ಭಾವಾರ್ಥ** : ಆತ್ಮನಲ್ಲಿ ತನ್ಮಯನಾಗುವುದು, ಆತ್ಮಮಯವಾಗುವುದು ಸಾಮಾಯಿಕವು

ಸಾರ ಸಮುಚ್ಚಯದಲ್ಲಿ ಹೇಳಿರುತ್ತಾರೆ :

**ಸಮತಾ ಸರ್ವಭೂತೇಷು ಯಃ ಕರೋತಿ ಸುಮಾನಸಃ ।**
**ಮಮತ್ವಭಾವನಿರ್ಮುಕ್ತೋ ಯಾತ್ಯಸೌ ಪದಮವ್ಯಯಂ ॥೨೧೩॥**

**ಭಾವಾರ್ಥ** : ಸದ್ಬುದ್ಧಿಯುಳ್ಳವನೂ, ಸಕಲ ಪ್ರಾಣಿವರ್ಗದಲ್ಲಿ ಸಮತಾ ಭಾವವನ್ನಿಟ್ಟುಕೊಂಡು ಮಮತಾಭಾವದಿಂದ ಬಿಡಲ್ಪಟ್ಟಿರುವವನೂ ಶಾಶ್ವತವಾದ ಸ್ಥಾನವನ್ನು ಪಡೆಯುವನು.

ಸಮಾಧಿಶತಕದಲ್ಲಿ ಹೇಳಿರುತ್ತಾರೆ :

**ದೃಶ್ಯಮಾನಮಿದಂ ಮೂಢಸ್ತ್ರಿಲಿಂಗಮವಬುಧ್ಯತೇ ।**
**ಇದಮಿತ್ಯವಬುದ್ಧಸ್ತು ನಿಷ್ಪನ್ನಂ ಶಬ್ದವರ್ಜಿತಂ ॥ ೪೪ ॥**

**ಭಾವಾರ್ಥ** : ಅಜ್ಞಾನೀ ಜೀವನು ಈ ಲೋಕವು ಸ್ತ್ರೀ, ಪುರುಷ, ನಪುಂಸಕಮಯವೆಂದು ನೋಡುವನು. ಆದರೆ ಜ್ಞಾನಿಯಾದವನು ಇವೆಲ್ಲವನ್ನು ಪರಮಶಾಂತಮಯವೆಂದು ವಿಚಾರಿಸುತ್ತಾನೆ, ನೋಡುತ್ತಾನೆ.

## ಆತ್ಮಜ್ಞಾನ ಶೂನ್ಯನು ಕುತೀರ್ಥಗಳಲ್ಲಿಯೇ ಭ್ರಮಿಸುತ್ತಾನೆ

**ತಾವು ಕುತಿತ್ಥಿಯಿಂ ಪರಿಭಮಇ ಧುತ್ತಿಮು ತಾವು ಕರೇಇ।**
**ಗುರುಹು ಪಸಾಏಂ ಜಾವು ಣವಿ ಅಪ್ಪಾ-ದೇಉ ಮುಣೇಇ ॥೪೧॥**

**ಅನ್ವಯಾರ್ಥ :** ಗುರುಹು ಪಸಾಏಂ ಜಾವು ಅಪ್ಪಾದೇಉ ಣವಿ ಮುಣೇಇ-ಗುರುವರ್ಯರ ಪ್ರಸಾದದಿಂದ ತನ್ನಾತ್ಮರೂಪ ಪರಮಾತ್ಮನನ್ನು ಗುರುತಿಸುವುದಿಲ್ಲವೋ, ತಾವು ಕುತಿತ್ಥಿಯಿಂ ಪರಿಭಮಇ-ಅಷ್ಟರವರೆಗೆ ಮಿಥ್ಯಾತ್ವರೂಪವಾದಕುತೀರ್ಥಗಳಲ್ಲಿ ಪ ರಿಭ್ರಮಿಸುತ್ತಿರುತ್ತಾನಲ್ಲದೆ, ತಾವು ಧುತ್ತಿಮು ಕರೇಇ-ಸೀಚಕೃತ್ಯಗಳನ್ನೆಸುಗುತ್ತಿರುತ್ತಾನೆ.

**ಭಾವಾರ್ಥ :** ಎಷ್ಟರವರೆಗೆ ಈ ಜೀವನು ಅಜ್ಞಾನಿಯಾಗಿಯೂ, ಮಿಥ್ಯಾದೃಷ್ಟಿಯಾಗಿಯೂ ಇರುವನೋ ಅವನು ಸಂಸಾರದಲ್ಲಿಯೇ ಮಗ್ನ ನಾಗಿಯೂ, ಇಷ್ಟ ಇಂದ್ರಿಯಗಳ ಪ್ರಾಪ್ತಿಯ ಇಚ್ಛೆಯುಳ್ಳವನಾಗಿಯೂ, ಬಾಧಾಕಾರಕಗಳಾದ ಕಾರಣಗಳನ್ನು ದೂರಗೊಳಿಸುವ ಅಭಿಲಾಷೆಯುಳ್ಳವ ನಾಗಿಯೂ ಇರುತ್ತಾನೆ. ಮಿಥ್ಯಾಮಾರ್ಗೋಪದೇಶಕರಿಂದ ಯಾವುದಾದ ರೊಂದು ವಿಷಯದ ಭಕ್ತಿ ಯಾ ಪೂಜೆ ಮಾಡುವುದೂ, ಯಾವುದಾದರೊಂದು ವಿಷಯದ ಲಾಭದಲ್ಲಿ ಸಹಕರಿಸಬೇಕೆಂದು ಪೂಜಾದಿಗಳನ್ನು ಮಾಡುವುದೂ ಸ್ಥಾನವಲ್ಲದ ಸ್ಥಾನಗಳಲ್ಲಿ ಹೋಗುವುದೂ, ಮಿಥ್ಯಾದೇವ ಮಿಥ್ಯಾಶಾಸ್ತ್ರ ಮತ್ತು ಮಿಥ್ಯಾಗುರುಗಳಲ್ಲಿ ಮತ್ತು ಮಿಥ್ಯಾತೀರ್ಥಾದಿಗಳಲ್ಲಿ ಭಕ್ತಿಮಾಡುವುದೂ ಗಂಗಾನದಿ, ಸಮುದ್ರ ಮುಂತಾದವುಗಳಲ್ಲಿ ಸ್ನಾನಮಾಡುವುದರಿಂದ ಪಾಪ ನಾಶವಾಗಿ ಇಷ್ಟವಸ್ತುಗಳ ಪ್ರಾಪ್ತಿಯಾಗುವುದೆಂಬ ಅಭಿಲಾಷೆಯುಳ್ಳವನಾಗಿ ರುವುದೂ ಇವೆಲ್ಲವೂ ಮೂಢತ್ವವನ್ನುಂಟುಮಾಡುತ್ತವೆ.

ರತ್ನಕರಂಡಕ ಶ್ರಾವಕಾಚಾರದಲ್ಲಿ ಹೇಳಿರುತ್ತಾರೆ:

**ಆಪಗಾಸಾಗರಸ್ನಾನಮುಚ್ಚಯಃ ಸಿಕತಾಶ್ಮನಾಂ।**
**ಗಿರಿಪಾತೋಽಗ್ನಿಪಾತಶ್ಚ ಲೋಕಮೂಢಂ ನಿಗದ್ಯತೇ ॥ ೨೨ ॥**

**ಭಾವಾರ್ಥ :** ನದೀ ಸಮುದ್ರಾದಿಗಳಲ್ಲಿ ಸ್ನಾನಮಾಡುವುದರಿಂದಲೂ, ಮರಳು ಕಲ್ಲುಗಳ ರಾಶಿಮಾಡಿ ಪೂಜಿಸುವುದರಿಂದಲೂ, ಪರ್ವತದಿಂದ ಬೀಳುವುದರಿಂದಲೂ, ಬೆಂಕಿಯಲ್ಲಿ ಬಿದ್ದು ಮರಣ ಹೊಂದುವುದರಿಂದಲೂ ಕ್ಷೇಮವಾಗುವುದೆಂಬ ಭಾವನೆಯಿಂದಲೂ ಪಾಪವು ನಾಶವಾಗಿ ಪುಣ್ಯಪ್ರಾಪ್ತಿಯಾಗುವುದು. ಅಷ್ಟೇ ಅಲ್ಲ ಮೋಕ್ಷವು ಲಭಿಸುವುದು–ಇವೇ ಮೊದಲಾದವು ಲೋಕಮೂಢವಾಗಿವೆ.

**ವರೋಪಲಿಪ್ಸಯಾಶಾವಾನ್ ರಾಗದ್ವೇಷಮಲೀಮಸಾಃ ।**
**ದೇವತಾ ಯದುಪಾಸೀತ ದೇವತಾಮೂಢಮುಚ್ಯತೇ ॥ ೨೩ ॥**

**ಭಾವಾರ್ಥ :** ಲೌಕಿಕ ಫಲಗಳ ಅಭಿಲಾಶೆಯ ಆಶೆಯುಳ್ಳವನಾಗಿ ರಾಗದ್ವೇಷಗಳಿಂದ ಮಲಿನರಾದ ದೇವತೆಗಳನ್ನು ಪೂಜಿಸುವುದು ದೇವಮೂಢವಾಗಿದೆ.

**ಸಗ್ರಂಥಾರಂಭಹಿಂಸಾನಾಂ ಸಂಸಾರಾವರ್ತವರ್ತಿನಾಂ ।**
**ಪಾಖಂಡಿನಾಂ ಪುರಸ್ಕಾರೋ ಜ್ಞೇಯಂ ಪಾಖಂಡಿಮೋಹನಂ ॥ ೨೪ ॥**

**ಭಾವಾರ್ಥ :** ಬಾಹ್ಯಾಭ್ಯಂತರ ಪರಿಗ್ರಹಧಾರಿಗಳೂ, ಆರಂಭಾದಿ ಹಿಂಸೆಯನ್ನು ಮಾಡುವವರೂ ಮತ್ತು ಸಂಸಾರ ರೂಪ ಚಕ್ರದಲ್ಲಿ ಭ್ರಮಿಸುತ್ತಿರುವರೂ ಆದ ಸಾಧುಗಳ ಆದರಸತ್ಕಾರ ಮಾಡುವಿಕೆಯು ಗುರುಮೂಢವಾಗಿದೆ.

ಲೌಕಿಕರು ಈ ಮೂರು ಮೂಢಗಳಿಂದ ವಂಚಿತರಾಗಿ ಸಂಸಾರಾಸಕ್ತರಾಗಿ ಮನ, ವಚನ, ಕಾಯ ಮತ್ತು ಧನಾದಿಗಳನ್ನು ಅರ್ಪಿಸಿ ಮೂಢತೆಯಿಂದ ಮತ್ತು ಧನ, ಸ್ತ್ರೀ, ನಿರೋಗತೆ ಮೊದಲಾದ ಲಾಭದ ಆಸೆಯಿಂದ ಪಶುಬಲಿ ಮೊದಲಾದ ನೀಚ (ಹಿಂಸಾ) ಕಾರ್ಯಗಳನ್ನು ದೇವದೇವಿಯರ ಹೆಸರಿನಲ್ಲಿ ಮಾಡುತ್ತಾರೆ. ಇಂಥವರಿಗೆ ರತ್ನತ್ರಯಗಳ ಪ್ರಾಪ್ತಿಯ ಗಂಧವೂ ಪ್ರಕಾಶವೂ ಹೇಗೆ ತಾನೇ ಆದೀತು ? (ಆಗುವುದಿಲ್ಲವೆಂದು ಭಾವವು)

ತನ್ನಾತ್ಮನು ಪರಮಾತ್ಮನಂತೆ ಪರಮಾತ್ಮಸ್ವರೂಪನಾಗಿಯೂ, ಪರಮಾನಂದ ಪ್ರೇಮಿಯಾಗಿಯೂ ಇರುವನೆಂದು ತಿಳಿಯುವುದೂ, ಸಂಸಾರ

ವಿಷಯಗಳಿಂದ ವೈರಾಗ್ಯಭಾವನೆಯುಳ್ಳವನಾಗಿರುವುದೂ, ಇಂದ್ರ ಚಕ್ರವರ್ತಿ ಮೊದಲಾದ ಲೌಕಿಕ ಪದವಿ ಮೊದಲಾದವುಗಳನ್ನು ಪರವಸ್ತುಗಳೆಂದೇ ತಿಳಿದು ಉದಾಸೀನತೆಯಿಂದಿರುವುದೂ, ಆತ್ಮಾನುಭವವೇ ನಿಶ್ಚಯ ಧರ್ಮವೆಂದು ತಿಳಿದುಕೊಳ್ಳುವುದೂ ಸಮ್ಯಗ್ದರ್ಶನವಾಗಿದೆ. ಈ ಸಮ್ಯಗ್ದರ್ಶನ ಭಾವನೆಯಿಂದ ತನ್ನಾತ್ಮ ದೇವನ ಆರಾಧನೆ, ವೀತರಾಗತೆಯ ಉದ್ದೇಶದಿಂದ ಅರಹಂತ, ಸಿದ್ಧ, ಆಚಾರ್ಯ, ಉಪಾಧ್ಯಾಯ, ಸರ್ವಸಾಧುಗಳೆಂಬ ಪಂಚ ಪರಮೇಷ್ಠಿಗಳಲ್ಲಿ ಭಕ್ತಿ, ಶಾಸ್ತ್ರಚಿಂತನೆ, ವೈರಾಗ್ಯ. ಆತ್ಮಜ್ಞಾನ ಜಾಗೃತವನ್ನುಂಟು ಮಾಡುವ ಪವಿತ್ರ ತೀರ್ಥಕ್ಷೇತ್ರಗಳ ಯಾತ್ರೆ ಇವುಗಳು ಸಿದ್ಧಿಸುತ್ತವೆ.

ಸಂಸಾರ ಸಾಗರದಿಂದ ಪಾರಾಗುವ ಮಾರ್ಗಕ್ಕೆ ತೀರ್ಥವೆಂದೂ, ಆ ಮಾರ್ಗವನ್ನು ಬೋಧಿಸುವವರಿಗೆ ತೀರ್ಥಂಕರರೆಂದೂ ಹೇಳುತ್ತಾರೆ. ಇಂಥಹ ತೀರ್ಥಂಕರರು ಅಥವಾ ತೀರ್ಥಂಕರರಿಗೆ ಸಮಾನರಾದ ಮೋಕ್ಷಗಾಮಿ ಮಹಾತ್ಮರು ಜನಿಸಿದ ಸ್ಥಾನವು ಅಥವಾ ತಪಸ್ಸನ್ನಾಚರಿಸಿದ ಭೂಮಿಯು, ಕೇವಲಜ್ಞಾನವನ್ನು ಪಡೆದ, ಮೋಕ್ಷ ಲಕ್ಷ್ಮಿಯನ್ನು ಪಡೆದ ಎಲ್ಲಾ ಸ್ಥಾನಗಳು, ಆತ್ಮಧರ್ಮರೂಪೀ ತೀರ್ಥದ ಸ್ಮರಣ ಪಥಕ್ಕೆ ನಿಮಿತ್ತ ತೀರ್ಥಗಳಾದ ಅಯೋಧ್ಯಾ, ಹಸ್ತಿನಾಪುರ, ಕಾಂಪಿಲ್ಯ, ವಾರಣಸೀ, ಸಮ್ಮೇದಗಿರಿ, ಊರ್ಜಯಿಂತಗಿರಿ (ಗಿರಿನಾರ), ರಾಜಗೃಹ, ಪಾವಾಪುರಿ ಮೊದಲಾದ ಕ್ಷೇತ್ರಗಳು, ಇನ್ನೂ ಕೆಲವು ಕಡೆಗಳಲ್ಲಿರುವ ವಿಶೇಷ ಧ್ಯಾನಾಕಾರ ಪ್ರಾಚೀನ ಪ್ರತಿಮೆಗಳಿರುವ ಸ್ಥಾನಗಳು, ವೈರಾಗ್ಯಕ್ಕೆ ಕಾರಣಗಳಾಗಿರುವ ಶ್ರೀ ಶ್ರವಣ ಬೆಳ್ಗೊಳದ ಗೋಮಟದೇವ, ಚಾಂದನಗಾಂವದ ಮಹಾವೀರಜೀ, ಸಜೋತದ ಶ್ರೀ ಶೀತಲನಾಥ ಇವೇ ಮೊದಲಾದವುಗಳ ನಿಮಿತ್ತದಿಂದ ಆತ್ಮಜ್ಞಾನಿಯು ಆತ್ಮಾನುಭವವನ್ನು ಸಾಧಿಸಿಕೊಳ್ಳುತ್ತಾನೆ. ತನ್ನಾತ್ಮನೇ ನಿಶ್ಚಯ ತೀರ್ಥ ಸ್ವರೂಪವಾಗಿಯೂ ಮೇಲ್ಕಂಡ ಪಾವನ ಕ್ಷೇತ್ರಗಳು ವ್ಯವಹಾರ ಕ್ಷೇತ್ರಗಳಾಗಿಯೂ ಇವೆ.

  

## ನಿಶ್ಚಯವಾಗಿ ತನ್ನ ಶರೀರವೇ ತೀರ್ಥವೂ ಮಂದಿರವೂ ಆಗಿರುತ್ತದೆ

**ತಿತ್ಥಹಿಂ ದೇವಲಿ ದೇಉ ಣವಿ ಇವು ಸುಇಕೇವಲಿ ವುತ್ತು।**
**ದೇಹಾದೇವಲಿ ದೇಉ ಜಿಣು ಏಹಉ ಜಾಣಿ ಣಿರುತ್ತು ॥೪೨॥**

**ಅನ್ವಯಾರ್ಥ:** ಸುಇಕೇವಲಿ ಇವು ವುತ್ತು–ಶ್ರುತಕೇವಲಿಗಳು ಆಜ್ಞೆಯಿತ್ತಿರುವುದೇನೆಂದರೆ, ತಿತ್ಥಹಿಂ ದೇವಲಿ ದೇಉ ಣವಿ–ತೀರ್ಥಕ್ಷೇತ್ರ ಗಳಲ್ಲಾಗಲಿ, ಮಂದಿರಗಳಲ್ಲಾಗಲಿ ಪರಮಾತ್ಮನು ಇಲ್ಲ. ಣಿರುತ್ತು ಏಹಉ ಜಾಣಿ–ನಿಶ್ಚಯದಿಂದ ವಿಚಾರಿಸಿ ನೋಡು. ದೇಹಾದೇವಲಿ ಜಿಣು ದೇಉ–ಶರೀರ ರೂಪವಾದ ದೇವಾಲಯದಲ್ಲಿಯೇ ಜಿನದೇವನು ಇರುವನು.

**ಭಾವಾರ್ಥ:** ಯಥಾರ್ಥವಾಗಿ ಪರಮಾತ್ಮನಾದ ಶ್ರೀ ತೀರ್ಥಂಕರ, ಪರಮಜಿನದೇವನ ದರ್ಶನ ಅಥವಾ ಸಾಕ್ಷಾತ್ಕಾರಮಾಡಬೇಕೆಂದಿರುವವನಿಗೆ ತನ್ನ ಶರೀರದಲ್ಲಿಯೇ ಶುದ್ಧಜ್ಞಾನ ದೃಷ್ಟಿಯಿಂದ ತನ್ನ ಆತ್ಮನು ಶುದ್ಧ ಸ್ವಭಾವೀ ಮತ್ತು ಸರ್ವ ಭಾವಕರ್ಮ, ದ್ರವ್ಯಕರ್ಮ, ನೋಕರ್ಮರಹಿತ ಎಂದು ನೋಡಬೇಕಾಗುವುದು. ಜಗತ್ತಿನಲ್ಲಿ ಪರಮಾತ್ಮನ ದರ್ಶನವನ್ನು ಮಂದಿರದಲ್ಲಾಗಲಿ, ತೀರ್ಥಕ್ಷೇತ್ರಗಳಲ್ಲಾಗಲಿ, ಗುಹೆಗಳಲ್ಲಾಗಲಿ, ಪರ್ವತ ಶಿಖರಗಳಲ್ಲಾಗಲಿ, ನದಿತೀರಗಳಲ್ಲಾಗಲಿ, ಗುರುಸನ್ನಿಧಿಯಲ್ಲಾಗಲಿ, ಶಾಸ್ತ್ರ ಗಳ ವಚನದಲ್ಲಾಗಲಿ ಎಲ್ಲಿಯೂ ಯಾರಿಂದಲೂ ಮಾಡಲು ಸಾಧ್ಯವಾಗಿಲ್ಲವು. ದರ್ಶನಮಾಡಿದವರು ಇದ್ದಾರೆಂದರೆ ತನ್ನಂತರಂಗದಲ್ಲಿ ನೋಡಿರುವವರೇ. ವರ್ತಮಾನದಲ್ಲಿ ಪರಮಾತ್ಮನ ದರ್ಶನ ಮಾಡಿರುತ್ತಾರೆಂದರೆ ತಮ್ಮ ಶರೀರ ದಲ್ಲಿಯೇ ದರ್ಶನ ಮಾಡಿರುತ್ತಾರೆ. ಭವಿಷ್ಯತ್ಕಾಲದಲ್ಲಿಯೂ ಕೂಡ ಪರ ಮಾತ್ಮನ ದರ್ಶನಮಾಡುವರೆಂದು ಹೇಳುವುದಾದರೆ ತಮ್ಮ ಶರೀರರೂಪ ಮಂದಿರದಲ್ಲಿಯೇ ದರ್ಶನಗೈಯುವರು

ಹೀಗೆ ಸಿದ್ಧಾಂತವಿರುವಾಗ ದೇವಸ್ಥಾನಗಳಿಗೆ ಹೋಗಿ ಜಿನ ಪ್ರತಿಮೆ ಗಳ ದರ್ಶನಮಾಡುವುದಾಗಲಿ ತೀರ್ಥಕ್ಷೇತ್ರಗಳಿಗೆ ಹೋಗಿ ಪವಿತ್ರ ಸ್ಥಾನ ದಲ್ಲಿ ನಮಿಸುವುದಾಗಲಿ, ಏಕೆ? ಎಂಬ ಸಂದೇಹಕ್ಕೆ ಆಚಾರ್ಯರು ಸಮಾ

ಧ್ಯಾನರೂಪವಾದ ಉತ್ತರವೀಯುತ್ತಾರೆ. ಜಿನಪ್ರತಿಮೆ, ತೀರ್ಥಕ್ಷೇತ್ರಾದಿಗಳು ಕೇವಲ ನಿಮಿತ್ತ ಕಾರಣಗಳಾಗಿವೆ. ಅವುಗಳಲ್ಲಿ ಭಕ್ತಿಯನ್ನಿಟ್ಟುಕೊಂಡು ತನ್ನಲ್ಲಿಯೇ ಆತ್ಮದೇವನನ್ನು ಸ್ಮರಿಸಬೇಕಾಗುತ್ತದೆ. ಯಾವಾತ್ಮನು ಉನ್ನತ ಮಟ್ಟದ ಅವಸ್ಥೆಗೇರಿರುವನೋ, ಪ್ರತಿಸಮಯದಲ್ಲಿ ಆತ್ಮನ ಸಾಕ್ಷಾತ್ಕಾರವನ್ನು ಮಾಡಿಕೊಳ್ಳುತ್ತಿರುವನೋ ಅವನು ಏಳನೆಯ ಗುಣಸ್ಥಾನದಿಂದ ಎಂಟನೆಯ ಒಂಭತ್ತನೆಯ, ಹತ್ತನೆಯ ಮತ್ತು ಹನ್ನೆರಡನೆಯ ಗುಣಸ್ಥಾನಗಳಲ್ಲಿ ಅಂತರ್ಮುಹೂರ್ತ ಕಾಲ ಆರೂಢನಾಗಿ ಕೇವಲಜ್ಞಾನಿಯಾಗುತ್ತಾನೆ. ಕೆಳಗಿನ ಸವಿಕಲ್ಪ ಅವಸ್ಥೆಯಲ್ಲಿ ಪ್ರಮಾದಜನಿತ ಕಷಾಯಗಳ ತೀವ್ರ ಉದಯದ ಸಂಭವವಿರುವುದರಿಂದ, ದೇಶಸಂಯಮ ಗುಣಸ್ಥಾನದವರೆಗಿನ ಗೃಹಸ್ಥರ ಮತ್ತು ಪ್ರಮತ್ತ ವಿರತ ಗುಣಸ್ಥಾನಧಾರಿಗಳಾದ ಸಾಧುಗಳ ಮನಸ್ಸು ಚಂಚಲವಿರುವುದರಿಂದ ಬಾಹ್ಯ ನಿಮಿತ್ತಗಳು ಪ್ರಾಪ್ತವಾದಮೇಲೆ ಸ್ವರೂಪದ ಭಾವನೆಯು ದೃಢಗೊಳ್ಳುವುದು. ಇವರಿಗಾಗಿಯೇ ಜಿನಮಂದಿರಗಳಲ್ಲಿ ಸ್ಥಾಪಿಸಿರುವ ಜಿನಬಿಂಬಗಳ ದರ್ಶನವು, ತೀರ್ಥಕ್ಷೇತ್ರಗಳ ವಂದನೆಯು ಆತ್ಮೀಕ ಭಾವನೆಯ ನಿಮಿತ್ತಗಳಾಗಿವೆ.

ಯದಿ ಪ್ರತಿಮೆ ಮೊದಲಾದವುಗಳಲ್ಲಿಯೇ ಪರಮಾತ್ಮನಿರುತ್ತಾನೆಂದೂ, ತೀರ್ಥಕ್ಷೇತ್ರಾದಿಗಳಲ್ಲಿ ಪರಮಾತ್ಮನು ವಿರಾಜಮಾನನಾಗಿರುವನೆಂದೂ ನಂಬಿಕೊಂಡಿರುವ ಮೂಢಾತ್ಮರ ಸಂಶಯವನ್ನು ನಿವಾರಿಸಲು ಪ್ರಯತ್ನಿಸುತ್ತಾರೆ. ಪ್ರತಿಮಾದಿಗಳಲ್ಲಿ ಪರಮಾತ್ಮನ ಸ್ಥಾಪನೆಯು, ತೀರ್ಥಕ್ಷೇತ್ರಾದಿಗಳಲ್ಲಿ ನಿರ್ವಾಣಾದಿ ಸ್ಥಾನಗಳ ಸ್ಥಾಪನೆಯು ಆಗಿರುತ್ತದೆ. ಸ್ಥಾಪನೆಯು ಪದಾರ್ಥವನ್ನು ವ್ಯಕ್ತಪಡಿಸಲಾರದು. ಆದರೆ "ಇದು ಅವರ ಮೂರ್ತಿಯಾಗಿದೆ" ಎಂಬ ಸ್ಮರಣೆಯನ್ನುಂಟುಮಾಡುವುದು ಮತ್ತು ಅವರ ಗುಣಗಳ ಭಾವಚಿತ್ರವನ್ನು ಪ್ರಕಾಶಪಡಿಸುವುದು ಆಗಿದೆ. ಜ್ಞಾನಿಯಾದವನು 'ವೃಷಭದೇವನ ಮೂರ್ತಿಯಲ್ಲಿ ವೃಷಭದೇವನಿರುತ್ತಾನೆ; ಮಹಾವೀರನ ಮೂರ್ತಿಯಲ್ಲಿ ಮಹಾವೀರಸ್ವಾಮಿ ಇರುತ್ತಾನೆ' ಎಂದು ತಿಳಿಯದೆ 'ಆ ಪ್ರತಿಮೆಗಳೇ ವೃಷಭಸ್ವಾಮಿ ಮತ್ತು ಮಹಾವೀರಸ್ವಾಮಿಯ ಧ್ಯಾನಸ್ವರೂಪವನ್ನು ಪ್ರಕಾಶಪಡಿಸುವ ಮತ್ತು ವೈರಾಗ್ಯ ಭಾವನೆಯನ್ನು ತೋರ್ಪಡಿಸುವ ಪ್ರತಿಕೃತಿಗಳಾಗಿವೆ' ಎಂದು ತಿಳಿಯುತ್ತಾನೆ.

ಈ ಮೂರ್ತಿಗಳಿರುವುದರಿಂದಲೇ "ಇದು ಇಂತಹ ಮಹಾತ್ಮನ ಪ್ರತಿಮೆ" ಎಂಬ ಸ್ಮರಣೆಯು ಉಂಟಾಗುವುದು. ಮೂರ್ತಿಯ ವಂದನೆಯಿಂದಲೂ, ಪೂಜಿಸುವುದರಿಂದಲೂ ಉತ್ತಮ ಭಾವನೆಯುಂಟಾಗುತ್ತದೆ. ಹೇಗೆಂದರೆ ಭಕ್ತಿಯ ಲಕ್ಷ್ಯವು ಯಾರ ಮೂರ್ತಿಯಿರುವುದೋ ಅವರಲ್ಲಿಯೇ ನೆಲೆನಿಲ್ಲುವುದು.

ವ್ಯವಹಾರದಲ್ಲಿಯೂ ಕೂಡ ಮಹಾಪುರುಷರ ಚಿತ್ರದ ಆದರವು ಅವರನ್ನೇ ಆದರಿಸುವಂತೆಯೂ, ಅನಾದರಿಸಿದರೆ ಅವರನ್ನು ಅನಾದರಿಸಿದಂತೆಯೂ ಆಗುತ್ತದೆ. ದರ್ಶಕರ ಪರಿಣಾಮವು ಮೂರ್ತಿಯ ನಿಮಿತ್ತದಿಂದ ಪರಿವರ್ತನೆಯಾಗುತ್ತದೆ. ವೀತರಾಗಮೂರ್ತಿ, ತಪೋಮೂರ್ತಿ, ವೈರಾಗ್ಯಮೂರ್ತಿಗಳು ವೈರಾಗ್ಯ ಭಾವನೆಯನ್ನೂ, ರಾಗವರ್ಧಕಮೂರ್ತಿಗಳು ರಾಗಭಾವನೆಯನ್ನೂ ಉಂಟುಮಾಡುತ್ತವೆ. ಆರನೆಯ ಗುಣಸ್ಥಾನವರೆಗಿರುವ ಭವ್ಯ ಜೀವಿಗಳು ಜಿನಬಿಂಬಗಳ, ತೀರ್ಥಕ್ಷೇತ್ರಗಳ ಭಕ್ತಿಮಾಡುತ್ತಾರೆ. ಅವುಗಳ ಭಕ್ತಿಯ ನೆಪದಿಂದಾಗಲಿ. ಆಧಾರದಿಂದಾಗಲಿ ತಮ್ಮ ತಮ್ಮ ಭಕ್ತಿಯನ್ನು ಮಾಡುತ್ತಾರೆ.

ಯಾವ ಸಮ್ಯಗ್ದೃಷ್ಟಿಯಾದ ಆತ್ಮಜ್ಞಾನಿಯು ತನ್ನದೇಹದಲ್ಲಿ ತನ್ನನ್ನು ಪರಮಾತ್ಮಸ್ವರೂಪದಂತೆ ನೋಡುತ್ತಾನೆಯೋ, ಅವನ ಜ್ಞಾನವೃದ್ಧಿಗೆ ಶಾಸ್ತ್ರ ವಚನಗಳು ಪ್ರೇರಕವಾಗಿರುವಂತೆ, ದೇವಸ್ಥಾನಗಳು, ಜಿನಬಿಂಬಗಳು ಅಥವಾ ತೀರ್ಥಕ್ಷೇತ್ರಗಳು ಆತ್ಮಾರಾಧನೆಗೆ ಪ್ರೇರಕಗಳಾಗಿವೆ. ಇವೆಲ್ಲವೂ ಬುದ್ಧಿಪೂರ್ವಕ ಪ್ರೇರಕವಲ್ಲವು; ಕಿಂತು ಉದಾಸೀನ ಪ್ರೇರಕಗಳಾಗಿರುತ್ತವೆ.

ತತ್ವಾರ್ಥಸಾರದಲ್ಲಿ ಸ್ಥಾಪನೆಯ ಸ್ವರೂಪವನ್ನು ಇಂತು ವರ್ಣಿಸಿದ್ದಾರೆ:

**ಸೋಽಯಮಿತ್ಯಕ್ಷಕಾಷ್ಠಾದೇಃ ಸಂಬಂಧೇನಾನ್ಯವಸ್ತುನಿ |**
**ಯದ್ವ್ಯವಸ್ಥಾಪನಾಮಾತ್ರಂ ಸ್ಥಾಪನಾ ಸಾಭಿಧೀಯತೇ ||೧೧-೧||**

**ಭಾವಾರ್ಥ:** ಕಟ್ಟಿಗೆಯಿಂದ ಮಾಡಲ್ಪಟ್ಟ ಪಗಡೆಕಾಯಿಗಳಲ್ಲಾಗಲೀ ಅಥವಾ ಅನ್ಯವಸ್ತುಗಳಲ್ಲಾಗಲೀ ಇದು ಅದಾಗಿದೆಯೆಂದು ಅಂದರೆ ಕುದುರೆ, ಆನೆ ಇತ್ಯಾದಿ ಸ್ಥಾಪನೆಮಾಡುವುದು ಸ್ಥಾಪನಾನಿಕ್ಷೇಪವು. ಯಾವುದರಲ್ಲಿ ಯಾರ ಸ್ಥಾಪನೆಯು ಮಾಡಲ್ಪಟ್ಟಿರುವುದೋ ಅದೇ ಭಾವವನ್ನುಂಟುಮಾಡುವ

ಮತ್ತು ತೋರುವ ಮೂರ್ತಿಯನ್ನು ಮಾಡಿಸುವುದು ತದಾಕಾರ ಸ್ಥಾಪನೆಯಾಗಿರುತ್ತದೆ. ಯಾವುದಾದರೊಂದು ಚಿಹ್ನೆಯುಳ್ಳದರಲ್ಲಿ ಯಾವುದಾದರೊಂದು ಕಲ್ಪನೆಮಾಡುವುದು ತದಾಕಾರ ಸ್ಥಾಪನೆಯಾಗಿರುತ್ತದೆ. ಉದಾ ಚಿತ್ರಪಟದಲ್ಲಿ ಯಾವುದಾದರೊಂದು ರೇಖೆಯನ್ನು ನದಿಯೆಂತಲೂ, ಬಿಂದುವಿನ ಆಕಾರವನ್ನು ಪರ್ವತವೆಂತಲೂ ತಿಳಿಯುವುದು ಸ್ಥಾಪನಾಸಿಕ್ಷೇಪವು. ಇದು ಕೇವಲ ಸಾಂಕೇತಿಕವಾಗಿರುತ್ತದೆ. ಯಾರಾದರೂ ಮೂಢರು ಸ್ಥಾಪನೆಯನ್ನೇ ನಿಜವಾದುದೆಂದು ಭಾವಿಸಿಕೊಂಡು, ನದಿಯ ಸ್ಥಾಪನಾರೂಪ ರೇಖೆಯಿಂದ ನೀರನ್ನು ತೆಗೆದುಕೊಳ್ಳಲು ಹೋದರೆ ನೀರು ಸಿಕ್ಕಲಾರದು. ರೇಖೆಯಲ್ಲಿ ನಿಜವಾಗಿಯು ನೀರು ಇಲ್ಲವು.

ಒಬ್ಬ ಸಾಧುವಿನ ಮೂರ್ತಿಯನ್ನು ನೋಡಿ, ಅಲ್ಲಿ ಏನಾದರೂ ಪ್ರಶ್ನೆ ಮಾಡಿದರೆ ಉತ್ತರವು ಸಿಕ್ಕಲಾರದು. ಕಾರಣ ಅಲ್ಲಿ ಸಾಕ್ಷಾತ್ ಸಾಧುವು ಇಲ್ಲವು. ಕಿಂತು ಸಾಧುವಿನ ಆಕಾರ ಪ್ರದರ್ಶಕವಾದ ಚಿತ್ರಪಟವಿದೆ. ಅರ್ಥಾತ್ ಮಂದಿರಗಳಲ್ಲಿಯೂ, ತೀರ್ಥಕ್ಷೇತ್ರಗಳಲ್ಲಿಯೂ ಸಾಕ್ಷಾತ್ ಪರಮಾತ್ಮನ ದರ್ಶನವಾಗಲಾರದು; ಪರಮಾತ್ಮನಾದ ಜಿನದೇವನ ದರ್ಶನವಾದರೋ ತನ್ನಾತ್ಮನನ್ನೇ ಆತ್ಮರೂಪನೆಂದು ಯಥಾರ್ಥವಾಗಿ ನೋಡಿದರೇನೆ ಸಾಧ್ಯವಾಗುವುದು.

ಪರಮಾತ್ಮಪ್ರಕಾಶದಲ್ಲಿಯೂ ಕೂಡ ಹೇಳಿರುತ್ತಾರೆ :

**ದೇಹಾ ದೇಉಲಿ ಜೋ ವಸಇ, ದೇವ ಅಣಾಇ ಅಣಂತು ।**
**ಕೇವಲಣಾಣ ಫುರಂತ ತಣು ಸೋ ಪರಮುಪ್ಪು ಭಣಂತು ॥ ೩೩ ॥**

**ಭಾವಾರ್ಥ :** ಶರೀರ ರೂಪವಾದ ಮಂದಿರದಲ್ಲಿ ಅನಾದಿ ಕಾಲದಿಂದ ಅನಂತ ಕಾಲದವರೆಗಿರುವ ಕೇವಲಜ್ಞಾನಮಯನೂ, ಪ್ರಕಾಶಮಾನನೂ, ಶರೀರಧಾರಿಯೂ ಆದ ತನ್ನಾತ್ಮನೇ ಇರುತ್ತಾನೆ. ಅವನೇ ನಿಃಸಂದೇಹವಾಗಿ ಯಥಾರ್ಥ ಪರಮಾತ್ಮನಾಗಿರುತ್ತಾನೆ.

**ಅಣ್ಣುಜಿ ತಿತ್ಥ ಮ ಜಾಹಿ ಜಿಯ, ಅಣ್ಣುಜಿ ಗುರಉ ಮ ಸೇವಿ ।**
**ಅಣ್ಣುಜಿ ದೇವ ಮ ಚಿಂತ ತುಹುಂ ಅಪ್ಪಾ ವಿಮಲ ಮುಏವಿ ॥ ೯೫ ॥**

**ಭಾವಾರ್ಥ :** ಮತ್ತೊಂದು ತೀರ್ಥಗಳಿಗೆ ಹೋಗಬೇಡ, ಗುರುಸೇವೆ ಮಾಡಬೇಡ, ಅನ್ಯ ದೇವರನ್ನು ಚಿಂತಿಸಬೇಡ. ಆದರೆ ಕೇವಲ ತನ್ನ ನಿರ್ಮಲಾತ್ಮನ ಅನುಭವಮಾಡಿಕೊ. ಇದೇ ತೀರ್ಥವೂ, ಮಹಾಗುರುವೂ, ಮತ್ತು ದೇವಸ್ವರೂಪವೂ ಆಗಿರುತ್ತದೆ. ಅನ್ಯ ತೀರ್ಥ, ಗುರು ಮತ್ತು ದೇವ ಇವು ಕೇವಲ ವ್ಯವಹಾರನಿಮಿತ್ತಗಳಾಗಿವೆ.



## ದೇವಾಲಯದಲ್ಲಿ ನಿಜವಾಗಿ ಪರಮಾತ್ಮನಿಲ್ಲವು

**ದೇಹಾ-ದೇವಲಿ ದೇಉ ಜಿಣು ಜಣು ದೇವಲಿಹಿಂ ಣಿಏಇ।**
**ಹಾಸಉ ಮಹು ಪಡಿಹಾಇ ಇಹು ಸಿದ್ಧೇ ಭಿಕ್ಖ ಭಮೇಇ ॥ ೪೩ ॥**

**ಅನ್ವಯಾರ್ಥ :** ಜಿಣು ದೇಉ ದೇಹಾ ದೇವಲಿ–ಶರೀರರೂಪ ದೇವಾಲಯದಲ್ಲಿ ಶ್ರೀ ಜಿನದೇವನಿರುತ್ತಾನೆ. ಜಣು ದೇವಲಿಹಿಂ ಣಿಏಇ–ಅಜ್ಞಾನಿಗಳು ಮಂದಿರಗಳಲ್ಲಿಯೇ ಜಿನದೇವನನ್ನು ನೋಡುತ್ತಿರುತ್ತಾರೆ. ಮಹು ಹಾಸಉ ಪಡಿಹಾಇ–ಇದು ಎನಗೆ ಹಾಸ್ಯವೆನಿಸುವುದು. ಇಹು ಸಿದ್ಧೇ ಭಿಕ್ಖ ಭಮೇಇ–ಹೇಗೆಂದರೆ ಈ ಲೋಕದಲ್ಲಿ ಧನ ಸಂಪತ್ತಿಗಳ ಸಿದ್ಧಿಯಾದರೂ ಭಿಕ್ಷೆಯನ್ನೆತ್ತಿಕೊಂಡು ಸುತ್ತುತ್ತಿರುವನಂತೆ.

**ಭಾವಾರ್ಥ :** ಇದನ್ನೇ ಸ್ಪಷ್ಟೀಕರಿಸುತ್ತಾರೆ. ಯಾರು ಕೇವಲ ಜಿನ ಮಂದಿರಗಳಲ್ಲಿ ಬಾಹ್ಯಶಕ್ತಿಯಿಂದಲೇ ಸಂತುಷ್ಟರಾಗಿ, ತಮ್ಮನ್ನು ಧರ್ಮಾತ್ಮರೆಂದು ತಿಳಿಯುತ್ತಾರಲ್ಲದೆ, ಈ ವಿಷಯವಾಗಿ ಸ್ವಲ್ಪವೂ ವಿಚಾರಿಸುವುದಿಲ್ಲವು. ಆ ಪ್ರತಿಮೆಯು ಯಾವ ಪಾಠವನ್ನು ಕಲಿಸುತ್ತದೆ? ದರ್ಶನ ಮತ್ತು ಪೂಜೆ ಮಾಡುವುದರ ಕಾರಣವೇನು? ಕೇವಲ ಅಲ್ಪ ಸ್ವಲ್ಪ ಶುಭ ಭಾವದಿಂದ ಪುಣ್ಯವನ್ನು ಬಂಧಿಸಿಕೊಳ್ಳುವುದಲ್ಲದೆ, ನಿರ್ವಾಣ ಮಾರ್ಗವು ಗೋಚರವಾಗಲಾರದು. ಅಂತರಂಗ ಚಾರಿತ್ರವಿಲ್ಲದೆ, ಕೇವಲ ಬಾಹ್ಯ ಚಾರಿತ್ರವು ಮರಳಿನಿಂದ ಎಣ್ಣೆಯನ್ನು ತೆಗೆಯುವಂತೆಯೇ ಸರಿ. ಸಮ್ಯಗ್ದರ್ಶನವಿಲ್ಲದ ಸಕಲ

ಶಾಸ್ತ್ರಗಳ ಪರಿಜ್ಞಾನವೂ, ಚಾರಿತ್ರವೂ ಮಿಥ್ಯಾಜ್ಞಾನ, ಮಿಥ್ಯಾಚಾರಿತ್ರ ಗಳೆಂದೇ ಹೇಳಿಸಿಕೊಳ್ಳುವುವು.

ತನ್ನ ಆತ್ಮನ ನಿಜಸ್ವಭಾವದ ಶ್ರದ್ಧಾನವೇ ಸಮ್ಯಗ್ದರ್ಶನವಾಗಿರುತ್ತದೆ. ಅದರ ಪ್ರಭೆಯಿಂದ ತನ್ನಾತ್ಮನ ಕರ್ಮಕೃತ ವಿಕಾರವಶನಾಗಿ ರಾಗಿಯೆಂದೂ, ದ್ವೇಷಿಯೆಂದೂ ತಿಳಿಯುತ್ತಾನೆ. ಸಂಸಾರೀಯೆಂಬ ಅಜ್ಞಾನಾಂಧಕಾರವು ದೂರವಾದೊಡನೆ ಆ ಜ್ಞಾನಿಯಾದ ಸಮ್ಯಗ್ದೃಷ್ಟಿಗೆ ತನ್ನ ಶರೀರದಲ್ಲಿ ವ್ಯಾಪಕ ನಾದ ಆತ್ಮನಲ್ಲಿ ಪರಮಾತ್ಮರೂಪವಾದ ಶ್ರದ್ಧಾನವು ದೃಢವಾಗುತ್ತದೆ. ಆಗ ಅವನು ಸದಾಕಾಲವೂ ತನ್ನ ದೇಹವೆಂಬ ಮಂದಿರವು ತನ್ನಾತ್ಮರೂಪದೇವನ ನಿವಾಸ ಸ್ಥಾನವೆಂದು ತಿಳಿದುಕೊಂಡಿರುತ್ತಾನೆ. ಅಂತಹ ಸಮ್ಯಕ್ತ್ವಿಯು ಎಂದೆಂದಿಗೂ ಭ್ರಮೆಯಲ್ಲಿ ಸಿಲುಕದೆ, ವಸ್ತುಗಳ ಯಥಾರ್ಥವಾದ ಸ್ವರೂಪ ವನ್ನು ತಿಳಿಯುತ್ತಾನೆ. ಆತನು ಜಿನಮಂದಿರಗಳಲ್ಲಿ ಜಿನಪ್ರತಿಮೆಗಳ ದರ್ಶನ ಪೂಜಾದಿಗಳನ್ನು ಮಾಡುತ್ತಿದ್ದರೂ, ತನ್ನ ಆತ್ಮೀಕ ಗುಣಗಳತ್ತ ದೃಷ್ಟಿಯಿರು ವುದಕ್ಕಾಗಿಯೇ ತನ್ನಲ್ಲಿರುವ ಆತ್ಮನ ಸಲುವಾಗಿ ಮಾಡುತ್ತಿರುತ್ತಾನೆ. ಜಿನ ಬಿಂಬವು ಜಡವಾಗಿದೆ. ಅದು ಕೇವಲ ಸ್ಥಾಪನಾರೂಪವಾಗಿದೆ, ಧ್ಯಾನ ನಿಮಿತ್ತ ಚಿತ್ರವಾಗಿದೆ. ಅದರಲ್ಲಿ ಸಾಕ್ಷಾತ್ ಜಿನೇಂದ್ರ ದೇವನಿಲ್ಲವು. ಹಿಂದೆ ತೀರ್ಥಂಕರರಾದವರೂ ಮತ್ತು ಅರಹಂತರಾದವರೂ ಈಗ ಸಿದ್ಧಕ್ಷೇತ್ರದಲ್ಲಿರು ವರು. ಈ ಭರತಕ್ಷೇತ್ರದ ಪಂಚಮಕಾಲದಲ್ಲಿ ತೀರ್ಥಂಕರರ ಉತ್ಪತ್ತಿ ಇಲ್ಲ. ಚತುರ್ಥಕಾಲದಲ್ಲಿ ತೀರ್ಥಂಕರರ ಮತ್ತು ಕೇವಲಿಗಳ ಉತ್ಪತ್ತಿ ಇದ್ದಾಗ್ಯೆ, ಸಮವಸರಣದಲ್ಲಾಗಲಿ, ಗಂಧಕುಟಿಯಲ್ಲಾಗಲಿ ಅವರ ದರ್ಶನವಾಗುತ್ತಿ ದ್ದರೂ, ಅಲ್ಲಿ ಅವರ ಶರೀರವೇ ದರ್ಶನವಾಗುತ್ತಿದ್ದಿತೇ ಹೊರತು ಆತ್ಮ ದರ್ಶನವಾಗುತ್ತಿರಲಿಲ್ಲ. ಆತ್ಮನು ಹೇಗಿರುವನೆಂಬುದನ್ನು ತಿಳಿಯಬೇಕಾದ ವರು ತನ್ನ ದೇಹದಲ್ಲಿ ವಿರಾಜಮಾನನಾದ ಆತ್ಮದೇವನನ್ನೇ ಧ್ಯಾನಿಸಬೇಕು. ಯಥಾರ್ಥವಾಗಿ ಯಾವನು ತನ್ನ ಆತ್ಮದೇವನ ಸ್ವಭಾವವನ್ನು ಗುರುತಿಸು ವನೋ, ಅವನೇ ಜಿನೇಂದ್ರದೇವನ ಆತ್ಮನನ್ನು ಕಂಡುಹಿಡಿಯಲು ಸಾಧ್ಯ ವಾಗುವುದು.

ತನ್ನ ಆತ್ಮಾರಾಧನೆಯೇ ನಿಜವಾದ ಆರಾಧನೆಯು. ಆತ್ಮನನ್ನು ಬಾಹ್ಯವಸ್ತುಗಳಲ್ಲಿ ಅನ್ವೇಷಿಸುವವನ ಗತಿಯು ಧನ ಸಂಪತ್ತಿಗಧಿಪತಿಯಾದ

ವನು ಭಿಕ್ಷೆಯೆತ್ತುವ ಭಿಕಾರಿಯಂತೆ ಮೂರ್ಖನೆಂದು ಗ್ರಂಥಕಾರರು ಹಾಸ್ಯವಾಗಿಯೇ ಹೇಳಿರುವರು.

ಒಂದು ಊರಿನಲ್ಲಿ ಕಡುಲೋಭಿಯಾದ ಧನವಂತನಿದ್ದನು. ಅವನು ತನ್ನ ಧನವನ್ನು ಭೂಮಿಯಲ್ಲಿ ಹೂತಿಟ್ಟಿದ್ದನು. ತನ್ನ ಮಗನಿಗೆ ಈ ಗುಟ್ಟನ್ನು ಕೂಡಾ ಹೇಳಲಿಲ್ಲವು. ಆದರೆ ಈ ವಿಷಯ ಅವನ ಹಳೆ ಮಿತ್ರನಿಗೆ ಮಾತ್ರ ಗೊತ್ತಿತ್ತು. ಹೀಗೆ ಕೆಲವು ಕಾಲಗಳ ನಂತರ ಆತನು ಸತ್ತು ಹೋಗಲು, ಮಗನು ತಾನು ಮಹಾ ನಿರ್ಧನನೆಂದು ಅತಿ ದೈನ್ಯದಿಂದ ಹೊಟ್ಟೆ ಹೊರೆಯುತ್ತಿದ್ದುದನ್ನು ಕಂಡ ಆ ತಂದೆಯ ಮಿತ್ರನು, 'ಏಕಪ್ಪಾ ದುಃಖಿಯಾಗಿರುವಿ? ನಿಮ್ಮಲ್ಲಿ ಧಾರಾಳ ಧನವಿದೆ' ಎನ್ನಲು, ಅದನ್ನು ತಿಳಿದ ಮಗನು ಬಹು ಸಂತೋಷದಿಂದ ಅದನ್ನು ಭೂಮಿಯಿಂದ ಅಗೆದು ತೆಗೆದು ಧನಪತಿಯಾದಾಗ, ದೀನ ದುಃಖಿಗಳಂತೆ ದೈನ್ಯತೆಯಿಂದಿರುವುದು ನಿಂತು ಹೋಯಿತು. ಇದರಂತೆ ತನ್ನಾತ್ಮದೇವನನ್ನು ಶರೀರದಲ್ಲಿ ಕಂಡಮೇಲೆ, ಬಾಹ್ಯವಸ್ತುಗಳಲ್ಲಿ ಮೋಹವುಂಟಾಗಲಾರದು. ಕಾರಣವಶಾತ್ ಅಶುಭ ಕ್ರಿಯೆಗಳಿಂದ ರಕ್ಷಣೆ ಪಡೆಯಲೋಸುಗ ಬಾಹ್ಯಕ್ರಿಯೆಗಳನ್ನು ಮಾಡುತ್ತಿದ್ದರೂ ಕೂಡ, ಅದನ್ನು ನಿರ್ವಾಣ ಮಾರ್ಗವೆಂದು ಒಪ್ಪದೆ, ಆತ್ಮ ದರ್ಶನವೇ ನಿರ್ವಾಣ ಮಾರ್ಗವೆಂದು ಸಮ್ಮತಿಸುವನು.

ಸಮಯಸಾರದಲ್ಲಿ ಹೇಳಿದ್ದಾರೆ:

**ಪರಮಟ್ಠಬಾಹಿರಾ ಜೇ ತೇ ಅಣ್ಣಾಣೇಣ ಪುಣ್ಣಮಿಚ್ಛಂತಿ |**
**ಸಂಸಾರಗಮಣಹೇದುಂ ವಿಮೋಕ್ಖಹೇದುಂ ಅಯಾಣಂತಾ ||೧೬೧||**

**ಭಾವಾರ್ಥ :** ಯಾವನು ಪರಮಾರ್ಥವನ್ನು, ನಿಶ್ಚಯಧರ್ಮವನ್ನು, ಮೋಕ್ಷಮಾರ್ಗವನ್ನು ತಿಳಿಯುವುದಿಲ್ಲವೋ, ಅವನು ಅಜ್ಞಾನದಿಂದ ಸಂಸಾರ ಪರಿಭ್ರಮಣಕ್ಕೆ ಕಾರಣವಾದ ಪುಣ್ಯವನ್ನೇ ಇಷ್ಟಪಡುತ್ತಾನಲ್ಲದೆ, ಅದನ್ನೇ ನಿರ್ವಾಣ ಮಾರ್ಗದ ಕಾರಣವೆಂದು ತಿಳಿಯುತ್ತಾನೆ.

ಸಮಯಸಾರ ಕಲಶದಲ್ಲಿ ಹೇಳಿರುತ್ತಾರೆ:

ಕ್ಲಿಶ್ಯಂತಾಂ ಸ್ವಯಮೇವ ದುಷ್ಕರತರೈರ್ಮೋಕ್ಷೋನ್ಮುಖೈಃ
ಕರ್ಮಭಿಃ
ಕ್ಲಿಶ್ಯಂತಾಂ [redacted] ಪರೇ ಮಹಾವ್ರತತಪೋಭಾರೇಣ ಭಗ್ನಾಶ್ಚಿರಂ।
ಸಾಕ್ಷಾನ್ಮೋಕ್ಷ ಇದಂ ನಿರಾಮಯಪದಂ ಸಂವೇದ್ಯಮಾನಂ ಸ್ವಯಂ
ಜ್ಞಾನಂ ಜ್ಞಾನಗುಣಂ ವಿನಾ ಕಥಮಪಿ ಪ್ರಾಪ್ತುಂ ಕ್ಷಮಂತೇ
ನ ಹಿ ॥೧೦-೭॥

**ಭಾವಾರ್ಥ:** ಅತ್ಯಂತ ಕಠಿಣವಾದ ಮೋಕ್ಷಮಾರ್ಗದಿಂದ ವಿರುದ್ಧವೂ ಅಸತ್ಯವೂ ಆದ ವ್ಯವಹಾರರೂಪ ಕ್ರಿಯೆಗಳನ್ನು ಆಚರಿಸಿ, ಕಷ್ಟವನ್ನನುಭವಿಸುವುದಾದರೆ ಅನುಭವಿಸು ಅಥವಾ ಬಹುಕಾಲ ಜೈನೀವ್ರತ (ಮಹಾವ್ರತ) ದ ಮತ್ತು ತಪಸ್ಸಿನ ಭಾರದಿಂದ ಪೀಡಿತನಾಗಿ ಕಷ್ಟವನ್ನು ಭೋಗಿಸುತ್ತಿದ್ದರೆ ಭೋಗಿಸು. ಆದರೂ ಮೋಕ್ಷಪ್ರಾಪ್ತಿಯಾಗಲಾರದು. ಯಾಕೆಂದರೆ ಮೋಕ್ಷವು ನಿರಾಕುಲಪದವೂ, ಜ್ಞಾನಮಯವೂ, ಸ್ವಯಂ ಅನುಭವಗೋಚರವೂ ಆಗಿರುವುದರಿಂದ, ಆತ್ಮಜ್ಞಾನವಿಲ್ಲದೆ ಅದರ ಪ್ರಾಪ್ತಿಯಾಗುವುದು ಕಷ್ಟವು.



## ನಿನ್ನ ದೇಹದಲ್ಲಿಯೇ ಸಮಭಾವನಾರೂಪ ಮನಸ್ಸಿನಿಂದ ಜಿನೇಂದ್ರನನ್ನು ನೋಡು

**ಮೂಢಾ ದೇವಲಿ ದೇಉ ಣವಿ ಣವಿ ಸಿಲಿ ಲಿಪ್ಪಇ ಚಿತ್ತಿ ।**
**ದೇಹಾ-ದೇವಲಿ ದೇಉ ಜಿಣು ಸೋ ಬುಜ್ಝಹಿ ಸಮಿಚಿತ್ತಿ ॥೪೪॥**

**ಅನ್ವಯಾರ್ಥ :** ಮೂಢಾ – ಎಲೈ ಮೂಢ ಪ್ರಾಣಿಯೇ! ದೇಉ ದೇವಲಿ ಣವಿ–ಪರಮಾತ್ಮನು ಯಾವ ದೇವಾಲಯದಲ್ಲಿಯೂ ಇಲ್ಲವು. ಸಿಲಿ ಲಿಪ್ಪಇ ಚಿತ್ತಿ ಣವಿ–ಯಾವ ಪಾಷಾಣದಲ್ಲಾಗಲಿ, ಲೆಪ್ಪದಲ್ಲಾಗಲಿ ಅಥವಾ ಚಿತ್ರದಲ್ಲಾಗಲಿ ಇಲ್ಲವು. ಜಿಣು ದೇಉ ದೇಹಾ ದೇವಲಿ–ಪರಮಾತ್ಮನಾದ ಜಿನೇಂದ್ರನು ಶರೀರ ರೂಪವಾದ ದೇವಾಲಯದಲ್ಲಿಯೇ ಇರುತ್ತಾನೆ. ಸಮಿ ಚಿತ್ತಿ ಸೋ ಬುಜ್ಝಹಿ–ಅಂತಹ ಪರಮಾತ್ಮನನ್ನು ಸಮಭಾವನೆಯಿಂದ ಸಾಕ್ಷಾತ್ಕರಿಸು.

**ಭಾವಾರ್ಥ :** ಇಲ್ಲಿಯು ಕೂಡಾ ಪುಷ್ಟೀಕರಿಸುವುದೇನೆಂದರೆ ಪರಮಾತ್ಮನಾದ ಜಿನದೇವನು ಇಟ್ಟಿಗೆಗಳಿಂದಲೂ, ಕಲ್ಲುಗಳಿಂದಲೂ ಕಟ್ಟಲ್ಪಟ್ಟ ದೇವಾಲಯದಲ್ಲಿ ಸಿಕ್ಕಲಾರನು. ದೇವರ ದರ್ಶನವು ಯಾವ ಪಾಷಾಣ, ಧಾತು ಅಥವಾ ಮಣ್ಣಿನ ಮೂರ್ತಿಗಳಲ್ಲಾಗಲಿ ಚಿತ್ರಪಟಗಳಲ್ಲಾಗಲಿ ಆಗಲಾರದು. ಸ್ವಾಭಾವಿಕವಾಗಿ ತನ್ನಾತ್ಮನೇ ಜಿನೇಂದ್ರದೇವನಾಗಿರುವನು.

ಜ್ಞಾನಿಯಾದವನು ತನ್ನಲ್ಲಿಯೇ ದರ್ಶನ ಮಾಡಬಹುದು. ಯದಿ ಅವನು ರಾಗದ್ವೇಷಗಳನ್ನು ಬಿಟ್ಟು, ಶುಭಾಶುಭ ರಾಗವನ್ನು ತ್ಯಜಿಸಿ, ವೀತರಾಗಭಾವನೆಯುಳ್ಳವನಾಗಿ, ತನ್ನನ್ನು ಎಂಟು ಕರ್ಮಗಳಿಂದ ರಹಿತನೆಂದೂ. ಶರೀರರಹಿತನೆಂದೂ ಮತ್ತು ರಾಗಾದಿ ವಿಕಾರವಿಲ್ಲದವನೆಂದೂ ನೋಡಲಿ. ಆಗ ಜ್ಞಾನಿಯು ಪರಮಾತ್ಮನ ದರ್ಶನವನ್ನು ಮಾಡಲು ಸಮರ್ಥನಾಗುತ್ತಾನೆ.

ಜಿನಮಂದಿರಗಳನ್ನು ನಿರಾಕುಲವಾದ ಸ್ಥಾನಗಳಲ್ಲಿಯೇ ಕಟ್ಟಿಸಬೇಕೆಂಬ ಉದ್ದೇಶವಿದೆ. ಗೃಹಸ್ಥನಿಗಾಗಲಿ, ಅಭ್ಯಾಸಿಯಾದ ಸಾಧುವಿಗಾಗಲಿ ಮಂದಿರದಲ್ಲಿ ಕುಳಿತುಕೊಂಡು ಸಾಂಸಾರಿಕ ಕಾರಣಗಳಿಂದ ಬಿಡುಗಡೆಯಾಗುವುದ

ಕ್ಕೋಸ್ಕರವೂ, ವಿಕಾರಭಾವಗಳಿಂದ ಮನಸ್ಸನ್ನು ತಡೆಯುವುದಕ್ಕೋಸ್ಕರವೂ. ಸಾಮಾಯಿಕದ ಮೂಲಕ ಆತ್ಮದರ್ಶನವನ್ನು ಪಡೆಯುವುದಕ್ಕೋಸ್ಕರವೂ ಮತ್ತು ಆಧ್ಯಾತ್ಮಿಕ ಶಾಸ್ತ್ರಪಠಣ ಅಥವಾ ಮನನ ಮೂಲಕ ಧ್ಯಾನಮಯ ಮೂರ್ತಿಯ ದರ್ಶನಮಾಡುವುದಕ್ಕೋಸ್ಕರವೂ ಜಿನಮಂದಿರಗಳ ಅವಶ್ಯಕತೆ ಇದೆ. ಪಾಷಾಣ ಅಥವಾ ಧಾತುಗಳಿಂದ ನಿರ್ಮಿತವಾದ ಬಿಂಬಗಳು ಧ್ಯಾನ ಮಯವೂ, ವೈರಾಗ್ಯಪೂರ್ಣಭಾವಗಳನ್ನು ಸ್ಮರಿಸುವುದಕ್ಕಾಗಿಯೂ ಇವೆ. ಆತ್ಮದರ್ಶಕವು ತನ್ನ ಶರೀರವೇ ಆಗಿರುತ್ತದೆ.

ಆತ್ಮದೇವನು ವಿರಾಜಮಾನನಾಗಿರುವ ಶರೀರವೇ ಇದು ಎಂಬ ಪೂರ್ಣ ನಂಬಿಕೆಯೂ, ಆತನ ಧಾರಣಾ ಶಕ್ತಿಯನ್ನು ಪ್ರಚುರಗೊಳಿಸುವುದಕ್ಕಾಗಿ ಧ್ಯಾನಾಸ್ಥಮೂರ್ತಿಯ ದರ್ಶನವೂ ಮತ್ತು ಗುಣಾನುವಾದ ರೂಪ ಪೂಜ ನವೂ ಕೂಡ ನಿಮಿತ್ತಕಾರಣಗಳಾಗಿವೆ. ನಿಮಿತ್ತಕಾರಣವು ಉಪಾದಾನ ಕಾರಣವನ್ನು ವೃದ್ಧಿಗೊಳಿಸುವ ಪ್ರಧಾನ ಕಾರಣವಾಗಿರುತ್ತದೆ. ರಾಗಕಾರೀ ನಿಮಿತ್ತಕಾರಣಗಳು ರಾಗಭಾವವನ್ನೂ ಮತ್ತು ವೀತರಾಗ ನಿಮಿತ್ತಕಾರಣ ಗಳು ವೀತರಾಗ ಭಾವವನ್ನೂ ವೃದ್ಧಿಗೊಳಿಸುತ್ತವೆ. ಅಭ್ಯಾಸೀ ಸಾಧಕನು ಸದಾಕಾಲ ಭಾವಗಳ ನಿರ್ಮಲತೆಗಾಗಿ ನಿಮಿತ್ತ ಕಾರಣಗಳ ಪ್ರಾಪ್ತಿಗೋಸ್ಕರ, ಬಾಧಕ ನಿಮಿತ್ತಗಳಿಂದ ರಕ್ಷಣೆ ಪಡೆಯುವುದಕ್ಕೋಸ್ಕರ ಪ್ರಯತ್ನಿಸತಕ್ಕದ್ದು.

ತತ್ವಾನುಶಾಸನದಲ್ಲಿ ಹೇಳಿದೆ:

**ಸಂಗತ್ಯಾಗಃ ಕಷಾಯಾಣಾಂ ನಿಗ್ರಹೋ ವ್ರತಧಾರಣಂ।**
**ಮನೋಽಕ್ಷಾಣಾಂ ಜಯಶ್ಚೇತಿ ಸಾಮಗ್ರೀ ಧ್ಯಾನಜನ್ಮನೇ ॥೭೫॥**

**ಭಾವಾರ್ಥ:** ಪರಿಗ್ರಹಗಳ ತ್ಯಾಗವೂ, ಕಷಾಯಗಳ ನಿರೋಧವೂ, ಅಹಿಂಸಾದಿ ವ್ರತಗಳ ಧಾರಣೆಯೂ, ಮನಸ್ಸು ಮತ್ತು ಇಂದ್ರಿಯಗಳ ಜಯವೂ ಈ ನಾಲ್ಕು ಧ್ಯಾನದ ಉತ್ಪತ್ತಿಗೆ ಮುಖ್ಯ ಸಾಮಗ್ರಿಗಳಾಗಿವೆ.

**ಸ್ವಾಧ್ಯಾಯಾದ್ಧ್ಯಾನಮಧ್ಯಾಸ್ತಾಂ ಧ್ಯಾನಾತ್ಸ್ವಾಧ್ಯಾಯಮಾಮನೇತ್।**
**ಧ್ಯಾನಸ್ವಾಧ್ಯಾಯಸಂಪತ್ತ್ಯಾ ಪರಮಾತ್ಮಾ ಪ್ರಕಾಶತೇ ॥೮೧॥**

**ಭಾವಾರ್ಥ:** ಶಾಸ್ತ್ರಗಳ ಮನನಮಾಡುತ್ತ ಮಾಡುತ್ತ ಧ್ಯಾನದಲ್ಲಿ ಮಗ್ನನಾಗು. ಧ್ಯಾನದಲ್ಲಿ ಮನಸ್ಸು ನಿಲ್ಲದಿದ್ದರೆ, ಸ್ವಾಧ್ಯಾಯದಲ್ಲಿಯೇ ಮನಸ್ಸನ್ನಿಡು. ಧ್ಯಾನ ಮತ್ತು ಸ್ವಾಧ್ಯಾಯಗಳ ಲಾಭದಿಂದಲೇ ಪರಮಾತ್ಮ ಪ್ರದೀಪವು ಪ್ರಜ್ವಲಿಸುವುದು.

**ಶೂನ್ಯಾಗಾರೇ ಗುಹಾಯಾಂ ವಾ ದಿವಾ ವಾ ಯದಿ ವಾ ನಿಶಿ।**
**ಸ್ತ್ರೀಪಶುಕ್ಲೀಬಜೀವಾನಾಂ ಕ್ಷುದ್ರಾಣಾಮಪ್ಯಗೋಚರೇ ॥೯೦॥**

**ಅನ್ಯತ್ರ ವಾ ಕ್ವಚಿದ್ದೇಶೇ ಪ್ರಶಸ್ತೇ ಪ್ರಾಸುಕೇ ಸಮೇ।**
**ಚೇತನಾಚೇತನಾಶೇಷಧ್ಯಾನವಿಘ್ನವಿವರ್ಜಿತೇ ॥೯೧॥**

**ಭೂತಲೇ ವಾ ಶಿಲಾಪಟ್ಟೇ ಸುಖಾಸೀನಃ ಸ್ಥಿತೋಽಥವಾ।**
**ಸಮಮೃಜ್ವಾಯತಂ ಗಾತ್ರಂ ನಿಃಕಂಪಾವಯವಂ ದಧತ್ ॥೯೨॥**

**ನಾಸಾಗ್ರನ್ಯಸ್ತನಿಷ್ಪಂದಲೋಚನೋ ಮಂದಮುಚ್ಛ್ವಸನ್।**
**ದ್ವಾತ್ರಿಂಶದ್ದೋಷನಿರ್ಮುಕ್ತಕಾಯೋತ್ಸರ್ಗವ್ಯವಸ್ಥಿತಃ ॥೯೩॥**

**ಪ್ರತ್ಯಾಹೃತ್ಯಾಕ್ಷಲುಂಟಾಕಾಂಸ್ತದರ್ಥೇಭ್ಯಃ ಪ್ರಯತ್ನತಃ।**
**ಚಿಂತಾಂ ಚಾಕೃಷ್ಯ ಸರ್ವೇಭ್ಯೋ ನಿರುಧ್ಯ ಧ್ಯೇಯವಸ್ತುನಿ ॥೯೪॥**

**ನಿರಸ್ತನಿದ್ರೋ ನಿರ್ಭೀತಿರ್ನಿರಾಲಸ್ಯೋ ನಿರಂತರಂ।**
**ಸ್ವರೂಪಂ ಪರರೂಪಂ ವಾ ಧ್ಯಾಯೇದಂತರ್ವಿಶುದ್ಧಯೇ ॥೯೫॥**

**ಭಾವಾರ್ಥ:** ರಾತ್ರಿಯಲ್ಲಾಗಲಿ, ಹಗಲಿನಲ್ಲಾಗಲಿ, ನಿರ್ಜನಸ್ಥಾನದಲ್ಲಾಗಲಿ, ಗುಹೆಯಲ್ಲಾಗಲಿ, ಸ್ತ್ರೀ, ಪಶು, ನಪುಂಸಕ ಜೀವಗಳಿಗೆ ಮತ್ತು ಕ್ಷುದ್ರ ಜಂತುಗಳಿಗೆ ಗೊತ್ತಿಲ್ಲದಿರುವ ಸ್ಥಳದಲ್ಲಾಗಲೀ, ಜೀವರಹಿತವೂ, ಸಮತಲವೂ ಆದ ಸ್ಥಾನದಲ್ಲಾಗಲೀ, ಚೇತನಾಚೇತನ ವಸ್ತುಗಳ ಬಾಧೆ ಇಲ್ಲದ ಭೂಮಿಯಲ್ಲಾಗಲೀ ಅಥವಾ ಶಿಲಾಪಟ್ಟಣದಲ್ಲಿಯಾಗಲೀ, ಸುಖಾಸನದಲ್ಲಿ ಕುಳಿತುಕೊಂಡೋ ಅಥವಾ ನಿಂತುಕೊಂಡೋ ನಾಸಾಗ್ರದೃಷ್ಟಿಯುಳ್ಳವನಾಗಿ, ಮಂದಮಂದವಾಗಿ ಶ್ವಾಸೋಚ್ಛ್ವಾಸ ಉಳ್ಳವನಾಗಿ, ಮುವತ್ತೆರಡು ಕಾಯೋತ್ಸರ್ಗ ಸಂಬಂಧವಾದ ದೋಷಗಳಿಂದ ರಹಿತನಾಗಿ, ಪಂಚೇಂದ್ರಿಯಗಳೆಂಬ ಕಳ್ಳರನ್ನು ವಿಷಯತ್ತ ಹೋಗಗೊಡದೆ, ಧ್ಯೇಯವಸ್ತುವಿನಲ್ಲಿಯೇ ತನ್ಮಯ

ನಾಗಿ, ನಿದ್ರಾದೇವಿಯನ್ನು ಜಯಿಸಿ, ನಿರ್ಭಯನಾಗಿ ಆಲಸ್ಯ ರಹಿತನಾಗಿ, ನಿರಂತರ ತನ್ನಾತ್ಮನ ಶುದ್ಧ ಸ್ವರೂಪವನ್ನೋ ಅಥವಾ ಪರ ಸಿದ್ಧಾತ್ಮರ ಸ್ವರೂಪವನ್ನೋ ಅಂತರಂಗ ಶುದ್ಧಿಗಾಗಿ ಧ್ಯಾನಿಸಬೇಕು.

ಸಮಾಧಿಶತಕದಲ್ಲಿ ಹೇಳಿರುತ್ತಾರೆ:

**ರಾಗದ್ವೇಷಾದಿಕಲ್ಲೋಲೈರಲೋಲಂ ಯನ್ಮನೋಜಲಂ ।**
**ಸ ಪಶ್ಯತ್ಯಾತ್ಮನಸ್ತತ್ತ್ವಂ ಸ ತತ್ತ್ವಂ ನೇತರೋ ಜನಃ ॥ ೩೫ ॥**

**ಭಾವಾರ್ಥ** : ಯಾವ ಧ್ಯಾನಿಯು ರಾಗದ್ವೇಷಾದಿ ತೆರೆಮಾಲೆಗಳಿಂದ ಚಂಚಲ ಚಿತ್ತನಾಗುವುದಿಲ್ಲವೋ ಅವನೇ ಆತ್ಮಾನುಭವದ ರಸಾಮೃತವನ್ನು ಪಾನಮಾಡಲು ಸಮರ್ಥನಾಗುತ್ತಾನಲ್ಲದೆ ರಾಗದ್ವೇಷಿಯಲ್ಲವು.



## ಶರೀರರೂಪ ಮಂದಿರದಲ್ಲಿ ಪರಮಾತ್ಮನ ದರ್ಶನ ಮಾಡುವವನೇ ಜ್ಞಾನಿಯು

**ತಿತ್ಥಇ ದೇಉಲಿ ದೇಉ ಜಿಣು ಸವ್ವು ವಿ ಕೋಇ ಭಣೇಇ ।**
**ದೇಹಾ-ದೇಉಲಿ ಜೋ ಮುಣಇ ಸೋ ಬುಹು ಕೋ ವಿ ಹವೇಇ ॥ ೪೫ ॥**

**ಅನ್ವಯಾರ್ಥ:** ಸವ್ವು ವಿ ಕೋಇ ಭಣೇಇ–ಸರ್ವರು ಹೇಳುತ್ತಾರೇನೆಂದರೆ, ತಿತ್ಥಇ ದೇಉಲಿ ದೇಉ ಜಿಣು–ತೀರ್ಥಕ್ಷೇತ್ರದಲ್ಲಾಗಲಿ, ಮಂದಿರದಲ್ಲಾಗಲಿ ಜಿನದೇವನಿರುತ್ತಾನೆಂದು. ಜೋ ದೇಹಾ-ದೇಉಲಿ ಮುಣಇ–ಯಾರಾದರೂ ದೇಹರೂಪ ದೇವಾಲಯದಲ್ಲಿ ಜಿನದೇವನನ್ನು ನೋಡುವುದಾಗಲಿ, ಒಪ್ಪಿಕೊಳ್ಳುವುದಾಗಲಿ, ಸೋ ಕೋ ವಿ ಬುಹು ಹವೇಇ–ಆದು ಜ್ಞಾನಿಗೆ ಸಾಧ್ಯವು.

**ಭಾವಾರ್ಥ:** ಲೋಕವಲ್ಲಿ ವ್ಯವಹಾರವನ್ನೇ ಸತ್ಯವೆಂದು ತಿಳಿಯುವವರ ಸಂಖ್ಯೆಯು ಹೆಚ್ಚು. ಎಲ್ಲರೂ ಹೇಳುವುದು ಗಡಿಗೆ ಮಡಿಕೆಗಳು

ಕುಂಬಾರನಿಂದ ಆಗಿದೆಯೆಂದು. ಆದರೆ ಅವು ಮಣ್ಣಿನಿಂದ ಆಗಿದೆಯೆಂದು ಯಾರೂ ಹೇಳುವುದಿಲ್ಲವು. ನಿಜವಾಗಿಯೂ ಮಡಿಕೆಯಲ್ಲಿ ಮಣ್ಣಿನ ಆಕಾರವು ಇರುವುದಲ್ಲದೆ ಮಣ್ಣು ಮಡಿಕೆಯ ರೂಪವನ್ನು ತಾಳಿದೆ, ಅಲ್ಲದೆ ಕುಂಬಾರನ ಯೋಗವು ಮತ್ತು ಉಪಯೋಗವು ಮಾತ್ರ ನಿಮಿತ್ರವಾಗಿರುವಂತೆ ತೀರ್ಥಸ್ವರೂಪಗಳಾದ ಜಿನಪ್ರತಿಮೆಗಳು ಕೇವಲ ನಿಮಿತ್ತಗಳಾಗಿವೆ. ಅವುಗಳ ಮೂಲಕ ತನ್ನ ಶುದ್ಧಾತ್ಮ, ಪರಮಾತ್ಮ, ಅರಹಂತ ಅಥವಾ ಸಿದ್ಧಾತ್ಮನ ಸ್ಮರಣೆಯಾಗುತ್ತದೆ. ಯಥಾರ್ಥವಾಗಿ ಕ್ಷೇತ್ರಗಳು, ಪ್ರತಿಮೆಗಳು ಮತ್ತು ಮಂದಿರಗಳೆಲ್ಲವೂ ಅಚೇತನ, ಜಡ ಸ್ವರೂಪಗಳಾಗಿದ್ದರೂ ಇವು ಚೇತನದ ಸ್ಮರಣೆಗೈಯಲು ಪ್ರಬಲ ಕಾರಣಗಳಾಗಿವೆ. ಆದ್ದರಿಂದ ಅವುಗಳ ಭಕ್ತಿಯಿಂದ ಪರಮಾತ್ಮನ ಭಕ್ತಿಯು ಮಾಡಲ್ಪಡುವುದು. ಮಿಥ್ಯಾದೃಷ್ಟೀ ಅಜ್ಞಾನಿಯು ವಸ್ತುಸ್ವರೂಪವನ್ನರಿಯದೆ ಮೂರ್ತಿಯನ್ನೇ ದೇವರೆಂದು ತಿಳಿದು ಪೂಜಿಸುವುದಲ್ಲದೆ ಇದು ಅರಹಂತರ ಅಥವಾ ಸಿದ್ಧರ ಧ್ಯಾನಸ್ಥ ಭಾವದ ಆಕೃತಿಯೆಂದು ವಿಚಾರಿಸಲಾರನು. ಇದು ಭಾವಸ್ಥಾಪನೆಯಾಗಿರುವುದಲ್ಲದೆ ಸಾಕ್ಷಾತ್ ದೇವನಲ್ಲವು.

ಆದರಲ್ಲಿ ಭಕ್ತಿಯನ್ನಿಟ್ಟ ಭಕ್ತನು ಅದು ಯಾರ ಮೂರ್ತಿಯಿರುವುದೋ ಅವರ ಗುಣಗಳನ್ನೇ ಭಜಿಸುತ್ತಾನೆ. ಕಿಂತು ಪಾಷಾಣ, ಧಾತು ಮೂರ್ತಿಗಳ ಸ್ತುತಿಯನ್ನು ಮಾಡುವುದಿಲ್ಲವೆಂಬ ವಿಚಾರವು ಯಾವ ಆತ್ಮನಲ್ಲಿ ಉದಯಿಸುವುದೋ ಅಂತಹ ಆತ್ಮನೇ ಸ್ವಾಭಾವಿಕವಾಗಿ ಪರಮಾತ್ಮನು. ಔದಾರಿಕ, ತೈಜಸ ಮತ್ತು ಕಾರ್ಮಣಗಳೆಂಬ ಶರೀರಗಳಲ್ಲಡಗಿರುವ ಆತ್ಮನೇ ಸಾಕ್ಷಾತ್ ಪರಮಾತ್ಮನಾಗಿರುತ್ತಾನೆ. ಅವನೇ ನಾನು ಎಂಬ ಶ್ರದ್ಧಾನವು, ಪರಿಣಮಣ ರೂಪ ವಿಚಾರವು ಮಿಥ್ಯಾದೃಷ್ಟಿಯಲ್ಲಿ ಉಂಟಾಗಲಾರದು.

ಸಮ್ಯಗ್ದೃಷ್ಟಿಯು ಸದಾಕಾಲದಲ್ಲಿ "ನಾನು ನನ್ನಲ್ಲಿ ಶುದ್ಧ ನಿಶ್ಚಯದಿಂದ ನನ್ನ ಆತ್ಮನೇ ಪರಮಾತ್ಮ ಸ್ವರೂಪನೆಂದು ಕಾಣುತ್ತೇನೆ. ಇದೇ ಮೋಕ್ಷಮಾರ್ಗದ ಮಹೋಪಾಯವು" ಎಂದು ವಿಚಾರಿಸುತ್ತಾನೆ. ಯಾರಾದರೂ ಸಿಂಹದ ಮೂರ್ತಿಯನ್ನು ಸಾಕ್ಷಾತ್ ಸಿಂಹವೆಂದು ಪರಿಭಾವಿಸಿ ಪೂಜಿಸುತ್ತಾ, ತನ್ನನ್ನು ಭಕ್ಷಿಸುವುದೆಂದು ವಿಚಾರಿಸುತ್ತಿದ್ದರೆ ಆತನು ನಿಜವಾಗಿ ಮೂಢನೇ ಸರಿ. ಜ್ಞಾನಿಯು ಸಿಂಹದ ಮೂರ್ತಿಯನ್ನು ಸಿಂಹದ ಆಕಾರ

ವೆಂದೂ, ಅದರ ಕ್ರೂರತೆಯೂ, ಭೀಕರ ಸ್ವಭಾವವೂ ದೃಷ್ಟಿಗೋಚರವಾಗಲು ಸಾಧನಮಾತ್ರವಾಗಿದೆಯೆಂದೂ, ನಿಜವಾಗಿಯೂ ಸಿಂಹವಲ್ಲವೆಂದೂ ವಿಚಾರಿಸುತ್ತಾನೆ. ಅಷ್ಟೇ ಅಲ್ಲ ಸಿಂಹದ ಸ್ವರೂಪವನ್ನು ತೋರಿಸಲು ಸಿಂಹದ ಮೂರ್ತಿಯು ಪರಮ ಸಹಾಯವಾಗಿರುತ್ತದೆ. ಶಿಷ್ಯರಿಗೆ ಸಿಂಹದ ಆಕಾರದಿಂದ ಅದರ ಕ್ರೂರತೆಯ ವಿಷಯವಾಗಿ ಜ್ಞಾನವಿರುವುದಿಲ್ಲವು. ಅದರ ಜ್ಞಾನವನ್ನುಂಟುಮಾಡಿಕೊಳ್ಳಲು ಇದು ಪ್ರಯೋಜನಕರವಾಗಿದೆ.

ಈ ಪ್ರಕಾರವಾಗಿ ಎಷ್ಟರವರೆಗೆ ತನ್ನಂತರಂಗದಲ್ಲಿ ಪರಮಾತ್ಮನ ದರ್ಶನವಾಗಲಾರದೋ, ಅಷ್ಟರವರೆವಿಗೆ ಈ ಜಿನಬಿಂಬಗಳ ದರ್ಶನವು ನಿಮಿತ್ತಕಾರಣವಾಗಿದೆ. ಮೂರ್ತಿಯನ್ನು ಮೂರ್ತಿಯೆಂದೂ, ಪರಮಾತ್ಮನಲ್ಲವೆಂದೂ ತಿಳಿಯುವುದೇ ಯಥಾರ್ಥಜ್ಞಾನವು. ಕೇವಲ ವ್ಯವಹಾರದಲ್ಲಿ ಮಗ್ನನಾಗಿ ಮೂಲತತ್ವವನ್ನು ಗುರುತಿಸಲಾರನು. ಇಲ್ಲಿ ಆಚಾರ್ಯರು ಮೂಲತತ್ವಗಳಲ್ಲಿ ಲಕ್ಷ್ಯವಿಡಬೇಕೆಂದು ಸೂಚಿಸಿರುತ್ತಾರೆ. ಏನೆಂದರೆ "ಎಲೈ ಯೋಗಿಯೇ! ಅಂತರಂಗದಲ್ಲಿ ಲಕ್ಷ್ಯವಿಡು. ನಿನ್ನಲ್ಲಿರುವ ರಾಗ-ದ್ವೇಷಗಳು ನಾಶವಾಗಿ ಸಮಭಾವನೆಯುಂಟಾದೊಡನೆ ಪರಮಾತ್ಮ ಪ್ರಾಪ್ತಿಯಾಗುತ್ತದೆ. ವ್ಯವಹಾರವು ಮೂಲತತ್ವವನ್ನು ಸ್ಪಷ್ಟೀಕರಿಸದ ಅಭೂತಾರ್ಥವೂ. ಅಸತ್ಯಾರ್ಥವೂ ಆಗಿರುತ್ತದೆ".

ವ್ಯವಹಾರದಲ್ಲಿ ಜೀವನು ನಾರಕೀ, ಪಶು, ಮನುಷ್ಯ, ದೇವನೆಂದು ಹೇಳಲ್ಪಟ್ಟರೂ, ನಿಶ್ಚಯನಯದಿಂದ ಜೀವನು ನಾರಕಿಯೂ. ತಿರ್ಯಂಚನೂ, ಮನುಷ್ಯನೂ, ದೇವನೂ ಅಲ್ಲವು. ವ್ಯವಹಾರ ನಯದಿಂದ ವ್ಯವಹಾರವನ್ನು ನಡೆಯಿಸಲು ಕಬ್ಬಿಣದಿಂದ ನಿರ್ಮಿತವಾದ ಖಡ್ಗವು ಚಿನ್ನದ ಒರೆಯಲ್ಲಿಟ್ಟ ಮಾತ್ರಕ್ಕೆ ಚಿನ್ನದ ಖಡ್ಗವೆಂದೂ, ಬೆಳ್ಳಿಯ ಒರೆಯಲ್ಲಿಟ್ಟ ಮಾತ್ರಕ್ಕೆ ಬೆಳ್ಳಿಯ ಖಡ್ಗವೆಂದೂ, ಹಿತ್ತಾಳೆಯ ಒರೆಯಲ್ಲಿಟ್ಟ ಮಾತ್ರಕ್ಕೆ ಹಿತ್ತಾಳೆಯ ಖಡ್ಗವೆಂದೂ ಹೇಳಿಸಿಕೊಳ್ಳುವಂತೆ, ಶರೀರ ಸಂಯೋಗದಿಂದ, ವ್ಯವಹಾರನಯದ ಅಪೇಕ್ಷೆಯಿಂದ ವ್ಯವಹಾರಗಳನ್ನು ನಡೆಯಿಸುವುದಕ್ಕೆ ಭೇದಮಾಡಲ್ಪಟ್ಟಿದೆ. ಆದರೂ ಅದು ಸತ್ಯವಲ್ಲ. ಎಲ್ಲಾ ಖಡ್ಗಗಳು ಒಂದೇ ವಿಧವೆಂದೂ ತಿಳಿಯಬೇಕು. ಅವುಗಳಲ್ಲಿ ಭೇದ ಕಲ್ಪನೆಮಾಡುವುದಕ್ಕಾಗಿ ಚಿನ್ನ, ಬೆಳ್ಳಿ, ಹಿತ್ತಾಳಿ ಮೊದಲಾದವುಗಳ ಖಡ್ಗಗಳೆಂದು ಹೇಳಲೇಬೇಕಾಗಿದೆ. ಭೇದರೂಪ ಕಥನ

ವನ್ನು ಕೇಳಿದರೂ ಕೂಡ, ಖಡ್ಗವನ್ನು ಒಂದೇ ರೂಪದಿಂದ ನೋಡುವವನೂ, ಅವರ ಚಿನ್ನ, ಬೆಳ್ಳಿ, ಹಿತ್ತಾಳೆಯ ಮುಸುಕನ್ನು ನೋಡಿ ಖಡ್ಗವು ಚಿನ್ನ, ಬೆಳ್ಳಿ ಹಿತ್ತಾಳೆಯ ರೂಪವಲ್ಲವೆಂದು ವಿಚಾರಿಸುವವನೂ ನಿಜವಾದ ಜ್ಞಾನಿಯು, ಇದೇ ರೀತಿಯಾಗಿ ಯಾರು ತನ್ನ ಶರೀರರೂಪ ಮಂದಿರದಲ್ಲಿ ವಿರಾಜಮಾನನಾದ ಪರಮಾತ್ಮ ದೇವನೇ ತಾನೆಂದೂ, ತಾನು ಮಾನವನಲ್ಲವೆಂದೂ, ಶರೀರವು ಮಾತ್ರ ಮಾನವ ರೂಪವೆಂದೂ, ಆತ್ಮನು ಮಾನವನಲ್ಲವೆಂದೂ ತಿಳಿಯುತ್ತಾನೋ ಆತನೇ ಸತ್ಯವೂ, ಯಥಾರ್ಥವೂ ಆದ ಜ್ಞಾನಿಯಾಗಿರುವನು.

ಪುರುಷಾರ್ಥ ಸಿಧ್ಯುಪಾಯದಲ್ಲಿ ಹೇಳಿರುತ್ತಾರೆ :

**ನಿಶ್ಚಯಮಿಹ ಭೂತಾರ್ಥಂ ವ್ಯವಹಾರಂ ವರ್ಣಯಂತ್ಯಭೂತಾರ್ಥಂ।**
**ಭೂತಾರ್ಥಬೋಧವಿಮುಖಃ ಪ್ರಾಯಃ ಸರ್ವೋಽಪಿ ಸಂಸಾರಃ ॥ ೫ ॥**

**ಮಾಣವಕ ಏವ ಸಿಂಹೋ ಯಥಾ ಭವತ್ಯನವಗೀತಸಿಂಹಸ್ಯ।**
**ವ್ಯವಹಾರ ಏವ ಹಿ ತಥಾ ನಿಶ್ಚಯತಾಂ ಯಾತ್ಯನಿಶ್ಚಯಜ್ಞಸ್ಯ ॥ ೬ ॥**

**ಭಾವಾರ್ಥ :** ಯಾವಾಗಲು ನಿಶ್ಚಯನಯವು ಯಥಾರ್ಥ ವಸ್ತು ಸ್ವರೂಪವನ್ನು ಪ್ರತಿಪಾದಿಸುವುದಲ್ಲದೆ. ವ್ಯವಹಾರನಯವು ಪ್ರತಿಪಾದಿಸಲಾರದು. ಆದ್ದರಿಂದಲೇ ಸರ್ವಜ್ಞ ಪರಮಾತ್ಮರು ನಿಶ್ಚಯನಯವನ್ನು ಭೂತಾರ್ಥವೆಂದು, ವ್ಯವಹಾರನಯವನ್ನು ಅಭೂತಾರ್ಥವೆಂದು ಹೇಳಿರುತ್ತಾರೆ, ಹೇಳುತ್ತಾರೆ. ಪ್ರಾಯಶಃ ಸಂಸಾರಿ ಜೀವಗಳು ಈ ಭೂತಾರ್ಥ ನಿಶ್ಚಯಜ್ಞಾನದಿಂದ ದೂರವಿರುತ್ತಾರೆ. ಯಾವನೊಬ್ಬ ಬಾಲಕನಿಗೆ ಬೆಕ್ಕನ್ನು ತೋರಿಸಿ ಸಿಂಹವೆಂದು ವರ್ಣಿಸಿದರೆ ಅವನು ಬೆಕ್ಕನ್ನು ನೋಡಿದಾಗಲೆಲ್ಲಾ ಅದನ್ನು ಸಿಂಹವೆಂದೇ ಭಾವಿಸುವಂತೆ, ನಿಶ್ಚಯನಯವನ್ನು ತಿಳಿಯದವನು ವ್ಯವಹಾರವನ್ನೇ ನಿಶ್ಚಯವೆಂದು ತಿಳಿಯುತ್ತಾನೆ. ಅವನಿಗೆ ಎಂದೆಂದಿಗೂ ಸತ್ಯದ ಪರೀಕ್ಷೆಯು ಆಗಲಾರದು.



## ಧರ್ಮ ರಸಾಯನವನ್ನು ಕುಡಿಯುವುದರಿಂದಲೇ ಅಮರನಾಗುತ್ತಾನೆ

**ಜಇ ಜರ-ಮರಣ-ಕರಾಲಿಯಉ ತೋ ಜಿಯ ಧಮ್ಮ ಕರೇಹಿ।**
**ಧಮ್ಮ-ರಸಾಯಣು ಪಿಯಹಿ ತುಹು ಜಿಮ ಅಜರಾಮರ**
**ಹೋಹಿ ॥೪೬॥**

**ಅನ್ವಯಾರ್ಥ :** ಜಿಯ–ಎಲೈ ಜೀವನೆ! ಜಇ ಜರ-ಮರಣ-ಕರಾಲಿಯಉ–ಯದಿ ಜನ್ಮ ಜರಾ ಮರಣ ದುಃಖಗಳಿಂದ ಭಯಭೀತನಾಗಿ ತೋ ಧಮ್ಮ ಕರೇಹಿ– ಇದ್ದರೆ ಧರ್ಮಕಾರ್ಯವನ್ನು ಮಾಡು. ತುಹು ಧಮ್ಮರಸಾಯಣು ಪಿಯಹಿ–ಧರ್ಮರಸವೆಂಬ ರಸವನ್ನು ಕುಡಿ. ಅಜರಾಮರ ಹೋಹಿ–ಅಜರಾಮರನಾಗುವಿ.

**ಭಾವಾರ್ಥ :** ( ಮನುಷ್ಯಗತಿಯನ್ನು ಕುರಿತು ಹೇಳಿದ ವಿಷಯವು ) ಜನ್ಮ ಜರಾ ಮರಣ ಸಂಬಂಧ ದುಃಖವು ಅತಿಭಯಾನಕವಾದುದು. ವೃದ್ಧಾಪ್ಯವು ತಲೆದೋರಿದೊಡನೆ, ಶರೀರವು ಶಿಥಿಲವಾಗುವುದಲ್ಲದೆ, ತನ್ನ ಶರೀರದ ಸೇವೆ ಶುಶ್ರೂಷೆಮಾಡಿಕೊಳ್ಳಲು ಅಸಮರ್ಥನಾಗುತ್ತಾನೆ. ನೇತ್ರ (ಕಣ್ಣು) ದ ಜ್ಯೋತಿಯು ಕ್ಷೀಣವಾಗುತ್ತದೆ. ಕರ್ಣ ( ಕಿವಿ ) ಗಳ ಕೇಳುವಿಕೆಯ ಶಕ್ತಿಯು ಹೀನವಾಗುತ್ತದೆ. ಹಲ್ಲುಗಳು ಉದುರುತ್ತವೆ. ಸೊಂಟವು ಬಗ್ಗಿ ಕೈಕಾಲುಗಳು ಕಂಪಿಸುತ್ತವೆ. ತಿನ್ನಲು ಉಣ್ಣಲು ಕಷ್ಟವಾಗಿಯೂ, ಸಂಚರಿಸಲು ಸಾಧ್ಯವಾಗದೆಯೂ ಆಗುತ್ತದೆ. ಹೀಗೆ ಇಂದ್ರಿಯಗಳ ಶಕ್ತಿಯು ಹೀನವಾಗುತ್ತದೆ.

ತನ್ನ ಇಚ್ಛೆಯ ಪ್ರಕಾರ ಸಮಯ ಸಮಯಕ್ಕೆ ಭೋಜನ ಸಿಕ್ಕದಿದ್ದರೂ ಕುಟುಂಬೀ ಜನರು ತನ್ನ ಆಜ್ಞೆಯನ್ನು ಉಲ್ಲಂಘಿಸುತ್ತಿದ್ದರೂ, ಶರೀರದಲ್ಲಿ ವಿಷಯಭೋಗಗಳನ್ನು ಭೋಗಿಸುವ ಶಕ್ತಿಯು ಕಡಿಮೆಯಾಗಿದ್ದರೂ. ಭೋಗತೃಷ್ಣೆಯು ಹೆಚ್ಚಾಗುತ್ತಾ ಹೋಗುತ್ತದೆ. ಆಗ ಆಶಾಗ್ನಿಯು ಉರಿಯುತ್ತಿದ್ದು ರಾತ್ರಿ ಹಗಲು ಮರಣಭಾವನೆಯುದ್ಭುಪಿತವಾಗುತ್ತಿರುತ್ತದೆ. ಮಹಾದುಃಖವನ್ನುಂಟುಮಾಡುವ ವಾರ್ಧಕ್ಯವು ಮರಣದದಾಸಿಯಾಗಿರುತ್ತದೆ.

ಶರೀರ ಕ್ಷಣಭಂಗುರವಾಗಿರುತ್ತದೆ. ಯೌವನಾವಸ್ಥೆಯು ಅಲ್ಪಕಾಲವಿದ್ದು ಒಡನೆ ವೃದ್ಧಾಪ್ಯವು ಆಕ್ರಮಿಸಿ ಒಂದೊಂದು ದಿವಸವು ವರ್ಷಕ್ಕೆ ಸಮಾನ ವಾಗಿ ಕಾಣುತ್ತದೆ.

ಮರಣ ಸಂಬಂಧವಾದ ದುಃಖವಾದರೋ ಮಹಾದುಃಖದಾಯಕ ವಾಗಿರುತ್ತದೆ; ಭಯಾನಕವೂ ಆಗಿರುತ್ತದೆ. ಮರಣಕ್ಕಿಂತ ಮೊದಲು ಕಷ್ಟ ದಾಯಕ ರೋಗ ಉಂಟಾಗಿ ಅತ್ಯಂತ ವೇದನೆಯನ್ನು ಅನುಭವಿಸುತ್ತಾನೆ. ಅಸಮರ್ಥನಾಗಿ ಯಾವುದು ಹೇಳುವುದು ಕೂಡಾ ಆಗುವುದಿಲ್ಲ. ಶರೀರದಲ್ಲಿ ರುವವರೆಗೂ ಜನ್ಮಜರಾಮರಣ ಸಂಬಂಧವಾದ ದುಃಖಗಳನ್ನು ಸಹಿಸಬೇಕಾ ಗುತ್ತದೆ. ಮನುಷ್ಯ ಜನ್ಮದ ದುಃಖಕ್ಕಿಂತಲೂ ತಿರ್ಯಂಚಗತಿಯಲ್ಲಿ ಅತ್ಯಂತ ದುಃಖವಿರುತ್ತದೆ. ಸಬಲ ಪ್ರಾಣಿಯಿಂದ ನಿರ್ಬಲ ಪ್ರಾಣಿಯು ವಧೆಮಾಡ ಲಾಗುತ್ತದೆ. ಮಾತ್ರವಲ್ಲ, ಏಕೇಂದ್ರಿಯಾದಿ ಜಂತುಜಾಲಗಳು ಪರತಂತ್ರದ ಮೂಲಕ ಶಾರೀರಕ ದುಃಖವನ್ನನುಭವಿಸಬೇಕಾಗುತ್ತದೆ.

ನಾರಕಿಯರ ದುಃಖವು ಅಸಹನೀಯ ಕಷ್ಟವೆಂದು ಶಾಸ್ತ್ರಗಳಿಂದ ವಿಧಿ ತವೇ ಇರುತ್ತದೆ. ದೇವಗತಿಯಲ್ಲಿ ಘೋರವಾದ ಮಾನಸಿಕ ದುಃಖವೂ, ಅಸೂಯಾಭಾವನೆಯೂ ಇರುತ್ತದೆ. ದೇವಾಂಗನೆಯರ ಆಯುಷ್ಯವು ದೇವತೆ ಗಳ ಆಯುಷ್ಯಕ್ಕಿಂತ ಬಹು ಕಡಿಮೆ ಇದ್ದು, ದೇವಿಯರ ವಿಯೋಗ ಸಂಬಂಧ ವಾದ ದುಃಖವನ್ನು ಸಹಿಸಬೇಕಾಗುವುದು. ವಿಷಯ ಭೋಗಗಳನ್ನು ಭೋಗಿಸಿಕೊಂಡಿರುತ್ತಿದ್ದರೂ ತೃಷ್ಣಾದಃಹವು ಅಧಿಕವಾಗುತ್ತ ರಾತ್ರಿ ಹಗಲು ಆಕುಲಿತರಾಗುತ್ತಿರುತ್ತಾರೆ. ಹೀಗೆ ನಾಲ್ಕು ಗತಿಗಳಲ್ಲಿ ಬಲವಾದ ಘೋರ ಕರ್ಮೋದಯವಿರುವುದರಿಂದ, ಆದರಿಂದ ಹೇಗಾದರೂ ವಿಶ್ರಾಂತಿ ಪಡೆಯಲು ಕರ್ಮಕ್ಷಯವು ಅತ್ಯಾವಶ್ಯಕವಾಗಿದೆ. ವಿವೇಕಿ ಮಾನವನು ಉಕ್ತಮ ಪ್ರಕಾರ ಈ ರೀತಿ ನಿಶ್ಚಯಮಾಡಿಕೊಳ್ಳಬೇಕು. ಈ ಸಂಸಾರ ಸಾಗರವು ಭಯಾನಕ ದುಃಖರೂಪಿ ಉಪ್ಪಿನ ನೀರಿನಿಂದ ತುಂಬಿದೆ. ಇದರಿಂದ ಪಾರಾ ಗುವುದು ಯೋಗ್ಯವಿದೆ. ಕರ್ಮದ ಕ್ಷಯ ಮಾಡುವುದು ಯೋಗ್ಯವಿದೆ. ಆತ್ಮನ ಭ್ರಮಣವನ್ನು ತಡೆಯುವುದು ಯೋಗ್ಯವಿದೆ. ಅಜರಾಮರ ಆಗು ವುದೇ ಯೋಗ್ಯವಿದೆ. ಈ ಮಹಾ ಘೋರ ದುಃಖಮಯವಾದ ಸಂಸಾರ ಸಾಗರದಿಂದ ಪಾರಾಗುವುದೇ ಉಚಿತವಾದುದೆಂದೂ, ಪಂಚಮಗತಿಯಾದ

ಮೋಕ್ಷ ಸುಖವನ್ನು ಪ್ರಾಪ್ತಿಮಾಡಿಕೊಳ್ಳುವುದು ಯೋಗ್ಯವಾದುದೆಂಬ ಶ್ರದ್ಧಾನವುಂಟಾದೊಡನೆ, ಮುಮುಕ್ಷುವು ಧರ್ಮವನ್ನು ಸಾಧಿಸಲು ಪ್ರಯತ್ನಿಸುತ್ತಾನೆ.

ಯಾರು ಸಂಸಾರದುಃಖಗಳಿಂದ ಪಾರಾಗಿ ಪರಮಪಾವನ ಮೋಕ್ಷ ಸ್ಥಾನವನ್ನು ಧರಿಸುತ್ತಾನೆಯೋ ಅವನಿಗೆ ಧರ್ಮಿಯೆಂದು ಹೇಳಿದ್ದಾರೆ. ಧರ್ಮವು ರತ್ನತ್ರಯ ಸ್ವರೂಪವಾಗಿರುತ್ತದೆ. ಆ ರತ್ನತ್ರಯ ಭಾವದಿಂದಲೇ ನೂತನ ಕರ್ಮಗಳ ಸಂವರೆಯೂ, ಹಳೆಯ ಕರ್ಮಗಳ ಅವಿಪಾಕ ನಿರ್ಜರೆಯೂ ಆಗುವುದು. ನಿಶ್ಚಯನಯದಿಂದ ಈ ರತ್ನತ್ರಯವು ಆತ್ಮನ ಶುದ್ಧ ಭಾವನೆಯು, ತಲ್ಲೀನತೆಯು. ಸ್ವಸಂವೇದನೆಯೂ, ಸ್ವಾನುಭವವೂ, ಆತ್ಮನ ಶುದ್ಧ ಸ್ವಭಾವದ ಶ್ರದ್ಧಾನವೂ, ಜ್ಞಾನವೂ, ಸ್ಥಿರತೆಯೂ ಇರುವುದಕ್ಕೆ ಆತ್ಮ ದರ್ಶನವೆಂದು ಹೇಳುತ್ತಾರೆ. ಇದೇ ಧರ್ಮ ರಸಾಯನವೂ ಆತ್ಮರಸದ ಪಾನವೂ ಆಗಿರುತ್ತದೆ. ಇದನ್ನು ಸೇವಿಸುವುದರಿಂದ ಆತ್ಮಾನಂದ ಲಾಭ ಪ್ರಾಪ್ತಿಯಾಗಿ ಕರ್ಮಗಳ ನಾಶವೂ, ಶುದ್ಧವೂ, ನಿರ್ಮಲವೂ, ಪವಿತ್ರತಾ ಪೂರ್ಣವಾದ ನಿಜಸ್ವಭಾವ ಪ್ರಾಪ್ತಿಯೂ ಆಗಿ ವೀತರಾಗತೆಯಲ್ಲಿ ತನ್ಮಯನಾಗುತ್ತಾನೆ. ಮತ್ತೆ ರಾಗದ್ವೇಷ ಮೋಹಾದಿಗಳಿಲ್ಲದಿರುವುದರಿಂದ ಪುಣ್ಯ ಪಾಪಗಳ ಬಂಧವಾಗುವುದಿಲ್ಲವು. ಆದರಿಂದ ಚತುರ್ಗತಿ ಸಂಬಂಧವಾದ ಬಂಧನದಿಂದ ಬಿಡುಗಡೆಯಾಗಿ ಸದಾಕಾಲದಲ್ಲೂ ಅಜರನೂ, ಅಮರನೂ ಆಗುವನು.

ಶುದ್ಧೋಪಯೋಗವೇ ಧರ್ಮವು. ಕಷಾಯಗಳ ಉದಯಯುಕ್ತವಾದ ಶುಭೋಪಯೋಗವು ಧರ್ಮವಾಗಲಾರದು. ಅಶುಭೋಪಯೋಗದಿಂದ ರಕ್ಷಣೆಹೊಂದಲು ಶುಭೋಪಯೋಗದ ಆಶ್ರಯವನ್ನು ಪಡೆಯಲೇ ಬೇಕು. ಇದು ಕೂಡಾ ಬಂಧಕ್ಕೆ ಕಾರಣವೆಂದು ತಿಳಿದಿರಬೇಕು ಸ್ವಾನುಭವರೂಪ ಶುದ್ಧೋಪಯೋಗವು ಮೋಕ್ಷೋಪಾಯದ ಪ್ರಧಾನ ಉಪಾಯವಾಗಿರುತ್ತದೆ. ಸೂಕ್ಷ್ಮ ಕಷಾಯವು ಬಂಧಕಾರಕವೆಂದು ತಿಳಿದಿರಬೇಕು.

ಬ್ರಹತ್ ಸಾಮಾಯಿಕ ಪಾಠದಲ್ಲಿ ಹೇಳಿರುತ್ತಾರೆ :

**ಪಾಪಾಽನೋಕುಹಸಂಕುಲೇ ಭವವನೇ ದುಃಖಾದಿಭಿರ್ದುರ್ಗಮೇ
ಯೈರಜ್ಞಾನವತಃ ಕಷಾಯವಿಷಯೈಸ್ತ್ವಂ ಪೀಡಿತೋಽನೇಕಧಾ।**

**ರೇ ತಾನ್ ಜ್ಞಾನಮುಪೇತ್ಯ ಪೂತಮಧುನಾ ವಿಧ್ವಂಸಯಾಶೇಷತೋ ।**
**ವಿಧ್ವಾಂಸೋ ನ ಪರಿತ್ಯಜಂತಿ ಸಮಯೇ ಶತ್ರೂನ್ಅಹತ್ವಾ ಸ್ಫುಟಂ ॥ ೬೫ ॥**

ಭಾವಾರ್ಥ: ಈ ಸಂಸಾರ ದುಃಖದಿಂದ ಪಾರಾಗುವುದು ಬಹಳ ಕಠಿಣವಾದುದು. ಇದು ಪಾಪವೃಕ್ಷದಿಂದ ಭರಿತವಾಗಿದೆ. ಇಲ್ಲಿ ಕಷಾಯ ವಿಷಯಗಳಿಂದ ಅಜ್ಞಾನಿಯಾದ ನೀನು ಅನೇಕ ವಿಧದ ದುಃಖವನ್ನನುಭವಿಸುತ್ತಿರುವಿ. ಈಗಲಾದರೂ ಪರಿಶುದ್ಧ ಆತ್ಮಜ್ಞಾನವನ್ನು ಪಡೆದು, ಆ ಕಷಾಯಗಳೆಲ್ಲವನ್ನೂ ಪೂರ್ಣರೀತಿ ತ್ಯಾಗಮಾಡು (ತ್ಯಜಿಸು). ವಿದ್ವಾಂಸರು ಸಮಯ ಸಿಕ್ಕಿದಾಗ ಶತ್ರುಗಳನ್ನು ಹೊಡೆದು ಹಾಕದೆ ಬಿಡಲಾರರು.

ಶ್ರೀ ಪದ್ಮನಂದೀ ಧರ್ಮರಸಾಯನದಲ್ಲಿ ಹೇಳುತ್ತಾರೆ:

**ಬಹುಜಣಮಣೋಹಿರಾಮಂ ಜಾಇಜರಾಮರಣ ದುಕ್ಖಣಾಸಯರಂ।**
**ಇಹಪರಲೋಯಹಿಜ (ದ) ತ್ಥಂ ತಂ ಧಮ್ಮರಸಾಯಣಂ ವೋಚ್ಛಂ ॥೨॥**

ಭಾವಾರ್ಥ: ನಾನೂ ಆ ಧರ್ಮರಸಾಯನವನ್ನು ತೋರಿಸುತ್ತೇನೆ. ಧರ್ಮರಸಾಯನವನ್ನು ಕುಡಿದ ಜ್ಞಾನಿಗಳು ಪರಮಾನಂದಮಯ ಮಾನಸಿಕ ಆನಂದವನ್ನು ಪಡೆಯುವರು. ಅವರು ಜೀವಿಸಿರುವವರೆಗೆ ಪರಮಾನಂದ ಭೋಗಿಗಳಾಗಿ, ಜನ್ಮಜರಾಮರಣರೂಪ ದುಃಖಗಳ ನಾಶಕವೂ, ಇಹಲೋಕ ಪರಲೋಕಗಳೆರಡರಲ್ಲಿ ಹಿತದಾಯಕವೂ ಆದ ಸಿದ್ಧ ಸುಖವನ್ನು ಅತಿ ಶೀಘ್ರದಲ್ಲೇ ಅನುಭವಿಸುವರು.



## ಬಾಹ್ಯ ಕ್ರಿಯೆಗಳಲ್ಲಿ ಧರ್ಮವಿಲ್ಲವು

**ಧಮ್ಮೋ ಣ ಪಢಿಯಇ ಹೋಇ ಧಮ್ಮೋ ಣ ಪೋತ್ಥಾ-ಪಿಚ್ಛಿಯಇ।**
**ಧಮ್ಮೋ ಮಢಿಯ-ಪಏಸಿ ಧಮ್ಮೋ ಣ ಮತ್ಥಾ-ಲುಚಿಯಇ ॥ ೪೭ ॥**

**ಅನ್ವಯಾರ್ಥ :** ಪಢಿಯಇ ಧಮ್ಮು ಣ ಹೋಇ – ಶಾಸ್ತ್ರಗಳನ್ನು ಓದುವುದರಿಂದ ಮಾತ್ರ ಧರ್ಮವಾಗುವುದಿಲ್ಲವು. ಪೋತ್ಥಾ-ಪಿಚ್ಛಿಯಇ ಧಮ್ಮು ಣ–ಪುಸ್ತಕ ಪಿಂಛಿಗಳನ್ನು ಧರಿಸುವುದರಿಂದಲೂ ಧರ್ಮವಾಗಲಾರದು. ಮಢಿಯು-ಪಏಸಿ ಧಮ್ಮು ಣ–ಯಾವುದಾದರೊಂದು ಮಠದಲ್ಲಿ ವಾಸಮಾಡುವುದರಿಂದಲೂ ಧರ್ಮ ಆಗಲಾರದು. ಮತ್ಥಾ-ಲುಚಿಯಇ ಧಮ್ಮು ಣ–ಕೇಶಲೋಚನವನ್ನು ಮಾಡಿಕೊಳ್ಳುವುದರಿಂದಲೂ ಕೂಡ ಧರ್ಮವಾಗಲಾರದು.

**ಭಾವಾರ್ಥ :** ಯಾವ ಧರ್ಮದಿಂದ ಜನ್ಮಜರಾಮರಣ ಸಂಬಂಧವಾದ ದುಃಖವು ದೂರವಾಗುವುದೋ, ಕರ್ಮಗಳ ಕ್ಷಯವಾಗುವುದೋ ಅಂತಹ ಸ್ವಾಭಾವಿಕ ಅವಸ್ಥೆಯನ್ನು ಪಡೆದು ಅಜರನೂ, ಅಮರನೂ ಆಗುವನೋ ಅದೇ ಸತ್ಯಧರ್ಮವೂ, ಅದೇ ಆತ್ಮನ ನೈಜವಾದ ಸ್ವಭಾವವೂ ಆಗಿರುತ್ತದೆ. ಯಾರು ಸರ್ವ ಪದಾರ್ಥಗಳಿಂದ ವಿರಕ್ತನಾಗಿ, ತನ್ನಾತ್ಮನ ಶುದ್ಧ ಸ್ವಭಾವದಲ್ಲಿ ಶ್ರದ್ಧೆ, ಜ್ಞಾನವುಳ್ಳವನಾಗಿ, ಏಕಾಗ್ರಚಿತ್ತನಾಗಿ ಇರುವನೋ ಅಂಥಹವನು ನಿಶ್ಚಯ ರತ್ನತ್ರಯ ಧರ್ಮವನ್ನೋ ಅಥವಾ ಸ್ವಾನುಭವವನ್ನೋ ಅಥವಾ ಶುದ್ಧಾತ್ಮ ಯೋಗದ ಭೂಮಿಯನ್ನೋ ಪಡೆಯುವನು.

ಆತ್ಮ ತತ್ವವನ್ನು ಸರಿಯಾಗಿ ತಿಳಿಯದೆ ಬಾಹ್ಯಕ್ರಿಯೆಗಳನ್ನು ಮಾತ್ರ ವ್ಯವಹಾರದಲ್ಲಿ ಆಚರಿಸುತ್ತಿರುವುದರಿಂದಲೂ, ಕೆಲವು ಶಾಸ್ತ್ರಗಳನ್ನು ಓದುವುದರಿಂದಲೂ ಧರ್ಮವಾಗಲಾರದು. ಶಾಸ್ತ್ರಗ್ರಂಥಗಳ ಪಠಣ ಪಾಠಣ ಕ್ರಿಯೆಗಳು ಸಂಸಾರದ ಸಕಲ ಪದಾರ್ಥಗಳ, ಜೀವ ಅಜೀವ ತತ್ವಗಳ ಪರಿಜ್ಞಾನವಾಗುವುದಕ್ಕಾಗಿಯೂ, ಭೇದ ವಿಜ್ಞಾನದ ಪ್ರಾಪ್ತಿಯಿಂದ ತನ್ನಂತರಂಗದ ಶುದ್ಧ ತತ್ವದ ಪರಿಚಯವಾಗುವುದಕ್ಕಾಗಿಯೂ ಉಪಯೋಗಿಗಳಾಗಿವೆ.

ಈ ಕಾರ್ಯಗಳಿಗಾಗಿ ಶಬ್ದಗಳ ಚಿಂತನ, ಮನನ ಇವು ಅತ್ಯಾವಶ್ಯಕವಾದುದು. ಒಂದು ವೇಳೆ ಶುದ್ಧಾತ್ಮ ಪ್ರಾಪ್ತಿಮಾಡಿಕೊಳ್ಳದೆ, ಕೇವಲ ಶಾಸ್ತ್ರಗಳಲ್ಲಿ ಮಹಾ ವಿದ್ವಾಂಸನೂ, ಅತಿ ದೊಡ್ಡ ವಾಗ್ಮಿಯೂ ಆಗಿ ಧರ್ಮಾತ್ಮನೆಂಬ ಅಭಿಮಾನ ಪಡುವುದು ಮಿಥ್ಯಾತ್ವವಾಗಿರುತ್ತದೆ. ಇದೇ ರೀತಿಯಾಗಿ ಯಾರಾದರೂ ಅನೇಕ ಗ್ರಂಥಗಳನ್ನು ಸಂಗ್ರಹಿಸಿರಲಿ, ಸಾಧುವಾಗಿರಲಿ, ಕ್ಷುಲ್ಲಕನಾಗಿರಲಿ, ಕೇಶಲೋಚವನ್ನು ಮಾಡಿಕೊಂಡಿರಲಿ, ಏಕಾಂತ ಸ್ಥಾನಗಳಾದ ಮಠ

ಗಳಲ್ಲಿ ಗುಹೆಯಲ್ಲಿ ಕುಳಿತುಕೊಂಡಿರಲಿ, ಆದರೆ ಶುದ್ಧಾತ್ಮ ಭಾವನೆಯು ಇಲ್ಲದೆ ಬಾಹ್ಯಮುನಿ, ಬಾಹ್ಯ ಶ್ರಾವಕರ ವೇಷಗಳೆಲ್ಲವನ್ನೂ ಧರ್ಮವೆಂದು ಭಾವಿಸು ವುದು, ತಿಳಿಯುವುದು ಕೂಡಾ ಮಿಥ್ಯಾತ್ವವಾಗಿರುತ್ತದೆ. ಯಾಕೇದರೆ ಶರೀ ರಾಶ್ರಯವಾದ ವೇಷವು ಕೇವಲ ನಿಮಿತ್ತವೂ, ವ್ಯವಹಾರವೂ ಆಗಿರುತ್ತದಲ್ಲದೆ ಧರ್ಮವಾಗಿರುವುದಿಲ್ಲವು.

ವ್ಯವಹಾರ ಕ್ರಿಯಾಕಾಂಡದಿಂದಾಗಲಿ, ಚಾರಿತ್ರದಿಂದಾಗಲಿ ರಾಗಭಾ ವವು ಶುಭ ಭಾವವಾಗುವುದರಿಂದ ಅದು ಪುಣ್ಯ ಬಂಧಕ್ಕೆ ಕಾರಣವಾಗಿರುವು ದಲ್ಲದೆ ಕರ್ಮಗಳ ಸಂವರೆ ಮತ್ತು ನಿರ್ಜರೆಗೆ ಕಾರಣವಾಗಲಾರದು (ವಾಗಿರು ವುದಿಲ್ಲವು). ಎಷ್ಟರವರೆಗೆ ಪರಿಣಾಮದಲ್ಲಿ ಶುದ್ಧ ಪರಿಣಾಮವುಂಟಾಗುವು ದಿಲ್ಲವೋ ಅಷ್ಟರವರೆಗೆ ಧರ್ಮದ ಲಾಭವಾಗಲಾರದು. ಮುಮುಕ್ಷುವು ಭಾವ ಶುದ್ಧಿಯು ಮುನಿ ಧರ್ಮ ಅಥವಾ ಶ್ರಾವಕ ಧರ್ಮವಾಗಿದೆ ಎಂದು ದೃಢವಾದ ನಂಬಿಕೆಯಿಡುವುದು ಅತ್ಯಾವಶ್ಯಕವಾಗಿರುತ್ತದೆ. ಅಶುಭ ಭಾವಗಳಿಂದಲೂ ಮತ್ತು ಹಿಂಸಾದಿ ಪಂಚ ಪಾಪಗಳಿಂದಲೂ ರಕ್ಷಣೆ ಹೊಂದುವುದಕ್ಕೋಸ್ಕರ ಮನಸ್ಸನ್ನು ನಿರಾಕುಲವನ್ನಾಗಿ ಮಾಡುವ ತ್ಯಾಗ ಮತ್ತು ನಡತೆ ಇವು ಸಹಾ ಯಕಗಳಾಗಿವೆ.

ನಿಶ್ಚಯ ನಯವಿಲ್ಲದ ಬಾಹ್ಯ ಚಾರಿತ್ರವನ್ನು ಪಾಲಿಸುತ್ತಿದ್ದರೂ, ಅಧಿಕ ಜ್ಞಾನದಿಂದ ಯುಕ್ತನಾಗುತ್ತಿದ್ದರೂ ಅದು ಅಕ್ಕಿ ಇಲ್ಲದ ತೌಡಿನಂತೆ ಸಾರ ರಹಿತವೆಂದೇ ತಿಳಿಯಬೇಕು. ಅದು ಪುಣ್ಯಬಂಧಕ್ಕೆ ಕಾರಣವಾಗಿ ಸಂಸಾರ ಪರಿಭ್ರಮಣಕ್ಕೆ ಕಾರಣವಾಗಿರುತ್ತದೆ. ಎಷ್ಟು ಭಾಗ (ಅಂಶ) ವು ವೀತರಾಗ ವಿಜ್ಞಾನಮಯ ಭಾವದ ಪ್ರಾಪ್ತಿಯಾಗುವುದೋ, ಅಷ್ಟು ಭಾಗ ಧರ್ಮವಾಯಿ ತೆಂದೇ ಭಾವಿಸಬೇಕು. ಬಾಹ್ಯ ಮನ, ವಚನ, ಕಾಯಗಳ ಕ್ರಿಯೆಗಳಿಂದ ಸಂತುಷ್ಟನಾಗಿ ಧರ್ಮಾತ್ಮನೆಂಬ ಅಹಂಕಾರ ಕೂಪದಲ್ಲಿ ಬೀಳಬಾರದು.

ಸಮಯಸಾರ ಕಲಶದಲ್ಲಿ ಹೇಳಿರುತ್ತಾರೆ:

**ಏವಂ ಜ್ಞಾನಸ್ಯ ಸುದ್ಧಸ್ಯ ದೇಹ ಏವ ನ ವಿದ್ಯತೇ।**
**ತತೋ ದೇಹಮಯಂ ಜ್ಞಾತುರ್ನ ಲಿಂಗಂ**
**ಮೋಕ್ಷಕಾರಣಂ ॥ ೪೫-೧೦॥**

**ದರ್ಶನಜ್ಞಾನಚಾರಿತ್ರತ್ರಯಾತ್ಮ ತತ್ತ್ವಮಾತ್ಮ ನಃ।**
**ಏಕ ಏವ ಸದಾ ಸೇವ್ಯೋ ಮೋಕ್ಷಮಾರ್ಗೋ**
**ಮುಮುಕ್ಷುಣಾ ॥೬೬-೧೦॥**

**ಭಾವಾರ್ಥ :** ಆತ್ಮನ ಗುಣವು ಶುದ್ಧ ಜ್ಞಾನವಾಗಿರುತ್ತದಲ್ಲದೆ ಪುದ್ಗಲ ಮಯ ದೇಹಾದಿಗಳಲ್ಲವು. ಪುರುಷ ದೇಹಾಶ್ರಯ ವೇಷದ ವ್ಯವಹಾರಾಚಾರವು ಮೋಕ್ಷಕ್ಕೆ ಕಾರಣವಲ್ಲವು. ಆದ್ದರಿಂದ ಮೋಕ್ಷಾಭಿಲಾಷಿಯು ಸದಾಕಾಲ ಮೋಕ್ಷಮಾರ್ಗ ನಿಶ್ಚಯ ರತ್ನತ್ರಯಮಯ ಆತ್ಮತತ್ವಸ್ವರೂಪವಂತನಾಗಿರುತ್ತಾನೆ.

ಬೃಹತ್ ಸಾಮಾಯಿಕ ಪಾಠದಲ್ಲಿ ಹೇಳಿರುತ್ತಾರೆ :

**ಶೂರೋಽಹಂ ಶುಭಧೀರಹಂ ಪಟುರಹಂ ಸರ್ವಾಽಧಿಕಶ್ರೀರಹಂ**
**ಮಾನ್ಯೋಽಹಂ ಗುಣವಾನಹಂ ವಿಭುರಹಂ ಪುಂಸಾಮಹಮಗ್ರಣೀಃ।**
**ಇತ್ಯಾತ್ಮನ್ನಪಹಾಯ ದುಷ್ಕೃತಕರೀಂ ತ್ವಂ ಸರ್ವಥಾ ಕಲ್ಪನಾಂ**
**ಶಶ್ವದ್ಧ್ಯಾಯ ತದಾತ್ಮತತ್ವಮಮಲಂ ನೈಃಶ್ರೇಯಸೀ**
**ಶ್ರೀರ್ಯತಃ ॥೬೨॥**

**ಭಾವಾರ್ಥ :** ಎಲೈ ಆತ್ಮನೇ ! ನೀನು ಪಾಪ ಬಂಧಕ್ಕೆ ಕಾರಣವಾದ ಕಲ್ಪನೆಯನ್ನು ಮಾಡಬೇಡ. ನಾನು ಶೂರನೆಂದೂ, ಬುದ್ಧಿವಂತನೆಂದೂ, ಚತುರನೆಂದೂ, ಧನಪತಿಯೆಂದೂ, ಪೂಜ್ಯನೆಂದೂ, ಗುಣವಂತನೆಂದೂ, ಸಮರ್ಥನೆಂದೂ, ಪುರುಷ ಶ್ರೇಷ್ಠನೆಂದೂ, ಯೋಗಿವರ್ಯನೆಂದೂ ದುರಹಂಕಾರವನ್ನು ಪಡದೆ ನಿರಂತರ ನಿರ್ಮಲ ಆತ್ಮತತ್ವಧ್ಯಾನಿಸಿದರೆ ಅನುಪಮ ಮೋಕ್ಷ ಲಕ್ಷ್ಮಿಯ ಪ್ರಾಪ್ತಿಯಾಗುವುದು.



## ರಾಗ ದ್ವೇಷಗಳನ್ನು ತ್ಯಜಿಸಿ ಆತ್ಮಸ್ಥನಾಗುವುದೇ ಧರ್ಮವು

**ರಾಯ-ರೋಸ ಬೇ ಪರಿಹರಿವಿ ಜೋ ಅಪ್ಪಾಣಿ ವಸೇಈ।**
**ಸೋ ಧಮ್ಮು ವಿ ಜಿಣ-ಉತ್ತಿಯಉ ಜೋ ಪಂಚಮ-ಗಇ**
**ಣೇಇ ॥೪೮॥**

**ಅನ್ವಯಾರ್ಥ :** ರಾಯ-ರೋಸ ಬೇ ಪರಿಹರಿವಿ-ರಾಗದ್ವೇಷಗಳೆರಡನ್ನು ಬಿಟ್ಟು ವೀತರಾಗನಾಗಿ, ಜೋ ಅಪ್ಪಾಣಿ ವಸೇಈ-ಯಾವನು ತನ್ನ ಅಂತರಾತ್ಮನಲ್ಲಿ ವಾಸಿಸುತ್ತಾನೆಯೋ (ಆತ್ಮನಲ್ಲಿ ವಿಶ್ರಾಂತಿಯನ್ನು ಪಡೆಯುವನೋ) ಸೋ ಧಮ್ಮು ಜಿಣ ವಿ ಉತ್ತಿಯಉ-ಅವನಿಗೇನೆ ಜಿನೇಂದ್ರ ಸರ್ವಜ್ಞನು ಧರ್ಮವೆಂದು ಹೇಳಿರುವುದು. ಜೋ ಪಂಚಮಗಇ ಣೇಇ-ಈ ಧರ್ಮವೇ ಪಂಚಮಗತಿಯಾದ ಮೋಕ್ಷಕ್ಕೆ ಕೊಂಡೊಯ್ಯುವುದು.

**ಭಾವಾರ್ಥ :** ಆತ್ಮನ ನಿಜ ಸ್ವಭಾವವೇ ಧರ್ಮವು. ಜ್ಞಾನ, ದರ್ಶನ ಸುಖ, ವೀರ್ಯಮಯನಾದ ಆತ್ಮನ ನಿಜವಾದ ಶ್ರದ್ಧಾನವು, ಜ್ಞಾನವು ಮತ್ತು ಅವುಗಳಲ್ಲಿ ಸ್ಥಿರನಾಗಿರುವಿಕೆಯು ಧರ್ಮವು. ಯಾವಾಗ ರಾಗದ್ವೇಷಗಳೆಂಬ ಗಾಳಿಯಿಂದ ಯೋಗಗಳು ಚಂಚಲಿಸುವುವೋ ಆಗ ಸ್ವಭಾವವು ವಿಕಾರವಾಗುವುದು.

ಅತಃ ರಾಗದ್ವೇಷಗಳನ್ನು ತ್ಯಜಿಸಿ ತನ್ನಾತ್ಮರಂಗದಲ್ಲಿ ವಿಶ್ರಮಿಸು; ತನ್ಮಯನಾಗು. ಆತ್ಮಾರಾಮದಲ್ಲಿಯೇ ರಮಿಸುವಾಗ ಬಂಧನಾಶಕವೂ, ಪರಮಾನಂದದಾಯಕವೂ ಮತ್ತು ಮೋಕ್ಷಕಾರಕವೂ ಆದ ಧರ್ಮವು ಸ್ವತಃ ಪ್ರಾದುರ್ಭವಿಸುವುದು. ಧರ್ಮವು ತನ್ನಲ್ಲಿರುವುದಲ್ಲದೆ ಬಾಹ್ಯವಸ್ತುಗಳಲ್ಲಿರುವುದಿಲ್ಲವು. ಆದ್ದರಿಂದ ಪರವಸ್ತುಗಳಲ್ಲಿ ಉದಾಸೀನತೆಯು ತಲೆದೋರಬೇಕಾದರೆ ವೀತರಾಗಿಯೂ, ಸಮಭಾವಿಯೂ ಆಗಿ ತನ್ನಂತರಂಗದಲ್ಲಿಯೇ ಮಗ್ನನಾಗಬೇಕು.

ಈ ಪ್ರಪಂಚವನ್ನು ವ್ಯವಹಾರ ದೃಷ್ಟಿಯಿಂದ ನೋಡದೆ ನಿಶ್ಚಯನಯದಿಂದ ನೋಡುವುದು. ರಾಗದ್ವೇಷಾದಿಗಳನ್ನು ನಾಶಗೊಳಿಸುವ ಒಂದು ಉಪಾಯವಾಗಿರುತ್ತದೆ. ಯಾವಾಗ ಜೀವಾದಿ ಷಡ್ದ್ರವ್ಯಗಳೆಲ್ಲವು ತಮ್ಮ ತಮ್ಮ ಸ್ವಭಾವದಲ್ಲಿಯೂ, ನಿಶ್ಚಲವಾಗಿಯೂ ಮತ್ತು ಸಕಲ ಜೀವರಾಶಿ ಒಂದೇ ವಿಧ ಶುದ್ಧವಾಗಿಯೂ ಕಂಡುಬರುವವೋ ಆಗಲೇ ರಾಗದ್ವೇಷಾದಿ ಭಾವನೆಗಳು ದೂರವಾಗುವವು. ವ್ಯವಹಾರ ದೃಷ್ಟಿಯಿಂದ ಶರೀರಧಾರಿಗಳಾದ ಅಶುದ್ಧ ಜೀವಗಳು ಚಿತ್ರವಿಚಿತ್ರವಾಗಿಯೇ ಭಾಸವಾಗುವಾಗ, ಮೋಹೀ ಜೀವಗಳು ಯಾವುದರಿಂದ ವಿಷಯ ಸುಖವು ದೊರಕುತ್ತದೆಯೋ

ಅವುಗಳನ್ನು ರಾಗಭಾವದಿಂದಲೂ ಮತ್ತು ಯಾವುದು ವಿಷಯ ಸುಖಕ್ಕೆ ಬಾಧಾಕಾರಕಗಳಾಗಿವೆಯೋ ಅವುಗಳನ್ನು ದ್ವೇಷಭಾವನೆಯಿಂದಲೂ ನೋಡುತ್ತಾನೆ. ಆದರೆ ತಾನು ವಿರಾಗಿಯಾಗಿದ್ದರೆ ಪರಜೀವಿಗಳೆಲ್ಲವು ಕೂಡಾ ವಿರಾಗಿಗಳೆಂದೇ ದೃಷ್ಟಿಗೋಚರವಾಗುವವು. ಆಗ ಸ್ವಯಂ ಸಮತಾ ಭಾವನೆಯುಂಟಾಗುವುದು.

ವ್ಯವಹಾರ ದೃಷ್ಟಿಯಿಂದ ಪುದ್ಗಲಗಳ ರಚನಾ ವಿಶೇಷವನ್ನು ನೋಡುವಾಗ ನಗರ, ಗ್ರಾಮ, ಭವನ ವಸ್ತ್ರಾಭೂಷಣ ಇವೇ ಮೊದಲಾಗಿ ಅನೇಕ ವಿಧ ವಿಚಿತ್ರತೆಯು ಕಂಡುಬರುತ್ತದೆ. ಆದರೆ ಯಾವಾಗ ನಿಶ್ಚಯನಯದಿಂದ ಪುದ್ಗಲಗಳನ್ನು ನೋಡುತ್ತಿದ್ದರೆ ಪರಮಾಣುರೂಪ ಏಕಾಕಾರವಾಗಿಯೇ ಗೋಚರಿಸುತ್ತದೆ. ಆಗ ಅವರಂತರಂಗದಲ್ಲಿ ರಾಗದ್ವೇಷಗಳ ಕಾರಣಗಳುದ ವಿಸಲಾರವು. ಶುದ್ಧ ನಿಶ್ಚಯ ದೃಷ್ಟಿಯು ರಾಗದ್ವೇಷಾದಿ ವಿಕಾರಗಳನ್ನು ನಾಶಗೊಳಿಸುವುದರಲ್ಲಿ ಪರಮಸಹಾಯಕಗಳಾಗಿವೆ. ಹೀಗೆ ಇದೂ ಕೂಡಾ ರಾಗದ್ವೇಷಾದಿವಿಕಾರಗಳನ್ನು ದೂರಗೊಳಿಸುವ ಎರಡನೆಯ ಮಹೋಪಾಯವಾಗಿರುತ್ತದೆ.

ಎಲ್ಲಾ ದ್ರವ್ಯಗಳು ತಮ್ಮತಮ್ಮ ಸ್ವಭಾವದಲ್ಲಿ ಪರಿಣಮಿಸಿಕೊಂಡಿರುತ್ತವೆ. ಅಶುದ್ಧ ಆತ್ಮರುಗಳು ಅಷ್ಟಕರ್ಮಗಳ ಉದಯದ ಫಲವಾದ ಸುಖದುಃಖಗಳನ್ನು ಅನುಭವಿಸುತ್ತಾ ರಾಗದ್ವೇಷಮಯ ಪರಿಣಮನವನ್ನು ಮಾಡುತ್ತಿರುತ್ತಾ ಕರ್ಮಚೇತನಾ ಮತ್ತು ಕರ್ಮಫಲ ಚೇತನಗಳಲ್ಲಿ ತನ್ಮಯವಾಗಿರುವುದೆಂದು ತಿಳಿದೊಡನೆ ರಾಗದ್ವೇಷಗಳ ಕಲ್ಪನೆಮಾಡಬಾರದು. ಕರ್ಮಸಂಯೋಗದಿಂದ ತನ್ನ ವಿಭಾವ ಅವಸ್ಥೆಯನ್ನು ನೋಡಿ ವಿಪಾಕ ವಿಚಯ ಧರ್ಮಧ್ಯಾನವನ್ನು ಪ್ರಾರಂಭಿಸಬೇಕು. ಮತ್ತೆ ಅನ್ಯ ಸಂಸಾರೀ ಜೀವಗಳ ಅವಸ್ಥೆಗಳನ್ನು ನೋಡಿ ಇದೆಲ್ಲವು ಕರ್ಮಗಳ ನಾಟಕವೆಂದೇ ವಿಚಾರಿಸತಕ್ಕದ್ದು. ಸುಖದುಃಖಾದಿಗಳನ್ನು ತನ್ನಲ್ಲಿಯೂ, ಪರರಲ್ಲಿಯೂ ಕಂಡು ಹರ್ಷವಿಷಾದವನ್ನು ಪಡದೆ, ಸಮಭಾವನೆಯಿಂದ ಕರ್ಮಗಳ ವಿಚಿತ್ರ ನಾಟಕ ರೂಪವಾದ ಪ್ರಪಂಚವನ್ನು ನೋಡಲು ಪ್ರಯತ್ನಿಸತಕ್ಕದ್ದು.

ಸಮ್ಯಗ್ದರ್ಶನದ ಮಹಿಮೆಯಿಂದ ವಿಷಯಭೋಗಗಳ ಆಕಾಂಕ್ಷೆಯನ್ನು ಮತ್ತು ಅವುಗಳಲ್ಲಿರುವ ಪ್ರೀತಿಯನ್ನು ನಾಶಗೊಳಿಸುವುದು ಕೂಡ ಮೂರನೆಯ

ಉಪಾಯವಾಗಿರುತ್ತದೆ. ಆತ್ಮಾನಂದಪ್ರೇಮಿಯಾಗಿ ತನ್ನಾತ್ಮಭಾವನೆಯಲ್ಲಿ ಮಗ್ನನಾಗಬೇಕು. ಕರ್ಮಗಳ ಉದಯದಿಂದ ಸುಖದುಃಖಾದಿಗಳು ತಲೆದೋರಿದರೂ ಸಮಭಾವನೆಯಿಂದಾಗಲಿ, ಹೇಯಬುದ್ಧಿಯಿಂದಾಗಲಿ, ಅನಾಸಕ್ತಿಯಿಂದಾಗಲಿ ಭೋಗಿಸಬೇಕು. ಸಮ್ಯಗ್ದರ್ಶನವು ರಾಗದ್ವೇಷಾದಿ ವಿಕಾರಗಳನ್ನು ನಾಶಗೊಳಿಸುವ ಮಹದುಪಾಯವಾಗಿರುತ್ತದೆ.

ಕ್ರೋಧಾದಿ ಕಷಾಯಗಳ ಉದಯದಿಂದ ರಾಗದ್ವೇಷಾದಿಗಳುಂಟಾಗುವುದು. ಆಗ ಸತ್ತಾವಸ್ಥೆಯಲ್ಲಿ ಬಂಧಪ್ರಾಪ್ತಕಷಾಯವರ್ಗಣೆಗಳ ಅನುಭಾಗವನ್ನು ಕ್ಷಯಗೊಳಿಸಲು ನಿರಂತರ ಆತ್ಮಾನುಭವದ ಅಥವಾ ವೈರಾಗ್ಯಭಾವನೆಯ ಚಿಂತನ, ಮನನ ಮೊದಲಾದುದನ್ನು ಮಾಡುವುದರಿಂದ ಅವುಗಳ ಉದಯವು ಮಂದವಾಗುತ್ತಾ ರಾಗದ್ವೇಷಗಳಕಲಂಕವು ಕಡಿಮೆಯಾಗುವುದು. ಹೀಗೆ ವೀತರಾಗನಾಗಲು ಮತ್ತು ಸಮಭಾವನೆಯನ್ನು ಪಡೆಯಲು ಪ್ರಯತ್ನಿಸುವುದೇ ಜ್ಞಾನಿಯ ಆದ್ಯಕರ್ತವ್ಯವಾಗಿದೆ.

ತತ್ವಸಾರದಲ್ಲಿ ದೇವಸೇನಾಚಾರ್ಯರು ಹೇಳಿರುತ್ತಾರೆ:

**ರಾಯಾದಿಯಾ ವಿಭಾವಾ ಬಹಿರಂತರದುಹವಿಯಪ್ಪ ಮುತ್ತೂಣಂ।**
**ಏಯಗ್ಗಮಣೋ ಝಾಯಹಿ ಣಿರಂಜಣಂ ಣಿಯಯ**
**ಅಪ್ಪಾಣಂ ॥ ೧೮ ॥**

**ಭಾವಾರ್ಥ :** ರಾಗಾದಿವಿಭಾವಗಳನ್ನು ಮತ್ತು ಬಾಹ್ಯಾಭ್ಯಂತರ ವಿಕಲ್ಪಗಳನ್ನು ತ್ಯಜಿಸಿ ಏಕಾಗ್ರಮನಸ್ಕನಾಗಿ ಸಕಲಕರ್ಮಮಲರಹಿತನೂ, ನಿತ್ಯ ನಿರಂಜನನೂ ಆದ ತನ್ನಾತ್ಮನನ್ನು ಧ್ಯಾನಿಸತಕ್ಕದ್ದು.

ಆತ್ಮಾನುಶಾಸನದಲ್ಲಿ ಹೇಳಿರುತ್ತಾರೆ:

**ಮುಹುಃ ಪ್ರಸಾರ್ಯ್ಯ ಸಜ್ಞಾನಂ ಪಶ್ಯನ್ ಭಾವಾನ್**
**ಯಥಾಸ್ಥಿತಾನ್।**
**ಪ್ರೀತ್ಯಪ್ರೀತೀ ನಿರಾಕೃತ್ಯ ಧ್ಯಾಯೇದಧ್ಯಾತ್ಮವಿನ್ಮುನಿಃ ॥ ೧೭೭ ॥**

**ಮೋಹಬೀಜಾದ್ರತಿದ್ವೇಷೌ ಬೀಜಾನ್ ಮೂಲಾಂಕುರಾವಿವ ।**
**ತಸ್ಮಾಜ್ ಜ್ಞಾನಾಗ್ನಿನಾ ದಾಹ್ಯಂ ತದೇತೌ ನಿರ್ದಿಧಿಕ್ಷುಣಾ ॥೧೮೨॥**

**ಭಾವಾರ್ಥ :** ಆತ್ಮಜ್ಞಾನಿಯಾದ ಮುನಿಶ್ರೇಷ್ಠನು ಸಮ್ಯಗ್‌ಜ್ಞಾನದ ವಿಷಯವಾಗಿ ಆಗಾಗ ವಿಚಾರಿಸುತ್ತಾ, ಪದಾರ್ಥಗಳಿದ್ದಂತೆ ತಿಳಿದು, ಪ್ರೀತಿ ಮತ್ತು ಅಪ್ರೀತಿಯನ್ನು ತ್ಯಜಿಸಿ ಆತ್ಮಚಿಂತನೆ ಗೈಯಬೇಕು. ಉದಾ: ಬೀಜದಿಂದ ಮೂಲ ಮತ್ತು ಅಂಕುರೋತ್ಪತ್ತಿಯಾಗುವಂತೆ ಮೋಹಬೀಜದಿಂದ ರಾಗದ್ವೇಷಗಳು ಉಂಟಾಗುತ್ತವೆ. ಆದ್ದರಿಂದ ರಾಗದ್ವೇಷಗಳನ್ನು ನಾಶಗೊಳಿಸಬೇಕಾದರೆ ಜ್ಞಾನವೆಂಬ ಅಗ್ನಿಯಿಂದಲೇ ಸಾಧ್ಯವು.



## ಸಂಸಾರ ಪರಿಭ್ರಮಣೆಗೆ ಆಶಾಪಿಶಾಚಿಯೇ ಕಾರಣವು

**ಆಉ ಗಲಇ ಣವಿ ಮಣು ಗಲಇ ಣವಿ ಆಸಾ ಹು ಗಲೇಇ ।**
**ಮೋಹು ಫುರಇ ಣವಿ ಅಪ್ಪ-ಹಿಉ ಇಮು ಸಂಸಾರ ಭಮೇಇ ॥೪೯॥**

**ಅನ್ವಯಾರ್ಥ :** ಆಉ ಗಲಇ– ಆಯುಷ್ಯವು ಕ್ಷೀಣಿಸುತ್ತಾ ಹೋಗುವುದು. ಮಣು ಣವಿ ಗಲಇ–ಆದರೆ ಮನಸ್ಸುಮಾತ್ರ ಕ್ಷೀಣವಾಗುವುದಿಲ್ಲವು. ಆಸಾ ಣವಿ ಗಲೇಇ–ಮತ್ತು ಆಶಾತೃಷ್ಣೆಯು ಕ್ಷೀಣವಾಗುವುದಿಲ್ಲವು. ಮೋಹು ಫುರಇ– ಮೋಹಭಾವನೆಯು ವ್ಯಾಪಿಸುತ್ತಿರುತ್ತದೆ. ಅಪ್ಪ-ಹಿಉ ಣವಿ–ಆದರೆ ತನ್ನ ಹಿತವನ್ನು ಮಾಡಿಕೊಳ್ಳಬೇಕೆಂಬ ಭಾವವು ಉಂಟಾಗದೆ, ಇಮು ಸಂಸಾರ ಭಮೇಇ – ಈ ಜೀವನು ಚತುರ್ಗತಿಭ್ರಮಣರೂಪ ಸಂಸಾರದಲ್ಲಿ ಭ್ರಮಿಸುತ್ತಾನೆ.

**ಭಾವಾರ್ಥ :** ಆಚಾರ್ಯರು ಸಂಸಾರಪರಿಭ್ರಮಣೆಯ ಕಾರಣಗಳನ್ನು ಇಂತು ವರ್ಣಿಸಿರುತ್ತಾರೆ. ಈ ಮಾನವ ಶರೀರವು ಆಯುಷ್ಯಕರ್ಮದ ಅಧೀನದಲ್ಲಿರುವುದು. ಯಾವಾಗ ಈ ಜೀವನು ಮಾನವ ಪರ್ಯಾಯವನ್ನು ಪಡೆಯುತ್ತಾನೆಯೋ ಆ ಸಮಯದಿಂದ ಪೂರ್ವಬಂಧಿತ ಆಯುಷ್ಯವು ಕ್ಷಣ

ಕ್ಷಣಕ್ಕೂ ಕ್ಷೀಣಿಸುತ್ತಾ ಹೋಗುತ್ತಿರುತ್ತದೆ. ಆದು ಸಂಪೂರ್ಣತೀರಿದ ಮೇಲೆಯೇ ಈ ಜೀವನಿಗೆ ಮನುಷ್ಯ ಶರೀರವನ್ನು ಬಿಡಬೇಕಾಗಿ ಬರುವುದು.

ಈ ಚತುರ್ಗತಿಯಲ್ಲಿ ಮನುಷ್ಯಗತಿಯು ಅತಿಶ್ರೇಷ್ಠವಾದುದೆಂದು ಹೇಳಿಸಿಕೊಳ್ಳುವುದು. ಯಾಕೆಂದರೆ ಇದರಿಂದಲೇ ಮೋಕ್ಷಕ್ಕೆ ಯೋಗ್ಯವಾದ ಸಂಯಮವನ್ನು, ತಪಸ್ಸನ್ನು ಮತ್ತು ಧ್ಯಾನಾದಿಗಳನ್ನು ಮಾಡಲುಸಾಧ್ಯವಿದೆ. ಆದರೂ ಕೂಡ ಅಜ್ಞಾನೀಮೋಹಿಜೀವನು ಆತ್ಮಹಿತವನ್ನುಮಾಡಿಕೊಳ್ಳದೆ, ರಾತ್ರಿಹಗಲು ಈ ಶರೀರದ ಮೋಹದಬಲೆಯಲ್ಲಿ ಸಿಲುಕಿ, ಸಾಂಸಾರಿಕ ಸುಖ ಪ್ರಾಪ್ತಿಯ ಚಿಂತನೆಯಲ್ಲಿ ಮಗ್ನನಾಗಿರುತ್ತಾನೆ. "ನಾನು ಅಂತಹ ಭೋಗಗಳನ್ನು ಭೋಗಿಸಿದ್ದೆ; ಇನ್ನೂ ಅನೇಕ ಭೋಗಗಳನ್ನು ಭೋಗಿಸುತ್ತಿರುವೆನು; ಇನ್ನೂ ಭೋಗಿಸುವುದಿದೆ" ಈ ರೀತಿಯಾಗಿ ವಿಚಾರಿಸುತ್ತಾ ಇಂದ್ರಿಯ ಸಂಬಂಧವಾದ ವಿಷಯಗಳ ಸಂಗ್ರಹಣೆಯಲ್ಲಿಯೂ, ಅವುಗಳ ರಕ್ಷಣೆಯಲ್ಲಿಯೂ ತನ್ಮಯನಾಗುವನು. ಇಷ್ಟವಸ್ತುಗಳ ವಿಯೋಗವಾದೊಡನೆ ದುಃಖಪಡುತ್ತಾನೆ. ಯಾವಪತ್ನಿಪುತ್ರಮಿತ್ರರಿರುವರೋ ಮತ್ತು ಭೋಗಗಳಿರುವವೋ ಅವುಗಳ ವಿಷಯವಾಗಿ ಬಾಧಕಗಳಾದ ಕಾರಣಗಳನ್ನು ಕೆಡಿಸಲು ಚಿಂತಿಸುವನು. ಹೀಗೆ ರಾತ್ರಿಹಗಲು ಮನಸ್ಸು ಇಷ್ಟವಿಯೋಗ, ಅನಿಷ್ಟಸಂಯೋಗ, ಪೀಡೆ ಮತ್ತು ನಿದಾನಜನಿತ ಎಂಬ ಆರ್ತಧ್ಯಾನದಲ್ಲಿಯೂ ಅಥವಾ ಹಿಂಸಾನಂದೀ, ಮೃಷಾನಂದೀ, ಚೌರ್ಯಾನಂದೀ ಮತ್ತು ಪರಿಗ್ರಹಾನಂದೀ ಎಂಬ ರೌದ್ರಧ್ಯಾನದಲ್ಲಿಯೂ ಮಗ್ನನಾಗಿರುತ್ತಾನೆ.

ಮೋಹಿಗೆ ತನ್ನ ನಿಜವಾದ ಸುಖವು ಯಾವುದೆಂದು ತಿಳಿಯದೆ, ಆಶಾ ತೃಷ್ಣಾದಿರೋಗವು ಮತ್ತು ವಿಷಯವಾಸನೆಯು ದಿನೇದಿನೇ ಅಧಿಕವಾಗುತ್ತಾ ಹೋಗುವುದು. ಪಾಪಕರ್ಮಗಳ ಉದಯದಿಂದ ಪ್ರಾಣಿಗಳಿಗೆ ಇಚ್ಛಿತಭೋಗ ವಸ್ತುಗಳು ಪ್ರಾಪ್ತಿಯಾಗದೆ, ಆಶೆಯು ನೆಲೆನಿಲ್ಲುವುದಲ್ಲದೆ ಕಡಿಮೆಯಾಗಲಾರದು. ಪುಣ್ಯಕರ್ಮಗಳ ಉದಯದಿಂದ ಇಚ್ಛಿತಭೋಗವಸ್ತುಗಳ ಪ್ರಾಪ್ತಿಯಾದರೂ, ಅವುಗಳಲ್ಲಿ ಅಲ್ಪಸಮಯ ಸಂತೋಷವು ಪ್ರತಿಭಾಸವಾಗುತ್ತದೆ. ಆಗ ಅವುಗಳಲ್ಲಿ ತೀವ್ರ ಇಚ್ಛಾಪರಿಣಾಮವು ಎಲ್ಲೆ ಮೀರುವುದು.

ಷಟ್‌ಖಂಡದಧಿಪತಿಯಂತೆ ಅತುಲಸಂಪತ್ತಿಸಂಪನ್ನನಾದ ಮಾನವನು ಪ್ರತಿನಿತ್ಯವು ಇಚ್ಛಿತಭೋಗಗಳನ್ನು ಭೋಗಿಸಿಕೊಂಡಿರುತ್ತಿದ್ದರೂ ಕೂಡ

ಎಂದೆಂದಿಗೂ ಸಂತೃಪ್ತನಾಗಲಾರನು. ಹೇಗೆ ಶರೀರವು ಹಳೆಯದಾಗುತ್ತಾ ಹೋಗುತ್ತಿದ್ದರೂ ತೃಷ್ಣೆಯು ವೃದ್ಧಿಯಾಗುತ್ತಲೇ ಹೋಗುವುದೋ ಹಾಗೆಯೇ ಸಂಸಾರ ಮೋಹವು ಸದಾ ಉದ್ದೀಪಿತವಾಗುತ್ತಿರುತ್ತದೆ. ಪರಲೋಕದಲ್ಲಿಯು ಸುಂದರವಸ್ತುಗಳ ಪ್ರಾಪ್ತಿಯಾಗಬೇಕೆಂದೂ, ಸ್ವರ್ಗದಲ್ಲಿ ಜನಿಸಬೇಕೆಂದೂ, ಮನೋಹರಿಯರಾದ ದೇವಾಂಗನೆಯರೊಡಗೂಡಿ ರಮಿಸಬೇಕೆಂದೂ ಇತ್ಯಾದಿ ತೃಷ್ಣೆಯುಳ್ಳ ಮಾನವನು ದಾನ, ಪೂಜೆ, ಜಪ, ತಪ ಮೊದಲಾದ ಶ್ರಾವಕರ ಮತ್ತು ಮುನಿಗಳ ಚಾರಿತ್ರವನ್ನು ಪಾಲಿಸುತ್ತಾನೆ. ಮಿಥ್ಯಾತ್ವರೂಪ ವಿಷ ವನ್ನು ಬಿಡದೆ ಸಂಸಾರಪ್ರೇಮಿಯಾದ ಜೀವನು ಮರಣವನ್ನುಹೊಂದಿ ಪುಣ್ಯದ ಉದಯದಿಂದ ದೇವನಾಗಿಯೂ, ಮನುಷ್ಯನಾಗಿಯೂ, ಪಾಪಕರ್ಮದ ಉದಯ ದಿಂದ ತಿರ್ಯಂಚನಾಗಿಯೂ, ನಾರಕಿಯಾಗಿಯೂ ಆಗುತ್ತಾನೆ. ಅಲ್ಲಿಯೂ ಕೂಡ ಆಸೆಯನ್ನು ಹೆಚ್ಚಿಸಿಕೊಳ್ಳುತ್ತಾ ರಾಗ, ದ್ವೇಷ ಮತ್ತು ಮೋಹಿಯಾಗಿ ಆಯುಷ್ಯವನ್ನು ಕಳೆದು ನೂತನ ಆಯುಷ್ಯವನ್ನು ಬಂಧಿಸಿಕೊಂಡು ಭ್ರಮಿ ಸುತ್ತಾ ಭ್ರಮಿಸುತ್ತಾ ಅನ್ಯಗತಿಯನ್ನು ಹೊಂದುತ್ತಾನೆ.

ಹೀಗೆ ಅನಾದಿಕಾಲದಿಂದ ಜೀವನು ಅಜ್ಞಾನ ಮತ್ತು ತೃಷ್ಣೆಯಿಂದ ಚತುರ್ಗತಿರೂಪ ಸಂಸಾರದಲ್ಲಿ ಸುತ್ತುತ್ತಾ ಬರುತ್ತಿರುತ್ತಾನೆ. ಎಷ್ಟರವರೆಗೆ ಆತ್ಮಹಿತವು ಏನೆಂಬುದನ್ನು ತಿಳಿಯುವುದಿಲ್ಲವೋ, ಅಷ್ಟರವರೆಗೆ ಸಮ್ಯಗ್ದರ್ಶ ನದ ಪ್ರಾಪ್ತಿಯಾಗಲಾರದು. (ಸಂಸಾರಚಕ್ರದಲ್ಲಿ ಭ್ರಮಿಸುತ್ತಲೇ ಇರುತ್ತಾನೆ) ಆದುದರಿಂದ ಬುದ್ಧಿವಂತರು ತನ್ನಾತ್ಮನಲ್ಲಿ ಕರುಣಾಭಾವವನ್ನಿಟ್ಟು ಆತ್ಮನನ್ನು ಜನ್ಮಜರಾಮರಣಾದಿದುಃಖಗಳಿಂದ ರಕ್ಷಿಸುವುದಕ್ಕಾಗಿ ಧರ್ಮವನ್ನೇ ಆಶ್ರ ಯಿಸಬೇಕು. ಅದೇ ಪರಮಸುಖವನ್ನುಂಟುಮಾಡುವಂಥಾದ್ದಾಗಿದೆ.

ಸ್ವಯಂಭೂಸ್ತೋತ್ರದಲ್ಲಿ ಹೇಳಿರುತ್ತಾರೆ:

ತೃಷ್ಣಾರ್ಚಿಷಃ ಪರಿದಹಂತಿ ನ ಶಾಂತಿರಾಸಾ-
ಮಿಷ್ಟೇಂದ್ರಿಯಾರ್ಥವಿಭವೈಃ ಪರಿವೃದ್ಧಿರೇವ।
ಸ್ಥಿತ್ಯೈವ ಕಾಯಪರಿತಾಪಹರಂ ನಿಮಿತ್ತ-
ಮಿತ್ಯಾತ್ಮವಾನ್ವಿಷಯಸೌಖ್ಯಪರಾಂಙ್ಮುಖೋಽಭೂತ್ ॥ ೮೨ ॥

**ಭಾವಾರ್ಥ :** ಮನೋವಾಂಛಿತ ಇಂದ್ರಿಯಗಳಭೋಗಗಳನ್ನು ಭೋಗಿಸುತ್ತಿದ್ದಂತೆ ಆಶಾಜ್ವಾಲೆಯು ಪ್ರಜ್ವಲಿತವಾಗುವುದಲ್ಲದೆ ಶಾಂತಿಸಮಾಧಾನವಾಗಲಾರದು. ಕೆಲವು ಶರೀರದ ತಾಪವು ಭೋಗಗಳನ್ನು ಭೋಗಿಸಿದೊಡನೆ ತತ್ಕಾಲಶಾಂತಿಯಾದಂತೆ ಭಾಸವಾಗುವುದು. ಆದರೆ ಶೀಘ್ರವೇ ಹೆಚ್ಚುವುದು. ಹೀಗೆಂದು ತಿಳಿದ ಭಗವಾನ್ ಕುಂಥುನಾಥರು ಇಂದ್ರಿಯಗಳ ವಿಷಯ ಸುಖದಿಂದ ವಿರಕ್ತರಾದರು.

ಆತ್ಮಾನುಶಾಸನದಲ್ಲಿ ಹೇಳಿರುತ್ತಾರೆ :

**ಶರೀರಮಪಿ ಪುಷ್ಣಂತಿ ಸೇವಂತೇ ವಿಷಯಾನಪಿ।**
**ನಾಸ್ತ್ಯಹೋ ದುಷ್ಕರಂ ನೃಣಾಂ ವಿಷಾದ್ವಾಂಛಂತಿ**
**ಜೀವಿತಮ್ ॥೧೬೯॥**

**ಭಾವಾರ್ಥ :** ಸದಾಕಾಲದಲ್ಲಿ ಈ ಮಾನವನು ತನ್ನ ಶರೀರದ ಪೋಷಣೆಯಲ್ಲಿಯೂ ವಿಷಯಭೋಗಗಳನ್ನು ಅನುಭವಿಸುವುದರಲ್ಲಿಯೂ ತನ್ಮಯನಾಗಿರುತ್ತಾನೆ. ಇದಕ್ಕಿಂತ ಹೀನಕೃತ್ಯವು ಬೇರೇನು? ವಿಷವನ್ನು ಕುಡಿದು ಜೀವಿಸಬೇಕೆಂಬ ಇಚ್ಛೆಯಂತೆಯೇ ಸರಿ.



## ಆತ್ಮಪ್ರೇಮಿಯೇ ಮೋಕ್ಷಪದವಿಗೆ ಅರ್ಹನು

**ಜೇಹಲು ಮಣು ವಿಸಯಹಂ ರಮಇ ತಿಸು ಜಇ ಅಪ್ಪ ಮುಣೇಇ।**
**ಜೋಇಲು ಭಣಇ ಹೋ ಜೋಇಯಹು ಲಹು ಣಿವ್ವಾಣು**
**ಲಹೇಇ ॥೫೦॥**

**ಅನ್ವಯಾರ್ಥ :** ಜೋಇಲು ಭಣಇ–ಯೋಗಿವರ್ಯರು ಹೇಳುತ್ತಾರೆ ಹೋ ಜೋ ಇಯಹು- ಎಲೈ ಯೋಗಿಗಳೇ! ಮಣು ಜೇಹಹು ವಿಸಯಹಂ ರಮಇ–ಯಾವಪ್ರಕಾರ ಮನಸ್ಸುವಿಷಯಗಳಲ್ಲಿ ರಮಿಸುತ್ತದೆಯೋ, ಜಇ ತಿಸು ಅಪ್ಪ ಮುಣೇಇ–ಹಾಗೆಯೇ ಈ ಮನಸ್ಸು ಆತ್ಮಜ್ಞಾನದಲ್ಲಿಯೇ ರಮಿಸು

ತ್ತಿದ್ದರೆ, ಲಹು ಣಿವ್ವಾಣು ಲಹೇಇ – ಶೀಘ್ರವೇ ನಿರ್ವಾಣಪದವಿಯನ್ನು ಹೊಂದಬಹುದು.

**ಭಾವಾರ್ಥ :** ಶ್ರೀ ಯೋಗೀಂದ್ರಾಚಾರ್ಯರು ಯೋಗಿಗಳನ್ನು ಕುರಿತು ಎಲೈ ಯೋಗಿಗಳೇ! ಮನಸ್ಸು ದೃಢವಾಗಿ ತನ್ನಾತ್ಮರಂಗದಲ್ಲಿಯೇ ರಮಿಸು ತ್ತಿದ್ದರೆ ವೀತರಾಗತೆಯ ಪ್ರಭೆಯಿಂದ ಅತಿ ಶೀಘ್ರವೇ ನಿರ್ವಾಣಲಕ್ಷ್ಮಿಯ ಲಾಭವಾಗುವುದು. ಪ್ರತಿಯೊಂದು ಕಾರ್ಯಗಳು ಆತ್ಮವೀರ್ಯದ ಪ್ರಯೋಗ ದಿಂದಲೇ ಪುರುಷಾರ್ಥರೂಪವನ್ನು ತಾಳುವುವು. ಯಾವಪ್ರಕಾರವಾಗಿ ಅಜ್ಞಾನಿಗಳು ಪಂಚೇಂದ್ರಿಯಸಂಬಂಧವಾದ ವಿಷಯಗಳ ಅಂತರಾಳದಲ್ಲಿ ತನ್ಮಯರಾಗಿರುವಂತೆ, ಆಸಕ್ತನಾದ ಜ್ಞಾನೀಜೀವನು ತನ್ನಾತ್ಮನಲ್ಲಿಯೇ ರಮಿಸುತ್ತಾನೆ.

ಸ್ಪರ್ಶನೇಂದ್ರಿಯಕ್ಕೆ ವಶೀಭೂತವಾದ ಆನೆಯು ಮದೋನ್ಮತ್ತವಾದೊ ಡನೆ ಬಂಧಿಸಲ್ಪಟ್ಟರೂ ಕೂಡ ವಿಷಯವಾಸನಾಸಕ್ತತೆಯನ್ನು ಬಿಡದಿರು ವಂತೆಯೂ

ರಸನೇಂದ್ರಿಯಕ್ಕೆ ವಶೀಭೂತವಾದ ಮೀನು ಬಲೆಯಲ್ಲಿಬಿದ್ದು ಪ್ರಾಣ ವನ್ನು ಕಳೆದುಕೊಳ್ಳುವಂತೆಯೂ

ಘ್ರಾಣೇಂದ್ರಿಯಕ್ಕೆ ವಶೀಭೂತವಾದ ಭ್ರಮರವು ಕಮಲದಲ್ಲಿ ಸಿಲುಕಿ ಪ್ರಾಣವನ್ನು ತ್ಯಜಿಸುವಂತೆಯೂ

ಚಕ್ಷುರಿಂದ್ರಿಯಕ್ಕೆ ವಶೀಭೂತವಾದ ಪತಂಗದ ಹುಳು ದೀಪದ ಜ್ಯೋತಿ ಯಲ್ಲಿ ಬಿದ್ದು ಸುಟ್ಟುಕೊಂಡು ಪ್ರಾಣವನ್ನು ತ್ಯಜಿಸುವಂತೆಯೂ

ಕರ್ಣೇಂದ್ರಿಯಕ್ಕೆ ವಶಂಗತವಾದ ಜಿಂಕೆಯು ಬೇಟೆಗಾರರ ಕೈಗೆ ಸಿಲುಕಿ ಪ್ರಾಣವನ್ನೇ ಅರ್ಪಿಸುವಂತೆಯೂ ಪ್ರತಿಯೊಂದು ಜೀವಗಳೂ ಇಂದ್ರಿಯ ಭೋಗಗಳಲ್ಲಿ ಆಸಕ್ತವಾಗುವಂತೆ ಜ್ಞಾನೀಜೀವಗಳು ಆತ್ಮನಲ್ಲಿಯೇ ಆಸಕ್ತ ವುಳ್ಳವರಾಗಿ ಹಗಲಿರುಳು ಆತ್ಮನನ್ನೇ ಸ್ಮರಿಸುತ್ತಿರಬೇಕು. ಆತ್ಮರುಚಿ ಯನ್ನು ಸಾಧಿಸಬೇಕಲ್ಲದೆ ವಿಷಯ ಕಷಾಯಗಳ ರುಚಿಯಲ್ಲಿ ಮಗ್ನರಾಗ ಬಾರದು.

ಆತ್ಮರಸಾಮೃತದಲ್ಲಿ ರಸಿಕನಾಗಿ ಮಾನ-ಅಪಮಾನ, ಲಾಭ-ಅಲಾಭ ಕಾಂಚ-ಕಂಚನ, ಸ್ತ್ರೀ-ಪುರುಷ, ಜೀವನ-ಮರಣ, ಸುಖ-ದುಃಖ ಇವುಗಳಲ್ಲಿ ಸಮಾನಭಾವನೆಯುಳ್ಳವನಾಗಬೇಕು. ಹೇಗೆಂದರೆ ದತ್ತೂರದ ಹಣ್ಣನ್ನು ತಿಂದವನಿಗೆ ಎತ್ತನೋಡಿದತ್ತ ಹಳದಿ ಬಣ್ಣವೇ ಭಾಸವಾಗುವಂತೆ, ಆತ್ಮ ಪ್ರೇಮಿಗೆ ಪ್ರತಿಯೊಂದು ಸ್ಥಾನದಲ್ಲಿ ಆತ್ಮರುಗಳೇ ಕಾಣುತ್ತವೆ. ಶುದ್ಧ ನಿಶ್ಚಯನಯದಿಂದ ತನ್ನಾತ್ಮನು ಪರಮಾತ್ಮ ಸ್ವರೂಪದಂತೆ ಪರಿಶುದ್ಧನಾಗಿರುವನೆಂದು ತಿಳಿದರೆ. ಶುದ್ಧ ಪರಿಶುದ್ಧವಾಗಿಯೇ ತೋರುವುದು. ಆತನ ತೀಕ್ಷ್ಣವಾದ ವಿಚಾರದೃಷ್ಟಿಯಿಂದ ಭೇದವಿಜ್ಞಾನದ ಪ್ರಯತ್ನದಿಂದ ಪುದ್ಗಲಾದಿ ಐದು ದ್ರವ್ಯಗಳ ದರ್ಶನವು ನಿಂತುಹೋಗುವುದು. ಕೇವಲ ಲೋಕದಲ್ಲೆಲ್ಲ ಆತ್ಮರುಗಳೇ ದೃಷ್ಟಿಗೋಚರವಾಗುವುವು. ಈ ಲೋಕವು ಒಂದು ಪರಿಶುದ್ಧ ಆತ್ಮೀಕ ಸಮುದ್ರರೂಪತಾಳುವುದು. ಆ ಆತ್ಮಸಾಗರದ ಆತ್ಮಜ್ಞಾನಿಯು ಒಂದು ಮಹಾಮತ್ಸ್ಯದಂತೆ ಆತ್ಮಸಾಗರದಲ್ಲಿಯೇ ನಿವಾಸಿಸುತ್ತಾನೆ. ಅದರಲ್ಲಿ ಆನಂದಪಡುತ್ತಾನೆ. ಕೇವಲಜಲವನ್ನು ಪಾನಮಾಡಿಕೊಂಡು ಆನಂದ ವಿಭೋರನಾಗುತ್ತಾನೆ.

ಆತ್ಮರಸಿಕನಾದ ಜ್ಞಾನಿಗೆ ಮೂರುಲೋಕದ ಸಂಪತ್ತಿಯು ತೃಣದಂತೆ ಭಾಸವಾಗುವುದರಿಂದಲೇ, ದೊಡ್ಡ ದೊಡ್ಡ ರಾಜ ಮಹಾರಾಜರು ತಮ್ಮ ಸಕಲ ರಾಜ್ಯವಿಭೂತಿಗಳನ್ನು ಸರ್ವ ಪತ್ನೀಪುತ್ರ ಮೊದಲಾದ ಕುಟುಂಬ ವರ್ಗವನ್ನು ತ್ಯಜಿಸಿ, ಎಲ್ಲಾ ಪರಿಗ್ರಹಗಳ ಸಂಯೋಗದಿಂದ ರಹಿತನಾಗಿ ಏಕಾಂಗಿಯಾಗಿ ವನಾದಿಗಳಲ್ಲಿ ನಿವಾಸಿಸುತ್ತಾರೆ ; ನಿರ್ಮೋಹಿಗಳಾಗಿ ಪ್ರೇಮೋತ್ಸಾಹಗಳಿಂದ ಆತ್ಮರಸಾ ಸ್ವಾದನೆಯಲ್ಲಿ ತನ್ಮಯರಾಗಿ ಇತರ ವಿಷಯ ವಾಸನೆಗಳಿಂದ ಉದಾಸೀನರಾಗುತ್ತಾರೆ ; ಮನಸ್ಸನ್ನು ಬಾಹ್ಯ ಪದಾರ್ಥಗಳಲ್ಲಿ ಹೋಗದಂತೆ ತಡೆದು ಆತ್ಮರಸ ಸಮುದ್ರದಲ್ಲಿ ಮಗ್ನರಾಗುತ್ತಾರೆ. ಆಗ ಆ ಮನಸ್ಸು ಕ್ರಮವಾಗಿ ನೀರಿನಲ್ಲಿ ಬಿದ್ದ ಉಪ್ಪಿನಕಲ್ಲು ಲೋಪವಾಗುವಂತೆ (ಕರಗಿ) ಮಾಯವಾಗುತ್ತದೆ. ಕೇವಲ ಆತ್ಮನೇ ದೃಷ್ಟಿಗೋಚರವಾಗುತ್ತದೆ. ಅಂತಹ ಆತ್ಮಸ್ಥಯೋಗಿಗೆ ಪರೀಷಹಗಳುಂಟಾದರೂ ಕೂಡ ವಿಚಲಿತನಾಗಲಾರನು. ಶೀಘ್ರವೇ ಕ್ಷಾಯಿಕ ಸಮ್ಯಗ್ದೃಷ್ಟಿಯಾಗಿ ಕ್ಷಪಕ ಶ್ರೇಣಿಯನ್ನೇರಿ ಅಂತರ್ಮುಹೂರ್ತ

ದಲ್ಲಿ ನಾಲ್ಕು ಘಾತಿಕರ್ಮಗಳನ್ನು ನಾಶಮಾಡಿ ಕೇವಲಜ್ಞಾನಿಯಾಗುತ್ತಾನೆ. ಅದೇ ಶರೀರದಿಂದ ಸಿದ್ಧಪದವಿಯನ್ನು ಪಡೆಯುತ್ತಾನೆ.

ಶ್ರೀ ಪೂಜ್ಯಪಾದರು ಇಷ್ಟೋಪದೇಶದಲ್ಲಿ ಹೇಳುತ್ತಾರೆ:

**ಅವಿದ್ಯಾಭಿದುರಂ ಜ್ಯೋತಿಃ ಪರಂ ಜ್ಞಾನಮಯಂ ಮಹತ್ ।**
**ತತ್ಪ್ರಷ್ಟವ್ಯಂ ತದೇಷ್ಟವ್ಯಂ ತದ್ದ್ರಷ್ಟವ್ಯಂಮುಮುಕ್ಷುಭಿಃ ॥ ೪೯ ॥**

**ಸಂಯಮ್ಯ ಕರಣಗ್ರಾಮಮೇಕಾಗ್ರತ್ವೇನ ಚೇತಸಃ।**
**ಆತ್ಮಾನಮಾತ್ಮವಾಂಧ್ಯಾಯೇದಾತ್ಮನೈವಾತ್ಮನಿ ಸ್ಥಿತಂ ॥ ೨೨ ॥**

**ಪರೀಷಹಾದ್ಯವಿಜ್ಞಾನಾದಾಸ್ರವಸ್ಯ ನಿರೋಧಿನಿ।**
**ಜಾಯತೇಽಧ್ಯಾತ್ಮಯೋಗೇನ ಕರ್ಮಣಾಮಾಶು ನಿರ್ಜರಾ ॥ ೨೪ ॥**

**ಭಾವಾರ್ಥ :** ಅಜ್ಞಾನದಿಂದ ರಹಿತವಾದ ಶ್ರೇಷ್ಠ ಜ್ಞಾನಮಯಿ ಭವನ ದಲ್ಲಿ ದೇದೀಪ್ಯಮಾನ ಜ್ಯೋತಿಯು ಪ್ರಕಾಶಿಸುತ್ತದೆ. ಮೋಕ್ಷಾರ್ಥಿಯು ಆತ್ಮಜ್ಯೋತಿಯ ವಿಷಯವಾಗಿ ಪ್ರಯತ್ನಿಸಬೇಕು. ಅದರ ದರ್ಶನವನ್ನೇ ಮಾಡುವುದುಚಿತವಾಗಿದೆ. ಪಂಚೇಂದ್ರಿಯಗಳನ್ನು ಸಂಯಮದಿಂದ ಬಂಧಿಸಿ, ಏಕಾಗ್ರ ಮನಸ್ಕನಾಗಿ, ಆತ್ಮನಲ್ಲಿಯೇ ಸ್ಥಿರನಾಗಿ, ಆತ್ಮನಿಂದಲೇ ತನ್ನಾತ್ಮ ನನ್ನು ಧ್ಯಾನಿಸತಕ್ಕದ್ದು. ಹೀಗೆ ಅಭ್ಯಾಸವು ಮುಂದುವರೆಯುತ್ತಿರಲು ತೃಷ್ಣಾ ಮೊದಲಾದ ಪರೀಷಹದತ್ತ ಲಕ್ಷ್ಯವಿರದೆ, ಆಸ್ರವವನ್ನು ನಿರೋಧಿಸಿ ದೊಡನೆ, ಕರ್ಮಗಳ ನಿರ್ಜರೆಯು ಆಗುತ್ತಾ ಆಗುತ್ತಾ ಕರ್ಮರಹಿತನಾಗು ತ್ತಾನೆ.



## ಶರೀರವು ನಾಟಕದ ಭವನವು

**ಜೇಹಉ ಜಜ್ಜರು ಣರಯ-ಘರು ತೇಹಉ ಬುಜ್ಝಿ ಸರೀರು।**
**ಅಪ್ಪಾ ಭಾವಹಿ ಣಿಮ್ಮಲಉ ಲಹು ಪಾವಹಿ ಭವತೀರು ॥೩೧॥**

**ಅನ್ವಯಾರ್ಥ :** ಜೇಹಉ ಣರಯ ಘೆರು ಜಜ್ಜರು–ಯಾವ ಪ್ರಕಾರ ವಾಗಿ ನರಕವಾಸವು ಆಪತ್ತುಗಳಿಂದ ಪೂರ್ಣವಾಗಿರುವುದೋ, ತೇಹಉ ಸರೀರು ಬುಜ್ಝಿ–ಅದೇ ಪ್ರಕಾರ ಶರೀರವಾಸವೂ ಕೂಡ ಎಂದು ತಿಳಿದು, ಣಿಮ್ಮಲಉ ಅಪ್ಪಾ ಭಾವಹಿ – ನಿರ್ಮಲಾತ್ಮನನ್ನು ಭಾವಿಸು. ಲಹು ಭವತೀರು ಪಾವಹಿ–ಶೀಘ್ರವೇ ಸಂಸಾರದಿಂದ ಪಾರಾಗುವಿ.

**ಭಾವಾರ್ಥ :** ಶರೀರವು ನರಕಪ್ರಾಯವಾಗಿರುವುದು. ನರಕದಲ್ಲಿರುವ ಎಲ್ಲಾ ಅವಸ್ಥೆಗಳು ಭೀಭತ್ಸಗಳಾಗಿವೆ. ದುರ್ಗಂಧಮಯವಾದ ಮೂತ್ರ ಮಾತ್ರವೂ, ಕ್ಷಾರಜಲವೂ, ಅಂಗೋಪಾಂಗಗಳ ಭೇದಕವಾದ ವಾಯುವೂ, ಖಡ್ಗದ ಧಾರೆಯಂತಿರುವ ವೃಕ್ಷಗಳೂ, ವಿಕಾರವಾದ ವನವೂ ಪ್ರತಿಸಮಯ ದಲ್ಲಿ ಪರಸ್ಪರ ದುಃಖವನ್ನುಂಟುಮಾಡುವುದಾಗಿದೆ. ನರಕದಲ್ಲಿ ಅಲ್ಪಸಮಯ ಸುಖವಿಲ್ಲದಿರುವುದೂ, ಬಾಯಾರಿಕೆ, ಹೊಟ್ಟೆ ಹಸಿವೆಗಳ ಬಾಧೆಯು ಕಡಿಮೆ ಯಾಗದಿರುವಿಕೆಯೂ, ಸದಾಕಾಲದಲ್ಲಿ ವ್ಯಾಕುಲತೆ ಉಂಟಾಗುತ್ತಿರುವಿಕೆಯೂ ಇರುತ್ತದೆ. ನಾರಕಿಗಳು ನರಕವಾಸದಿಂದ ಬಿಡುಗಡೆಯಾಗಬೇಕೆಂಬ ಅಭಿ ಲಾಷೆಯುಳ್ಳವರಾಗಿದ್ದು ಆಯುಷ್ಯವು ಪೂರ್ಣವಾಗುವವರೆವಿಗೂ ಛೇದನ, ಮಾರನ, ಪೀಡನಾದಿ ದುಃಖಗಳನ್ನು ಸಹಿಸಬೇಕಾಗುವುದು

ಮಾನವನ ಶರೀರವು ನರಕದಂತೆಯೇ ಇರುವುದು. ಅದು ರಕ್ತ, ಮಾಂಸ, ಮಜ್ಜಾ, ಮೇಧಸ್ಸು, ವೀರ್ಯ. ಮಲ, ಮೂತ್ರಗಳಿಂದ ಭರಿತವಾಗಿ ರುತ್ತದೆ. ಅದರಲ್ಲಿ ಅನೇಕ ಕ್ರಿಮಿಗಳು ಲಿವಿಲಿವಿಯೆನ್ನುತ್ತಿರುತ್ತದೆ. ಶರೀ ರದ ಹೊದಿಕೆಯನ್ನು ತೆಗೆಯಲು ಸ್ವತಃ ಜುಗುಪ್ಸೆಯುಂಟಾಗುವುದು. ಮಾಂಸಾ ಹಾರಿಗಳಾದ ನೊಣಗಳು ಮುತ್ತುತ್ತವೆ. ನವದ್ವಾರಗಳಿಂದ ದುರ್ಗಂಧ ಮಯವಾದ ಮಲವು ಸುರಿಯುತ್ತಿರುತ್ತದೆ. ಅಗಣಿತರೋಮಕೂಪಗಳಿಂ ದಲೂ ಸದಾಮಲವು ಹೊರಹೊಮ್ಮುತ್ತಿರುತ್ತದೆ. ಶರೀರವು ರೋಗದಮಂದಿರ ವಾಗಿರುತ್ತದೆ. ನಿರಂತರ ಕ್ಷುಧೆ, ತೃಷೆಗಳಿಂದ ಪೀಡಿತವಾಗಿರುತ್ತದೆ. ಯದಿ ಭೋಜನಪಾನಾದಿಗಳು ಸಿಕ್ಕಿದರೂ ಕೂಡ ಈ ರೋಗವು ಶಾಂತವಾಗಲಾರದು. ಇಂತಹ ದುರ್ಗಂಧವೂ, ಅಶುಚಿಯೂ ಆದ ಶರೀರದ ಸಂಪರ್ಕದಿಂದ ಸುಂದ ರವೂ ಪವಿತ್ರವೂ ಆದ ಪುಷ್ಪಮಾಲೆ, ವಸ್ತ್ರಜಲಾದಿಗಳು ಕೂಡ ಅಪವಿತ್ರ

ವಾಗುತ್ತವೆ. ಇಂದ್ರಿಯಗಳಿಗೆ ತಮ್ಮತಮ್ಮ ವಿಷಯಭೋಗಗಳನ್ನು ಭೋಗಿಸುವ ತೃಷ್ಣೆಯು ಅಧಿಕವಾಗುವುದಲ್ಲದೆ ಕಡಿಮೆಯಾಗಲಾರದು.

ತಮ್ಮ ಇಷ್ಟಪ್ರಕಾರ ಭೋಗವಸ್ತುಗಳು ಪ್ರಾಪ್ತವಾಗಲಾರವು. ಆದರೂ ಸ್ಥಿರವಾಗಿರಲಾರವು. ಅವುಗಳ ವಿಯೋಗವಾದೊಡನೆ ದುಃಖ ಮತ್ತು ಕಷ್ಟ ಹೆಚ್ಚುವುದು. ನೂತನ ಆಶಾಜ್ವಾಲೆಯು ಅಧಿಕವಾಗುವುದು. ಅದರ ದಾಹದಿಂದ ಈ ಪ್ರಾಣಿಗಳು ನಿರಂತರ ದುಃಖಗಳ ಪರಂಪರೆಯನ್ನು ಅನುಭವಿಸಬೇಕಾಗುತ್ತದೆ ಮತ್ತು ಸ್ವಾರ್ಥಿಗಳಾದ ಮಿತ್ರವರ್ಗವು ತಮ್ಮತಮ್ಮ ಸ್ವಾರ್ಥಸಾಧನೆಯ ಸಿದ್ಧಿಯ ಪ್ರಯತ್ನವುಳ್ಳವರಾಗಿರುತ್ತಾರೆ. ಮಾತಾಪಿತೃಗಳು, ಅಣ್ಣತಮ್ಮಂದಿರು, ಪುತ್ರಪುತ್ರಿಯರು, ಅಕ್ಕತಂಗಿಯರು ಮೊದಲಾದ ಬಂಧುಬಾಂಧವರೆಲ್ಲರೂ ಯಾವುದಾದರೊಂದು ಸ್ವಾರ್ಥತೆಯಿಂದಲೇ ಸ್ನೇಹಮಾಡುತ್ತಾರೆ ಅಥವಾ ಪ್ರೀತಿಸುತ್ತಾರೆ. ಪ್ರತಿಯೊಬ್ಬರು ಸುಖವನ್ನು ಅನುಭವಿಸಬೇಕೆಂಬ ಅಭಿಲಾಷೆಯಿಂದಲೇ ಇರುವರು. ಅವರ ಇಷ್ಟಾರ್ಥಸಿದ್ಧಿಯಾಗಲಿಲ್ಲವೆಂದಮೇಲೆ ಅವರೆಲ್ಲರೂ ವಿಘ್ನಕಾರಕರೇ ಆಗುತ್ತಾರೆ.

ಬಾಲ್ಯಕಾಲದಲ್ಲಿ ಪರತಂತ್ರತೆಯಿಂದ ಕಷ್ಟಗಳನ್ನೂ, ಯೌವನಕಾಲದಲ್ಲಿ ಮಹಾಘೋರವಾದ ತೃಷ್ಣೆಗಳನ್ನೂ ಪೂರ್ಣಗೊಳಿಸುವ ಸಲುವಾಗಿ, ಧರ್ಮಕಾರ್ಯಗಳನ್ನು ಮರೆತು ಕ್ರಿಯಾಶೀಲರಾಗುತ್ತಾರೆ. ವೃದ್ಧಾವಸ್ಥೆಯಲ್ಲಿ ಶಕ್ತಿಸಾಮರ್ಥ್ಯಗಳಿಲ್ಲದಿರುವುದರಿಂದ ಘೋರವಾದ ಶಾರೀರಕವೂ, ಮಾನಸಿಕವೂ ಆದ ವೇದನೆಯನ್ನು ಸಹಿಸುತ್ತಾರೆ. ಇಷ್ಟವಿಯೋಗ ಮತ್ತು ಅನಿಷ್ಟಸಂಯೋಗಸಂಬಂಧವಾದ ಮಹಾದುಃಖವನ್ನು ಸಹಿಸಬೇಕಾಗುತ್ತದೆ. ರಾತ್ರಿಹಗಲು ಚಿಂತಾರೂಪ ಚಿತೆಯಲ್ಲಿ ದಹಿಸುತ್ತಿರುತ್ತಾರೆ. ಈ ಮಾನವ ಶರೀರವು ನಾರಕಿಯರಂತೆ ಸದಾ ಕ್ಷೋಭಿತವಾಗಿಯೂ ಮತ್ತು ದುಃಖಿಯಾಗಿಯೂ ಇರುತ್ತದೆ.

ಮನುಷ್ಯಗತಿಯಲ್ಲಿ ಪ್ರಾಪ್ತವಾಗುವ ವಿಷಯಸಾಮಗ್ರಿಗಳು ನರಕದಲ್ಲಿ ದೊರೆಯಲಾರವು. ಆದರೂ ಕ್ಷಣಿಕ ಭೋಗಗಳ ಲೋಭದಲ್ಲಿ ಮಗ್ನನಾದ ಮಾನವನು (ಅಜ್ಞಾನಿ) ನರಕಕ್ಕೆ ಸಮಾನವಾದ ಈ ಶರೀರದಲ್ಲಿರಲು ಇಷ್ಟಪಡುವನಲ್ಲದೆ, ಇದರಿಂದ ಪಾರಾಗಬೇಕೆಂದು ಇಷ್ಟಪಡುವುದಿಲ್ಲ. ಇದನ್ನು

ತಿಳಿದೇ ಮಹೋಪಕಾರಿಗಳಾದ ಆಚಾರ್ಯರು ಈ ನರಕವಾಸದಂತಿರುವ ಶರೀರಸಿವಾಸದಲ್ಲಿದ್ದುಕೊಂಡು ಮೋಹಪಡುವುದು ಮೂರ್ಖತನವೆಂದು ಬೋಧಿಸಿರುವರು.

ಈ ಮನುಷ್ಯ ದೇಹದಿಂದ ಆತ್ಮನು ಎಂದೆಂದಿಗೂ ದೇಹಧಾರಣೆಯಾಗದಂತೆ ಸಾಧನೆಮಾಡಲು ಸಾಧ್ಯವಿದೆ. ನಿರ್ವಾಣರೂಪಸ್ಥಾನದ ಲಾಭವು ಯಾವ ಸಂಯಮ ಮತ್ತು ಧ್ಯಾನದಿಂದಾಗುವುದೋ ಅಂತಹ ಸಂಯಮ ಮತ್ತು ಧ್ಯಾನವು ಮನುಷ್ಯದೇಹಧಾರಿಯಿಂದ ಸಾಧ್ಯವಾಗುವುದಲ್ಲದೆ ನಾರಕೀ ಶರೀರದಿಂದ ಸಾಧ್ಯವಾಗಲಾರದು ಆದುದರಿಂದ ಈ ಶರೀರಮೋಹವನ್ನು ತ್ಯಜಿಸುವುದು ಯೋಗ್ಯವಾಗಿರುತ್ತದೆ.

ನೌಕರನಿಗೆ ಕೊಡುವಂತೆ ಶರೀರಕ್ಕೆ ಯೋಗ್ಯ ಆಹಾರಪಾನವಸ್ತುಗಳನ್ನು ಕೊಟ್ಟು, ತನ್ನ ಕಾರ್ಯದಲ್ಲಿ ಸಹಾಯಕನಾಗುವುದಕ್ಕೆ ಯೋಗ್ಯವನ್ನಾಗಿ ಮಾಡುತ್ತಿರಬೇಕು ಮತ್ತು ಇದರಿಂದ ಧರ್ಮವನ್ನು ಸಾಧಿಸಬೇಕು. ತನ್ನಾತ್ಮನ ಮೂಲಸ್ವಭಾವದಲ್ಲಿ ಶ್ರದ್ಧೆಯನ್ನಿಟ್ಟುಕೊಂಡು ಸದಾ ಚಿಂತಿಸುತ್ತಿರಬೇಕು. ಆಗ ಇವನು ಅದೇ ಭವದಲ್ಲಿಯಾಗಲೀ ಅಥವಾ ಕೆಲವು ಭವಗಳಲ್ಲಿಯಾಗಲೀ ಮುಕ್ತಿಯನ್ನು ಪಡೆದು ಅಶರೀರಿಯಾಗುವನು.

ಸ್ವಯಂಭು ಸ್ತೋತ್ರದಲ್ಲಿ ಹೇಳಿರುತ್ತಾರೆ :

**ಅಜಂಗಮಂ ಜಂಗಮನೇಯ ಯಂತ್ರಂ ಯಥಾ ತಥಾ ಜೀವಧೃತಂ ಶರೀರಂ।**
**ಬೀಭತ್ಸು ಪೂತಿ ಕ್ಷಯಿ ತಾಪಕಂ ಚ ಸ್ನೇಹೋ ವೃಥಾತ್ರೇತಿ ಹಿತಂ ತ್ವಮಾಖ್ಯಃ ॥೨॥**

**ಭಾವಾರ್ಥ :** ಎಲೈ ಸುಪಾರ್ಶ್ವನಾಥಸ್ವಾಮಿಯೇ! ತಮ್ಮಿಂದುಪದೇಶಿಸಲ್ಪಟ್ಟ ಉಪದೇಶವು ಜೀವಗಳ ಹಿತಕಾರಕವಾಗಿರುತ್ತದೆ. ಹೇಗೆ ಯಂತ್ರವು ಯಾವನಾದರೊಬ್ಬ ಮನುಷ್ಯನಿಂದಲೇ ನಡೆಸಿದರೇನೆ ನಡೆಯುವಂತೆ, ಈ ಶರೀರವು ಜೀವನಮೂಲಕವೇ ಸಂಚರಿಸುವುದು. ಇದು ಘೃಣಾಸ್ಪದವೂ, ಭಯೋತ್ಪಾದಕವೂ, ಅಶುಚಿಯೂ, ನಾಶಶೀಲವೂ, ದುಃಖತಾಪಗಳನ್ನು ಕೊಡು

ವಂಥದ್ದೂ ಆಗಿದೆ. ಇಂತಹ ಶರೀರದಲ್ಲಿ ಸ್ನೇಹವನ್ನಿಟ್ಟುಕೊಳ್ಳುವುದು ನಿರರ್ಥಕವೂ ಸ್ವಯಂ ಆಪತ್ತಿಗಳನ್ನೆದುರಿಸುವುದೂ ಆಗಿರುತ್ತದೆ.

ಆತ್ಮಾನುಶಾಸನದಲ್ಲಿ ಹೇಳಿರುತ್ತಾರೆ:

**ಅಸ್ಥಿಸ್ಥೂಲತುಲಾಕಲಾಪಘಟಿತಂ ನದ್ಧಂ ಶಿರಾಸ್ನಾಯುಭಿಃ**
**ಚರ್ಮಾಚ್ಛಾದಿತಮಸ್ರಸಾಂದ್ರಪಿಶಿತೈರ್ಲಿಪ್ತಂ ಸುಗುಪ್ತಂ ಖಲೈಃ।**
**ಕರ್ಮಾರಾತಿಭಿರಾಯುರುಚ್ಚನಿಗಲಾಲಗ್ನಂ ಶರೀರಾಲಯಂ**
**ಕಾರಾಗಾರಮವೇಹಿ ತೇ ಹತಮತೇ ಪ್ರೀತಿಂ ವೃಥಾ ಮಾ**
**ಕೃಥಾಃ ॥ ೫೯ ॥**

**ಭಾವಾರ್ಥ :** ಎಲೈ ಮೂರ್ಖಶಿರೋಮಣಿಯೇ! ಈ ನಿನ್ನ ಶರೀರ ರೂಪ ಗ್ರಹವು ದುಷ್ಟ, ನೀಚ ಶತ್ರುಗಳಿಂದ ರಚಿಸಲ್ಪಟ್ಟಿರುವ ಕಾರಾಗೃಹ ದಂತಿರುವುದು. ಇದು ಇಂದ್ರಿಯಗಳೆಂಬ ಬಲವಾದ ಪಂಜರಗಳಿಂದ ದೃಢವಾಗಿರುವುದು. ನರಗಳೆಂಬ ಬಲಿಯಿಂದ ಸುತ್ತಲ್ಪಟ್ಟಿರುವುದು. ರಕ್ತ ಮತ್ತು ಮಾಂಸದಿಂದ ಲಿಪ್ತವೂ, ಚರ್ಮವೆಂಬ ಹೊದಿಕೆಯಿಂದ ಹೊದಿಸಿ ಗುಪ್ತಸ್ಥಾನವಾಗಿರುವುದೂ, ಆಯುಷ್ಯಕರ್ಮವೆಂಬ ಬೇಡಿಗಳಿಂದ ಬಂಧಿಸಲ್ಪಟ್ಟದುದೂ ಆದ ಶರೀರವನ್ನು ಮಹಾಕಾರಾಗೃಹವೆಂದು ತಿಳಿ. ಅಂತಹ ಶರೀರದಲ್ಲಿ ವ್ಯರ್ಥವಾಗಿ ಪ್ರೀತಿಯನ್ನು ಮಾಡಬೇಡ. ಆಗ ಅನಾದಿಕಾಲದಿಂದ ಸಂಬಂಧಿಸಿರುವ ಶರೀರ ಬಂಧನದಿಂದ ಪಾರಾಗುವೆ.



## ಜಗತ್ತಿನ ಕಾರ್ಯದಲ್ಲಿ ಸಿಲುಕಿದ ಪ್ರಾಣಿಯು ಆತ್ಮನನ್ನು ಗುರುತಿಸಲಾರದು

**ಧಂಧಇ ಪಡಿಯಉ ಸಯಲ ಜಗಿ ಣವಿ ಅಪ್ಪಾ ಹು ಮುಣಂತಿ।**
**ತಹಿಂ ಕಾರಣಿ ಏ ಜೀವ ಫುಡು ಣ ಹು ಣಿವ್ವಾಣು ಲಹಂತಿ ॥ ೫೨ ॥**

**ಅನ್ವಯಾರ್ಥ :** ಸಯಲ ಜಗಿ ಧಂಧಇ ಪಡಿಯಉ–ಜಗತ್ತಿನ ಎಲ್ಲ ಜೀವಗಳು ತಮ್ಮ ತಮ್ಮ ವ್ಯವಹಾರದಲ್ಲಿ ತನ್ಮಯವಾಗಿರುತ್ತವೆ. ಅಪ್ಪಾ

ಹು ಣವಿ ಮುಣಂತಿ–ಆದ್ದರಿಂದ ನಿಶ್ಚಯನಯದಿಂದ ಆತ್ಮನನ್ನು ಒಪ್ಪಲಾರವು. ತಹಿಂ ಕಾರಣೆ ಏ ಜೀವ ಣಿವ್ವಾಣು ಣ ಹು ಲಹಂತಿ ಫುಡು–ಈ ಕಾರಣ ದಿಂದಲೇ ಇವುಗಳು ನಿರ್ವಾಣಪದವಿಯನ್ನು ಪಡೆಯುವುದಿಲ್ಲವೆಂಬುದು ಸ್ಪಷ್ಟ ವಿಷಯವಾಗಿರುತ್ತದೆ.

ಭಾವಾರ್ಥ : ಸಕಲ ಸಂಸಾರ ಶರೀರಧಾರಿಗಳಾದ ಜೀವಗಳು ತಮ್ಮ ಇಂದ್ರಿಯಗಳ ವಿಷಯಗಳ ಹಾಗೂ ಹೊಟ್ಟೆಹಸಿವೆ, ಬಾಯಾರಿಕೆ ಮೊದಲಾದ ರೋಗಗಳ ಶಾಂತಿಗಾಗಿ ರಾತ್ರಿ ಹಗಲು ವ್ಯವಹರಿಸುತ್ತಾ ತಮ್ಮ ಶರೀರದ ರಕ್ಷಣೆಯ ವ್ಯವಹಾರದಲ್ಲಿ ಮಗ್ನವಾಗಿರುತ್ತವೆ. ಏಕೇಂದ್ರಿಯ ಮೊದಲುಗೊಂಡು ಚತುರಿಂದ್ರಿಯವರೆಗಿರುವ ಜೀವಗಳು ಮನಸ್ಸಿಲ್ಲದಿದ್ದರೂ ಆಹಾರ ಪದಾರ್ಥಗಳ ಅನ್ವೇಷಣಕ್ಕಾಗಿ ಶ್ರಮಪಡುವವುಗಳಾಗಿಯೂ, ಭಯವುಳ್ಳವುಗಳಾಗಿಯೂ, ಮೈಥುನ ಇಚ್ಛೆಯುಳ್ಳವುಗಳಾಗಿಯೂ, ತಮ್ಮ ಶರೀರದೊಡನೆ ಪರಿಗ್ರಹವುಳ್ಳವುಗಳಾಗಿಯೂ ಇರುತ್ತವೆ. ಈ ಆಹಾರ, ಭಯ, ಮೈಥುನ, ಪರಿಗ್ರಹಗಳೆಂಬ ನಾಲ್ಕು ಸಂಜ್ಞೆಗಳು ಎಲ್ಲಾ ಪ್ರಾಣಿಗಳಲ್ಲಿಯೂ ಕಂಡುಬರುತ್ತವೆ.

ಮನಸ್ಸಿಲ್ಲದ ಕೆಲವು ಪಂಚೇಂದ್ರಿಯ ಜೀವಗಳಿಗೆ ಹಿತ ಅಹಿತ ವಿಚಾರ ಮಾಡುವ ಶಕ್ತಿಯಿರುವುದಿಲ್ಲ. ಇಂದ್ರಿಯಗಳ ತೃಷ್ಣಾದಲ್ಲಿ ಸಿಕ್ಕಿ ನಿರಂತರ ಆಚರಿಸುತ್ತಿರುತ್ತವೆ. ಮನಸ್ಸಿಸಿಂದ ಕೂಡಿದ ಪಂಚೇಂದ್ರಿಯ ಜೀವಗಳ ಅಂತರಂಗದಲ್ಲಿ ಆತ್ಮ ಅನಾತ್ಮಗಳ ವಿಚಾರಶಕ್ತಿಯು ಇರುತ್ತಿದ್ದರೂ, ಈ ಸಂಜ್ಞೀಜೀವಗಳು ಕೂಡಾ ಸಂಸಾರಿಕ ಕಾರ್ಯಗಳಲ್ಲಿ ಸಿಲುಕಿ ತಾನು ಯಾರು, ತನ್ನ ಕರ್ತವ್ಯವೇನೆಂಬ ವಿಷಯದಲ್ಲಿ ಸ್ವಲ್ಪವೂ ಲಕ್ಷ್ಯವಿಟ್ಟಿಲ್ಲವು (ಲಕ್ಷ್ಯವಿಡುವುದಿಲ್ಲವು).

ನಾರಕೀ ಜೀವಗಳ ವ್ಯವಹಾರವಾದರೋ ಪರಸ್ಪರ ಹೊಡೆದಾಡುವುದರಲ್ಲಿಯೂ ಬಡೆದಾಡುವುದರಲ್ಲಿಯೂ ಕಾಲಾಹರಣವಾಗುತ್ತಿರುವುದು. ದೇವ ಗತಿಯಲ್ಲಿರುವ ಜೀವಗಳು ರಾಗಪಾಶದಲ್ಲಿ ಸಿಲುಕಿ, ಸಂಗೀತ ನೃತ್ಯ ವಾದ್ಯಗಳ ಆನಂದದಲ್ಲಿಯೂ, ದೇವಿಯರೊಡಗೂಡಿ ಕ್ರೀಡಿಸುತ್ತಾ ರಾಗ ಮೋಹವರ್ಧಕ ಕಾರ್ಯಗಳಲ್ಲಿಯೂ ತನ್ಮಯರಾಗಿರುವುದರಿಂದ ಇತ್ತ ವಿಚಾರವಿನಿಮಯ ಗೈಯಲು ಸಮಯವೇ ಸಿಗುವುದಿಲ್ಲವು.

ಪಂಚೇಂದ್ರಿಯ ಸಂಜ್ಞೀ ಜೀವಗಳಾದ ತಿರ್ಯಂಚ ಜೀವಗಳೂ ಕೂಡ ಅಸಂಜ್ಞೀ ಜೀವಗಳೋಪಾದಿಯಲ್ಲಿಯೇ ಆಹಾರ, ಭಯ, ಮೈಥುನ, ಪರಿಗ್ರಹ ಗಳೆಂಬ ನಾಲ್ಕು ಸಂಜ್ಞೆಗಳಲ್ಲಿ ತನ್ಮಯವಾಗಿ ಉದರಾಗ್ನಿಯ ಶಮನಕ್ಕಾಗಿ ಕೆಲಸ ಕಾರ್ಯಗಳನ್ನುಮಾಡಿಕೊಂಡಿರುತ್ತವೆ. ಇನ್ನು ಮಾನವರ ಅವಸ್ಥೆ ಗಳು ಪ್ರತ್ಯಕ್ಷ ಪ್ರಕಟವಾಗಿರುತ್ತವೆ. ಅವರೂ ಅಸಿ, ಮಸಿ, ಕೃಷಿ, ವ್ಯಾಪಾರ, ಶಿಲ್ಪ ಅಥವಾ ವಿದ್ಯೆ, ಸೇವಾಕಾರ್ಯ, ಪಶುಪಾಲನಾದಿ ಅನೇಕ ಕೆಲಸಗಳಲ್ಲಿ ಮಗ್ನರಾಗಿ ತಮ್ಮ ತಮ್ಮ ಕುಟುಂಬದ ಸಂರಕ್ಷಣೆಯ ಸಲುವಾಗಿ ಹಣವನ್ನು ಸಂಪಾದಿಸುತ್ತಿರುತ್ತಾರೆ. ಭೋಜನ, ಪಾನಾದಿಗಳ ವ್ಯವಸ್ಥೆಮಾಡುತ್ತಿರು ತ್ತಾರೆ. ಸ್ತ್ರೀಯ ಜೊತೆಯಲ್ಲಿ ರಮಿಸಿ ಸಂತಾನಗಳಿಗೆ ಜನ್ಮವೀಯುತ್ತಾರೆ ಮತ್ತು ಆ ಸಂತಾನಗಳ ಪಾಲನೆಯಲ್ಲಿಯೂ ವಿದ್ಯಾಭ್ಯಾಸಕಾರ್ಯದಲ್ಲಿಯೂ, ವಿವಾಹಾದಿಕಾರ್ಯಗಳಲ್ಲಿಯೂ, ಅಷ್ಟೇ ಅಲ್ಲ ಅವರಲ್ಲುಂಟಾಗುವ ರೋಗಾದಿ ಗಳ ನಿವೃತ್ತಿಗಾಗಿಯೂ ದುಡಿಯುತ್ತಿರುತ್ತಾರೆ.

ಈ ಮಾನವನು ತೀವ್ರವಾದ ಮಾನಕಷಾಯಕ್ಕೆ ವಶೀಭೂತನಾಗಿ ಸತ್ಕೀರ್ತಿಯ ಪ್ರಾಪ್ತಿಗಾಗಿ ಧನಸಂಗ್ರಹಿಸಿ, ನಾನಾವಿಧ ವ್ಯವಹಾರಗಳನ್ನು ಮಾಡಿ ಪ್ರಸಿದ್ಧನಾಗಲು ಪ್ರಯತ್ನಪಡುತ್ತಿರುತ್ತಾನೆ. ಇದರಿಂದ ಪಂಚೇಂದ್ರಿ ಯಗಳ ಭೋಗಲಾಲಸೆಯ ಆಶೆಯು ಅತ್ಯಧಿಕವಾಗಿರುತ್ತದೆ. ಅವುಗಳ ತೃಪ್ತಿ ಗಾಗಿ ಪ್ರತಿನಿತ್ಯವೂ ಹೊಸ ಹೊಸ ಭೋಗಗಳನ್ನಿಚ್ಛಿಸುತ್ತಿರುತ್ತಾನೆ. ಅವು ಗಳ ಪ್ರಾಪ್ತಿಗಾಗಿ ಅನೇಕ ವಿಧದ ಛಲ, ಕಪಟಗಳಿಂದಲಾದರೂ ಧನ ಸಂಗ್ರ ಹಿಸುತ್ತಾನೆ. ಆ ಧನದ ಮತ್ತು ಪರಿಗ್ರಹದ ರಕ್ಷಣೆಯಲ್ಲಿ ಚಿಂತಿತನಾಗುತ್ತಾನೆ. ಸ್ತ್ರೀಸಂಬಂಧವಾಗುವುದರಿಂದ ಕುಟುಂಬಸಂಬಂಧ ಬೆಳೆಯುತ್ತದೆ. ಬಂಧು ಬಾಂಧವ ಕುಟುಂಬಾದಿಗಳ ಜೀವನ, ಮರಣ ವಿಷಯವಾಗಿಯೂ ಮತ್ತು ವಿವಾ ಹಾದಿಕಾರ್ಯಗಳಲ್ಲಿಯೂ ತನ್ಮಯನಾಗುತ್ತಾನೆ. ಹೀಗೆ ಇಪ್ಪತ್ತುನಾಲ್ಕು ಘಂಟೆಕಾಲ ಚಿಂತಾಮಗ್ನನಾಗಿ ಮೋಹಜಾಲದಲ್ಲಿ ಸಿಲುಕಿ ವ್ಯಾಕುಲನಾಗು ತ್ತಾನೆ. ಆದರೆ ಎಂದೆಂದಿಗೂ ಮನಸ್ಸನ್ನು ಶಾಂತಗೊಳಿಸಿ, ನಾನು ಯಾರೆಂಬ ವಿಷಯವಾಗಿ ಗಂಭೀರಪೂರ್ವಕ ವಿಚಾರಮಾಡುವುದಿಲ್ಲ.

ಯಾರಾದರೂ ಪರೋಪಕಾರಿಗಳಾದ ಸದ್ಗುರುವು ಆತ್ಮನಿಗೆ ಹಿತವಾ ಗುವ ವಿಷಯವನ್ನು ಬಹಳ ಹೇಳಿದರೂ ಕೂಡ ಆ ವಿಷಯದಲ್ಲಿ ಮನಸ್ಸನ್ನಿಡು

ವುದೇ ಇಲ್ಲವು. ತ್ಯಾಗ, ವೈರಾಗ್ಯ ವಿಚಾರಗಳು ಕಹಿಯೆಂದೇ ಭಾಸವಾಗುತ್ತವೆ. ಅರ್ಥ, ಕಾಮ, ಪುರುಷಾರ್ಥ ಸಂಚಯಕ್ಕಾಗಿಯೂ ಪುಣ್ಯಕರ್ಮಗಳ ಪ್ರಾಪ್ತಿಯ ಲೋಭದಿಂದ ವ್ಯವಹಾರ ಧರ್ಮಗಳನ್ನೆಸಗುವುದರಲ್ಲಿಯೂ ಮಗ್ನನಾಗಿರುವುದಲ್ಲದೆ, ನಿಶ್ಚಯ ಧರ್ಮವನ್ನು ಚಿಂತಿಸುವುದರಲ್ಲಿ ಒಂದು ನಿಮಿಷ ಕಾಲವನ್ನೂ ಉಪಯೋಗಿಸುವುದಿಲ್ಲವು. ಹೀಗೆ ಸಕಲ ಸಂಸಾರಹುಳುವಾಗಿ ಕರ್ಮಗಳನ್ನು ಬಂಧಿಸಿಕೊಂಡು ನಾಲ್ಕು ಗತಿಗಳಲ್ಲಿ ಭ್ರಮಿಸುತ್ತಿರುವನಲ್ಲದೆ, ಸಂಸಾರ ಸಾಗರದಿಂದ ಪಾರಾಗುವ ಉಪಾಯವಾದ ಯಾವ ಆತ್ಮದರ್ಶನ ಲಾಭವನ್ನು ಮಾಡಿಕೊಳ್ಳುವುದಿಲ್ಲವು.

ಆತ್ಮಾನುಶಾಸನದಲ್ಲಿ ಹೇಳಿರುತ್ತಾರೆ :

**ಬಾಲ್ಯೇ ಬೇತ್ಸಿ ನ ಕಿಂಚಿದಪ್ಯಪರಿಪೂರ್ಣಾಂಗೋ ಹಿತಂ ವಾಹಿತಂ।**
**ಕಾಮಾಂಧಃ ಖಲು ಕಾಮಿನೀದ್ರುಮಘನೇ ಭ್ರಾಮ್ಯನ್ವನೇ**
**ಯೌವನೇ ||**
**ಮಧ್ಯೇ ವೃದ್ಧತೃಷಾರ್ಜಿತುಂ ವಸುಪಶುಃ ಕ್ಲಿಶ್ನಾಸಿ ಕೃಷ್ಯಾದಿಭಿ-**
**ರ್ವೃದ್ಧೋ ವಾರ್ಧಮೃತಃ ಕ್ವ ಜನ್ಮಫಲಿತೇ ಧರ್ಮೋ**
**ಭವೇನ್ನಿರ್ಮಲಃ ||೮೯||**

**ಭಾವಾರ್ಥ :** ಬಾಲ್ಯಕಾಲದಲ್ಲಿ ಅಂಗೋಪಾಂಗಗಳು ಪೂರ್ಣವಾಗದಿರುವಾಗ ಅಜ್ಞಾನಿಯಾಗಿ ತನ್ನ ಹಿತಾಹಿತ ವಿಚಾರವನ್ನು ತಿಳಿಯದವನಾಗುತ್ತಾನೆ. ಯೌವನ ಕಾಲದಲ್ಲಿ ಕಾಮಾಂಧನಾಗಿ ಸ್ತ್ರೀರೂಪ ವೃಕ್ಷಗಳಿಂದ ಭರಿತವಾದ ವನದಲ್ಲಿ ಸಂಚರಿಸುತ್ತಿರುತ್ತಾನೆ. ಮಧ್ಯವಯಸ್ಸಿನಲ್ಲಿ ತೃಷ್ಣಾ ಪಿಶಾಚಿಯನ್ನು ಹೆಚ್ಚಿಸಿಕೊಂತ ಅಜ್ಞಾನಿಯು ಹೊಲಗದ್ದೆಗಳ ಕಾರ್ಯದಲ್ಲಿ ಮಗ್ನನಾಗಿ ಧನ ಸಂಪಾದಿಸುವುದರಲ್ಲಿಯೇ ಕಷ್ಟನಷ್ಟಗಳನ್ನು ಹೊಂದುತ್ತಾನೆ. ಇಷ್ಟರಲ್ಲಿಯೇ ವೃದ್ಧಾಪ್ಯವು ತಲೆದೋರಿ ಅರ್ಧ ಜೀವವೇ ಹೋದಂತವನಾಗುತ್ತಾನೆ. ಪಾಪ! ಮಾನವ ಜನ್ಮವನ್ನೂ ಸಫಲಗೊಳಿಸುವ ನಿರ್ಮಲ ಧರ್ಮವನ್ನು ಹೇಗೆತಾನೆ ಮಾಡಿಕೊಳ್ಳಲು ಸಾಧ್ಯವಾದೀತು. ಮಾನವನು ತನ್ನ ಅಮೂಲ್ಯ ಜೀವನವನ್ನು ವಿಷಯವಾಸನೆಯಲ್ಲಿ ಕಳೆಯುತ್ತಾ ಆತ್ಮಹಿತವನ್ನು ಮಾಡಿಕೊಳ್ಳದೆ, ಭವಭ್ರಮಣೆಯಲ್ಲಿಯೇ ಅತುಲ ದುಃಖವನ್ನು ಅನುಭವಿಸುತ್ತಾನೆ.

## ಆತ್ಮಜ್ಞಾನವಿಲ್ಲದ ಶಾಸ್ತ್ರಪಠಣವು ನಿಷ್ಫಲ

**ಸತ್ಥ ಪಢಂತಹ ತೇ ವಿ ಜಡ ಅಪ್ಪಾ ಜೇ ಣ ಮುಣಂತಿ।**
**ತೆಹಿಂ ಕಾರಣಿ ಏ ಜೀವ ಫುಡು ಣ ಹು ಣಿವ್ವಾಣು ಲಹಂತಿ ॥ ೫೩ ॥**

**ಅನ್ವಯಾರ್ಥ :** ಸತ್ಥ ಪಢಂ ತಹ ತೇ ಅಪ್ಪಾ ಣ ಮುಣಂತಿ ಜೇ ವಿ ಜಡ–ಶಾಸ್ತ್ರಗಳನ್ನು ಓದುತ್ತಿದ್ದು ಆತ್ಮಪರಿಚಯಮಾಡಿಕೊಳ್ಳದವನು ಅಜ್ಞಾನಿಯೇ. ತಹಿಂ ಕಾರಣಿ ಏ ಜೀವ ಫುಡು ಣ ಹು ಣಿವ್ವಾಣು ಲಹಂತಿ–ಈ ಕಾರಣದಿಂದ ಶಾಸ್ತ್ರಪಾಠಿಗಳಾದವರೂ ನಿರ್ವಾಣವನ್ನು ಪಡೆಯಲಾರರೆಂಬುದು ಸ್ಪಷ್ಟಸಂಗತಿಯಾಗಿರುತ್ತದೆ.

**ಭಾವಾರ್ಥ :** ಎಷ್ಟೋ ವಿದ್ವಾಂಸರು ಶಾಸ್ತ್ರಸ್ವಾಧ್ಯಾಯಮಾಡುವವರೂ ವ್ಯಾಕರಣ, ನ್ಯಾಯ, ಕಾವ್ಯ, ವೈದ್ಯಶಾಸ್ತ್ರ, ಜ್ಯೋತಿಷ್ಯ, ಧರ್ಮಶಾಸ್ತ್ರಗಳೇ ಮೊದಲಾದ ಅನೇಕ ಶಾಸ್ತ್ರಗಳನ್ನು ತಿಳಿದವರಾಗಿರುತ್ತಾರೆ. ಆದರೂ ಶುದ್ಧ ನಿಶ್ಚಯನಯದ ವಿಷಯದತ್ತ ದೃಷ್ಟಿಯನ್ನೇ ಕೊಡುವುದಿಲ್ಲವು ಅವರು ಅಧ್ಯಾತ್ಮಜ್ಞಾನದಿಂದ ಬಾಹಿರರಾಗಿ ಉಳಿಯುತ್ತಾರೆ. ನಿಶ್ಚಯನಯದಿಂದ ಆತ್ಮನು ಪರಮಾತ್ಮನೇ ಆಗಿರುತ್ತಾನೆಂಬ ಅನುಭವವು ಅವರಿಗೆ ಇಲ್ಲದಿರುವುದರಿಂದಲೇ ಅಂಥವರೂ ಕೂಡ ಜಡಸ್ವರೂಪರೆಂದೇ ತಿಳಿಯಬೇಕು. ಅಷ್ಟೇ ಅಲ್ಲ, ಮೋಕ್ಷಮಾರ್ಗ ತಿಳಿಯದೆ ಅಂತಹವರಿಂದ ನಿರ್ವಾಣಪದವಿಯು ದೂರವೆಂದೇ ನಿಶ್ಚಯಿಸಿಕೊಳ್ಳಬೇಕು. ಜಿನಾಗಮದ ಸ್ವಾಧ್ಯಾಯದ ಫಲದಿಂದ ನಿಶ್ಚಯ ಸಮ್ಯಗ್ದರ್ಶನದ ಪ್ರಾಪ್ತಮಾಡಿಕೊಳ್ಳುವುದು ಮಹಾಪ್ರಯಾಸದ ಕಾರ್ಯವಾಗಿದೆ. ಆದ್ದರಿಂದ ಪ್ರಥಮಾನುಯೋಗ, ಕರಣಾನುಯೋಗ, ಚರಣಾನುಯೋಗ ಮತ್ತು ದ್ರವ್ಯಾನುಯೋಗಗಳೆಂಬ ನಾಲ್ಕು ಅನುಯೋಗಗ್ರಂಥಗಳನ್ನು ಓದಿ, ಶಾಸ್ತ್ರೀಯ ವಿಷಯಗಳನ್ನು ತಿಳಿದು. ಈ ಪ್ರಪಂಚವು ಜೀವಾದಿ ಷಡ್ದ್ರವ್ಯಗಳ ಸಮೂದಾಯವಾಗಿರುತ್ತದೆಂದು ತಿಳಿದುಕೊಳ್ಳಬೇಕು ಮತ್ತು ಪ್ರತಿಯೊಂದು ದ್ರವ್ಯವು ನಿತ್ಯವಾಗಿದ್ದರೂ ಪರ್ಯಾಯದ ದೃಷ್ಟಿಯಿಂದ ಅನಿತ್ಯಗಳಾಗಿವೆಯೆಂದು ತಿಳಿದುಕೊಳ್ಳಬೇಕು.

ಈ ಜಗತ್ತು ನಿತ್ಯಾನಿತ್ಯಸ್ವರೂಪವೂ, ಅನಾದಿ ಅನಂತವೂ ಆಗಿರುತ್ತದೆ. ಈ ಆರುದ್ರವ್ಯಗಳಲ್ಲಿ ಧರ್ಮ, ಅಧರ್ಮ, ಆಕಾಶ, ಕಾಲದ್ರವ್ಯಗಳು ಸದಾ

ಕಾಲದಲ್ಲಿ ಶುದ್ಧವೂ, ಉದಾಸೀನವೂ ಮತ್ತು ನಿಶ್ಚಲವೂ ಆಗಿರುವಂತೆ, ಶುದ್ಧ ಆತ್ಮರುಗಳೂ ಕೂಡ ನಿಶ್ಚಲರೂ, ಉದಾಸೀನರೂ ಆಗಿರುತ್ತಾರೆ. ಸಂಸಾರೀ ಜೀವಗಳು ಕರ್ಮಸಂಯೋಗದಿಂದಿರುವುದರಿಂದ ಅಶುದ್ಧವಾಗಿರುತ್ತವೆ; ಕರ್ಮ ಗಳ ಉದಯದಿಂದ ಚತುರ್ಗತಿಗಳಲ್ಲಿ ನಾನಾಪ್ರಕಾರದ ಅವಸ್ಥೆಗಳುಂಟಾಗು ತ್ತಿರುತ್ತವೆ; ಕರ್ಮೋದಯದಿಂದ ಔದಾರಿಕ, ವೈಕ್ರಿಯಕ ಮೊದಲಾದ ಶರೀರ ಗಳ ರಚನೆಯಾಗುತ್ತಿರುತ್ತವೆ. ಈ ಜೀವನು ಸ್ವತವೇ ಮನ, ವಚನ, ಕಾಯಗಳ ವರ್ತನೆಯಿಂದ ಗ್ರಹಣೆಮಾಡಿ, ಕಷಾಯಗಳ ಅನುಸಾರ ಕರ್ಮ ಗಳನ್ನು ಬಂಧಿಸಿಕೊಳ್ಳುತ್ತಾನೆ.

ಸ್ವತಃ ತನ್ನ ರಾಗದ್ವೇಷಮೋಹಗಳ ಪರಿಣಾಮದ ನಿಮಿತ್ತದಿಂದ ಒಂದು ಕಡೆಯಲ್ಲಿ ಕರ್ಮಗಳನ್ನು ಬಂಧಿಸಿಕೊಳ್ಳುತ್ತಿರುತ್ತಾನೆ. ಇನ್ನೊಂದು ಕಡೆಯಲ್ಲಿ ಕರ್ಮಗಳ ಫಲವನ್ನು ಅನುಭವಿಸಿ ನಿರ್ಜರೆಮಾಡಿಕೊಳ್ಳುತ್ತಿರು ತ್ತಾನೆ. ಹೀಗೆ ಪರಮ ಪುಣ್ಯದ ಫಲಗಳನ್ನು ಭೋಗಿಸುತ್ತಾ, ಸಂಸಾರದಲ್ಲಿ ಜನ್ಮ, ಜರಾ, ಮರಣ, ಇಷ್ಟವಿಯೋಗ, ಅನಿಷ್ಟಸಂಯೋಗಸಂಬಂಧವಾದ ಘೋರದುಃಖಗಳನ್ನೂ, ಕಷ್ಟಗಳನ್ನೂ ಅನುಭವಿಸುತ್ತಾನೆ. ಈ ಕಷ್ಟ ಪರಂ ಪರೆಯಿಂದ ಬಿಡುಗಡೆಯಾಗುವ ಉಪಾಯವಾದರೋ ರತ್ನತ್ರಯ ಧರ್ಮದ ಪ್ರಾಪ್ತಿಯಾಗಿರುತ್ತದೆ. ಆದರೆ ಸಂವರೆಯಿಂದ ಹೊಸಕರ್ಮಗಳ ಬರುವಿಕೆಯು ನಿಂತು, ಪುರಾತನ ಕರ್ಮಗಳ ಅವಿಪಾಕ ನಿರ್ಜರೆಯಾಗಿ ಕರ್ಮಗಳು ಫಲ ವನ್ನು ಕೊಡದೆ ಉದುರಿಹೋಗುವುದರಿಂದ, ಈ ಆತ್ಮನು ಕರ್ಮಸಂಯೋಗ ದಿಂದ ಪೂರ್ಣ ರೀತ್ಯಾ ಬಿಡುಗಡೆಯಾಗಿ ಮುಕ್ತನಾಗುತ್ತಾನೆ. ಹೀಗೆ ವ್ಯವ ಹಾರ ನಯದಿಂದ ಜೀವಾದಿ ಸಪ್ತತತ್ವಗಳನ್ನು ವಿಸ್ತಾರವಾಗಿ ತಿಳಿದು, ತನ್ನಲ್ಲಿ ಧೃಢಪಡಿಸಿಕೊಂಡು, ತಾನು ಶುದ್ಧನಾಗಬೇಕು ಮತ್ತು ಚಿಂತಿಸಬೇಕು. ನಿಶ್ಚ ಯನಯದಿಂದಲಾಗಲಿ, ದ್ರವ್ಯದೃಷ್ಟಿಯಿಂದಲಾಗಲಿ ಈ ನನ್ನ ಆತ್ಮನು ಶುದ್ಧ ನಾಗಿರುತ್ತಾನೆ. ನೀರು ಹಾಲಿನಂತೆ ಒಂದಾಗಿ ತೋರಿತ್ತಿದ್ದರೂ ನೀರು ಮತ್ತು ಹಾಲು ಇವೆರಡು ಹೇಗೆ ಭಿನ್ನಭಿನ್ನಗಳಾಗಿವೆಯೋ ಹಾಗೆ ಆತ್ಮನೂ ಕೂಡ ಸಕಲಕರ್ಮಗಳಿಂದಲೂ ಮತ್ತು ರಾಗಾದಿ ವಿಭಾವಪರಿಣಾಮಗಳಿಂ ದಲೂ ಭಿನ್ನನೇ ಆಗಿರುತ್ತಾನೆಂದು ತಿಳಿಯಬೇಕು.

ಈ ವಿಧದ ಭೇದವಿಜ್ಞಾನ ಕಲೆಯನ್ನು ಸಿದ್ಧಿಸಿಕೊಂಡು ನಿಶ್ಚಯ ಸಮ್ಯಗ್ದರ್ಶನದ ಪ್ರಾಪ್ತಿಗಾಗಿ ಪ್ರತಿನಿತ್ಯವೂ ಭೇದವಿಜ್ಞಾನದ ವಿಷಯವಾಗಿ ಮನನಮಾಡುತ್ತಿರಬೇಕು. ಏಕಾಂತಸ್ಥಾನದಲ್ಲಿ ಕುಳಿತುಕೊಂಡು ಈ ಪ್ರಪಂಚವನ್ನು ಮತ್ತು ತನ್ನನ್ನು ದ್ರವ್ಯದೃಷ್ಟಿಯಿಂದ ವಿಚಾರಿಸುತ್ತಾ ಆರು ದ್ರವ್ಯಗಳನ್ನು ಬೇರೆಬೇರೆ ವಿಶುದ್ಧವೆಂದು ವಿಚಾರಿಸುತ್ತಾ ಚಿಂತಿಸುತ್ತಾ ವೀತರಾಗತೆಯನ್ನು ಬೆಳೆಸುವುದರಲ್ಲಿಯೇ ಸತತ ಪ್ರಯತ್ನಿಸಬೇಕು. ಸಮಭಾವವನ್ನು ಬೆಳೆಸುಕೊಳ್ಳುವುದರಲ್ಲಿ ಉಪಾಯವನ್ನುಮಾಡಬೇಕು. ನಿರಂತರ ಅಧ್ಯಾತ್ಮ ವಿಷಯನ್ನೇ ಚಿಂತಿಸಬೇಕು. ಈ ಪ್ರಕಾರ ಬಲವಾದ ಅಭ್ಯಾಸದಿಂದ ಜೀವನು ಕರಣಲಬ್ಧಿಯನ್ನು ಪಡೆದು ಅನಂತಾನುಬಂಧಿ ನಾಲ್ಕು ಕಷಾಯಗಳನ್ನು, ಮಿಥ್ಯಾತ್ವ ಮೊದಲಾದ ಮೂರು ದರ್ಶನ ಮೋಹನೀಯಗಳನ್ನು ಉಪಶಮಗೊಳಿಸಿ ಸಮ್ಯಗ್ದೃಷ್ಟಿಯಾಗುವನು. ಆಗ ಅಂತರಂಗಿಕವಾಗಿ ಆತ್ಮಸಾಕ್ಷಾತ್ಕಾರವೂ, ಆತ್ಮಾನಂದದ ಅನುಭವವೂ ಆದೊಡನೆ ಮೋಕ್ಷಮಾರ್ಗವು ಏನೆಂಬುದು ದೃಷ್ಟಿಗೋಚರವಾಗುವುದು. ಶಾಸ್ತ್ರಗ್ರಂಥಗಳ ಓದುವಿಕೆಯೇ ಹೇತು ಸಮ್ಯಗ್ದರ್ಶನಪ್ರಾಪ್ತಿಯಾಗಿರಬೇಕು. ಇಲ್ಲದಿದ್ದರೆ ಕಾರ್ಯಕಾರಿಯಾಗಲಾರದು.

ಅನೇಕ ಜೀವರುಗಳು ವ್ಯವಹಾರಶಾಸ್ತ್ರಕುಶಲರಾಗಿ, ಅಹಂಕಾರದಿಂದ ಮದೋನ್ಮತ್ತತೆಯಿಂದ ಉನ್ಮತ್ತರಾಗಿ, ಕಷಾಯಗಳಿಂದ ಮಲಿನರಾಗಿ, ಖ್ಯಾತಿ ಪೂಜಾ ಅಥವಾ ಲಾಭದ ಪ್ರೇಮಿಯಾಗಿ, ಸಂಸಾರಿಕ ವಿಷಯ ಕಷಾಯಗಳ ಪುಷ್ಟಿಗಾಗಿ ಜ್ಞಾನವನ್ನುಪಯೋಗಿಸುತ್ತಾರೆ. ಅಂತಹವರು ಅಧ್ಯಾತ್ಮಿಕ ಗ್ರಂಥಗಳನ್ನು ಓದದೆಯೂ, ಆತ್ಮನ ಶುದ್ಧಸ್ವರೂಪವನ್ನು ಮನನಮಾಡದೆಯೂ ಇರುವುದರಿಂದ, ಅವರಿಗೆ ಸಂಸಾರಮೋಹವು ಅಧಿಕವಾಗುತ್ತದೆ. ಅವರು ಆತ್ಮಜ್ಞಾನಪ್ರಕಾಶವನ್ನು ಪಡೆಯದೆ ಅಜ್ಞಾನಂಧಕಾರದಲ್ಲೇ ತಮ್ಮ ಜೀವನವನ್ನು ಕಳೆಯುತ್ತಾ ಮಾನವ ಜನ್ಮದ ಸಾರ್ಥಕತೆಯನ್ನು ಮಾಡಿಕೊಳ್ಳಲಾರರು. ಅವರ ಶಾಸ್ತ್ರಗ್ರಂಥಗಳ ಜ್ಞಾನವು ಸಂಸಾರವರ್ಧಕವಾಗುವುದಲ್ಲದೆ, ನಿರ್ವಾಣ ಮಾರ್ಗದಿಂದ ದೂರಕ್ಕೆ ಕೊಂಡೊಯ್ಯುವುದು.

ಶ್ರೀ ಯೋಗೀಂದ್ರಾಚಾರ್ಯರು ಉಪದೇಶವೀಯುತ್ತಾರೇನೆಂದರೆ: ಶಾಸ್ತ್ರಗ್ರಂಥಗಳ ಪಠಣ ಪಾಠಣಗಳ ಮೂಲಕ ತನ್ನಾತ್ಮಶುದ್ಧ ಸ್ವಭಾವದ

ಅಭಿರುಚಿಯನ್ನು ಪಡೆದು, ಶುದ್ಧಾತ್ಮಾನುಭವವಾಗುವುದೇ ಮೋಕ್ಷಮಾರ್ಗ ವಾಗಿರುತ್ತದೆ. ಅದೇ ಸತ್ಯವಾದ ಸುಖವು.

ಸಾರಸಮುಚ್ಚಯದಲ್ಲಿ ಹೇಳಿರುತ್ತಾರೆ:

ಏತಜ್ಞಾನಫಲಂ ನಾಮ ಯಚ್ಚಾರಿತ್ರೋದ್ಯಮಃ ಸದಾ ।
ಕ್ರಿಯತೇ ಪಾಪನಿರ್ಮುಕ್ತೈಃ ಸಾಧುಸೇವಾಪರಾಯಣೈಃ ॥ ೧೧ ॥

ಸರ್ವದ್ವಂದಂ ಪರಿತ್ಯಜ್ಯ ನಿಭೃತೇನಾಂತರಾತ್ಮನಾ ।
ಜ್ಞಾನಾಮೃತಂ ಸದಾ ಪೇಯಂ ಚಿತ್ತಾಲ್ಹಾದನಮುತ್ತಮಂ ॥೧೨॥

**ಭಾವಾರ್ಥ**: ಶಾಸ್ತ್ರಜ್ಞಾನದ ಫಲವು ಪಾಪಗಳಿಂದ ರಕ್ಷಣೆಹೊಂದಿ, ಸಾಧುಸಜ್ಜನರ ಸೇವೆಮಾಡಿ, ಚಾರಿತ್ರಪಾಲನೆಯಲ್ಲಿ ಉದ್ಯಮಶೀಲರನ್ನಾಗಿ ಮಾಡಿ, ಸಮ್ಯಗ್ದೃಷ್ಟಿ-ಆತ್ಮಜ್ಞಾನಿಯಾಗಿ, ಸಕಲರಾಗಾದಿ ವಿಕಲ್ಪಗಳನ್ನು ತ್ಯಜಿಸಿ, ನಿಶ್ಚಿಂತನಾಗಿ ಪರಮಾನಂದಮಯ ಆತ್ಮಜ್ಞಾನರೂಪ ಅಮೃತವನ್ನು ಪಾನಮಾಡುವುದಕ್ಕೆ ಕಾರಣವಾಗಿರುತ್ತದೆ.



## ಇಂದ್ರಿಯ ಮತ್ತು ಮನಸ್ಸಿನ ನಿರೋಧದಿಂದಲೇ ಆತ್ಮಾನುಭವವು ಸ್ವಾಭಾವಿಕವಾಗಿ ಉದ್ಭವಿಸುವುದು

ಮಣು ಇಂದಿಹಿ ವಿ ಛೋಡಿಯಇ ಬಹು ಪುಚ್ಛಿಯಇ ಣ ಕೋಇ ।
ರಾಯಹಂ ಪಸರು ಣಿವಾರಿಯಇ ಸಹಜ ಉಪಜ್ಜಇ ಸೋಇ ॥ ೩೪ ॥

**ಅನ್ವಯಾರ್ಥ**: ಮಣು ಬಹು ಇಂದಿಹಿ ವಿ ಛೋಡಿಯಇ-ಯದಿ ಬುದ್ಧಿಶಾಲಿಗಳು ಮನಸ್ಸು ಮತ್ತು ಇಂದ್ರಿಯಗಳಿಂದ ಬಿಡುಗಡೆ ಹೊಂದುವುದು. ಕೋಇ ಣ ಪುಚ್ಛಿಯಇ—ಆಗ ಯಾರೊಡನೆಯೂ ಕೇಳುವುದು ಅವಶ್ಯಕವಿಲ್ಲವು. ರಾಯಹಂ ಪಸರು ಣಿವಾರಿಯಇ—ಯಾವಾಗ ರಾಗವು ಬೆಳೆಯುವುದನ್ನು ದೂರಗೊಳಿಸುವುದೋ, ಸಹಜ ಸೋಇ ಉಪಜ್ಜಇ—ಆಗ ಈ ಆತ್ಮಜ್ಞಾನವು ಸ್ವಾಭಾವಿಕವಾಗಿಯೇ ಉಂಟಾಗುತ್ತದೆ.

**ಭಾವಾರ್ಥ:** ಆರುದ್ರವ್ಯಗಳ ಸ್ವರೂಪವನ್ನು ವ್ಯವಹಾರ ನಿಶ್ಚಯ ನಯದ ದೃಷ್ಟಿಯಿಂದಲಾಗಲಿ, ದ್ರವ್ಯಾರ್ಥಿಕ ಮತ್ತು ಪರ್ಯಾಯಾರ್ಥಿಕ ದೃಷ್ಟಿಯಿಂದಲಾಗಲಿ ತಿಳಿದಿರುವವನೂ, ತನ್ನಾತ್ಮ ಸ್ವರೂಪದಲ್ಲಿ ಗಾಢರುಚಿ ಯುಳ್ಳವನೂ ಆತ್ಮನನ್ನು ಕರ್ಮಮಲದಿಂದ ಬಿಡಿಸಬೇಕೆಂಬ ಉತ್ಕಟ ಅಭಿ ಲಾಷೆಯುಳ್ಳವನೂ ಮತ್ತು ಆತ್ಮಾಧೀನವಾದ ನಿಶ್ಚಯಚಾರಿತ್ರದ ಪ್ರಾಪ್ತಿಗಾಗಿ ಶಾಸ್ತ್ರಜ್ಞಾನವುಳ್ಳವನೂ ಉಪಯೋಗಗಳನ್ನು ಮತ್ತು ಇಂದ್ರಿಯ ಹಾಗೂ ಮನಸ್ಸುಗಳಿಂದ ತಡೆಯಲು ಸತತವು ಯತ್ನಿಸಬೇಕು.

ಇಂದ್ರಿಯ ವಿಷಯಗಳ ವಾಂಛೆಯನ್ನು ದೂರೀಕರಿಸಿ ಇಂದ್ರಿಯಗಳ ಮೂಲಕ ಸ್ಪರ್ಶಿಸುವುದರಿಂದ, ರಸಾಸ್ವಾದನೆಯಿಂದ, ಗಂಧವನ್ನು ಸೇವಿಸುವುದ ರಿಂದ, ನೋಡುವುದರಿಂದ ಮತ್ತು ಕೇಳುವುದರಿಂದ ಈ ರೀತಿಯ ಬುದ್ಧಿಪೂರ್ವಕ ಗಳಾದ ಕ್ರಿಯೆಗಳಿಂದ ವಿರಕ್ತನಾಗಬೇಕು. ವಿಷಯಭೋಗವು ಕ್ಷಣಿಕ ತೃಪ್ತಿ ಕಾರಿಯಾಗಿದೆ ಮತ್ತು ಮುಂದಿನ ತೃಷ್ಣಾವರ್ಧಕವಾಗಿದೆ. ಹೀಗೆ ತಿಳಿದು ಕೊಂಡು ಸರ್ವಇಂದ್ರಿಯಭೋಗದಿಂದ ಪೂರ್ಣವಿರಕ್ತಿ ಇರಬೇಕು. ಅಬುದ್ಧಿ ಪೂರ್ವಕವಾಗಿ ಅಭಿಲಾಷೆಗಳುಂಟಾಗುತ್ತಿದ್ದರೆ, ವೀತರಾಗಭಾವನೆಯಿಂದ ತಿಳಿದು ವಿಚಾರಿಸಿ ತ್ಯಜಿಸಬೇಕು. ಧ್ಯಾನಾವಸ್ಥೆಯಲ್ಲಿ ಉಪಯೋಗಗಳನ್ನು ಇಂದ್ರಿಯ ವಿಷಯಗಳಿಂದ ದೃಢಪೂರ್ವಕವಾಗಿ ತಡೆಯಲೇಬೇಕು.

ಈ ಮನಸ್ಸಿನಿಂದಲೇ ಪೂರ್ವದ ಭೋಗಸ್ವರೂಪಗಳ ಆತ್ಮಾಕಾಂಕ್ಷೆ ಯುಂಟಾಗುವುದರಿಂದ ಮನಸ್ಸನ್ನು ದೃಢಪಡಿಸಿಕೊಂಡು, ಸಂಕಲ್ಪ ವಿಕಲ್ಪಗಳ ಚಿಂತನೆಯನ್ನು ವೈರಾಗ್ಯಭಾವನೆಯಿಂದಲೇ ತಡೆದು, ವ್ಯವಹಾರನಯದಿಂದ ಹನ್ನೆರಡು ಭಾವನೆಗಳನ್ನು ಭಾವಿಸುತ್ತಾ ಮನಸ್ಸನ್ನು ಶಾಂತಗೊಳಿಸುವುದು ಆತ್ಮನಲ್ಲಿ ರಮಿಸುವ ಮಹಾ ಉಪಾಯವಾಗಿರುತ್ತದೆ. ಮತ್ತೆ ನಿಶ್ಚಯನಯ ದಿಂದ ಲೋಕದ ಎಲ್ಲ ದ್ರವ್ಯಗಳ ಮೂಲಸ್ವಭಾವವನ್ನು ಭಿನ್ನಭಿನ್ನವಾಗಿ ನೋಡಬೇಕು. ಹೀಗೆ ಸಮಭಾವನೆಯನ್ನು ಸಂಪಾದಿಸಲು ಪ್ರಯತ್ನಿಸುತ್ತಿರ ಬೇಕು. ಮತ್ತೆ ತನ್ನಾತ್ಮನ ಸ್ವರೂಪವನ್ನು ಪರಿಶುದ್ಧವಾಗಿಯೇ ಭಾವಿಸು ತ್ತಿರಬೇಕು.

ಹೀಗೆ ಭಾವಿಸುತ್ತಾ ಮನೋಯೋಗವು ಆತ್ಮರೂಪವಾಗಿ ಆತ್ಮನಲ್ಲಿ ರಮಿಸುವುದು. ಅಲ್ಪಜ್ಞಾನಿಯಾದ ಛದ್ಮಸ್ಥನ ಉಪಯೋಗವು ಅಂತರ್ಮು

ಹೂರ್ತ ಕಾಲದೊಳಗೆ ಸ್ವಲ್ಪ ಸಮಯ ಸ್ಥಿರವಾಗಿರುವುದು ಮತ್ತು ನಿಶ್ಚಯ ನಯದಿಂದ ಆತ್ಮಭಾವನೆಯಲ್ಲಿ ಬರಬೇಕು. ಆತ್ಮನಲ್ಲಿ ರಮಿಸಲು ಅನ್ಯರ ಸಹಾಯತೆಯ ಆವಶ್ಯಕತೆ ಇಲ್ಲವು. ಸ್ವಯಂ ಪುರುಷಾರ್ಥಿಯಾಗಿ ರಾಗವು ಪ್ರಸರವಂತೆ ಜಾಣನಾಗಿರಬೇಕು. ತತ್ವಜ್ಞಾನಿಯು ಆರುದ್ರವ್ಯಗಳ ಮೂಲ ಸ್ವಭಾವವನ್ನು ವಿಚಾರಿಸುತ್ತಾ ವಿರಾಗಿಯಾಗುವನು. ನಿಜವಾಗಿಯೂ ತನ್ನಾತ್ಮಸ್ವರೂಪವನ್ನು ನಿಶ್ಚಯಸಹಿತವಾಗಿ ಯಾವನು ಜ್ಞಾನವಮಾಡಿಕೊಳ್ಳುವನೋ ಅವನ ಅಂತರಂಗದಲ್ಲಿ ಆತ್ಮದರ್ಶನವು ಅವಶ್ಯಂಭಾವಿಯಾಗಿದೆ.

ಸರೋವರದ ನಿರ್ಮಲವಾದ ನೀರು ಗಾಳಿಯ ಹೊಡೆತದಿಂದ ಅಲ್ಲೋಲ ಕಲ್ಲೋಲವಾದಾಗ ಅದರಲ್ಲಿ ನಮ್ಮ ಮುಖವು ಸ್ಪಷ್ಟವಾಗಿ ದೃಷ್ಟಿಗೋಚರವಾಗುವುದಿಲ್ಲವು. ಆದೇ ನಿರ್ಮಲ ನೀರು ಶಾಂತಪ್ರಶಾಂತವಾಗಿರುವಾಗ ನಮ್ಮ ಮುಖವು ಸ್ಪಷ್ಟವಾಗಿ ತೋರುವಂತೆ ರಾಗದ್ವೇಷಗಳ ಚಂಚಲತೆಯು ದೂರವಾದೊಡನೆ, ತನ್ನಾತ್ಮನು ತನಗೆ ಸ್ವಯಂ ದೃಷ್ಟಿಗೋಚರನಾಗುತ್ತಾನೆ; ಆತ್ಮಾನುಭವವು ಕೂಡಾ ಆಗುತ್ತದೆ. ಉಪಯೋಗಗಳ ಚಂಚಲತೆಯು ಬಾಧಕವಾಗಿರುತ್ತದೆ ಉಪಯೋಗವನ್ನು ವೈರಾಗ್ಯ ರೂಪ ಹಗ್ಗದಿಂದ ಬಂಧಿಸಿದೊಡನೆ ಸ್ವಾಭಾವಿಕವಾಗಿಯೇ ಆತ್ಮಜ್ಯೋತಿಯು ಜಗಮಗಿಸುವುದು.

ಸಮಾಧಿಶತಕದಲ್ಲಿ ಹೇಳಿರುತ್ತಾರೆ:

**ಯದಾ ಮೋಹಾತ್ಪ್ರಜಾಯೇತೇ ರಾಗದ್ವೇಷೌ ತಪಸ್ವಿನಃ।**
**ತದೈವ ಭಾವಯೇತ್ಸ್ವಸ್ಥಮಾತ್ಮಾನಾಂ ಶಾಮ್ಯತಃ ಕ್ಷಣಾತ್ ॥೩೯॥**
**ಯತ್ರಕಾಯೇ ಮುನಿಃ ಪ್ರೇಮ ತತಃ ಪ್ರಚ್ಯಾವ್ಯ ದೇಹಿನಂ।**
**ಬುದ್ಧ್ಯಾ ತದುತ್ತಮೇ ಕಾಯೇ ಯೋಜಯೇತ್ಪ್ರೇಮ ನಶ್ಯತಿ ॥೪೦॥**

**ಭಾವಾರ್ಥ:** ತಪಸ್ವಿಗೆ ಮನಸ್ಸಿನಲ್ಲಿ ರಾಗದ್ವೇಷಗಳುಂಟಾದೊಡನೆ, ಅವನು ಶಾಂತಭಾವನೆಯಿಂದ ತನ್ನಲ್ಲಿ ಸ್ಥಿರನಾಗಿ ಆತ್ಮೀಕ ಶುದ್ಧ ಸ್ವಭಾವದ ಭಾವನೆಯನ್ನು ಭಾವಿಸಬೇಕು. ಯಾವ ಶರೀರದಲ್ಲಿ ಮಮತೆಯಿರುವುದೋ ಆದರಿಂದ ತನ್ನಾತ್ಮಭಾವವನ್ನು ದೂರೀಕರಿಸಿ, ತನ್ನ ಉತ್ತಮ ಜ್ಞಾನಮಯ ಶರೀರದಲ್ಲಿ ಆ ಭಾವನೆಯನ್ನು ಏಕೀಕರಿಸಿದರೆ, ರಾಗಭಾವನೆಯು ದೂರವಾಗುವುದು.

# ಪುದ್ಗಲಮಯ ಜಗತ್ತಿನ ವ್ಯವಹಾರದಿಂದ ತನ್ನನ್ನು ಭಿನ್ನನೆಂದು ತಿಳಿ

**ಪುಗ್ಗಲು ಅಣ್ಣು ಜಿ ಅಣ್ಣು ಜಿಉ ಅಣ್ಣು ಜಿ ಸಹು ವವಹಾರು ।**
**ಚಯಹಿ ವಿ ಪುಗ್ಗಲು ಗಹಹಿ ಜಿಉ ಲಹು ಪಾವಹಿ ಭವಪಾರು ॥೫೫॥**

**ಅನ್ವಯಾರ್ಥ :** ಪುಗ್ಗಲು ಅಣ್ಣು ಜಿ–ಮೂರ್ತಿಮತ್ತಾದ ಪುದ್ಗಲದ ಸ್ವಭಾವವು ಜೀವದಿಂದ ಭಿನ್ನವಾಗಿರುತ್ತದೆ. ಜಿಉ ಅಣ್ಣು–ಜೀವಸ್ವಭಾವವು ಪುದ್ಗಲಾದಿಗಳಿಂದಲೂ ತೀರಾ ಭಿನ್ನವೇ. ಸಹು ವವಹಾರು ಅಣ್ಣು ಜಿ–ಹಾಗೆ ಸಕಲಜಗತ್ತಿನ ವ್ಯವಹಾರ ಪ್ರಪಂಚವು ಕೂಡಾ ತನ್ನಿಂದ ಅತಿರಿಕ್ತವೇ ಆಗಿರುವುದರಿಂದ, ಪುಗ್ಗಲು ಚಯಹಿ ವಿ ಜಿಉ ಗಹಹಿ–ಪುದ್ಗಲಾದಿಗಳನ್ನು ತ್ಯಜಿಸಿ ಯದಿ ತನ್ನಾತ್ಮನು ಭಿನ್ನನೆಂದು ಗ್ರಹಿಸಿದೆ, ಲಹು ಭವಪಾರು ಪಾವಹಿ–ಆದರೆ ಅತಿಶೀಘ್ರವೇ ಸಂಸಾರಸಾಗರದಿಂದ ಪಾರಾಗಬಹುದು.

**ಭಾವಾರ್ಥ :** ತನ್ನಾತ್ಮನು ಎಲ್ಲ ಪರದ್ರವ್ಯಗಳಿಂದಲೂ, ಪರಭಾವಗಳಿಂದಲೂ ಭಿನ್ನನೆಂಬ ಗ್ರಹಣೆಮಾಡುವುದು, ಅನುಭವಮಾಡಿಕೊಳ್ಳುವುದು ಒಂದು ಉಪಾಯವಾಗಿರುತ್ತದೆ. ಜ್ಞಾನಿಯಾದವನು ವಿಚಾರಿಸುವುದೇನೆಂದರೆ ಪ್ರತಿಯೊಂದು ದ್ರವ್ಯದ ಅಸ್ತಿತ್ವವು ಭಿನ್ನಭಿನ್ನವಾಗಿರುವುದೆಂದೂ, ಒಂದೊಂದು ದ್ರವ್ಯವು ಇನ್ನೊಂದು ದ್ರವ್ಯದೊಡನೆ ಸೇರಿ ಒಂದು ರೂಪವಾಗಲಾರದೆಂದೂ, ಒಂದು ದ್ರವ್ಯವು ಖಂಡವಾಗಿ ಎರಡೋ ಅಥವಾ ಅನೇಕ ದ್ರವ್ಯಗಳಾಗಲಾರವೆಂದೂ ವಿಚಾರಿಸುತ್ತಾನೆ. ಎಲ್ಲಾ ದ್ರವ್ಯಗಳೂ ತಮ್ಮ ತಮ್ಮ ಅನಂತಗುಣಗಳಿಂದ ಮತ್ತು ಪರ್ಯಾಯಗಳಿಂದ ಸಹಿತಗಳಾಗಿರುವಾಗ ತನ್ನ ಆತ್ಮದ್ರವ್ಯತ್ವದ ಪ್ರಕಟವಾಗಲು ಅನ್ಯ ಎಲ್ಲಾ ಸಂಸಾರೀ ಜೀವಗಳೂ ತಥಾ ಸಿದ್ಧಾತ್ಮರಿಂದ ಭಿನ್ನವೇ ಆಗಿರುತ್ತವೆ.

ಅನ್ಯ ಆತ್ಮರುಗಳ ಜ್ಞಾನವೂ, ಸುಖವೂ. ವೀರ್ಯವೂ, ಚಾರಿತ್ರವೂ ಭಿನ್ನವೇ ಆಗಿರುತ್ತದೆ. ತನ್ನಾತ್ಮನ ಜ್ಞಾನ, ಸುಖ, ವೀರ್ಯ, ಚಾರಿತ್ರಗಳು ಭಿನ್ನವಾಗಿದ್ದರೂ, ನಿಶ್ಚಯನಯದಿಂದ ಸಕಲ ಆತ್ಮರುಗಳು ಸಮಾನವೇ. ಗುಣಗಳ ದೃಷ್ಟಿಯಿಂದ ಸಮಾನವಾಗಿದ್ದರೂ, ಎಲ್ಲಾ ದ್ರವ್ಯಗಳ ಸತ್ತೆಯು

ಭಿನ್ನವೇ ಇರುತ್ತದೆ. ಪುದ್ಗಲದ್ರವ್ಯವು ಮೂರ್ತಿಯೂ, ಅಚೇತನವೂ ಆಗಿರುತ್ತದೆ. ನಾನು ಮಾತ್ರ ಅಮೂರ್ತಿಯೂ, ಚೈತನ್ಯಮಯನೂ ಆಗಿರುತ್ತೇನೆ. ಹೀಗೆ ಈ ನನ್ನ ಆತ್ಮನು ಧರ್ಮಾಸ್ತಿಕಾಯ, ಅಧರ್ಮಾಸ್ತಿಕಾಯ, ಆಕಾಶ ಮತ್ತು ಅಸಂಖ್ಯಾತ ಕಾಲಾಣುಗಳಿಂದಲೂ ಭಿನ್ನನೇ ಆಗಿರುತ್ತಾನೆ. ಯಾಕೆಂದರೆ ಈ ನಾಲ್ಕು ದ್ರವ್ಯಗಳು ಅಮೂರ್ತಿಯೂ, ಅಚೇತನವೂ ಆಗಿರುತ್ತದೆ.

ಅನಾದಿ ಕಾಲದಿಂದ ನನ್ನ ಜೊತೆಯಲ್ಲಿ ಬರುತ್ತಿರುವ ತೈಜಸ ಮತ್ತು ಕಾರ್ಮಣಗಳೂ ಕೂಡ ನನ್ನಿಂದ ಭಿನ್ನಗಳೇ. ಕಾರಣ ಅವು ಪುದ್ಗಲಮಯ ತೈಜಸ ಮತ್ತು ಕಾರ್ಮಣ ವರ್ಗಣಗಳಿಂದುಂಟಾಗಿರುವುವು ಮತ್ತು ಅಚೇತ ಅಚೇತನವಾಗಿರುತ್ತವಾದುದರಿಂದಲೂ ಭಿನ್ನವೆಂದೇ ತಿಳಿಯಬೇಕು. ನಾನು ಔದಾರಿಕ, ವೈಕ್ರಿಯಕ ಶರೀರಗಳನ್ನು ನಾಲ್ಕು ಗತಿಗಳಲ್ಲಿ ಆಗಾಗ ಧರಿಸಿ ಎಷ್ಟೋಸರ್ತಿ ಬಿಟ್ಟಿರುವನು. ಇವುಗಳೂ ಕೂಡ ಪುದ್ಗಲಮಯ ಆಹಾರಕ ವರ್ಗಣೆಗಳಿಂದ ರಚಿತವಾದ ಅಚೇತನಗಳಾಗಿವೆ. ನನ್ನಲ್ಲುಂಟಾಗುವ ಭಾಷೆಯು, ಭಾಷಾವರ್ಗಣೆಗಳೆಂಬ ಉಪಾದಾನ ಕಾರಣಗಳಿಂದಲೂ ಮತ್ತು ಮನಸ್ಸು ಮನೋವರ್ಗಣೆಗಳರೂಪ ಉಪಾದಾನಕಾರಣಗಳಿಂದಲೂ ಉಂಟಾಗುತ್ತದೆ. ಇವೆಲ್ಲವೂ ಪುದ್ಗಲಮಯ ಅಚೇತನಗಳಾಗಿವೆ. ಕರ್ಮಗಳ ಉದಯದಿಂದ ನನ್ನಲ್ಲುಂಟಾಗುವ ಯಾವ ಕ್ರೋಧ, ಮಾನ, ಮಾಯಾ, ಲೋಭ ಭಾವಗಳುಂಟಾಗುತ್ತವೆಯೋ ಅವೆಲ್ಲವೂ ಅಜ್ಞಾನಭಾವಗಳಾಗಿವೆ.

ಯಾವ ಪ್ರಕಾರವಾಗಿ ಕೆಸರಿನಸಂಪರ್ಕದಿಂದ ನೀರು ವಿಕಾರವಾಗಿ ಭಾಸವಾಗುವಂತೆ, ಜ್ಞಾನಾವರಣ, ದರ್ಶನಾವರಣ, ಮೋಹನೀಯ ಮತ್ತು ಅಂತರಾಯಗಳೆಂಬ ನಾಲ್ಕು ಘಾತಿಕರ್ಮಗಳ ಉದಯದಿಂದ ನನ್ನಲ್ಲಿ ವಿಕಾರಭಾವಗಳು ತಲೆದೋರುವವು. ನಿಶ್ಚಯವಾಗಿ ಕೆಸರಿನಿಂದ ನೀರು ಬೇರೆಯೇ ಇರುವಂತೆ, ನಾನೂ ಕೂಡ ಸರ್ವರಾಗಾದಿವಿಕಾರಗಳಿಂದ ಬೇರೆಯಾದ ಪರಮಜ್ಞಾನಿಯು, ಪರಮವೀತರಾಗಿಯು ಆಗಿರುತ್ತೇನೆ. ನನ್ನ ಸ್ವಾಭಾವಿಕ ಭಾವವು ಜೀವತ್ವವಾಗಿರುತ್ತದೆ ಅಥವಾ ಶುದ್ಧಸಮ್ಯಗ್ದರ್ಶನ, ಶುದ್ಧಚಾರಿತ್ರ ಶುದ್ಧಜ್ಞಾನ, ಶುದ್ಧದರ್ಶನ, ಶುದ್ಧದಾನ, ಶುದ್ಧಲಾಭ, ಶುದ್ಧಭೋಗ, ಶುದ್ಧ ಉಪಯೋಗ, ಶುದ್ಧವೀರ್ಯಮಯವಾಗಿರುತ್ತದೆ. ಉಪಶಮ ಸಮ್ಯಕ್ತ್ವ,

ಉಪಶಮ ಚಾರಿತ್ರ, ಮತಿಜ್ಞಾನಾದಿ ನಾಲ್ಕು ಜ್ಞಾನಗಳು ಮತ್ತು ಮತ್ಯಾದಿ ಮೂರು ಅಜ್ಞಾನಗಳು, ಚಕ್ಷು ಮೊದಲಾದ ಮೂರುದರ್ಶನಗಳು, ಕ್ಷಯೋಪ ಶಮ ದಾನಾದಿ ಐದು ಲಬ್ಧಿಗಳು, ಕ್ಷಯೋಪಶಮಸಮ್ಯಕ್ತ್ವ, ಕ್ಷಯೋಪಶಮ ಚಾರಿತ್ರ, ದೇಶಸಂಯಮಗಳೆಂಬ ಇಪ್ಪತ್ತು ಔಪಶಮಿಕಭಾವ ಮತ್ತು ಕ್ಷಾಯೋ ಪಶಮಿಕ ಭಾವಾದಿಗಳು ನನ್ನ ಪರಿಶುದ್ಧಸ್ವಭಾವದಿಂದ ಭಿನ್ನವೇ ಆಗಿರುತ್ತವೆ. ನಾನು ಅಖಂಡನೂ, ಅಭೇದ್ಯನೂ, ಶುದ್ಧಗುಣಗಳಿಂದ್ಯುಕ್ತವಾದ ದ್ರವ್ಯವೂ ಆಗಿರುತ್ತೇನೆ. ಕರ್ಮಬಂಧದರಚನೆಯಿಂದಲೇ ನನ್ನಲ್ಲಿ ಆಸ್ರವ, ಬಂಧ, ಸಂವರ, ನಿರ್ಜರಾ ಮತ್ತು ಮೋಕ್ಷತತ್ವಗಳು ಹಾಗೆ ಪುಣ್ಯಪಾಪಗಳ ವ್ಯವಹಾರ ಮಾತ್ರವು ಆಗುತ್ತದೆ.

ಪರಿಶುದ್ಧವಾದ ನನ್ನ ಸ್ವಭಾವವು ಐದು ತತ್ವಗಳಿಂದಲೂ, ಏಳು ಪದಾ ರ್ಥಗಳ ವ್ಯವಹಾರದಿಂದಲೂ ಭಿನ್ನವೇ ಆಗಿರುತ್ತದೆ. ಮನುಷ್ಯ, ನಾರಕಿ, ದೇವ, ತಿರ್ಯಂಚಗತಿಗಳಲ್ಲಿ ಕರ್ಮಗಳ ಉದಯದಿಂದ ನಾನಾವಿಧ ವೇಷ ಗಳಿಂದಲೂ, ಅವುಗಳಲ್ಲಿ ನಾನಾ ಪ್ರಕಾರದ ಅಶುದ್ಧಕಾಯ ಯಾ ವಚನ ಯಾ ಮನಸ್ಸಿನ ಸಂಕಲ್ಪ ವಿಕಲ್ಪರೂಪ ಕ್ರಿಯೆಗಳಿಂದಲೂ ಶುದ್ಧ ಆತ್ಮಪರಿಣಮನ ದಿಂದ ಭಿನ್ನನೇ ಆಗಿರುತ್ತೇನೆ. ಜಗತ್ತಿನ ಸಕಲ ವ್ಯವಹಾರಗಳು ಮನ, ವಚನ, ಕಾಯಗಳೆಂಬ ಯೋಗತ್ರಯಗಳಿಂದಲೂ, ಶುಭಾಶುಭ ಉಪಯೋಗಗಳಿಂದ ನಡೆಯುತ್ತಿರುತ್ತವೆ. ನನ್ನ ಶುದ್ಧವಾದ ಉಪಯೋಗದಲ್ಲಿಯೂ ಮತ್ತು ನಿಶ್ಚಲ ಆತ್ಮೀಕಪ್ರದೇಶಗಳಲ್ಲಿಯೂ ಇವುಗಳ ಸಂಬಂಧವೇ ಇಲ್ಲದಿರುವುದರಿಂದ ನಾನು ಭಿನ್ನನೇ ಆಗಿರುತ್ತೇನೆ. ನನಗೆ ಮಿತ್ರರಾಗಲಿ, ಶತ್ರುಗಳಾಗಲಿ, ಸ್ವಾಮಿಯಾಗಲಿ ಸೇವಕನಾಗಲಿ ಇಲ್ಲವು. ನಾನು ಯಾರಿಗೂ ಸ್ವಾಮಿ-ಸೇವಕನಾಗಿಲ್ಲವೆಂಬ ಧ್ಯಾನವನ್ನು ಕಲ್ಪಿಸುವುದೂ ಇಲ್ಲವು, ಪೂಜೆಗೈಯುವುದೂ ಇಲ್ಲವು. ದಾನ ಮಾಡದೆ ಇರುವುದರಿಂದ ನಾನು ಧ್ಯಾನ, ಪೂಜಾ ದಾನಾದಿಗಳಿಂದಲೂ ಭಿನ್ನನೇ ಆಗಿರುತ್ತೇನೆ.

ಅಶುದ್ಧ ನಿಶ್ಚಯ ನಯದಿಂದ ಹೇಳಲ್ಪಡುವ ರಾಗಾದಿ ಭಾವಗಳಿಂದಲೂ ಅನುಪಚರಿತ ಅಸದ್ಭೂತ ವ್ಯವಹಾರ ನಯದಿಂದ ಹೇಳಲ್ಪಡುವ ಕಾರ್ಮಣಾದಿ ಶರೀರಗಳ ಸಂಬಂಧದಿಂದಲೂ, ಉಪಚರಿತ ಅಸದ್ಭೂತ ವ್ಯವಹಾರದಿಂದ

ಹೇಳಲ್ಪಡುವ ಸ್ತ್ರೀಪುತ್ರಾದಿ ಚೇತನವಸ್ತುಗಳಿಂದಲೂ, ಧನ, ಗ್ರಹ ಮೊದಲಾದ ಅಚೇತನ ವಸ್ತುಗಳಿಂದಲೂ, ಸದ್ಭೂತ ವ್ಯವಹಾರ ನಯದಿಂದ ಹೇಳಲ್ಪಡುವ ಗುಣಾಗುಣೀ ಭೇದದಿಂದಲೂ ಭಿನ್ನನೇ ಆಗಿರುತ್ತಾನೆ.

ಎಲ್ಲ ವ್ಯವಹಾರದ ರಚನೆಯಿಂದ ಭಿನ್ನನಾದ ಪರಿಶುದ್ಧ ಆತ್ಮನಾದ ನಾನು ಜ್ಞಾಯಕನೂ, ಪ್ರಕಾಶಮಯ, ಪರಮನಿರಾಕುಲ, ಪರಮವೀತ ರಾಗಿಯೂ ಆದ ಅಖಂಡ ದ್ರವ್ಯನಾಗಿರುತ್ತೇನೆ. ನನ್ನಲ್ಲಿ ಬಂಧ ಮೋಕ್ಷಗಳ ಕಲ್ಪನೆಯೂ ಕೂಡ ಇಲ್ಲವು. ತ್ರಿಕಾಲದಲ್ಲಿಯು ಅಬಾಧಿತನೂ. ನಿತ್ಯ ಪರಮ ನಿರ್ಮಲ ಚೇತನ ದ್ರವ್ಯನೂ ಆಗಿರುತ್ತಾನೆಂದು ಮನನಗೈಯುತ್ತಾ, ತನ್ನಾತ್ಮ ರೂಪಿ ರತ್ನವನ್ನು ಗ್ರಹಿಸುತ್ತಾ ಅದರ ಆಧಿಪತ್ಯದಲ್ಲಿಯೇ ಸಂತೋಷಿಸುತ್ತಾ ಇರುವವನೇ ಆತ್ಮದರ್ಶನಮಾಡುವವನಾಗಿ ನಿರ್ವಾಣಾಧಿಕಾರಿಯಾಗುವನು.

ಸಮಯಸಾರಕಲಶದಲ್ಲಿ ಹೇಳಿರುತ್ತಾರೆ:

**ನೀತ್ವಾ ಸಮ್ಯಕ್ ಪ್ರಲಯಮಖಿಲಾನ್ ಕರ್ತೃಭೋಕ್ತ್ರಾದಿಭಾವಾನ್**
**ದೂರೀಭೂತಃ ಪ್ರತಿಪದಮಯಂ ಬಂಧಮೋಕ್ಷಪ್ರಕ್ಲೃಪ್ತೇಃ ||**
**ಶುದ್ಧಃ ಶುದ್ಧಸ್ವರಸವಿರಸಾಪೂರ್ಣಪುಣ್ಯಾಚಲಾರ್ಚಿ-**
**ಷ್ಟಂಕೋತ್ಕೀರ್ಣಪ್ರಕಟಮಹಿಮಾ ಸ್ಫೂರ್ಜತಿ**
**ಜ್ಞಾನಪುಂಜಃ ||೧-೧೦||**

**ಭಾವಾರ್ಥ :** ಜ್ಞಾನಭಂಡಾರಿಯಾದ ಈ ಆತ್ಮನು ತನ್ನ ಶಾಶ್ವತ ವಾದ ಪ್ರಕಾಶಮಯ ಪ್ರತಿಮೆಯನ್ನು ಧರಿಸಿ ಸದಾ ಉದಯಶೀಲನಾಗಿರು ತ್ತಾನೆ. ಇವನು ಪರಮಪರಿಶುದ್ಧನೂ, ಶುದ್ಧ ಆತ್ಮೀಕ ರಸದಿಂದ ಪರಿ ಪೂರ್ಣನೂ, ಪವಿತ್ರನೂ, ನಿಶ್ಚಲವಾದ ತೇಜೋಮಯನೂ ಆಗಿ ಕರ್ತಾರ್, ಭೋಕ್ತಾ ಮೊದಲಾದ ಭಾವಗಳನ್ನು ಪೂರ್ಣರೀತ್ಯಾ ತನ್ನಂತರಂಗದಿಂದ ದೂರಮಾಡಿದವನಾಗಿರುತ್ತಾನೆ. ಇವನು ತನ್ನ ಪ್ರತಿಯೊಂದು ಪರಿಣತಿ ಯಲ್ಲಿ ಏಕಾಕಾರನಾಗಿರುತ್ತಾನೆ ಮತ್ತು ಬಂಧಮೋಕ್ಷಕಲ್ಪನೆಯಿಂದಲೂ ದೂರವಾಗಿರುತ್ತಾನೆ.

ಸಮಯಸಾರದಲ್ಲಿ ಹೇಳಿರುತ್ತಾರೆ :

**ಸುದ್ಧಂ ತು ವಿಯಾಣಂತೋ ಸುದ್ಧಮೇವಪ್ಪಯಂ ಲಹದಿ ಜೀವೋ।**
**ಜಾಣಂತೋ ದು ಅಸುದ್ಧಂ ಅಸುದ್ಧಮೇವಪ್ಪಯಂ ಲಹದಿ ॥೧೭೬॥**

**ಭಾವಾರ್ಥ :** ಯಾವ ಜೀವನು ಶುದ್ಧಾತ್ಮಾನುಭವಯುಕ್ತನಾಗಿರುವನೋ ಅವನು ಸ್ವಯಂ ಶುದ್ಧಾತ್ಮನಾಗಿರುತ್ತಾನೆ. ಯಾವನು ತನ್ನನ್ನು ಅಶುದ್ಧನೆಂದು ತಿಳಿಯುವನೋ ಅವನು ಅಶುದ್ಧನಾಗಿಯೇ ಉಳಿಯುವನು.



## ಆತ್ಮಾನುಭವಿಯೇ ಸಂಸಾರದಿಂದ ಮುಕ್ತನಾಗಲು ಸಾಧ್ಯವು

**ಜೇ ಣವಿ-ಮುಣ್ಣಹಿಂ ಜೀವ ಫುಡು ಜೇ ಣವಿ ಜೀಉ ಮುಣಂತಿ।**
**ತೇ ಜಿಣ-ಣಾಹಹಂ ಉತ್ತಿಯಾ ಣಉ ಸಂಸಾರಮುಚಂತಿ ॥೫೬॥**

**ಅನ್ವಯಾರ್ಥ :** ಜೇ ಫುಡು ಜೀವ ಣವಿ-ಮುಣ್ಣಹಿಂ-ಯಾರು ಸ್ಪಷ್ಟವಾಗಿ ಆತ್ಮನನ್ನು ತಿಳಿಯುವುದಿಲ್ಲವೋ, ಜೇ ಜೀವ ಣವಿ ಮುಣಂತಿ-ಮತ್ತೆ ಯಾರು ಆತ್ಮಾನುಭವವನ್ನು ಮಾಡಿಕೊಳ್ಳುವುದಿಲ್ಲವೋ, ತೇ ಸಂಸಾರ ಣಉ ಮುಚಂತಿ–ಅವರು ಸಂಸಾರದಿಂದ ಬಿಡುಗಡೆಹೊಂದಲಾರರು. ಜಿಣ-ಣಾಹಹಂ ಉತ್ತಿಯಾ–ಎಂದು ತೀರ್ಥಂಕರಪರಮದೇವರು ಹೇಳಿರುತ್ತಾರೆ.

ಭಾವಾರ್ಥ : ಶ್ರೀ ತೀರ್ಥಂಕರಪರಮದೇವರು ತಮ್ಮ ದಿವ್ಯವಾಣಿಯ ಮೂಲಕ ಉಪದೇಶವನ್ನಿತ್ತಿರುವುದೇನೆಂದರೆ : ತನ್ನಾತ್ಮನ ನಂಬಿಕೆ, ತಿಳುವಳಿಕೆ ಮತ್ತು ಧ್ಯಾನ ಅಂದರೆ ನಿಶ್ಚಯ ರತ್ನತ್ರಯಸ್ವರೂಪ ಸ್ವಾನುಭವ ಇವೇ ಪರಮೌಷಧಿಯಾಗಿರುವುದು. ಅದರ ಪ್ರಯೋಗದಿಂದ, ವೀತರಾಗತೆಯ ಅಗ್ನಿಯಿಂದ ಕರ್ಮರೂಪ ಇಂಧನವು ಸುಟ್ಟುಭಸ್ಮವಾಗುವುದು

ಆತ್ಮಜ್ಞಾನವಿಲ್ಲದೆ ಕರ್ಮಬಂಧನದಿಂದ ಬಿಡುಗಡೆಯಾಗಲು ಸಾಧ್ಯವಾಗುವುದಿಲ್ಲವು. ಪರಪದಾರ್ಥಗಳ ಮೋಹವೇ ಬಂಧಕ್ಕೆ ಕಾರಣವಾಗಿರುವುದು. ಅಂತಃ ಪರಪದಾರ್ಥಗಳಿಂದ ವೈರಾಗ್ಯವನ್ನು ತಾಳಿ, ಆತ್ಮತತ್ತ್ವದಲ್ಲಿ ಮಗ್ನನಾಗುವುದೇ ಮೋಕ್ಷಮಾರ್ಗವು. ತತ್ವಜ್ಞಾನಿಯು ಸಕಲವಿಷಯ

ಕಷಾಯಗಳಿಂದ ಪೂರ್ಣವೈರಾಗ್ಯಶಾಲಿಯಾಗಿರಬೇಕು. ಇಂದ್ರಿಯಗಳ ಮೂಲಕ ಪದಾರ್ಥಗಳನ್ನು ತಿಳಿದು, ಸಮಭಾವನೆಯನ್ನು ತಂದುಕೊಂಡು, ರಾಗದ್ವೇಷಗಳನ್ನು ತ್ಯಜಿಸಬೇಕು.

ತನ್ನಂತರಂಗದಲ್ಲಿ ರಾಗಭಾವಗಳಿಂದ ರಂಜಾಯಮಾನವಾಗಿ, ರಾಗ ದ್ವೇಷಗಳಿಂದ ಹಾನಿಯನ್ನುಂಟುಮಾಡಿಕೊಳ್ಳುವುದುಚಿತವಲ್ಲವು ಅಂತಹ ವಿಷಯಭೋಗರೂಪವು ವಿಷಕ್ಕೆ ಸಮಾನವಾದ ಹಾನಿಕಾರಕವೂ ಮತ್ತು ಅಂಧಕಾರವರ್ಧಕವೂ ಆಗಿರುವುದೆಂಬ ವಿಶ್ವಾಸವು ಅಸಂಯತ ಸಮ್ಯಗ್ದೃಷ್ಟಿಗೆ ಉಂಟಾಗುವುದು. ಯದ್ಯಪಿ ಅವನು ಅಪ್ರತ್ಯಾಖ್ಯಾನಾದಿ ಕಷಾಯಗಳ ಉದಯದಿಂದಲೂ ಮತ್ತು ತನ್ನಾತ್ಮ ವೀರ್ಯದ ನ್ಯೂನತೆಯಿಂದಲೂ ಪಂಚೇಂದ್ರಿಯ ಸಂಬಂಧವಾದ ಭೋಗಗಳನ್ನು ಭೋಗಿಸುತ್ತಿದ್ದರೂ ಕೂಡ, ಕೇವಲ ಆತ್ಮೀಕರಸದ ಆಸ್ವಾದನೆಯ ಸನ್ನಿವೇಶವು ಯಾವಾಗ ಉಂಟಾಗುವುದೆಂಬ ಭಾವನೆಯು ಅವನಿಗೆ ಉಂಟಾಗುವುದು ಮತ್ತು ಜ್ಞಾನಚೇತನಾರೂಪವಾಗಿಯೇ ವರ್ತಿಸುತ್ತಾ, ಕರ್ಮಫಲಚೇತನಾ ಹಾಗೆ ಕರ್ಮಚೇತನಾರೂಪವಾಗಿ ವರ್ತಿಸಲಿಕ್ಕಿಲ್ಲವೆಂಬ ಉತ್ಕಟಭಾವನೆಯು ಉದ್ದೀಪಿತವಾಗುವುದು. ತ್ಯಾಗಮಾಡುವ ಯೋಗ್ಯಬುದ್ಧಿಯಿಂದ ಅವನು ಅದರಲ್ಲಿ ಆಸಕ್ತನಾಗುವುದಿಲ್ಲ.

ಎಷ್ಟು ಕಷಾಯಗಳ ಮಂದತೆಯಾಗುತ್ತಿರುವುದೋ ಅಷ್ಟೇ ವಿಷಯ ವಿಕಾರಾದಿಗಳ ಮಲಿನತೆಯು ಕಡಿಮೆಯಾಗುತ್ತಾ ಹೋಗುವುದು. ದೇಶ ಸಂಯಮಿಶ್ರಾವಕನಾಗಿದ್ದರೂ ವಿಷಯಭೋಗಗಳಿಂದ ನಿರ್ಲಿಪ್ತನಾಗಿ, ಪ್ರತ್ಯಾಖ್ಯಾನ ಕಷಾಯಗಳ ಉದಯವಿಲ್ಲದಿರುವಾಗ ಸಂಯಮಿಯಾಗಿ ಪೂರ್ಣವಿರಕ್ತನಾಗುತ್ತಾನೆ. ಪರಿಗ್ರಹರೂಪ ಪ್ರಪಂಚದಿಂದ ದೂರವಿದ್ದು ನಿಜಾತ್ಮ ರುಚಿಯಲ್ಲಿ ತನ್ಮಯನಾಗಿ, ಅಂತರ್ಮುಹೂರ್ತಕ್ಕಿಂತ ಹೆಚ್ಚು ಸಮಯ ಆತ್ಮತಲ್ಲಿನತೆಯಿಂದ ವಿಮುಖನಾಗದೆ, ಅದರಲ್ಲಿಯೇ ಮನನ, ಮಗ್ನನಾಗಿಕೊಂಡಿರುತ್ತಾನೆ.

ಯಥಾರ್ಥವಾಗಿ ಆತ್ಮಾನುಭವವೇ ಮೋಕ್ಷಮಾರ್ಗವಾಗಿರುತ್ತದೆ. ಸಮ್ಯಕ್ತ್ವವಂತನು ಬಾಹ್ಯ ಚಾರಿತ್ರವನ್ನಾಗಲೀ, ವೇಷವನ್ನಾಗಲೀ ಮೋಕ್ಷ ಮಾರ್ಗವೆಂದು ತಿಳಿಯದೆ, ನಿಶ್ಚಯ ಆತ್ಮಾನುಭವವನ್ನೇ ಮೋಕ್ಷಮಾರ್ಗ

ವೆಂದು ತಿಳಿಯುತ್ತಾನೆ. ಅನುಭವ ಸಮಯದ ವರ್ತನೆಯು ಆತ್ಮಮಯ ವಾಗಿರುವಾಗ, ಕರ್ಮಗಳ ನಿರ್ಜರೆಯು ಅಧಿಕಸಂಖ್ಯೆಯಲ್ಲಿ ಆಗುತ್ತಿರುತ್ತದೆ. ಮೋಹನೀಯಕರ್ಮದ ಶಕ್ತಿಯು ಕ್ಷೀಣಿಸುತ್ತಾ ಆತ್ಮಬಲವು ಅಧಿಕವಾಗುತ್ತಾ ಹೋಗುವುದು. ಆತ್ಮಾನುಭವವೇ ಧರ್ಮಧ್ಯಾನವೂ, ಶುಕ್ಲಧ್ಯಾನವೂ ಆಗಿ ರುತ್ತದೆ. ಇದರ ಪ್ರಭಾವದಿಂದಲೇ ನಾಲ್ಕು ಘಾತಿಕರ್ಮಗಳು ನಾಶವಾಗಿ, ಆ ವೇಳೆಗೆ ಆತ್ಮಾ ಪರಮಾತ್ಮಸ್ವರೂಪನಾಗುತ್ತಾನೆ. ತನ್ನಾತ್ಮನು ಪರವಸ್ತು ಗಳ ಸಂಯೋಗದಿಂದ ರಹಿತನೂ, ಪರಮವೀತರಾಗನೂ, ಪರಮಾನಂದಮ ಯನೂ, ಪರಮಜ್ಞಾನಿಯೂ, ಪರಮದರ್ಶಿಯೂ, ಅಮೂರ್ತಿಯೂ, ಅವಿನಾ ಶಿಯೂ, ನಿರ್ವಿಕಾರನೂ, ನಿತ್ಯನಿರಂಜನನೂ, ಅನುಪಮವೀರ್ಯನೂ, ಪರಮ ನಿಶ್ಚಲನೂ, ಏಕಾಕಿಯೂ, ಪರಮಶುದ್ಧನೂ ಆಗಿರುತ್ತಾನೆಂದು ತಿಳಿದು, ನಿರಂ ತರ ತನ್ನಾತ್ಮರೂಪವನ್ನು ನೋಡಬೇಕು. ಹಾಗೆಯೇ ಪ್ರಪಂಚದ ಆತ್ಮರ್ರು ಗಳನ್ನೂ ಕೂಡ ದ್ರವ್ಯದೃಷ್ಟಿಯಿಂದ ನೋಡುವಾಗ, ಸಮಭಾವನೆಯು ಪ್ರಕಾ ಶಿಸುವುದು.

ಈ ಪ್ರಕಾರ ಭಾವನೆಯ ಸಮಯದಲ್ಲಿ ಶುದ್ಧ ನಿಶ್ಚಯನಯದಿಂದ ತನ್ನನ್ನು ಮತ್ತು ಪರಆತ್ಮರನ್ನು ಪರಿಶುದ್ಧವಾಗಿಯೇ ನೋಡುತ್ತಾ, ಭಾವಿ ಸುತ್ತಾ, ವಿಚಾರಿಸುತ್ತಾ ಏಕಾಗ್ರಚಿತ್ತನಾಗಿ, ರಾತ್ರಿಹಗಲು ಆತ್ಮರಸಾಸ್ವಾದ ವನ್ನೇ ಸ್ವಾದಿಸುತ್ತಾ ತನ್ನಲ್ಲಿಯೇ ಇರುವುದೇ ಜ್ಞಾನಿಯ ಭವನವಾಗಿರುತ್ತದೆ. ಆತ್ಮಶಿಲೆಯೇ ಜ್ಞಾನಿಯ ಆಸನವೂ, ಆತ್ಮತತ್ತ್ವವೇ ವಸ್ತುವೂ, ನಿಜಾತ್ಮೀಕ ರಸವೇ ಮಹಾಭೋಜನವೂ, ಆತ್ಮೀಕ ಶಯ್ಯೆಯೇ ಜ್ಞಾನಿಯ ಶಯ್ಯೆಯೂ, ಕರ್ಮಜನಿತವಾದ ಸ್ಥಾನವೇ ಆಸ್ಥಾನ ರೂಪವೂ, ಎಂದು ಯಾವನು ತಿಳಿಯು ತ್ತಾನೋ ಅವನೇ ನಿಜವಾದ ಸ್ಥಾನದ ಸ್ನೇಹಿಯಾಗಿ, ಇವೇ ಮೋಕ್ಷಮಾರ್ಗ ವೆಂದು ನಿಶ್ಚಯಿಸಿಕೊಂಡು, ತನ್ನಲ್ಲಿಯೇ ರಮಿಸುತ್ತಾ, ಒಂದುದಿವಸ ಪರ ಮಾತ್ಮನಾಗುತ್ತಾನೆ. "ನಾನು ಬಂಧ ಅಥವಾ ಮೋಕ್ಷದ ರಚನೆಯಿಂದ ರಹಿತನೂ, ಸ್ವಯಂಪದದಲ್ಲಿ ವೀರ್ಯವಂತನೂ, ಪರಮ ನಿರ್ಮಲನೂ ಇದ್ದೇನೆ; ಸ್ವಯಂ ಆತ್ಮನನ್ನು ಆತ್ಮಮಯನನ್ನಾಗಿ ಕಾಣಗೊಡುವೆನು" ಎಂಬುದು ವಾಸ್ತವದಲ್ಲಿ ಅನುಭವವಾಗಿದೆ. ಬಂಧದಿಂದ ವಿರಾಗವಿರುವುದೇ ಬಂಧದ ಕ್ಷಯಕ್ಕೆ ಕಾರಣವು.

ಆತ್ಮಾನುಶಾಸನದಲ್ಲಿ ಹೇಳಿರುತ್ತಾರೆ:

**ಸಮಧಿಗತಸಮಸ್ತಾಃ ಸರ್ವಸಾವದ್ಯದೂರಾಃ**
**ಸ್ವಹಿತನಿಹಿತಚಿತ್ತಾಃ ಶಾಂತಸರ್ವಪ್ರಚಾರಾಃ।**
**ಸ್ವಪರಸಫಲಜಲ್ಪಾಃ ಸರ್ವಸಂಕಲ್ಪಮುಕ್ತಾಃ**
**ಕಥಮಿಹ ನ ವಿಮುಕ್ತೇರ್ಭಾಜನಂ ತೇ ವಿಮುಕ್ತಾಃ ॥ ೨೨೬ ॥**

**ಭಾವಾರ್ಥ:** ಸಕಲದ್ರವ್ಯಗಳನ್ನು ತಿಳಿದವರೂ, ಸರ್ವಪಾಪಗಳಿಂದ ರಹಿತರೂ, ಆತ್ಮಹಿತಧಾರಿಗಳೂ, ಪವಿತ್ರಶಾಂತಸ್ವಭಾವ ಪ್ರಚಾರಕರೂ, ಸ್ವಪರಕಲ್ಯಾಣಕಾರಕ ವಾಣಿಯನ್ನೇ ನುಡಿಯುವವರೂ, ಎಲ್ಲಾ ಸಂಕಲ್ಪ ವಿಕಲ್ಪಗಳಿಂದ ರಹಿತರೂ, ಮಹಾವಿರಾಗಿಗಳೂ ಮೋಕ್ಷಾಧಿಕಾರಿಗಳಾಗಿ ಏಕೆ ಆಗಲಾರರು? ಅರ್ಥಾತ್ ಆಗೇಆಗುತ್ತಾರೆಂದು ಭಾವವು.



## ಆತ್ಮನ ತಿಳುವಳಿಕೆಗೆ ಒಂಭತ್ತು ದೃಷ್ಟಾಂತಗಳು

**ರಯಣ ದೀಉ ದಿಣಯರ ದಹಿಉ ದುದ್ಧ ಘೀವ ಪಾಹಾಣು।**
**ಸುಣ್ಣಉ ರುಉ ಫಲಿಹಉ ಅಗಿಣಿ ಣವ ದಿಟ್ಠಂತಾ ಜಾಣು ॥೫೭॥**

**ಅನ್ವಯಾರ್ಥ:** ಇದರ ಅನ್ವಯಾರ್ಥವು ಸರಳವಾಗಿರುವುದರಿಂದ ಅರ್ಥವನ್ನೇ ಬರೆಯಲಾಗುವುದು. ರತ್ನ, ದೀಪ, ಸೂರ್ಯ, ಮೊಸರು-ಹಾಲು-ತುಪ್ಪ, ಪಾಷಾಣ, ಸುವರ್ಣ, ಬೆಳ್ಳಿ, ಸ್ಪಟಿಕಮಣಿ, ಅಗ್ನಿ ಈ ಒಂಭತ್ತು ದೃಷ್ಟಾಂತಗಳಿಂದ ಜೀವನನ್ನು ತಿಳಿಯಬೇಕು.

**ಭಾವಾರ್ಥ:** ಇವುಗಳ ವರ್ಣನೆಯು ಸಾಧ್ಯವಾದಮಟ್ಟಿಗೆ ಮಾಡಲಾಗುವುದು. ಆತ್ಮತತ್ವವು ತನ್ನ ಶರೀರದಲ್ಲಿ ವ್ಯಾಪಕವಾಗಿದ್ದರೂ ಸರಳ ಸುಲಭಕ್ಕಾಗಿ ಒಂಭತ್ತು ಉದಾಹರಣೆಗಳು ಕೊಡಲ್ಪಟ್ಟಿರುತ್ತವೆ:

೧) ರತ್ನ: ಲೋಕದಲ್ಲಿ ಆತ್ಮತತ್ವವು (ರತ್ನವು) ಅಮೂಲ್ಯವಾದ ರತ್ನವೂ, ಪರಮಶ್ರೇಷ್ಠ ಧನವೂ ಆಗಿರುತ್ತದೆ. ರತ್ನದ ಸ್ವಾಮಿಯಾದ ಸಮ್ಯಗ್ದೃಷ್ಟಿಯೇ ದೊಡ್ಡ ರತ್ನಪರೀಕ್ಷಕನು. ಅವನೇ ಆತ್ಮಜ್ಞಾನಿಯು. ಆತನು

ಪರಿಶೋಧಿಸುತ್ತಾನೇನೆಂದರೆ ಈ ಆತ್ಮನು ಪರಮ ಪರಿಶುದ್ಧನೂ, ಅಭೇದನೂ, ಜ್ಞಾನಜ್ಯೋತಿಯಿಂದ ಪ್ರಕಾಶಿತನೂ, ಅವಿನಾಶಿಯೂ, ಸ್ವಯಂ ರತ್ನತ್ರಯ (ಸಮ್ಯಗ್ದರ್ಶನರತ್ನಮಯ, ಸಮ್ಯಗ್ಜ್ಞಾನರತ್ನಮಯ ಮತ್ತು ಸಮ್ಯಕ್ ಚಾರಿತ್ರರತ್ನಮಯ) ಸ್ವರೂಪನೂ ಮತ್ತು ಅನುಪಮ ರತ್ನವೂ ಎಂದು ಪರೀಕ್ಷಿಸುತ್ತಾನೆ.

೨) **ದೀಪ:** ಆತ್ಮನು ಪ್ರದೀಪದಂತೆ ಸ್ವಪರವಸ್ತುಗಳನ್ನು ಪ್ರಕಾಶಪಡಿಸುವವನೂ, ಏಕಕಾಲದಲ್ಲಿ ತನ್ನನ್ನೂ ಸರ್ವದ್ರವ್ಯಗಳ ಗುಣಪರ್ಯಾಯಗಳನ್ನೂ ತಿಳಿಯುವ ಸಾಮರ್ಥ್ಯವುಳ್ಳವನು ಆದರೂ, ಪರಜ್ಞೇಯ (ಪರವಸ್ತು) ಗಳಿಂದ ಭಿನ್ನನೂ ಆಗಿರುತ್ತಾನೆ ಎಂದೂ, ಇಷ್ಟೇ ಅಲ್ಲದೆ ಈ ಆತ್ಮವು ನಂದದ ಅನುಪಮ ದೀಪವೂ, ಯಾವ ವಿಧದ ಎಣ್ಣೆಯ ಆವಶ್ಯಕತೆ ಇಲ್ಲದ ಮತ್ತು ಗಾಳಿಯ ಹೊಡೆತಕ್ಕೆ ಸಿಲುಕದ ನಂದಾದೀಪವೂ, ಸರ್ವ ದ್ರವ್ಯ, ಕ್ಷೇತ್ರ, ಕಾಲ, ಭಾವಗಳನ್ನು ಏಕಕಾಲದಲ್ಲಿ ಪ್ರಕಾಶಪಡಿಸುವಂಥಾದ್ದೂ ಆಗಿದೆ.

೩) **ಸೂರ್ಯ:** ಈ ಆತ್ಮನು ಸೂರ್ಯನೋಪಾದಿಯಲ್ಲಿ ಪ್ರಕಾಶಮಾನನೂ, ಪ್ರತಾಪಶಾಲಿಯೂ ಆಗಿರುತ್ತಾನೆ. ಈತನು ಸರ್ವಲೋಕಾಲೋಕಗಳನ್ನು ನೋಡುವವನೂ, ತಿಳಿಯುವವನೂ, ಶ್ರೇಷ್ಠವೀರ್ಯಮಯನೂ, ಪರಮಶಾಂತನೂ ಆಗಿರುವುದರಿಂದಲೇ, ಅನುಪಮ ಸೂರ್ಯನಾಗಿ ಎಂದೆಂದಿಗೂ ಮರೆಯಾಗದವನೂ, ಮೇಘಗಳ ಪಟಲಗಳಿಂದಾಗಲಿ, ರಾಹುವಿನಿಂದಾಗಲಿ, ಗ್ರಸಿತವಾಗದ ಸ್ವಯಂ ಪರಮಾನಂದಮಯನೂ ಆಗಿರುತ್ತಾನೆ. ಈ ಆತ್ಮಸೂರ್ಯನನ್ನು ನೋಡುವವನಿಗೂ ಆನಂದವಾಗುತ್ತದೆ. ಇವನು ಸದಾ ನಿರಾವರಣನಾಗಿ ಒಂದು ನಿಯಮಿತ ಸ್ವಕ್ಷೇತ್ರದಲ್ಲಿ, ಅಸಂಖ್ಯಾತ ಪ್ರದೇಶಿಯಾಗಿ ಯಾವುದಾದರೊಂದು ದೇಹದಲ್ಲಿ ಅಥವಾ ದೇಹಾಕಾರದಲ್ಲಿದ್ದರೂ ಕೂಡ ಲೋಕಾಲೋಕಗಳನ್ನು ಬೆಳಗಿಸುತ್ತಿದ್ದಾನೆ.

೪) **ಕ್ಷೀರ, ದುಗ್ಧ, ಘೃತ:** ಹಾಲು, ಮೊಸರು, ತುಪ್ಪದಂತೆ ಈ ಆತ್ಮನಿರುತ್ತಾನೆ. ಹಾಲಿನಂತೆ ಶುಭ್ರವಾದ ಆತ್ಮಸ್ವಭಾವವನ್ನು ಮನನಗೈಯುವುದರಿಂದ ಆತ್ಮಭಾವನೆಯು ದೃಢವಾಗುತ್ತದೆ. ಆ ಆತ್ಮಭಾವನೆಯ ಜಾಗೃತಿಯಾಗುವುದು ಹಾಲು ಹೆಪ್ಪಾದಂತೆಯೇ (ಮೊಸರಾದಂತೆಯೇ).

ಆ ಮೊಸರನ್ನು ಮಂಥನಮಾಡಿದೊಡನೆ ತುಪ್ಪದಿಂದೊಡಗೂಡಿದ ಬೆಣ್ಣೆಯು ದೊರಕುವಂತೆ ಆತ್ಮಭಾವನೆಯನ್ನು ಭಾವಿಸುತ್ತಾ ಭಾವಿಸುತ್ತಾ ಆತ್ಮಾನುಭವವು ಉದಯಿಸುವುದು. ಪರಮಾನಂದವನ್ನುಂಟುಮಾಡುತ್ತಾ ತುಪ್ಪಕ್ಕೆ ಸಮಾನವಾದ ಆತ್ಮನು ದೃಷ್ಟಿಗೋಚರನಾಗುವನು. ತಾನೇ ಕ್ಷೀರ (ಹಾಲು) ದಂತೆಯೂ, ತಾನೇ ದಧಿ (ಮೊಸರು) ಯಂತೆಯೂ, ತಾನೇ ಘೃತ (ತುಪ್ಪ) ದಂತೆಯೂ ಇರುತ್ತಾನೆ. ಮುಮುಕ್ಷುವು ತನ್ನಾತ್ಮರೂಪ ಗೋ ರಸಗಳನ್ನು ನಿರಂತರಪಾನಮಾಡುತ್ತಿರಬೇಕು ; ಪರಮವೀರ್ಯವುಳ್ಳವನಾಗಿ ಸಂತೋಷಿಯಾಗಿರಬೇಕು.

**೫) ಪಾಷಾಣ:** ಈ ಆತ್ಮನು ಕಲ್ಲಿನಂತೆ ದೃಢನಾಗಿ ತನ್ನಲ್ಲಿಯೇ ಅನಂತಗುಣಗಳನ್ನಿಟ್ಟುಕೊಂಡಿರುತ್ತಾನೆ. ಅವುಗಳನ್ನು ಎಂದೆಂದಿಗೂ ಕಡಿಮೆ ಮಾಡಿಕೊಳ್ಳಲಾರನು ; ಯಾವ ಅನ್ಯಗುಣಕ್ಕೂ ಸ್ಥಾನವನ್ನು ಕೊಡುವುದಿಲ್ಲ. ಸಾಮಾನ್ಯಗುಣವಾದ ಅಗುರುಲಘುವಿನಿಂದ ಆತ್ಮವು ತನ್ನ ಮರ್ಯಾದೆಯಲ್ಲಿರುತ್ತದೆ. ಎಂಟು ಕರ್ಮಗಳ ಸಂಯೋಗದಿಂದ ಸಂಸಾರಪರ್ಯಾಯದಲ್ಲಿದ್ದರೂ ಕೂಡ, ಆತ್ಮನು ತನ್ನ ಸ್ವಭಾವವನ್ನು ಬಿಟ್ಟು ಎಂದೆಂದಿಗೂ ಅನಾತ್ಮಲಾಗಲಾರನು. ಆ ಆತ್ಮನಿಗೆ ನಿಶ್ಚಲ ಪರಮ ದೃಢತೆಯು ಇದ್ದೇ ಇರುತ್ತದೆ.

**೭) ಸುವರ್ಣ:** ಈ ಆತ್ಮನು ಶುದ್ಧ ಅಪರಂಜಿ ಚಿನ್ನದಂತೆ ಪರಮ ಜ್ಯೋತಿರ್ಮಯ ಜ್ಞಾನಧಾತುವಿನಿಂದ ನಿರ್ಮಿತ ಅಮೂರ್ತಿಯೂ, ಅದ್ಭುತ ಮೂರ್ತಿಯೂ ಆಗಿರುತ್ತಾನೆ. ಈ ಸಂಸಾರೀ ಜೀವನು ಗಣಿಯಿಂದ ತೆಗೆಯಲ್ಪಟ್ಟ ಧಾತುಪಾಷಾಣ ಸುವರ್ಣದಂತೆ ಅನಾದಿಕಾಲದಿಂದ ಕರ್ಮರೂಪ ಕಿಟ್ಟಕಾಲಿಕೆಗಳಿಂದ ಮಲಿನನಾಗಿರುತ್ತಾನೆ. ಅಗ್ನಿಪುಟ ಪ್ರಯೋಗಗಳು ಚಿನ್ನವನ್ನು ಪಾಷಾಣಾದಿಗಳಿಂದ ಬೇರ್ಪಡಿಸಿ, ಶುದ್ಧ ಪರಿಶುದ್ಧ ಅಪರಂಜಿಯನ್ನು ಸಿದ್ಧಪಡಿಸುವಂತೆ, ಆತ್ಮಧ್ಯಾನವೆಂಬ ಅಗ್ನಿಯು ಕರ್ಮಕಲಂಕದಿಂದ ಆತ್ಮನನ್ನು ಬೇರ್ಪಡಿಸಿ, ಶುದ್ಧ ಸಿದ್ಧಾತ್ಮರಂತೆ ಮಾಡಲಾಗುವುದು.

**೭) ಬೆಳ್ಳಿ:** ಈ ಆತ್ಮನು ಶ್ರೇಷ್ಠವಾದ ಬೆಳ್ಳಿಯಂತೆ ಪರಮ ನಿರ್ಮಲನಿರುತ್ತಾನೆ. ಕರ್ಮಗಳೊಡನೆ ಒಂದಾಗಿ ಕ್ಷೇತ್ರಾವಗಾಹರೂಪ ಸಂಯೋಗವಾದರೂ ಕೂಡ ಎಂದೆಂದಿಗೂ ತನ್ನ ಶುದ್ಧ ಸ್ವಭಾವವನ್ನು ಬಿಡಲಾರನು.

ಈ ಆತ್ಮನಲ್ಲಿ ಜ್ಞಾನಪ್ರಕಾಶವೂ, ವೀತರಾಗತೆಯ ಶುಭ್ರಗುಣವೂ ಇರುತ್ತದೆ. ಜ್ಞಾನಿಯು ಆತ್ಮರೂಪ ಬೆಳ್ಳಿಯ ವ್ಯವಹಾರವನ್ನಿಟ್ಟುಕೊಂಡು, ಆತ್ಮನಲ್ಲಿಯೇ ರಮಿಸುತ್ತಾ, ಪರಮಾನಂದಮಯ ಐಶ್ವರ್ಯದಿಂದ ಶೂನ್ಯನಾಗಲಾರನು.

**೮) ಸ್ಫಟಿಕಮಣಿ :** ಈ ಆತ್ಮನು ಸ್ಫಟಿಕಮಣಿಯಂತೆ ನಿರ್ಮಲನೂ ಮತ್ತು ಪರಿಣಮನಶೀಲನೂ ಆಗಿರುತ್ತಾನೆ. ಕರ್ಮಗಳ ಉದಯರೂಪ ನಿಮಿತ್ತವಿಲ್ಲದಿದ್ದರೆ, ನಿರಂತರ ತನ್ನ ಶುದ್ಧ ಆತ್ಮೀಕಗುಣಗಳಲ್ಲಿಯೇ ಪರಿಣಮ ವನ್ನು ಮಾಡುತ್ತಾನೆ. ಸಂಸಾರಾವಸ್ಥೆಯಲ್ಲಿ ಕರ್ಮಗಳ ಉದಯನಿಮಿ ತ್ತವು ಸಿಕ್ಕಿದೊಡನೆ, ಇವನು ಸ್ವಯಂ ರಾಗ ದ್ವೇಷ ಮೋಹರೂಪವಾದ ನಾನಾವಿಧದ ವಿಭಾವರೂಪ ಪರಿಣಮಣಮಾಡುತ್ತಾನೆ. ಉದಾ : ಸ್ಫಟಿಕ ಮಣಿಯು ಕೆಂಪು, ಹಳದಿ, ನೀಲ ಮೊದಲಾದ ವಸ್ತುಗಳ ಸಂಪರ್ಕ ದಿಂದ ಕೆಂಪು, ಹಳದಿ, ನೀಲ ಮೊದಲಾದ ವರ್ಣಗಳ ರೂಪವನ್ನು ತಾಳುತ್ತಿ ದ್ದರೂ ಕೂಡ, ತನ್ನ ನಿರ್ಮಲತೆಯನ್ನು ಕಳೆದುಕೊಳ್ಳುವುದಿಲ್ಲವು; ಕೇವಲ ಮರೆಸಿರುತ್ತದೆ. ಹೀಗೆಯೇ ಆತ್ಮನು ಸರಾಗಾವಸ್ಥೆಯಲ್ಲಿ ರಾಗ ದ್ವೇಷರೂಪ ವಾಗಿ ಪರಿಣಮಿಸುತ್ತಿದ್ದರೂ ಕೂಡ, ವೀತರಾಗತೆಯ ಲೋಪವು ಆತ್ಮನಿಗೆ ಆಗಲಾರದು; ಇದು ಕೇವಲ ಆವರಣವು ಮಾತ್ರವು. ನಿಮಿತ್ತಗಳೊದಗ ದಿದ್ದರೆ, ಸದಾ ಸ್ಫಟಿಕಮಣಿಯಂತೆ ಶುದ್ಧ ವೀತರಾಗ ಭಾವದಲ್ಲಿಯೇ ಪ್ರಕಾಶಿ ಸುತ್ತಿರುತ್ತಾನೆ.

**೯) ಅಗ್ನಿ :** ಈ ಆತ್ಮನು ಅಗ್ನಿಯೋಪಾದಿಯಲ್ಲಿ ಯಾವತ್ತೂ ಪ್ರಜ್ವ ಲಿಸುತ್ತಿರುತ್ತಾನೆ; ಯಾವ ವಿಷಯುವನ್ನು ಮತ್ತು ಬೇರೆ ಆಕ್ರಮಣವನ್ನು ಸಮ್ಮತಿಸುವುದಿಲ್ಲವು. ಇವನು ಸಂಸಾರಪರ್ಯಾಯದಲ್ಲಿರುವವರೆಗೆ ಸ್ವಯಂ ಆತ್ಮೀಕ ಧ್ಯಾನಾಗ್ನಿಯಿಂದ ಪ್ರಜ್ವಲಿಸುತ್ತಾ, ಕರ್ಮರೂಪ ಇಂಧನದಾಹಕವೂ ಆತ್ಮಬಲ ಪೋಷಕವೂ ಮತ್ತು ಸದಾಜ್ಞಾನ ಮೂಲಕ ಸ್ವಪರ ಪ್ರಕಾಶಕನೂ ಆಗುತ್ತಾನೆ. ಈ ಒಂಭತ್ತು ದೃಷ್ಟಾಂತಗಳಿಂದ ಆತ್ಮನನ್ನು ತಿಳಿದು ಪೂರ್ಣ ವಿಶ್ವಾಸವನ್ನಿಡಬೇಕು.

ಸಮಯಸಾರದಲ್ಲಿ ಹೇಳಿರುತ್ತಾರೆ :

**ಜಹ ಫಲಿಯಮಣಿ ವಿಸುದ್ಧೋ ಣ ಸಯಂ ಪರಿಣಮದಿ**
**ರಾಗಮಾದೀಹಿಂ ।**

**ರಾಇಜ್ಜದಿ ಅಣ್ಣೇಹಿಂ ದು ಸೋ ರತ್ತಾದಿಯೇಹಿಂ**
**ದವ್ವೇಹಿಂ ॥೩೦೦॥**

**ಏವಂ ಣಾಣಿ ಸುದ್ಧೋ ಣ ಸಯಂ ಪರಿಣಮದಿ ರಾಗಮಾದೀಹಿಂ।**
**ರಾಇಜ್ಜದಿ ಅಣ್ಣೇಹಿಂ ದು ಸೋ ರಾಗಾದೀಹಿಂ ದೋಸೇಹಿಂ ॥೩೦೧॥**

**ಭಾವಾರ್ಥ :** ಯಾವ ಪ್ರಕಾರವಾಗಿಯೂ ಶುದ್ಧ ಸ್ಪಟಿಕಮಣಿಯು ಕೆಂಪು, ಹಳದಿ, ನೀಲರೂಪವಾಗಿ ಪರಿಣಮಿಸಲಾರದು. ಆದರೆ ಕೆಂಪು ಮೊದಲಾದ ದ್ರವ್ಯಗಳ ಸಂಯೋಗವಾದೊಡನೆ, ಕೆಂಪು ಮೊದಲಾದ ವರ್ಣಗಳುಂಟಾಗುವಂತೆ, ಜ್ಞಾನಸ್ವರೂಪನಾದ ಆತ್ಮನು ಸ್ವಯಂ ರಾಗಭಾವಗಳಲ್ಲಿ ಪರಿಣಮಿಸಲಿಕ್ಕಿಲ್ಲವು. ಆದರೆ ಮೋಹನೀಯಕರ್ಮದ ರಾಗಾದಿಪ್ರಕೃತಿಗಳ ಉದಯವಾದೊಡನೆ, ರಾಗಾದಿರೂಪಪರಿಣಮಿಸುತ್ತಾನೆ. ಇವನು ಸ್ಪಟಿಕ ಮಣಿಯಂತೆ ನಿರ್ಮಲ ಪರಿಣಾಮಶೀಲನಾಗಿರುತ್ತಾನೆ.



## ನಾನು ದೇಹರೂಪನಲ್ಲನೆಂಬ ಜ್ಞಾನವೇ ಮೋಕ್ಷದ ಬೀಜವು

**ದೇಹಾದಿಲು ಜೋ ಪರು ಮುಣಇ ಜೇಹಲು ಸುಣ್ಣು ಅಯಾಸು।**
**ಸೋ ಲಹು ಪಾವಇ ಬಂಭು (?) ಪರು ಕೇವಲು ಕರಇ ಪಯಾಸು**

**ಅನ್ವಯಾರ್ಥ** : ಜೇಹಲು ಅಯಾಸು ಸುಣ್ಣು–ಯಾವ ಪ್ರಕಾರವಾಗಿ ಆಕಾಶವು ಏಕಾಂಗಿಯಾಗಿರುತ್ತದೆಯೋ, ದೇಹಾದಿಲು ಜೋ ಪರು ಮುಣಇ–ಅದರಂತೆ ಶರೀರಾದಿಗಳನ್ನು ತನ್ನಿಂದ ಭಿನ್ನಗಳೆಂದೇ ಯಾವನು ತಿಳಿಯುತ್ತಾನೆಯೋ, ಸೋ ಪರು ಬಂಭು ಲಹು ಪಾವಇ–ಅವನೇ ಪರಮಬ್ರಹ್ಮಸ್ವರೂಪದ ರುಚಿಯನ್ನು ನೋಡುತ್ತಾನೆ. ಕೇವಲು ಪಯಾಸು ಕರಇ–ಮತ್ತು ಕೇವಲ ಜ್ಞಾನಜ್ಯೋತಿಯನ್ನೂ ಬೆಳಗಿಸಿಕೊಳ್ಳುತ್ತಾನೆ.

**ಭಾವಾರ್ಥ :** ಆಕಾಶದೊಳಗೆ ಒಂದು ಕ್ಷೇತ್ರದಲ್ಲಿ ಧರ್ಮಾಸ್ತಿಕಾಯ, ಅಧರ್ಮಾಸ್ತಿಕಾಯ, ಅಸಂಖ್ಯಾತ ಕಾಲಾಣುಗಳು, ಅನಂತ ಜೀವಗಳು, ಅನಂತಾನಂತ ಪುದ್ಗಲದ್ರವ್ಯಗಳಿರುತ್ತದೆ. ತಥಾಪಿ ಅವುಗಳ ಪರಿಣತಿಯಿಂದ

ಆಕಾಶದಲ್ಲಿ ಯಾವವಿಕಾರವಾಗಲಿ, ದೋಷಗಳಾಗಲಿ ಉಂಟಾಗಲಾರವು. ಆಕಾಶವೂ ಕೂಡ ಅವುಗಳಿಂದ ಶೂನ್ಯವೂ, ನಿರ್ಲೇಪವೂ, ನಿರ್ವಿಕಾರವೂ ಆಗಿ ಇರುತ್ತದೆ. ಎಂದೆಂದಿಗೂ ಅವುಗಳೊಡನೆ ತನ್ಮಯವಾಗಲಾರವು.

ಜ್ಞಾನಿಗಳು ತಿಳಿಯುತ್ತಾರೆ :- ಆಕಾಶದ ಅಸ್ತಿತ್ವವೇ (ಸತ್ತಾ) ಬೇರೆ ಆಗಿರುತ್ತದೆ ಮತ್ತು ಆಕಾಶದಲ್ಲಿರುವ ಚೇತನಾಚೇತನ ಪದಾರ್ಥಗಳ ಸತ್ತೆ ಯೇಬೇರೆ ಆಗಿರುತ್ತದೆ. ತನ್ನಾತ್ಮನು ಆಕಾಶದಂತೆ ಅಮೂರ್ತಿಯಾಗಿರು ತ್ತಾನೆ. ಆತ್ಮನ ಸಕಲ ಅಸಂಖ್ಯಾತಪ್ರದೇಶಗಳು ಅಮೂರ್ತಿಗಳೇ ಆಗಿರು ತ್ತವೆ. ತನ್ನ ಆತ್ಮನ ಆಧಾರದಲ್ಲಿರುವ ತೈಜಸ ಮತ್ತು ಕಾರ್ಮಣಶರೀರಗಳೆ ರಡೂ, ಔದಾರಿಕಶರೀರವೂ, ಆ ಶರೀರವನ್ನು ಆಶ್ರಯಿಸಿರುವ ಇಂದ್ರಿಯಗಳೂ ಮತ್ತು ಅವುಗಳ ಪರಿಣಮಣಸ್ವರೂಪಗಳಾದ ಮನವಚನಾದಿಗಳೂ ತನ್ನಿಂದ ಭಿನ್ನಗಳೇ ಆಗಿರುತ್ತವೆ.

ಬಂಧಪ್ರಾಪ್ತಕರ್ಮಗಳ ಉದಯವಾಗುವುದರಿಂದ ತೀವ್ರ ಕಷಾಯ ಅಥವಾ ಮಂದಕಷಾಯಗಳ ಎಲ್ಲಾ ಶುಭಾಶುಭ ಭಾವಗಳು ತನ್ನಾತ್ಮನ ಶುದ್ಧ ಸ್ವಭಾವದಿಂದ ಭಿನ್ನಗಳಾಗಿವೆ; ಮನ, ವಚನ, ಕಾಯಗಳ ಸಂಬಂಧ ವಾದ ಕ್ರಿಯೆಗಳಿಂದ ಯಾವ ಸಂಬಂಧವೂ ಇಲ್ಲವು. ನಾನು ಪರವಸ್ತುಗಳ ಮೋಹದಿಂದ ಶೂನ್ಯನಾಗಿಯೂ, ಪರಮ ವೀತರಾಗಿಯೂ, ನಿರ್ಮಲನೂ ಆಗಿರುತ್ತೇನೆ. ನನಗೆ ಯಾವ ಮಾತಾಪಿತೃಗಳಾಗಲಿ, ಪುತ್ರಮಿತ್ರರಾಗಲಿ, ಪತ್ನಿಯಾಗಲಿ, ಪುತ್ರಿಯರಾಗಲಿ, ಅಧಿಕಾರಿಯಾಗಲಿ, ಸೇವಕರಾಗಲಿ ಮತ್ತು ಮನೆಮಠಗ್ರಾಮವಸ್ತ್ರಭೂಷಣಗಳಾಗಲಿ ಯಾವುದೂ ಇಲ್ಲವು.

ನನಗೆ ಪರವಸ್ತುಗಳ ಸಂಬಂಧವು ತಿಲಮಾತ್ರವೂ ಇಲ್ಲವು. ನನ್ನಲ್ಲಿ ಪರವಸ್ತುಗಳ ಅಭಾವವಿರುತ್ತದೆ. ಸಕಲಪರವಸ್ತುಗಳಲ್ಲಿ ನನ್ನ ಅಭಾವವಿರು ತ್ತದೆ. ವಿಶ್ವದ ಅನಂತಸಂಸಾರಿ, ಸಿದ್ಧಾತ್ಮರು ತಮ್ಮ ಮೂಲಸ್ವಭಾವದಲ್ಲಿ ನನ್ನ ಸ್ವಭಾವದಂತಿದ್ದರೂ, ನನ್ನ ಸತ್ತೆಯೇ ಭಿನ್ನ, ಅವರ ಸತ್ತೆಯೇ ಭಿನ್ನ ಆಗಿರು ತ್ತದೆ. ನನ್ನ ಜ್ಞಾನವೂ, ದರ್ಶನವೂ, ಸುಖವೂ, ವೀರ್ಯವೂ, ಸಮ್ಯ ಕ್ತ್ವವೂ, ಚಾರಿತ್ರವೂ ಮತ್ತು ಚೈತನ್ಯವೂ ಮೊದಲಾದ ಗುಣಗಳೆಲ್ಲವೂ ಭಿನ್ನವೇ ಆಗಿರುತ್ತದೆ. ನನ್ನ ಪರಿಣಾಮವೂ ಕೂಡ ಭಿನ್ನವೇ ಆಗಿರುತ್ತದೆ.

ನಾನು ಅನಾದಿಕಾಲದಿಂದ ಏಕಾಂಗಿಯಾಗಿ ಅನಂತಕಾಲದವರೆವಿಗೂ ಏಕಾಂಗಿಯಾಗಿರುವೆನು.

ಅನಾದಿಕಾಲ ಸಂಸಾರಪರಿಭ್ರಮಣೆಯಲ್ಲಿ ನನ್ನೊಡನೆ ಸಂಯೋಗವಾಗಿದ್ದ ಅನಂತಪುದ್ಗಲಗಳು ನನ್ನಿಂದ ದೂರದಲ್ಲಿಯೇ ಇದ್ದವು. ಆ ಕರ್ಮನೋಕರ್ಮಪುದ್ಗಲಗಳು ನನ್ನ ಯಾವಗುಣಗಳನ್ನಾಗಲಿ, ಸ್ವಭಾವವನ್ನಾಗಲಿ ಸರ್ವಥಾ ಅಭಾವನ್ನಾಗಿಮಾಡಲು ಸಾಧ್ಯವಿಲ್ಲವು. ಸೂರ್ಯನಿಗೆ ಕರ್ಮಗಳೆಂಬ ಮೇಘಗಳು ಆವರಿಸಿದರೂ ಕೂಡ, ಸೂರ್ಯನು ತನ್ನ ಪ್ರಕಾಶದಿಂದ ಪ್ರಕಾಶಿಸುವಂತೆ, ನಾನೂ ಕರ್ಮಗಳ ಆವರಣದಿಂದ ಆವರಿಸಿದರೂ ಕೂಡ ನಿರಾವರಣನೇ. ನಾನು ಸಂಸಾರಅವಸ್ಥೆಯಲ್ಲಿ ಅನೇಕ ಮಾತಾಪಿತೃಗಳನ್ನು ಸಹೋದರ ಸಹೋದರಿಯರುಗಳನ್ನು, ಪುತ್ರಮಿತ್ರಾದಿಗಳನ್ನು ಪಡೆದಿದ್ದರೂ ಅವರೆಲ್ಲರೂ ನನ್ನಿಂದ ಭಿನ್ನರಾಗಿಯೇ ಇದ್ದರು. ಅದರಂತೆ ನಾನೂ ಕೂಡ ಭಿನ್ನನೇ ಆಗಿದ್ದೆನು; ನಾಲ್ಕುಗತಿಗಳಲ್ಲಿಯೂ ಅನೇಕ ಶರೀರಗಳನ್ನು ಧರಿಸಿದೆ; ಅನೇಕ ಪರವಸ್ತುಗಳ ಸಂಗವನ್ನು ಮಾಡಿದೆ; ಆದರೂ ಅವೆಲ್ಲವೂ ನನ್ನವುಗಳಾಗಲಿಲ್ಲವು. ನಾನೂ ಅವುಗಳಾಗಿ ಆಗಲಿಲ್ಲವು. ಹೀಗೆ ದೃಢನಂಬಿಕೆಯನ್ನಿಟ್ಟಿರಬೇಕು. ನಾನು ಸದಾ ರಾಗಾದಿ ವಿಕಾರಗಳಿಂದ ಶೂನ್ಯನಾಗಿಯೂ, ಈಗಲೂ ಶೂನ್ಯನಾಗಿಯೂ, ಮುಂದಕ್ಕೂ ಶೂನ್ಯನಾಗಿಯೇ ಇರುವೆನು.

ಸಕಲ ಮಾನಸಿಕ ವಿಕಾರಗಳನ್ನು ತಡೆದು, ಜಗತ್ತಿನ ಎಲ್ಲಾ ಪದಾರ್ಥಗಳಿಂದ ವಿರಕ್ತನಾಗಿ, ತನ್ನ ಉಪಯೋಗಗಳನ್ನು ಸೂಕ್ಷ್ಮವಾಗಿ ತನ್ನಂತರಂಗದಲ್ಲಿಯೇ ಉಪಯೋಗಿಸಿದ್ದೇ ಆದರೆ, ಸ್ವತಃ ಪರಬ್ರಹ್ಮಸ್ವರೂಪನೆಂದ ತೋರುವುದು. ಇದೇ ಆತ್ಮದರ್ಶನವೂ, ಕೇವಲಜ್ಞಾನ ಪ್ರಕಾಶಕವೂ ಆಗಿರುತ್ತದೆ.

ಪರಮಾತ್ಮಪ್ರಕಾಶದಲ್ಲಿ ಹೇಳಿರುತ್ತಾರೆ :

**ಮುತ್ತಿವಿಹೂಣಉ ಣಾಣಮಉ, ಪರಮಾನಂದ ಸಹಾಉ।**
**ಣಿಯಮೇ ಜೋಇಯ ಅಪ್ಪುಮುಣಿ ಣಿಚ್ಚು ಣಿರಂಜಣ**
**ಭಾಉ ॥೧೪೩॥**

**ಭಾವಾರ್ಥ :** ಎಲೈ ಯೋಗಿಯೇ! ನೀನು ನಿಶ್ಚಯನಯದಿಂದ ನಿನ್ನನ್ನು ಅಮೂರ್ತನೆಂದೂ, ಜ್ಞಾನಮಯನೆಂದೂ, ಪರಮಾನಂದ ಸ್ವಭಾವ ಧಾರಿಯೆಂದೂ, ನಿತ್ಯನಿರಂಜನ ಪದಾರ್ಥವೆಂದೂ ತಿಳಿ.

ತತ್ವಾನುಶಾಸನದಲ್ಲಿ ಹೇಳಿರುತ್ತಾರೆ :

**ಸದ್ದ್ರವ್ಯಮಸ್ಮಿ ಚಿದಹಂ ಜ್ಞಾತಾ ದೃಷ್ಟಾ ಸದಾಪ್ಯುದಾಸೀನಃ |**
**ಸ್ವೋಪಾತ್ತದೇಹಮಾತ್ರಸ್ತತಃ ಪೃಥಗ್ಗಗನವದಮೂರ್ತ್ತಃ ||೧೫೩||**

**ಭಾವಾರ್ಥ :** ನಾನು ನನ್ನ ಸತ್ತೆಯನ್ನಿಟ್ಟುಕೊಂಡಿರುವ ಒಂದು ಭಿನ್ನ ದ್ರವ್ಯನೂ, ಸ್ವಾನುಭವರೂಪನೂ, ಜ್ಞಾತೃವೂ, ದರ್ಶಿಯೂ, ವೀತರಾಗನೂ, ಸ್ವೀಕರಿಸಿದ ಶರೀರವ್ಯಾಪಕನಾಗಿದ್ದರೂ ಕೂಡ ಶರೀರದಿಂದ ಭಿನ್ನನೂ, ಆಕಾಶ ದಂತೆ ಅಮೂರ್ತಿಯೂ ಆಗಿರುತ್ತೇನೆ.



## ಆಕಾಶದಂತಿದ್ದರೂ ನಾನು ಸಚೇತನನು

**ಜೇಹಉ ಸುದ್ಧ ಅಯಾಸು ಜಿಯ ತೇಹಉ ಅಪ್ಪಾ ವುತ್ತು |**
**ಆಯಾಸು ವಿ ಜಡು ಜಾಣಿ ಜಿಯ ಅಪ್ಪಾ ಚೇಯಣುವಂತು ||೫೮||**

**ಅನ್ವಯಾರ್ಥ :** ಜಿಯ–ಎಲೈ ಜೀವನೇ! ಜೇಹಉ ಅಯಾಸು ಸುದ್ಧ ತೇಹಉ ಅಪ್ಪಾ ವುತ್ತು–ಆಕಾಶವು ಶುದ್ಧವಾಗಿರುವಂತೆ ಈ ಆತ್ಮನು ಇರುವನೆಂದು ಹೇಳಿದೆ. ಜಿಯ ಆಯಾಸು ವಿ ಜಡು ಜಾಣಿ–ಎಲೈ ಜೀವನೇ! ಆಕಾಶವನ್ನು ಜಡ-ಅಚೇತನವೆಂದು ತಿಳಿದು, ಅಪ್ಪಾ ಚೇಯಣುವಂತು–ಆತ್ಮ ನನ್ನು ಸಚೇತನನೆಂದೇ ತಿಳಿಯಬೇಕು.

**ಭಾವಾರ್ಥ :** ಆಕಾಶವು ಒಂದು ದ್ರವ್ಯವಾಗಿರುವಂತೆ ಆತ್ಮನೂ ಒಂದು ದ್ರವ್ಯನಾಗಿದ್ದಾನೆ. ಹಾಗೆ ಪುದ್ಗಲ, ಧರ್ಮಾಸ್ತಿಕಾಯ, ಅಧರ್ಮಾಸ್ತಿ ಕಾಯ, ಕಾಲ ಇವುಗಳೂ ಕೂಡ ದ್ರವ್ಯಗಳೇ ಆಗಿರುತ್ತವೆ. ಈ ಆರು ದ್ರವ್ಯ ಗಳು ದ್ರವ್ಯತ್ವದ ಅಪೇಕ್ಷೆಯಿಂದ ಸಮಾನಗಳಾಗಿವೆ. ಎಲ್ಲಾ ದ್ರವ್ಯಗಳ ಲ್ಲಿಯೂ ಈ ಆರು ಸಾಮಾನ್ಯಗುಣಗಳು ಕಂಡುಬರುತ್ತವೆ.

೧) **ಅಸ್ತಿತ್ವ** : ಸದಾಕಾಲದಿಂದ ಎಲ್ಲಾ ದ್ರವ್ಯಗಳಿವೆ. ಸದಾ ಇರುವುವು.

೨) **ವಸ್ತುತ್ವ** : ಸರ್ವದ್ರವ್ಯಗಳು ತಮ್ಮತಮ್ಮ ಕಾರ್ಯಗಳನ್ನು ಸ್ವತಂತ್ರಮಾಡುತ್ತಿರುತ್ತವೆ.

೩) **ದ್ರವ್ಯತ್ವ** : ಎಲ್ಲಾ ದ್ರವ್ಯಗಳೂ ಅಖಂಡವಾಗಿ ಇರುತ್ತಿದ್ದರೂ ಕೂಡ, ತಮ್ಮತಮ್ಮ ಪರ್ಯಾಯಗಳಲ್ಲಿ ಪರಿಣಮಿಸುತ್ತಿರುತ್ತವೆ. ಅವುಗಳಲ್ಲಿ ಸ್ವಭಾವ ಅಥವಾ ವಿಭಾವ ಅವಸ್ಥೆಗಳುಂಟಾಗುತ್ತಿರುತ್ತವೆ.

೪) **ಪ್ರಮೇಯತ್ವ** : ಸರ್ವದ್ರವ್ಯಗಳೂ ಸರ್ವಜ್ಞರಿಂದಲೇ ತಿಳಿಯಲು ಯೋಗ್ಯಗಳಾಗಿರುತ್ತವೆ.

೫) **ಅಗುರುಲಘುತ್ವ** : ಎಲ್ಲಾ ದ್ರವ್ಯಗಳೂ ತಮ್ಮತಮ್ಮ ಗುಣಪರ್ಯಾಯಗಳನ್ನು ತಮ್ಮಲ್ಲಿಯೇ ಇಟ್ಟುಕೊಂಡಿರುತ್ತವೆ. ಪರದ್ರವ್ಯಗಳ ಗುಣಪರ್ಯಾಯಗಳನ್ನು ಗ್ರಹಿಸುವುದೂ ಇಲ್ಲವು.

೬) **ಪ್ರದೇಶತ್ವ** : ಸರ್ವದ್ರವ್ಯಗಳು ಆಕಾಶದಲ್ಲಿಯೇ ಇರುತ್ತವೆ; ಸ್ಥಾನವನ್ನು ಆಕ್ರಮಿಸುತ್ತವೆ. ಎಲ್ಲಾ ದ್ರವ್ಯಗಳಲ್ಲಿ ಎಷ್ಟೋ ಸ್ವಭಾವಗಳು ಸಾಮಾನ್ಯವಾಗಿ ಕಂಡುಬರುತ್ತವೆ. ಹೇಗೆಂದರೆ :—

೧) **ಅಸ್ತಿಸ್ವಭಾವ** : ತಮ್ಮ ಸ್ವಭಾವದಲ್ಲಿದ್ದು ಎಲ್ಲಾದ್ರವ್ಯ ಭಾವತ್ವವನ್ನಿಟ್ಟುಕೊಂಡಿರುತ್ತವೆ.

೨) **ನಾಸ್ತಿಸ್ವಭಾವ** : ಪರದ್ರವ್ಯಗಳ ಸ್ವಭಾವದ ಪರಸ್ಪರ ಅಭಾವವಿರುತ್ತದೆ. ಒಂದು ವಸ್ತುವಿನ ಸತ್ತೆಯು ಅನ್ಯವಸ್ತುವಿನಲ್ಲಿರುವುದಿಲ್ಲವು.

೩) **ನಿತ್ಯಸ್ವಭಾವ** : ತಮ್ಮತಮ್ಮ ದ್ರವ್ಯಗಳ ಸ್ವಭಾವವನ್ನಿಟ್ಟುಕೊಂಡು ಎಂದೆಂದಿಗೂ ದ್ರವ್ಯಗಳು ನಾಶವಾಗುವುದಿಲ್ಲವು.

೪) **ಅನಿತ್ಯಸ್ವಭಾವ** : ತಮ್ಮತಮ್ಮ ಪರ್ಯಾಯಗಳು ಬದಲಾವಣೆಯಾಗುವ ಅಪೇಕ್ಷೆಯಿಂದ, ಎಲ್ಲಾ ದ್ರವ್ಯಗಳೂ ನಾಶಶೀಲವಾಗಿರುತ್ತವೆ ಅಥವಾ ಕ್ಷಣಿಕಗಳಾಗಿರುತ್ತವೆ.

೫) **ಏಕತ್ವಸ್ವಭಾವ :** ಎಲ್ಲಾ ದ್ರವ್ಯಗಳೂ ಅನೇಕ ಗುಣ ಪರ್ಯಾಯಗಳಲ್ಲಿ ಒಂದೊಂದೂ ಅಖಂಡರೂಪಗಳಾಗಿವೆ.

೬) **ಅನೇಕಸ್ವಭಾವ :** ಎಲ್ಲಾ ದ್ರವ್ಯಗಳೂ ಅನೇಕ ಸ್ವಭಾವಿ ಗಳಾದುದರಿಂದ ಅನೇಕರೂಪಗಳಾಗಿರುತ್ತವೆ.

೭) **ಭೇದಸ್ವಭಾವ :** ಗುಣಗುಣಿಗಳಲ್ಲಿ ಸಂಜ್ಞೀಲಕ್ಷಣಾದಿ ಭೇದಗಳು ಉದ್ಯುಕ್ತವಾದುದರಿಂದ ಭೇದಸ್ವಭಾವಿಗಳಾಗಿವೆ.

೮) **ಅಭೇದಸ್ವಭಾವ :** ಎಲ್ಲಾ ದ್ರವ್ಯಗಳ ಸ್ವಭಾವಗಳು ದ್ರವ್ಯಗಳಲ್ಲಿ ಸರ್ವಾಂಗ ಅಖಂಡವಾಗಿರುತ್ತವೆ. ಆದ್ದರಿಂದಲೇ ಅಭೇದ ಸ್ವಭಾವವುಳ್ಳವುಗಳಾಗಿವೆ.

೯) **ಭವ್ಯಸ್ವಭಾವ :** ಎಲ್ಲಾ ದ್ರವ್ಯಗಳೂ ತಮ್ಮ ಸ್ವಭಾವದಲ್ಲಿಯೇ ಪರಿಣಮಣಮಾಡಿಕೊಳ್ಳುವ ಯೋಗ್ಯತೆಯನ್ನಿಟ್ಟುಕೊಂಡಿರುತ್ತವೆ.

೧೦) **ಅಭವ್ಯಸ್ವಭಾವ :** ಎಲ್ಲಾದ್ರವ್ಯಗಳೂ ಪರದ್ರವ್ಯಗಳ ಸ್ವಭಾ ವರೂಪವಾಗಿ ಎಂದೆಂದಿಗೂ ಪರಿಣಮಿಸುವುದಿಲ್ಲವು.

೧೧) **ಪರಮಸ್ವಭಾವ :** ಸರ್ವದ್ರವ್ಯಗಳೂ ಶುದ್ಧ ಪಾರಿಣಾಮಿಕ ಭಾವದಿಂದ್ಯುಕ್ತಗಳಾಗಿವೆ.

ಈ ಆರು ದ್ರವ್ಯಗಳು ಸಾಮಾನ್ಯ ಮತ್ತು ಸ್ವಭಾವಗಳ ಅಪೇಕ್ಷೆಯಿಂದ ಸಮಾನವಾಗಿರುತ್ತವೆ. ಆದರೆ ವಿಶೇಷಗುಣಗಳ ಅಪೇಕ್ಷೆಯಿಂದ ಅವುಗಳಲ್ಲಿ ಅಂತರವಿದೆ. ಅಮೂರ್ತಿಕಗುಣದ ದೃಷ್ಟಿಯಿಂದ ಪುದ್ಗಲದ್ರವ್ಯವನ್ನು ಬಿಟ್ಟು ಉಳಿದ ಐದು ದ್ರವ್ಯಗಳು ಸಮಾನಗಳಾಗಿವೆ. ಪುದ್ಗಲದ್ರವ್ಯದಲ್ಲಿ ಸ್ಪರ್ಶ, ರಸ, ಗಂಧ, ವರ್ಣ ಇವು ವಿಶೇಷ, ಅಸಾಧಾರಣ ಗುಣಗಳಾಗಿರುತ್ತವೆ. ಧರ್ಮದ್ರವ್ಯದಲ್ಲಿ ಜೀವಪುದ್ಗಲಗಳ ಗಮನಕ್ಕೆ ಕಾರಣವಾದ ವಿಶೇಷ ಗುಣ ವಿರುತ್ತದೆ. ಅಧರ್ಮದ್ರವ್ಯದಲ್ಲಿ ಜೀವ ಪುದ್ಗಲಗಳಸ್ಥಿತಿಗೆ ಕಾರಣವಾದ ವಿಶೇಷಗುಣವಿರುತ್ತದೆ. ಆಕಾಶದಲ್ಲಿ ಎಲ್ಲಾ ದ್ರವ್ಯಗಳಿಗೆ ಅವಕಾಶಕೊಡುವ ವಿಶೇಷಗುಣವಿರುತ್ತದೆ.

ಕಾಲದ್ರವ್ಯದಲ್ಲಿ ಎಲ್ಲಾ ಪದಾರ್ಥಗಳನ್ನು ವರ್ತಿಸುವುದರಲ್ಲಿಯೂ ಮತ್ತು ಪರಿಣಮಿಸುವುದರಲ್ಲಿಯೂ ಸಹಾಯಮಾಡುವ ವಿಶೇಷಗುಣವು ಇರು

ತ್ತದೆ. ಸಕಲಜೀವದ್ರವ್ಯಗಳಲ್ಲಿರುವ ಜ್ಞಾನ, ದರ್ಶನ, ಸುಖ, ವೀರ್ಯ, ಚೇತನ, ಸಮ್ಯಕ್ತ್ವ, ಚಾರಿತ್ರಗಳೆಂಬ ವಿಶೇಷಗುಣಗಳು ಆಕಾಶಾದಿ ಐದು ದ್ರವ್ಯಗಳಲ್ಲಿರುವುದಿಲ್ಲವು. ಯಾಕೆಂದರೆ ಅವೈದು ಅಚೇತನಗಳಾಗಿವೆ. ಆತ್ಮ ದ್ರವ್ಯವಾದರೋ ಸಚೇತನದ್ರವ್ಯವಾಗಿರುವುದು. ಸಕಲ ದ್ರವ್ಯಗಳೂ ಮೂಲ ಸ್ವಭಾವದ ದೃಷ್ಟಿಯಿಂದ ಶುದ್ಧಗಳಾಗಿವೆ. ನಿರ್ಮಲವಾದ ಆಕಾಶದಂತೆ ಆತ್ಮನು ನಿರ್ಮಲನೇ ಆಗಿರುತ್ತಾನೆ. ತನ್ನಾತ್ಮನು ಪರಿಶುದ್ಧನೂ, ನಿರ್ವಿಕಾರನೂ, ಪರಮಾನಂದಮಯನೂ, ಅವಿನಾಶಿಯೂ ಆದ ಒಂದು ದ್ರವ್ಯವಾಗಿರುವುದೆಂದು ವಿಚಾರಿಸುವುದು, ಆಚರಣೆಗೆ ತರುವುದು, ಸ್ವಾನುಭವವನ್ನು ಪಡೆಯುವುದು ಜ್ಞಾನಿಯ ಆದ್ಯಕರ್ತವ್ಯವಾಗಿರುತ್ತದೆ. ಅದೇ ನಿರ್ವಾಣ ಪದವಿಯ ಪ್ರಾಪ್ತಿಯ ಮಹೋಪಾಯವಾಗಿರುತ್ತದೆ.

ಸಮಯಸಾರ ಕಲಶದಲ್ಲಿ ಹೇಳಿರುತ್ತಾರೆ :

**ತ್ಯಜತು ಜಗದಿದಾನೀಂ ಮೋಹಮಾಜನ್ಮಲೀಢಂ ।**
**ರಸಯತು ರಸಿಕಾನಾಂ ರೋಚನಂ ಜ್ಞಾನಮುದ್ಯತ್ ॥**
**ಇಹ ಕಥಮಪಿ ನಾತ್ಮಾಽನಾತ್ಮನಾ ಸಾಕಮೇಕಃ ।**
**ಕಿಲ ಕಲಯತಿ ಕಾಲೇ ಕ್ವಾಪಿ ತಾದಾತ್ಮ್ಯವೃತ್ತಿಂ ॥ ೨೨-೧ ॥**

**ಭಾವಾರ್ಥ :** ಎಲೈ ಸಂಸಾರೀ ಪ್ರಾಣಿಗಳೇ! ಅನಾದಿಕಾಲದಿಂದ ಬಂಧಮೋಹಭಾವವನ್ನು ಅಥವಾ ಅಜ್ಞಾನವನ್ನು ಬಿಟ್ಟು, ಮಹಾಸ್ವಾದಿಷ್ಟವಾದ, ಜ್ಯೋತಿರ್ಮಯವಾದ ಆತ್ಮಸ್ವಾದದ ರುಚಿಯನ್ನು ಆಸ್ವಾದಿಸು. ಈ ಲೋಕದಲ್ಲಿ ಎಂದೆಂದಿಗೂ ಆತ್ಮನು ಅನ್ಯಾತ್ಮದೊಡನೆ ಸೇರಿಕೊಂಡು ಒಂದಾಗುವುದಿಲ್ಲವು. ಆತ್ಮನು ಸದಾಕಾಲದಲ್ಲಿಯೂ ಪರವಸ್ತುವಿನಿಂದ ಬೇರೆಯಾಗಿ ತನ್ನ ಸ್ವಭಾವದಲ್ಲೇ ಇರುತ್ತಾನೆ.



## ತನ್ನಂತರಂಗದಲ್ಲಿಯೇ ಮೋಕ್ಷಮಾರ್ಗವು ಇದೆ

**ಜಾಸಗ್ಗಿಂ ಅಬ್ಭಿಂತರಹಂ ಜೇ ಜೀವಹಿಂ ಅಸರೀರು ।**
**ಬಾಹುಡಿ ಜಮ್ಮಿ ಣ ಸಂಭವಹಿಂ ಪಿವಹಿಂ ಣ ಜಣಣೀ ಖೀರು ॥೬೦॥**

**ಅನ್ವಯಾರ್ಥ :** ಜೇ ಣಾಸಗ್ಗಿಂ ಅಬ್ಭಿಂತರಹಂ ಅಸರೀರು ಜೀವಹಿಂ-ಯಾನ ಜ್ಞಾನಿಯು ನಾಸಿಕಾಗ್ರದೃಷ್ಟಿಯಿಂದ ಶರೀರರಹಿತನಾದ ಆತ್ಮನನ್ನು ನೋಡುತ್ತಾನೆಯೋ, ಬಾಹುಡಿ ಜಮ್ಮಿ ಣ ಸಂಭವಹಿಂ-ಆವನು ಅನ್ಯಜನ್ಮ ವನ್ನು ಪಡೆಯುವುದಿಲ್ಲವು. ಜಣಣೀ ಖೀರು ಣ ಪಿವಹಿಂ-ಪುನಃ ತಾಯಿಯ ಹಾಲನ್ನು ಕುಡಿಯಲಾರನು.

**ಭಾವಾರ್ಥ :** ಆತ್ಮನು ಶರೀರಗಳಿಂದ ರಹಿತನೂ, ಅಮೂರ್ತಿಯೂ ಆಗಿರುವುದನ್ನು ಇಂದ್ರಿಯಗಳಿಂದ ತಿಳಿಯಲು ಸಾಧ್ಯವಾಗದೆ, ಮನಸ್ಸಿನಿಂದಲೇ ವಿಚಾರಿಸಲು ಸಾಧ್ಯವಿದೆ. ಆತ್ಮನ ಗ್ರಹಣೆಯು ಆತ್ಮನಿಂದ ಸಾಧ್ಯವಾಗು ವುದು. ಬಾಹ್ಯಸಾಧನವು ಧ್ಯಾನಾಭ್ಯಾಸವೇ ಆಗಿರುತ್ತದೆ

ಆ ಸಾಧಕನು ವ್ಯಾಕುಲರಹಿತವೂ, ನಿರ್ಜನವೂ ಆದ ಏಕಾಂತಸ್ಥಾನ ಗಳಾದ ವನ, ಉಪವನ, ಪರ್ವತ, ಜಿನಮಂದಿರ, ಶೂನ್ಯಗ್ರಹ, ನದೀತಟ ಮೊದಲಾದವುಗಳನ್ನೇ ಯೋಗ್ಯವೆಂದು ತಿಳಿದು, ಧ್ಯಾನಸಿದ್ಧಿಯ ಸಮಯ ಗಳಾದ ಸೂರ್ಯೋದಯಕ್ಕಿಂತ ಮೊದಲೇ ಅಂದರೆ ಪ್ರಾತಃಕಾಲವು, ಮಧ್ಯಾಹ್ನ ಕಾಲವು ಮತ್ತು ರಾತ್ರಿಕಾಲವು ಯೋಗ್ಯವೆಂದು ನಿಶ್ಚಯಿಸಿಕೊಂಡು, ನಗ್ನ ನಾಗಿಯೋ ಅಥವಾ ಆದಷ್ಟು ವಸ್ತ್ರಗಳನ್ನು ಕಡಿಮೆಯಾಗಿಯೋ ಇಟ್ಟು ಕೊಂಡು ನಿಶ್ಚಿಂತನಾಗಿ ಕುಳಿತು ಧ್ಯಾನಮಾಡಬೇಕು.

ಶರೀರದಲ್ಲಿ ರೋಗಾದಿಪೀಡೆಯು ಆಗದಂತೆಯೂ, ಹೆಚ್ಚು ಹೊಟ್ಟೆಹಸಿವೆ ಯಾಗದಂತೆಯೂ, ಹಸಿವೆಗಿಂತ ಅಧಿಕ ಭೋಜನಮಾಡದೆಯೂ, ಶರೀರವನ್ನು ಚಾಪೆಯಲ್ಲಿಯೋ, ಶಿಲೆಯಲ್ಲಿಯೋ ಅಥವಾ ಭೂಮಿಯಲ್ಲಿಯೋ ಪದ್ಮಾಸನ, ಅರ್ಧಪದ್ಮಾಸನ ಅಥವಾ ಕಾಯೋತ್ಸರ್ಗಾದಿ ಆಸನಗಳಲ್ಲಿರಿಸಿ. ನಾಸಿಕಾಗ್ರ ದೃಷ್ಟಿಯಿಂದ ಸ್ಥಿರನಾಗಿ, ಬಾಹ್ಯಚಿಂತಾರಹಿತನಾಗಿ,ಇಂದ್ರಿಯಕಾರ್ಯಗಳನ್ನು ನಿರೋಧಿಸಿ, ಅಂತರಂಗದಲ್ಲಿ ವಿರಾಜಮಾನನಾದ ನಿರಂಜನನಾದ ಆತ್ಮರೂಪ ಪರಮಾತ್ಮನ ದರ್ಶನಮಾಡಬೇಕು.

ಪ್ರಪಂಚದ ಪ್ರಾಣಿಗಳೊಡನೆ ಮಾತನಾಡುವುದನ್ನು ಬಿಟ್ಟು, ಮನಸ್ಸನ್ನು ಆತ್ಮಚಿಂತನೆಯಲ್ಲಿರಿಸಬೇಕು. ಮೊದಲು ವ್ಯವಹಾರನಯದಿಂದ ಅನಿತ್ಯ, ಅಶರಣ, ಸಂಸಾರ, ಏಕತ್ವ, ಅನ್ಯತ್ವ, ಅಶುಚಿತ್ವ, ಆಸ್ರವ, ಸಂವರ, ನಿರ್ಜರಾ,

ಲೋಕ, ಬೋಧಿದುರ್ಲಭ ಮತ್ತು ಧರ್ಮಗಳೆಂಬ ಹನ್ನೆರಡು ಭಾವನೆಗಳನ್ನು ಶ್ರದ್ಧಾಭಾವಪೂರ್ವಕ ವಿಚಾರಿಸುತ್ತಾ, ಸಪ್ತತತ್ವಗಳನ್ನೂ ಕೂಡ ಚಿಂತಿಸ ಬೇಕು. ವ್ಯವಹಾರನಯವನ್ನು ಬಿಟ್ಟು ನಿಶ್ಚಯನಯದಿಂದ ನೋಡಬೇಕು. "ನಾನು ಸ್ವಾಭಾವಿಕವಾಗಿಯೇ ಶುದ್ಧನಾಗಿರುತ್ತೇನೆ. ಕರ್ಮಾದಿ ಸರ್ವವೂ ಪರ ಇದೆ. ಆದರೆ ಅನಾದಿಕಾಲದಿಂದ ಕರ್ಮಬಂಧನದಲ್ಲಿ ಸಿಲುಕಿದ್ದ ಕಾರಣ ಅಶುದ್ಧನಾಗಿದ್ದೇನೆ. ಈ ಕರ್ಮವು ಜಡಪುದ್ಗಲಗಳ ಸೂಕ್ಷ್ಮಸ್ಕಂಧಗಳಿಂದಲೇ ರಚಿತವಾಗಿರುತ್ತದೆ. ಆ ಕಾರ್ಮಣ ವರ್ಗಣೆಗಳನ್ನು ನಾನೇ ನನ್ನ ಮನ, ವಚನ, ಕಾಯಗಳ ಕ್ರಿಯೆಗಳಿಂದ ಮರ್ದಿಸುತ್ತಾ, ರಾಗದ್ವೇಷಮೋಹಗಳ ವಶನಾಗಿರುತ್ತೇನೆ. ಒಂದುವೇಳೆ ವೀತರಾಗಿಯಾಗಿ ಆತ್ಮತತ್ವಭಾವನೆಯನ್ನು ಭಾವಿಸಬೇಕೆಂದಿದ್ದರೆ ನವೀನ ಕರ್ಮಗಳ ಬರುವಿಕೆಯನ್ನು ತಡೆದು ಪ್ರಾಚೀನ ಕರ್ಮಗಳನ್ನು ಸಮಯಕ್ಕಿಂತ ಮೊದಲೇ ತಪಸ್ಸು ಮೊದಲಾದವುಗಳಿಂದ ದೂರೀ ಕರಿಸುವೆನು. ಹೀಗೆ ಸಕಲ ಕರ್ಮಗಳಿಂದ ರಹಿತನಾದೊಡನೆ ಮೋಕ್ಷ ಲಕ್ಷ್ಮಿಯನ್ನು ಪಡೆಯುವೆನು" ಹೀಗೆ ಜ್ಞಾನಿಯು ತಿಳಿಯುತ್ತಾನೆ.

ನಿಶ್ಚಯನಯದಿಂದ ಪದಾರ್ಥಗಳನ್ನು ನೋಡಿದರೆ, ಲೋಕವು ಆರು ದ್ರವ್ಯಗಳಿಂದ ಭರಿತವಾಗಿದೆ. ಅವೆಲ್ಲವೂ ಭಿನ್ನಭಿನ್ನಗಳಾಗಿದ್ದು ತಮ್ಮತಮ್ಮ ಸತ್ತೆಯಲ್ಲಿಯೇ ಇರುವುವು. ಸರ್ವಪರಮಾಣುಗಳು ಬೇರೆಬೇರೆಯೇ, ಕಾಲಾ ಣುಗಳು ಬೇರೆಬೇರೆಯೇ, ಧರ್ಮ, ಅಧರ್ಮ ಮತ್ತು ಆಕಾಶ ದ್ರವ್ಯಗಳು ಬೇರೆಬೇರೆಯೇ ಅಗಿರುವಂತೆ, ಎಲ್ಲಾ ಆತ್ಮರುಗಳೂ ಬೇರೆಬೇರೆಯೇ ಪರಿ ಶುದ್ಧಗಳಾಗಿವೆ. ವ್ಯವಹಾರ ದೃಷ್ಟಿಯಾದ ನರ, ನಾರಕ, ದೇವ, ತಿರ್ಯಂಚ ಅಥವಾ ಏಕೇಂದ್ರಿಯಾದಿ ಭೇದಗಳನ್ನೂ ಮತ್ತು ಮನ, ವಚನ, ಕಾಯಗಳಿಂ ದುಂಟಾಗುವ ಅನೇಕ ಕ್ರಿಯೆಗಳನ್ನೂ ನೋಡದೆ, ಇವೆಲ್ಲವನ್ನೂ ಕ್ರಿಯಾರಹಿತ ನಿಶ್ಚಲ ಸ್ವಭಾವದಲ್ಲಿಯೇ ಚಿಂತಿಸಬೇಕು. ಇದರಿಂದ ಪ್ರೀತಿ ಮತ್ತು ಅಪ್ರೀತಿ ಗಳ ಕಾರಣಗಳು ದೂರವಾಗಿ, ಸಮಭಾವನೆಯ ಜಲಪ್ರವಾಹವು ಹರಿ ಯುತ್ತದೆ.

ವೀತರಾಗಭಾವರೂಪ ಶಾಂತರಸದಿಂದ ಭರಿತವಾದ ಗಂಗಾನದಿಯನ್ನು ಹರಿಸಿ, ಸೂಕ್ಷ್ಮಭೇದವಿಜ್ಞಾನದ ದೃಷ್ಟಿಯಿಂದ, ಕೇವಲ ತನ್ನ ಶರೀರ ಪ್ರಮಾ

ಣದಲ್ಲಿ ವಿರಾಜಿಸಿದ ಶುದ್ಧ ಅಶರೀರಿ ಆತ್ಮನನ್ನು ನೋಡಲು ಪ್ರಯತ್ನಿಸಬೇಕು. ಆತ್ಮಚಿಂತನೆ ಗೈಯ್ಯುವುದಕ್ಕೇನೇ ಆತ್ಮಭಾವನೆಯೆಂದು ಹೇಳುತ್ತಾರೆ. ಹೀಗೆ ಭಾವಿಸುತ್ತಾ ಭಾವಿಸುತ್ತಾ ಇರಲು ಮನಸ್ಸು ಸ್ಥಿರಗೊಂಡು ಆತ್ಮಾನುಭವವೂ, ಅದರಿಂದ ಆತ್ಮದರ್ಶನವೂ ಆಗುವುದು. ಈ ಆತ್ಮಾನುಭೂತಿಯಾದ ಅಗ್ನಿಯು ಕರ್ಮರೂಪ ಸೌದೆಯ ರಾಶಿಯನ್ನು ಸುಟ್ಟು, ಆತ್ಮನನ್ನು ಪರಿಶುದ್ಧ ಸುವರ್ಣದಂತೆ ಶುದ್ಧವನ್ನಾಗಿಮಾಡುವುದು. ಯದಿ ಮೋಕ್ಷಪ್ರಾಪ್ತಿಗೆ ಅನುಕೂಲ ಶರೀರಾದಿ ಸಾಮಗ್ರಿಗಳು ಇದ್ದರೇನೇ, ಈ ಸಾಧಕನು ಅದೇ ಭವದಿಂದಾಗಲೀ ಅಥವಾ ಕೆಲವು ಭವಗಳಿಂದಾಗಲಿ ಮುಕ್ತಿಯನ್ನು ಪಡೆದು ಸಿದ್ಧನಾಗುವನು. ಮತ್ತೆ ಆವನು ಎಂದೆಂದಿಗೂ ಜನ್ಮವನ್ನು ತಾಳಲಾರನು. ತಾಯಿಯ ಹಾಲನ್ನೂ ಕುಡಿಯಲಾರನು.

ಸಮಾಧಿಶತಕದಲ್ಲಿ ಹೇಳಿರುತ್ತಾರೆ :

**ಜನೇಭ್ಯೋ ವಾಕ್ ತತಃ ಸ್ಪಂದೋ ಮನಸನಿಶ್ಚಿತ್ತವಿಭ್ರಮಾಃ ।**
**ಭವಂತಿ ತಸ್ಮಾತ್ಸಂಸರ್ಗಂ ಜನ್ಯೈರ್ಯೋಗೀ ತತಸ್ತ್ಯಜೇತ್ ॥ ೭೨ ॥**
**ಯಸ್ಯ ಸಸ್ಪಂದಮಾಭಾತಿ ನಿಃಸ್ಪಂದೇನ ಸಮಂ ಜಗತ್ ।**
**ಅಪ್ರಜ್ಞಮಕ್ರಿಯಾಭೋಗಂ ಸ ಶಮಂ ಯಾತಿ ನೇತರಃ ॥೬೭ ॥**

ಭಾವಾರ್ಥ : ಜನರೊಡನೆ ಮಾತನಾಡುವುದರಿಂದ ಮನಸ್ಸಿನ ಚಂಚಲತೆಯು ಹೆಚ್ಚಾಗಿ. ಮನಸ್ಸಿನಲ್ಲಿ ಅಧಿಕ ಭ್ರಮೆಯುಂಟಾಗುತ್ತದೆ. ಅದರಿಂದಲೇ ಯೋಗಿಗಳು ಮಾನವರ ಸಂಗವನ್ನು ತ್ಯಜಿಸಿ, ಏಕಾಂತವಾಸಿಯಾಗಬೇಕು. ಆಗ ಯೋಗಿಯ ದೃಷ್ಟಿಯಲ್ಲಿ ಲೋಕವು ಕ್ರಿಯಾರಹಿತವೂ, ವಿಕಲ್ಪರಹಿತವೂ. ಕಾರ್ಯರಹಿತವೂ ಆಗಿ ತನ್ನಾತ್ಮಸ್ವಭಾವದಂತೆ ಸ್ಥಿರವೆಂದು ಭಾಸವಾಗುವುದು. ಅವನೇ ಸಮಭಾವನೆಯನ್ನು ಪಡೆಯಲು ಅರ್ಹನು.

## ನಿರ್ಮೋಹಿಯಾಗಿ ಅಮೂರ್ತಿಯಾದ ಆತ್ಮನನ್ನು ನೋಡಬೇಕು

**ಅಸರೀರು ವಿ ಸುಸರೀರು ಮುಣಿ ಇಹು ಸರೀರು ಜಡು ಜಾಣಿ ।**
**ಮಿಚ್ಛಾ-ಮೋಹು ಪರಿಚ್ಚಯಹಿ ಮುತ್ತಿ ಣಿಯಂ ವಿ ಣ ಮಾಣಿ॥೬೧॥**

**ಅನ್ವಯಾರ್ಥ :** ಅಸರೀರು ವಿ ಸುಸರೀರು ಮುಣಿ–ಶರೀರರಹಿತನಾದ ಆತ್ಮನನ್ನೇ ಶ್ರೇಷ್ಠಜ್ಞಾನ ಶರೀರಿಯೆಂದೂ, ಇಹು ಸರೀರು ಜಡು ಜಾಣಿ–ಈ ಪುದ್ಗಲರಚಿತವಾದ ಶರೀರವನ್ನು ಜಡವೆಂದೂ, ಜ್ಞಾನರಹಿತವೆಂದೂ ತಿಳಿದು, ಮಿಚ್ಛಾ-ಮೋಹು ಪರಿಚ್ಚಯಹಿ–ಮಿಥ್ಯಾಮೋಹವನ್ನು ತ್ಯಜಿಸಬೇಕು. ಮುತ್ತಿಣಿಯಂ ವಿ ಣ ಮಾಣಿ–ಮೂರ್ತಿಮತ್ತಾದ ಶರೀರವನ್ನೂ ಕೂಡ ತನ್ನದಲ್ಲವೆಂದು ತೀರ್ಮಾನಿಸಿಕೊಳ್ಳಬೇಕು.

**ಭಾವಾರ್ಥ :** ಸಾಧಕನು ತನ್ನನ್ನು ಜಡಶರೀರರಹಿತಜ್ಞಾನಶರೀರಿಯಾದ ಶುದ್ಧಆತ್ಮನೆಂದೂ, ಪುದ್ಗಲಪರಮಾಣುಗಳಿಂದರಚಿತನಾದ ಶರೀರವನ್ನು ಕಾರಾಗೃಹವೆಂದೂ, ತೈಜಸ, ಕಾರ್ಮಣ ಮತ್ತು ಔದಾರಿಕ ಈ ಮೂರು ಶರೀರಗಳಿಂದ ರಹಿತನಾದವನೆಂದೂ, ಸಿದ್ಧಪರಮಾತ್ಮನಂತೆ ಪುರುಷಾಕಾರನೆಂದೂ ಮತ್ತು ಅಮೂರ್ತಿಯೆಂದೂ ತಿಳಿದು ತನ್ನ ಸರ್ವಸ್ವ ಶ್ರೇಯವನ್ನು ತನ್ನ ಆತ್ಮನಲ್ಲಿಯೇ ಜೋಡಿಸಬೇಕು. ಸರ್ವಪರವಸ್ತುವಿನಲ್ಲಿ ಪ್ರೇಮವನ್ನು ದೂರಮಾಡಬೇಕು.

ಈ ಜೀವನು ಲೋಕದ ಸಕಲ ಪದಾರ್ಥಗಳ ಮಿಥ್ಯಾಮೋಹವನ್ನು ತ್ಯಜಿಸುವುದು ಯೋಗ್ಯವಾಗಿದೆಯೆಂದೂ, ನಾಶಶೀಲಗಳಾದ ಪರ್ಯಾಯಗಳಲ್ಲಿ ಮೋಹವನ್ನಿಡುವುದು ಸಂತಾಪಕರವೆಂದೂ, ಅನಾದಿ ಸಂಸಾರಭ್ರಮಣೆಯಲ್ಲಿ ಅನಂತ ಪರ್ಯಾಯಗಳನ್ನು ಧರಿಸಿರುವನೆಂದೂ, ಆ ಪರ್ಯಾಯಗಳನ್ನು ಹೊಂದಿದಾಗ ಅಲ್ಲಿಯೂ ಶರೀರ ಮತ್ತು ಇಂದ್ರಿಯಗಳ ಮೂಲಕ ತಿಳಿಯುವುದಕ್ಕೂ, ಭೋಗಿಸುವುದಕ್ಕೂ ಯೋಗ್ಯವಾದ ಪದಾರ್ಥಗಳನ್ನು ಮೋಹಿಸಿರುವನೆಂದೂ, ಮರಣವಾದೊಡನೆ ಅವೆಲ್ಲವುಗಳ ವಿಯೋಗವಾದಾಗ ಎಲ್ಲಾ ಸಂಯೋಗ ಪದಾರ್ಥಗಳನ್ನೂ ಸ್ವಪ್ನವೆಂದು ತಿಳಿಯಬೇಕಾಗಿತ್ತು. ಆದರೆ ಹಾಗೆ ತಿಳಿಯದೆ, ಅವುಗಳಲ್ಲಿ ಪುನಃ ಮೋಹವನ್ನಿಡುವುದು ವ್ಯರ್ಥವೂ, ಮಿಥ್ಯಾರೂಪವೂ ಆಗುತ್ತದೆ.

ಸಮ್ಯಗ್ದರ್ಶನಗುಣವು ಪ್ರಕಟವಾದೊಡನೆ, ಸಕಲ ಮಿಥ್ಯಾವಿಕಾರಗಳು ದೂರವಾಗುತ್ತವೆ. ಸಮ್ಯಕ್ತ್ವವುದ್ಭವಿಸದಿರುವವರೆಗೆ, ಶರೀರಸಂಬಂಧವಾದ ಸುಖಗಳನ್ನು ಪ್ರಶಂಸಿಸುತ್ತಲೂ, ಇಂದ್ರಿಯವಿಷಯಭೋಗಗಳಲ್ಲಿ ಲೋಲುಪಿ

ಯಾಗಿಯೂ ಇರುತ್ತಾ, ತೀವ್ರ ಆಶಾಯುಕ್ತನಾಗುತ್ತಾನೆ. ಸುಖದ ಸಾಮಗ್ರಿಗಳ ಪ್ರಾಪ್ತವಾದೊಡನೆ ಹರ್ಷವನ್ನೂ, ಪ್ರಾಪ್ತಿಯಾಗದಿದ್ದರೆ ಖೇದವನ್ನೂ ಪಡೆಯುತ್ತಾನೆ. ಇಷ್ಟವಸ್ತುಗಳ ವಿಯೋಗವಾದೊಡನೆ ದುಃಖವನ್ನೂ, ಸಂಯೋಗವಾಗುತ್ತಿರಲು, ತೃಷೆ, ದಾಹವನ್ನೂ ಬೆಳೆಸಿಕೊಳ್ಳುತ್ತಾನೆ. ಮಿಥ್ಯಾದೃಷ್ಟಿಯು ಮೋಹದಿಂದ ಸಂಸಾರಸುಖಗಳೇ ಮತ್ತು ಭೋಗವಿಲಾಸಗಳೇ ಜೀವನದ ಧ್ಯೇಯವೆಂದು ಪರಿಭಾವಿಸುತ್ತಾನೆ. ಮಾನವನಾಗಿ ಸ್ತ್ರೀ, ಪುತ್ರ, ಪುತ್ರಿ ಮೊದಲಾದ ಕುಟುಂಬದ ಮೋಹಜಾಲದಲ್ಲಿ ಬಂಧಿತನಾಗಿ, ರಾತ್ರಿ ಹಗಲು ಅವರೆಲ್ಲರನ್ನೂ ಸಂತೋಷಪಡಿಸುವುದರಲ್ಲಿಯೋ, ತನ್ನ ವಿಷಯ ಪೋಷಣೆಯಲ್ಲಿಯೋ ಉದ್ಯತನಾಗಿ, ಪರಲೋಕದ ಚಿಂತೆಯನ್ನೇ ತೊರೆದು ಬಿಡುತ್ತಾನೆ.

ಆತ್ಮನು ಶರೀರದಿಂದ ಭಿನ್ನನೆಂಬ ವಿಚಾರವನ್ನು ಶಾಂತಮನಸ್ಸಿನಿಂದ ವಿಚಾರಿಸದೆ, ವರ್ತಮಾನ ಜೀವನದ ಚಿಂತೆಯಲ್ಲಿಯೇ ತನ್ಮಯನಾಗುತ್ತಾನೆ. ಯದಿ ಒಂದೊಂದು ಸರ್ತಿ ದಾನ, ಧರ್ಮ, ತಪ, ಜಪ ಮೊದಲಾದವುಗಳನು ಮಾಡುತ್ತಾ, ಅವುಗಳ ಫಲವಾಗಿ ವರ್ತಮಾನದಲ್ಲಿ ಕೀರ್ತಿ, ಧನ, ಸಂತಾನ ಮೊದಲಾದ ಇಚ್ಛಿತ ವಿಷಯಗಳ ಪ್ರಾಪ್ತಿಯಾಗಲೆಂದು ಇಚ್ಛಿಸುತ್ತಾನೆ. ಒಂದೊಂದು ಸರ್ತಿ ಪರಲೋಕದ ವಿಶ್ವಾಸವಾದರೂ, ದೇವಗತಿ ಸಂಬಂಧವಾದ ಸುಂದರ ಭೋಗಗಳ ಆಶೆಯನ್ನಿಟ್ಟುಕೊಳ್ಳುತ್ತಾನೆ. ಆತನ ಸರ್ವ ಮನ, ವಚನ, ಕಾಯಗಳ ಕ್ರಿಯೆಯು ಸಾಂಸಾರಿಕ ಆತ್ಮ ಮೋಹದಲ್ಲಿಯೇ ತನ್ಮಯವಾಗಿರುತ್ತದೆ.

ಈ ಜೀವನಿಗೆ ಯೋಗ್ಯನಿಮಿತ್ತಗಳು ಪ್ರಾಪ್ತವಾದೊಡನೆ, ತತ್ವಜ್ಞಾನದ ಪ್ರಾಪ್ತಿಯಾಗಿ, ಮಿಥ್ಯಾತ್ವ ಗ್ರಂಥಿಯು (ಗಂಟು) ಶಿಥಿಲವಾಗುತ್ತದೆ. ಆಗ "ಸಂಸಾರ ಅವಸ್ಥೆಗಳು ಅಸಾರಗಳಾಗಿವೆ. ಸಂಸಾರ ಕಾರಾಗೃಹವಾಸವನ್ನು ತ್ಯಜಿಸಲು ಯೋಗ್ಯವಾಗಿದೆ. ಬಂಧನವನ್ನು ಕತ್ತರಿಸಲು ಸುಸಮಯವಾಗಿದೆ. ಸಚ್ಚಿದಾನಂದಮಯನಾದ ತನ್ನಾತ್ಮರೂಪ ಜಿನದೇವನೇ ಅನುಭವಯೋಗ್ಯನೂ ಧ್ಯಾನಯೋಗ್ಯನೂ ಆಗಿರುತ್ತಾನೆ" ಎಂಬ ತಿಳಿವಳಿಕೆಯುಂಟಾಗುತ್ತದೆ.

"ಅತೀಂದ್ರಿಯ ಸುಖವು ಉಪಾದೇಯವು, ಇಂದ್ರಿಯ ಸುಖವು ಹೇಯವಾದುದು" ಎಂಬ ಭೇದವಿಜ್ಞಾನವು ಪ್ರಕಟವಾದೊಡನೆ, ಅದನ್ನೇ ಪುನಃಪುನಃ

ಮನನ ಗೈಯ್ಯುವನು. ಆಗ ಸಮ್ಯಗ್ದರ್ಶನದ ಪ್ರತಿಬಂಧಕವಾದ ಮಿಥ್ಯಾತ್ವ ಕರ್ಮವೂ, ಅನಂತಾನುಬಂಧೀಕಷಾಯಚತುಷ್ಟಯಗಳ ಉದಯವೂ ನಿಂತೊಡನೆ, ಇವನು ಉಪಶಮ ಸಮ್ಯಕ್ತ್ವಿಯೋ ಅಥವಾ ಉಪಶಮ ಸಂವೇದಕಸಮ್ಯಕ್ತ್ವಿಯೋ ಆಗುತ್ತಾನೆ. ಸಂಸಾರವು ಅತಿ ಸಮೀಪಿಸಿದೊಡನೆ ವೇದಕಸಮ್ಯಕ್ತ್ವಿಯಿಂದ ಕ್ಷಾಯಿಕಸಮ್ಯಕ್ತ್ವಿಯಾಗುತ್ತಾನೆ. ಆ ಕ್ಷಾಯಿಕಸಮ್ಯಕ್ತ್ವವು ಉದಯಿಸಿದೊಡನೆ ಇವನ ಮೋಹವು ಕರಗಿಹೋಗುವುದು.

ಈ ಆತ್ಮಾನಂದ ಪ್ರೇಮದಿಂದುಕ್ತನಾದ ಸಮ್ಯಕ್ತ್ವೀಜೀವನು ನಿಶ್ಚಿಂತನಾಗಿ ಇಷ್ಟಪ್ರಕಾರ ಬಹುಸುಲಭವಾಗಿ ಎಲ್ಲಾ ಶರೀರಗಳಿಂದ ಭಿನ್ನನಾದ ಜ್ಞಾನಾಕಾರನನ್ನು ನೋಡುತ್ತಾನೆ. ಸಕಲ ಪರದ್ರವ್ಯಗಳಿಂದ ಪರಿಪೂರ್ಣ ವಿರಾಗಿಯಾಗಿ ಆತ್ಮನಲ್ಲಿಯೇ ತನ್ಮಯನಾಗುತ್ತಾನೆ. ರೋಗಿಯು ಕಹಿ ಔಷಧಿಯನ್ನು ಕುಡಿಯಲು ಹಿಂಜರಿಯುವಂತೆ, ಚಾರಿತ್ರ ಮೋಹನೀಯ ಕರ್ಮದ ಉದಯದಿಂದ ವಿಷಯಭೋಗಗಳನ್ನು ಭೋಗಿಸಿದರೂ, ಅವನ ದೃಷ್ಟಿಯು ಅವುಗಳ ತ್ಯಾಗರೂಪವಾಗಿದ್ದು ನಿಜಸ್ವರೂಪದ ಗ್ರಹಣವಾಗುತ್ತಿರುತ್ತದೆ. ಸಮ್ಯಗ್ದರ್ಶನಧಾರಿ ತನ್ನ ಅಂತರಂಗದಲ್ಲಿ ಆತ್ಮದರ್ಶನಗೈಯುವನು.

ಸಮಯಸಾರಕಲಶದಲ್ಲಿ ಹೇಳಿರುತ್ತಾರೆ :

**ಇಂದ್ರಜಾಲಮಿದಮೇವಮುಚ್ಛಲತ್ಪುಷ್ಕಲೋಚ್ಚಲವಿಕಲ್ಪವೀಚಿಭಿಃ ।**
**ಯಸ್ಯ ವಿಸ್ಫುರಣಮೇವ ತತ್ಕ್ಷಣಂ ಕೃತ್ಸ್ನಮಸ್ಯತಿ ತದಸ್ಮಿ ಚಿನ್ಮಹಃ**
**॥ ೪೬-೩ ॥**

ಭಾವಾರ್ಥ : " ನಾನೊಬ್ಬ ಚೈತನ್ಯ ಜ್ಯೋತಿಸ್ವರೂಪನಾದ ವಸ್ತುವಾಗಿರುತ್ತೇನೆ. ನನ್ನ ಅಂತರಂಗದಲ್ಲಿ ಈ ಜ್ಯೋತಿಯು ಸದಾ ಪ್ರಜ್ವಲಿಸುತ್ತಿರುವುದು. ಹಾಗೆ ವಿಚಾರಿಸಿದಾಗ ಇಂದ್ರಜಾಲದಂತಿರುವ ನನ್ನ ಮಾನಸಿಕ ವಿಕಲ್ಪ ಜಾಲಗಳು ದೂರವಾಗಿ, ನಾನು ನಿರ್ವಿಕಲ್ಪ ಸ್ಥಿರಸ್ವರೂಪದಲ್ಲಿ ರಮಿಸುವವನಾಗುತ್ತೇನೆ " ಎಂದು ಜ್ಞಾನಿಯು ತಿಳಿಯುತ್ತಾನೆ.



## ಆತ್ಮಾನುಭವದ ಫಲವು ಶಾಶ್ವತ ಮೋಕ್ಷ ಸುಖವಾಗಿರುತ್ತದೆ

**ಅಪ್ಪಇಂ ಅಪ್ಪು ಮುಣಂತೆಯಹಂ ಕಿಂ ಣೇಹಾ ಫಲು ಹೋಇ।**
**ಕೇವಲ-ಣಾಣು ವಿ ಪರಿಣವಇ ಸಾಸಯೆಸುಕ್ಖು ಲಹೇಇ ॥೬೨॥**

**ಅನ್ವಯಾರ್ಥ :** ಅಪ್ಪಇಂ ಅಪ್ಪು ಮುಣಂತಯಹಂ–ಆತ್ಮನಿಂದಲೇ ಆತ್ಮನನ್ನು ಅನುಭವ ಪಡೆಯುತ್ತಾ, ಕಿಂ ಣೇಹಾ ಫಲು ಹೋಇ–ಯಾವ ಪಡೆಯಲಾಗದ ಫಲವಾದ, ಕೇವಲ-ಣಾಣು ವಿ ಪರಿಣವಇ–ಕೇವಲಜ್ಞಾನವು ಪ್ರಕಾಶಿಸುವುದೋ, ಸಾಸಯು-ಸುಕ್ಖು ಲಹೇಈ– ಆಗ ಅವಿನಶ್ವರವಾದ ಸುಖವನ್ನು ಪಡೆಯುವನು.

**ಭಾವಾರ್ಥ :** ಆತ್ಮನ ಮೂಲಕವೇ ಆತ್ಮಾನುಭವವನ್ನು ಮಾಡಿಕೊಳ್ಳುವುದು ಮೋಕ್ಷಮಾರ್ಗವಾಗಿದೆ. ಯಾವನು ಆತ್ಮಾನುಭವದ ಅಭ್ಯಾಸವನ್ನು ಮಾಡಲು ಪ್ರಾರಂಭಿಸುವನೋ, ಅವನಿಗೆ ಅತಿಶ್ರೇಷ್ಠವಾದ ಫಲದ ಪ್ರಾಪ್ತಿಯಾಗುವುದು. ಎಷ್ಟರವರೆಗೆ ಕೇವಲಜ್ಞಾನ ಪ್ರಾಪ್ತಿಯಾಗಲಾರದೋ, ಅಷ್ಟರವರೆಗೆ ಆತ್ಮಧ್ಯಾನಿಗೆ ಧ್ಯಾನಾವಸ್ಥೆಯಲ್ಲಿ ( ಸಮಯದಲ್ಲಿ ) ನಾಲ್ಕು ಫಲಪ್ರಾಪ್ತವಾಗುತ್ತವೆ. ೧) ಅರಹಂತ ಸಿದ್ಧರ ಸುಖರೂಪವಾದ ಅತೀಂದ್ರಿಯ ಸುಖದ ಪ್ರಾಪ್ತಿಯಾಗುತ್ತದೆ. ೨) ಅಂತರಾಯ ಕರ್ಮದ ಕ್ಷಯೋಪಶಮವು ಹೆಚ್ಚಾಗುವುದರಿಂದ, ಆತ್ಮವೀರ್ಯದಧಿಕತೆಯು ಉಂಟಾಗುತ್ತದೆ. ಅಗ ಪ್ರತಿಯೊಂದು ಕರ್ಮಗೈಯ್ಯಲು ಅಂತರಂಗದಲ್ಲಿ ಉತ್ಸಾಹ ಮತ್ತು ಪುರುಷಾರ್ಥವು ಹೆಚ್ಚುವುದು. ೩) ಪಾಪಕರ್ಮಗಳ ಅನುಭಾಗವನ್ನು ಕಡಿಮೆಮಾಡಿಕೊಳ್ಳುತ್ತಾ, ಪುಣ್ಯ ಕರ್ಮಗಳ ಅನುಭಾಗವನ್ನು ಹೆಚ್ಚಿಸಿಕೊಳ್ಳುತ್ತಾನೆ. ೪) ಆಯುಷ್ಯಕರ್ಮದ ಹೊರತು ಉಳಿದ ಎಲ್ಲಾ ಕರ್ಮಗಳ ಸ್ಥಿತಿಯನ್ನು ಕಡಿಮೆಮಾಡಿಕೊಳ್ಳುತ್ತಾನೆ.

ಯದಿ ಕೇವಲಜ್ಞಾನವುಂಟಾಗಲು ಯೋಗ್ಯವಾದ ಧ್ಯಾನವುಂಟಾಗದಿದ್ದರೆ, ಮರಣಾನಂತರ ದೇವಗತಿಯಲ್ಲಿ ಶ್ರೇಷ್ಠ ದೇವನಾಗುವನು. ಒಂದು ವೇಳೆ ದೇವನಾದರೂ, ಅವನು ಪುನಃ ಅಲ್ಲಿಂದ ಚ್ಯುತನಾಗಿ ಉತ್ತಮ ಮಾನವ

ನಾಗಿ ಜನಿಸುತ್ತಾನೆ. ಅಲ್ಲಿ ಸಮ್ಯಗ್ದರ್ಶನದ ಮಹಾಪ್ರಕಾಶವು ಪ್ರಜ್ವಲಿಸು ತ್ತಿದ್ದರೆ, ಮತ್ತೆ ಅವನು ಪ್ರತಿಯೊಂದು ಜನ್ಮದಲ್ಲಿಯೂ ಆತ್ಮಾನುಭವವನ್ನು ಮಾಡಿಕೊಳ್ಳುತ್ತಾ, ತನ್ನ ಯೋಗ್ಯತೆಯನ್ನು ಹೆಚ್ಚಿಸಿಕೊಂಡು, ಅತಿಶೀಘ್ರವೇ ಮಾನವಜನ್ಮದಲ್ಲಿ ವಿರಾಗಿಯಾಗಿ, ಪರಿಗ್ರಹಗಳನ್ನು ತ್ಯಜಿಸುವವನಾಗುವನು. ಆ ಮುನಿ ಅವಸ್ಥೆಯಲ್ಲಿ ಧರ್ಮಧ್ಯಾನದ ಆರಾಧನೆಮಾಡುತ್ತಾ, ಕ್ಷಪಕ ಶ್ರೇಣಿ ಯನ್ನು ಆರೋಹಣೆಮಾಡಿ, ಮೋಹನೀಯ ಕರ್ಮವನ್ನು ನಾಶಮಾಡಿ, ಮತ್ತೆ ಅಂತರ್ಮುಹೂರ್ತ ಕಾಲದಲ್ಲಿ ಎರಡನೆಯ ಶುಕ್ಲಧ್ಯಾನದ ಬಲದಿಂದ ಉಳಿದ ಮೂರು ಘಾತಿಕರ್ಮಗಳನ್ನು ನಷ್ಟಗೊಳಿಸಿ ಅರಹಂತ ಪರಮಾತ್ಮನಾಗುತ್ತಾನೆ. ಆಗ ಅವನು ಅನಂತಜ್ಞಾನ, ಅನಂತದರ್ಶನ, ಅನಂತಸುಖ ಮತ್ತು ಅನಂತ ವೀರ್ಯಗಳಿಂದಲಂಕೃತನಾಗಿ, ಅವಿನಾಶೀಜ್ಞಾನ ಮತ್ತು ಸುಖಗಳನ್ನು ಪ್ರಕಾಶ ಪಡಿಸಿಕೊಳ್ಳುತ್ತಾನೆ.

ಆಯುಷ್ಯಕರ್ಮದ ಅಂತ್ಯದಲ್ಲಿ ಉಳಿದ ನಾಲ್ಕು ಕರ್ಮಗಳನ್ನು ನಾಶ ಮಾಡಿ ಸಿದ್ಧಾತ್ಮನಾಗುವನು. ಆತ್ಮಾನುಭವದ ಅಂತಿಮ ಫಲವು ನಿರ್ವಾಣ ವಾಗಿರುತ್ತದೆ. ನಿರ್ವಾಣಪ್ರಾಪ್ತಿಯವರೆಗೆ ಸಾತಾ (ವೇದನೀಯ) ಕಾರಕ ಗಳಾದ ಪದಾರ್ಥಗಳ ಸಂಯೋಗವಾಗುತ್ತಿರುತ್ತದೆ. ಆತ್ಮಾನುಭವದ ಸ್ನೇಹವು ಎಂದೆಂದಿಗೂ ನರಕ, ತಿರ್ಯಂಚಗತಿಗಳನ್ನುಂಟುಮಾಡಲಾರದು. ಯದಿ ಸಮ್ಯಗ್ದರ್ಶನದ ಪ್ರಾಪ್ತಿಗಿಂತ ಮೊದಲು ನರಕಾಯುಬಂಧವಾಗಿದ್ದರೆ, ಸಮ್ಯಕ್ತ್ವ ಸಹಿತನಾಗಿ ನರಕದಲ್ಲಿ ಜನಿಸುವನು ಮತ್ತು ತಿರ್ಯಂಚಗತಿಯು ಬಂಧವಾಗಿದ್ದರೆ ಭೋಗಭೂಮಿಯಲ್ಲಿಯೇ ಪಶುವಾಗಿ ಜನಿಸುವನು. ಆತ್ಮ ಧ್ಯಾನಿಗೆ ಅನೇಕ ಋದ್ಧಿಗಳು ಮತ್ತು ಚಮತ್ಕಾರಗಳುಂಟಾಗುವುವು.

ಈ ಆತ್ಮಧ್ಯಾನದ ಪ್ರಭಾವದಿಂದಲೇ ಅವನು ಅವಧಿಜ್ಞಾನವನ್ನೋ, ಮನಪರ್ಯಾಯ ಜ್ಞಾನವನ್ನೋ ಪಡೆಯುವನು. ಅಷ್ಟೇ ಅಲ್ಲ, ಶ್ರುತ ಕೇವಲಿಯಾಗುವನು. ಆತ್ಮಾನುಭವವು ಉತ್ತಮ ಸಂಯೋಗದ ಫಲವನ್ನುಂ ಟುಮಾಡುವಂಥದ್ದಾಗಿದೆ. ಅವನ ಉದ್ದೇಶವು ಕೇವಲ ಶುದ್ಧಾತ್ಮಲಾಭವಾ ಗಿರುತ್ತದೆ. ಪರಮ ಪುಣ್ಯಕರ್ಮಗಳ ಅಧಿಕ್ಯತೆಯಿಂದ ಅಣಿಮಾದಿ ಋದ್ಧಿ ಗಳು ಸ್ವಯಂ ಪ್ರಾಪ್ತವಾಗುತ್ತವೆ ಕೃಷಿಕಾರನು ಮಾವಿನಹಣ್ಣಿನ ಪ್ರಾಪ್ತಿ

ಯನಿಮಿತ್ತವಾಗಿ ಮಾವಿನಮರವನ್ನು ಬೆಳೆಸಿದಾಗ, ಫಲವನ್ನು ಪಡೆಯುವುದ ಕ್ಕಿಂತ ಮೊದಲು ಆತನು ವೃಕ್ಷದ ಎಲೆ (ಪತ್ರ) ಗಳನ್ನೂ, ರೆಂಬೆಗಳನ್ನೂ ಮತ್ತು ಪುಷ್ಪಗಳನ್ನೂ ಪಡೆಯುವಂತೆಯೂ, ರಾಜಪ್ರಾಸಾದಕ್ಕೆ ಹೋಗುತ್ತಿರು ವವನು ಮಾರ್ಗದಲ್ಲಿ ವಿಶ್ರಮಿಸಬೇಕಾಗಿ ಬಂದರೆ, ಶೀತಲ ಪಾನೀಯವನ್ನು, ಸ್ವಾದಿಷ್ಟವಾದ ಫಲಗಳನ್ನು ಭಕ್ಷಿಸಿ, ಸುಖ ಸಂತೋಷದಿಂದ ರಾಜಭವನವನ್ನು ಸೇರುವಂತೆಯೂ, ಮೋಕ್ಷಾರ್ಥಿಯು ನಿರ್ವಾಣ ಪದಕ್ಕೆ ತಲುಪುವವರೆಗೆ ಆತ್ಮಾನುಭವರೂಪದ ಪ್ರಾಪ್ತಿಗಾಗಿ ಸುಖದಾಯಕವಾದ ಮಾರ್ಗದಲ್ಲಿ ಸಂಚ ರಿಸುತ್ತಾ, ಮನುಷ್ಯ ಅಥವಾ ದೇವಗತಿ ಸಂಬಂಧವಾದ ಶರೀರದಲ್ಲಿ ಸುಖ ಪೂರ್ವಕ ವಿಶ್ರಾಂತಿಯನ್ನು ಪಡೆಯುತ್ತಾ, ಪುಣ್ಯಕರ್ಮದ ಆಧಿಕ್ಯತೆಯಿಂದ ಅಣಿಮಾದಿ ಋದ್ಧಿಗಳನ್ನು ಹೊಂದುತ್ತಾನೆ.

ತತ್ವಾನುಶಾಸನದಲ್ಲಿ ಹೇಳಿರುತ್ತಾರೆ:

**ಧ್ಯಾನಾಭ್ಯಾಸಪ್ರಕರ್ಷೇಣ ತುದ್ಯನ್ಮೋಹಸ್ಯ ಯೋಗಿನಃ।**
**ಚರಮಾಂಗಸ್ಯ ಮುಕ್ತಿಃ ಸ್ಯಾತ್ತದಾ ಅನ್ಯಸ್ಯ ಚ ಕ್ರಮಾತ್ ॥ ೨೨೪ ॥**

**ತಥಾ ಹ್ಯಚರಮಾಂಗಸ್ಯ ಧ್ಯಾನಮಭ್ಯಸ್ಯತಃ ಸದಾ।**
**ನಿರ್ಜರಾಸಂವರಶ್ಚ ಸ್ಯಾತ್ಸಕಲಾಶುಭಕರ್ಮಣಾಂ ॥ ೨೨೫ ॥**
**ಆಸ್ರವಂತಿ ಚ ಪುಣ್ಯಾನಿ ಪ್ರಚುರಾಣಿ ಪ್ರತಿಕ್ಷಣಂ।**
**ಯೈರ್ಮಹರ್ದ್ಧಿರ್ಭವತ್ಯೇಷ ತ್ರಿದಶಃ ಕಲ್ಪವಾಸಿಷು ॥ ೨೨೬ ॥**
**ತತೋಽವತೀರ್ಯ ಮರ್ತ್ಯೇಽಪಿ ಚಕ್ರವರ್ತ್ಯಾದಿಸಂಪದಃ।**
**ಚಿರಂ ಭುಕ್ತ್ವಾ ಸ್ವಯಂ ಮುಕ್ತ್ವಾ ದೀಕ್ಷಾಂ ದೈಗಂಬರೀಂ**
**ಶ್ರಿತಃ ॥ ೨೨೮ ॥**
**ವಜ್ರಕಾಯಃ ಸ ಹಿ ಧ್ಯಾತ್ವಾ ಶುಕ್ಲಧ್ಯಾನಂ ಚತುರ್ವಿಧಂ।**
**ವಿಧೂಯಾಷ್ಟಾಪಿ ಕರ್ಮಾಣಿ ಶ್ರಯತೇ ಮೋಕ್ಷಮಕ್ಷಯಂ ॥೨೨೯॥**

**ಭಾವಾರ್ಥ:** ಧ್ಯಾನದ ಅಭ್ಯಾಸದ ಶ್ರೇಷ್ಠತೆಯಿಂದ ಚರಮ ಶರೀರಿ ಗಳಾದ ಯೋಗಿಗಳ ಮೋಹವು ದೂರವಾಗಿ, ಅದೇ ಭವದಿಂದಲೇ ಮೋಕ್ಷ ವನ್ನು ಪಡೆಯುತ್ತಾರೆ. ಯಾರು ಚರಮ ಶರೀರಿಗಳಲ್ಲವೋ ಅವರು ಕ್ರಮ

ಕ್ರಮವಾಗಿಯೇ ಮೋಕ್ಷವನ್ನು (ಸಂಪತ್ತಿಯನ್ನು) ಪಡೆಯುತ್ತಾರೆ. ಚರಮ ಶರೀರಿಯಲ್ಲದ ಯೋಗಿಗೆ ಧ್ಯಾನಾಭ್ಯಾಸದಬಲದಿಂದ ಅಶುಭಕರ್ಮಪ್ರಕೃತಿಗಳ ಸಂವರೆ ಮತ್ತು ನಿರ್ಜರೆಯು ಆಗುತ್ತಿರುತ್ತದೆ. ಹಾಗೆ ಪ್ರತಿಸಮಯದಲ್ಲಿ ಆಗುತ್ತಿರುವ ಮಹಾಪುಣ್ಯಕರ್ಮಗಳ ಆಸ್ರವದ ಫಲವಾಗಿ ಸ್ವರ್ಗದಲ್ಲಿ ಮಹಾಬುದ್ಧಿಸಂಪನ್ನದೇವನಾಗಿ ಜನಿಸುತ್ತಾನೆ. ಅಲ್ಲಿ ಆಯುಷ್ಯ ಕಳೆದ ನಂತರ ಮನುಷ್ಯಲೋಕದಲ್ಲಿ ಚಕ್ರವರ್ತಿಮೊದಲಾದವರ ಸಂಪತ್ತಿಯನ್ನು ಬಹುಕಾಲ ಅನುಭವಿಸುತ್ತಾ, ಮತ್ತೆ ಸ್ವಯಂ ಅವೆಲ್ಲವನ್ನೂ ತ್ಯಜಿಸಿ, ನಿರ್ಗ್ರಂಥ ದೀಕ್ಷೆಯನ್ನು ಕೈಕೊಳ್ಳುತ್ತಾನೆ. ವಜ್ರವೃಷಭ ನಾರಾಚ ಸಂಹನನಧಾರಿ ಯಾದ ಸಾಧುವು ನಾಲ್ಕು ಪ್ರಕಾರದ ಶುಕ್ಲಧ್ಯಾನದ ಬಲದಿಂದ ಜ್ಞಾನಾವರ ಣಾದಿ ಎಂಟು ಕರ್ಮಗಳನ್ನು ನಾಶಮಾಡಿ, ಅಕ್ಷಯ ಸುಖವಾದ ಮೋಕ್ಷ ವನ್ನು ಪಡೆಯುತ್ತಾನೆ.



# ಪರಭಾವ ತ್ಯಾಗವೇ ಸಂಸಾರಕ್ಕೆ ಕಾರಣವು

**ಜೇ ಪರಭಾವ ಚಏವಿ ಮುಣಿ ಅಪ್ಪಾ ಅಪ್ಪ ಮುಣಂತಿ।**
**ಕೇವಲ-ಣಾಣ-ಸ್ವರೂವ ಲಇ (ಲಹಿ?) ತೇ ಸಂಸಾರು ಮುಚಂತಿ॥೬೩॥**

**ಅನ್ವಯಾರ್ಥ:** ಜೇ ಪರಭಾವ ಚಏವಿ ಅಪ್ಪಾ ಅಪ್ಪ ಮುಣಂತಿ– ಯಾವ ಯೋಗಿವರ್ಯರು ಪರಭಾವಗಳನ್ನು ಬಿಟ್ಟು ತನ್ನಿಂದಲೇ ತನ್ನ ಅನು ಭವವನ್ನು ಮಾಡಿಕೊಳ್ಳುತ್ತಾರೆಯೋ, ತೇ ಕೇವಲ-ಣಾಣ-ಸ್ವರೂವ ಲಇ ಸಂಸಾರು ಮುಚಂತಿ–ಅವರು ಕೇವಲಜ್ಞಾನದಿಂದ್ಯುಕ್ತವಾದ ತನ್ನ ಸ್ವಭಾವ ವನ್ನು ಪ್ರಕಾಶಪಡಿಸಿ, ಸಂಸಾರದಿಂದ ಪಾರಾಗುತ್ತಾರೆ.

**ಭಾವಾರ್ಥ:** ತ್ಯಾಗಧರ್ಮವು ಅತ್ಯಾವಶ್ಯಕವಾಗಿರುತ್ತದೆಂದು ಸ್ಪಷ್ಟೀ ಕರಿಸುತ್ತಾರೆ. ರಾಗದ್ವೇಷಮೋಹಭಾವಗಳು ಬಂಧಕ್ಕೆ ಕಾರಣಗಳಾದುದ ರಿಂದ, ಅವೆಲ್ಲವನ್ನೂ ತ್ಯಜಿಸಿ, ವೀತರಾಗಭಾವನೆಯಲ್ಲಿ ಮಗ್ನನಾಗುವುದ ರಿಂದ, ಸಂವರೆ ಮತ್ತು ನಿರ್ಜರೆಯ ಲಾಭವಾಗುವುದು. ರಾಗದ್ವೇಷಗಳುಂ ಟಾಗುವುದರಲ್ಲಿ ರಾಗಮೋಹಾದಿಗಳ ಉದಯವು ಅಂತರಂಗ ಕಾರಣವಾಗಿದೆ.

ರಾಗದ್ವೇಷ ಜನಕಗಳಾದ ಚೇತನಾಚೇತನ ಪದಾರ್ಥಗಳು ಬಾಹ್ಯಕಾರಣ ಗಳಾಗಿವೆ. ಧಾನ್ಯದ ಹೊರಗಿರುವ ಸಿಪ್ಪೆಯು ದೂರವಾದೊಡನೆ ಒಳಗಿರುವ ತೆಳುವಾದ ಸಿಪ್ಪೆಯೂ ದೂರವಾಗುವಂತೆ, ಬಾಹ್ಯಕಾರಣಗಳನ್ನು ತ್ಯಜಿಸಿದ ರೇನೇ, ಅಂತರಂಗ ಕಾರಣಗಳನ್ನು ತ್ಯಜಿಸಲು ಸಾಧ್ಯವಾಗುವುದು.

ಸಾಧಕನು ಮೊತ್ತಮೊದಲು ಮಿಥ್ಯಾತ್ವಾದಿಭಾವಗಳನ್ನು ತ್ಯಜಿಸಬೇಕು. ಇದಕ್ಕಾಗಿ ಅವನು ಬಾಹ್ಯಕಾರಣಗಳಾದ ರಾಗದ್ವೇಷಯುಕ್ತರಾದ ದೇವ ದೇವಿಯರಲ್ಲಿಯೂ, ಪರಿಗ್ರಹಧಾರಿಗಳಾದ ಮತ್ತು ಜ್ಞಾನರಹಿತರಾದ ಸಾಧು ಗಳಲ್ಲಿಯೂ, ಏಕಾಂತ ನಯವನ್ನೇ ಸಮರ್ಥನೆಗೊಳಿಸುವ ಶಾಸ್ತ್ರಗಳಲ್ಲಿಯೂ ಭಕ್ತಿಯನ್ನಿಡಕೂಡದು; ತೀವ್ರಪಾಪಗಳಿಂದ ರಕ್ಷಣೆಹೊಂದಬೇಕು; ಜುಗಾರಿ. ಮದ್ಯಪಾನ, ಮಾಂಸಾಹಾರ, ಕಳ್ಳತನ, ಶಿಕಾರೀ, ವೇಶ್ಯಾಗಮನ, ಪರಸ್ತ್ರೀ ಸೇವನೆ ಮೊದಲಾದಸ್ನೇಹವನ್ನು ಮನಸ್ಸಿನಿಂದ ಹೊಡೆದೋಡಿಸಬೇಕು; ನಿಯಮಪೂರ್ವಕವೋ ಅಥವಾ ಸಾಧ್ಯವಾಗದಿದ್ದ ಪಕ್ಷದಲ್ಲಿ ಅರುಚಿಯುಂಟಾಗು ವಂತೆ ಮಾಡಿಕೊಂಡು, ಅನ್ಯಾಯಸೇವನೆಯಲ್ಲಿ ಗ್ಲಾನಿಪಡೆದು, ವೀತರಾಗ ಜಿನೇಂದ್ರದೇವ, ನಿರ್ಗ್ರಂಥ ಆತ್ಮಜ್ಞಾನೀಮುನಿ, ಅನೇಕಾಂತಮಯ ಶಾಸ್ತ್ರ ಇವುಗಳಲ್ಲಿ ಭಕ್ತಿಯನ್ನಿಟ್ಟುಕೊಂಡು, ಜೀವಾಜೀವಾದಿ ಸಪ್ತತತ್ವಗಳನ್ನು ತಿಳಿದು, ಮನನಮಾಡುತ್ತಾ, ಅನಂತಾನುಬಂಧೀಕಷಾಯಗಳಿಂದಲೂ ಮಿಥ್ಯಾ ತ್ವಾದಿ ವಿಕಾರಭಾವಗಳಿಂದಲೂ ದೂರವಿರಬೇಕು.

ಆಗ ಸಮ್ಯಗ್ದರ್ಶನ, ಸಮ್ಯಗ್ಜ್ಞಾನ ಮತ್ತು ಸ್ವರೂಪಾಚರಣ ಪ್ರಾಪ್ತಿ ಯಾಗಿ, ಅಪ್ರತ್ಯಾಖ್ಯಾನ. ಪ್ರತ್ಯಾಖ್ಯಾನ ಮತ್ತು ಸಂಜ್ವಲನ ಕಷಾಯಗಳ ಮತ್ತು ಹಾಸ್ಯಾದಿ ನೋಕಷಾಯಗಳ ಉದಯದಿಂದುಂಟಾಗುವ ರಾಗದ್ವೇಷಾದಿ ಭಾವಗಳು ದೂರವಾಗುತ್ತವೆ. ಆಗ ಮೊದಲು ಶ್ರಾವಕರ ಹನ್ನೆರಡು ವ್ರತ ಗಳನ್ನು ಪಾಲಿಸುತ್ತಾ ಪಾಲಿಸುತ್ತಾ, ರಾಗದ್ವೇಷಗಳ ಶಕ್ತಿಯನ್ನು ಕಡಿಮೆ ಮಾಡಿಕೊಳ್ಳುತ್ತಾನೆ. ಹನ್ನೊಂದು ನೆಲೆಗಳಮೂಲಕ ಹೇಗೇಗೆ ಬಾಹ್ಯತ್ಯಾಗವು ಆಗುತ್ತಾಹೋಗುವುದೋ, ಹಾಗೆ ರಾಗದ್ವೇಷಗಳು ಕಡಿಮೆಯಾಗುತ್ತಾಹೋಗು ತ್ತವೆ. ಸಂಪೂರ್ಣ ರಾಗದ್ವೇಷಗಳನ್ನು ತ್ಯಜಿಸುವುದಕ್ಕೋಸ್ಕರ ಜಿನದೀಕ್ಷೆಯು ಅತ್ಯಾವಶ್ಯಕವಾಗಿರುತ್ತದೆ. ಅಲ್ಲಿ ವಸ್ತ್ರಾದಿಗಳು ಪೂರ್ಣರೀತಿಯಿಂದ ತ್ಯಾಗ

ಆಗಿರುತ್ತವೆ. ಬಾಹ್ಯಕಾರಣಗಳಾದ ಕ್ಷೇತ್ರ (ಹೊಲಗದ್ದೆ), ಮನೆ, ಧನ, ಧಾನ್ಯ, ಬೆಳ್ಳಿ-ಚಿನ್ನ-ವಸ್ತ್ರ, ಪತ್ನಿ-ಪುತ್ರ-ದಾಸ-ದಾಸಿ, ಹಸು ಮೊದಲಾದವುಗಳು, ಹಾಸಿಗೆ, ಆಸನ, ಪಾತ್ರ ಈ ಹತ್ತು ಪ್ರಕಾರದ ಪರಿಗ್ರಹಗಳನ್ನು ತ್ಯಜಿಸಿ, ಬಾಲಕನೋಪಾದಿಯಲ್ಲಿ ಸಮದರ್ಶಿಯಾಗಿ, ಕಾಮವಿಕಾರರಹಿತನಾಗಿ, ನಿರ್ಗ್ರಂಥ ಅವಸ್ಥೆಯನ್ನು ಪಡೆದು, ಹದಿನಾಲ್ಕು ಪ್ರಕಾರದ ಅಂತರಂಗಭಾವ ಪರಿಗ್ರಹಗಳ ಮಮತೆಯನ್ನು ತ್ಯಜಿಸುತ್ತಾನೆ.

ಮಿಥ್ಯಾತ್ವಭಾವವು, ಕ್ರೋಧ, ಮಾನ, ಮಾಯಾ, ಲೋಭಗಳು, ಹಾಸ್ಯ, ರತಿ, ಅರತೀ, ಶೋಕ, ಭಯ, ಜುಗುಪ್ಸಾ, ಸ್ತ್ರೀವೇದ, ಪುಂವೇದ, ನಪುಂಸಕವೇದವೆಂಬ ಹದಿನಾಲ್ಕು ವಿಧದ ಭಾವಗಳಿಂದ ಪೂರ್ಣರೀತ್ಯಾ ವಿರಕ್ತನಾಗಿ, ಶತ್ರುಮಿತ್ರರಲ್ಲಿಯೂ, ತೃಣ ಸುವರ್ಣಗಳಲ್ಲಿಯೂ, ಜೀವನ ಮರಣಗಳಲ್ಲಿಯೂ, ಸಮಾನಭಾವವುಳ್ಳವನಾಗುತ್ತಾನೆ. ಏಕಾಂತವಾಸಗಳಾದ ವನ, ಉಪವನ, ಪರ್ವತಾದಿ ನಿರ್ಜನಸ್ಥಾನಗಳಲ್ಲಿ ಕುಳಿತುಕೊಂಡು, ಆತ್ಮಧ್ಯಾನವನ್ನು ಮಾಡುತ್ತಾ ತನ್ನ ಶುದ್ಧಾತ್ಮನ ಭಾವನೆಯನ್ನೇ ಗ್ರಹಣೆಮಾಡುತ್ತಾನೆ ಮತ್ತು ಪರಭಾವಗಳಲ್ಲಿರುವ ಉಪಯೋಗವನ್ನು ದೂರಗೊಳಿಸುತ್ತಾನೆ.

ಕರ್ಮಗಳ ನಿಮಿತ್ತದಿಂದುಟಾಗುವ ಭಾವಗಳೆಲ್ಲವೂ ಅನಿತ್ಯಗಳಾಗಿವೆ. ಅವೆಲ್ಲವುಗಳಿಂದ ರಾಗವನ್ನು ತೊರೆದು, ಔದಾಯಿಕ, ಕ್ಷಾಯೋಪಶಮಿಕ ಮತ್ತು ಬಿಟ್ಟುಹೋಗುವ ಔಪಶಮಿಕಭಾವಗಳಿಂದ ವಿರಕ್ತನಾಗಿ, ಕ್ಷಾಯಿಕ ಮತ್ತು ಪಾರಿಣಾಮಿಕ ಜೀವತ್ವಭಾವವನ್ನು ತನ್ನ ಸ್ವಭಾವವೆಂದು ತಿಳಿದು, ಶುದ್ಧಾತ್ಮನನ್ನು ಮಾತ್ರ ಚಿಂತಿಸುತ್ತಿರುವ ಮುನಿಶ್ರೇಷ್ಟನೇ ರಾಗದ್ವೇಷಗಳನ್ನು ಪೂರ್ಣರೀತ್ಯಾ ಜಯಿಸುತ್ತಾನೆ.

ಕ್ಷಪಕಶ್ರೇಣಿಯನ್ನೇರಿದ ಅಂತರ್ಮುಹೂರ್ತದಲ್ಲಿಯೇ ನಾಲ್ಕು ಘಾತಿ ಕರ್ಮಗಳನ್ನು ಕ್ಷಯಮಾಡಿ, ಕೇವಲಜ್ಞಾನಿಯಾಗಿ, ಮತ್ತೆ ಬಾಕಿ ಉಳಿದ ನಾಲ್ಕು ಅಘಾತಿಕರ್ಮಗಳನ್ನು ನಾಶಗೊಳಿಸಿ, ಸಂಸಾರದಿಂದ ಮುಕ್ತನಾಗುತ್ತಾನೆ. ಪರಭಾವತ್ಯಾಗದಿಂದ ತನ್ನ ನಿಜಭಾವವು ಯಥಾರ್ಥ ಗ್ರಹಣೆಯಾಗುತ್ತದೆ. ಆಗ ಶುದ್ಧ ಆತ್ಮಾನುಭವವು ಪ್ರಕಟವಾಗುತ್ತದೆ. ಇದೇ ಶಾಶ್ವತವಾದ ಆನಂದಾಮೃತಪಾನಮಾಡಿಸುವ ಮೋಕ್ಷಮಾರ್ಗವಾಗಿರುತ್ತದೆ.

ಸಮಯಸಾರಕಲಶದಲ್ಲಿ ಹೇಳುತ್ತಾರೆ:

ಏಕಶ್ಚಿತಶ್ಚಿನ್ಮಯ ಏವ ಭಾವೋ ಭಾವಾಃ ಪರೇ ಯೇ ಕಿಲ ತೇ
ಪರೇಷಾಂ।
ಗ್ರಾಹ್ಯಸ್ತತಶ್ಚಿನ್ಮಯ ಏವ ಭಾವೋ ಭಾವಃ ಪರೇ ಸರ್ವತ ಏವ
ಹೇಯಾಃ ॥೫॥

ಸಿದ್ಧಾಂತೋಽಯಮುದಾತ್ತಚಿತ್ತಚರಿತೈರ್ಮೋಕ್ಷಾರ್ಥಿಭಿಃ
ಸೇವ್ಯತಾಂ।
ಶುದ್ಧಂ ಚಿನ್ಮಯಮೇಕಮೇವ ಪರಮಂ ಜ್ಯೋತಿಃ ಸದೈವಾಸ್ಮ್ಯಹಂ।
ಏತೇ ಯೇ ತು ಸಮುಲ್ಲಸಂತಿ ವಿಬುಧಾ ಭಾವಾಃ ಪೃಥಗ್ಲಕ್ಷಣಾ-
ಸ್ತೇಽಹಂ ನಾಸ್ಮಿ ಯತೋಽತ್ರ ತೇ ಮಮ ಪರದ್ರವ್ಯಂ ಸಮಗ್ರಾ
ಅಪಿ ॥೬-೯॥

ಭಾವಾರ್ಥ : ಚೈತನ್ಯಮಯವಾದ ಭಾವವೊಂದೇ ನಿಜಭಾವವಾಗಿರುತ್ತದೆ. ಉಳಿದ ಎಲ್ಲಾ ರಾಗಾದಿಭಾವಗಳೂ ನಿಶ್ಚಯವಾಗಿ ಪರಪುದ್ಗಲದ ಅವಸ್ಥೆಗಳಾಗಿವೆ. ಆದುದರಿಂದ ಚೈತನ್ಯಮಯವಾದ ಭಾವವನ್ನೇ ಗ್ರಹಣೆ ಮಾಡಿ, ಉಳಿದ ಎಲ್ಲಾ ಪರಭಾವಗಳನ್ನು ತ್ಯಜಿಸಬೇಕು. ಪರಿಶುದ್ಧಭಾವದಲ್ಲಿ ಸಂಚರಿಸುವ ಮೋಕ್ಷಾರ್ಥಿಯಾದ ಮಹಾತ್ಮನು ಈ ಪರಮಸಿದ್ಧಾಂತವನ್ನು ಸೇವಿಸುತ್ತಾ, "ನಾನೊಬ್ಬನು ಶುದ್ಧಚೈತನ್ಯಮಯ ಪರಮಜ್ಯೋತಿಸ್ವರೂಪನಾಗಿರುತ್ತೇನೆ. ಇದಕ್ಕಿಂತ ಭಿನ್ನಗಳಾದ ಭಾವಗಳು ತನ್ನ ಶುದ್ಧಭಾವಗಳಿಂದ ಭಿನ್ನಲಕ್ಷಣಗಳುಳ್ಳವುಗಳಾಗಿವೆ ಮತ್ತು ಪರದ್ರವ್ಯಗಳಾಗಿವೆ" ಎಂದು ತಿಳಿಯುತ್ತಾನೆ.



## ತ್ಯಾಗಿ ಮತ್ತು ಆತ್ಮಧ್ಯಾನಿಯಾದ ಮಹಾತ್ಮನೇ ಧನ್ಯನು

ಧಣ್ಣಾ ತೇ ಭಯವಂತ ಬುಹ ಜೇ ಪರಭಾವ ಚಯಂತಿ।
ಲೋಯ-ಲೋಯ-ಪಯಾಸಯರು ಅಪ್ಪಾ ವಿಮಲ ಮುಣಂತಿ
॥೭೪॥

**ಅನ್ವಯಾರ್ಥ :** ಜೇ ಪರಭಾವ ಚಯಂತಿ–ಯಾರು ಪರಭಾವಗಳನ್ನು ತ್ಯಜಿಸುತ್ತಾರೆಯೋ, ಲೋಯಾಲೋಯ-ಪಯಾಸಯರು ಅಪ್ಪಾ ಮುಣಂತಿ–ಲೋಕಾಲೋಕಗಳನ್ನು ಪ್ರಕಾಶಪಡಿಸುವ ನಿರ್ಮಲವಾದ ತನ್ನಾತ್ಮಾನುಭವವನ್ನು ಹೊಂದಿರುತ್ತಾರೆಯೋ, ತೇ ಭಯವಂತ ಬುಹ ಧಣ್ಣಾ–ಆ ಭಗವಾನ್ ಜ್ಞಾನಿೀ ಮಹಾತ್ಮರು ಧನ್ಯರು.

**ಭಾವಾರ್ಥ :** ನಿಶ್ಚಯನಯದಿಂದ ಆತ್ಮನ ಸ್ವರೂಪವು ಪರಮಶುದ್ಧವಾಗಿರುತ್ತದೆ. ಇವನ ಅಸಾಧಾರಣ ಲಕ್ಷಣವು ಜ್ಞಾನಲಕ್ಷಣವುಳ್ಳದ್ದಾಗಿದೆ. ಜ್ಞಾನಶಕ್ತಿಯು ಒಂದೇ ಸಮಯದಲ್ಲಿ ತ್ರಿಲೋಕದ ಸಕಲದ್ರವ್ಯಗಳನ್ನೂ, ಅವುಗಳಲ್ಲುಂಟಾಗುವ ಪರ್ಯಾಯಗಳನ್ನೂ ಕ್ರಮರಹಿತ ತಿಳಿಯುವುದಾಗಿದೆ. ಈ ರೀತಿಯಾಗಿ ಸಿದ್ಧಾತ್ಮರಲ್ಲಿರುವ ಸರ್ವಗುಣಗಳು ಈ ಆತ್ಮನಲ್ಲಿಯೇ ಪ್ರಕಟವಾಗುತ್ತವೆ.

ಈ ಆತ್ಮನು ಸ್ವಾಭಾವಿಕವಾಗಿ ಸಿದ್ಧಸ್ವರೂಪನಾಗಿರುವುದರಿಂದಲೇ ತತ್ವಜ್ಞಾನಿಮಹಾತ್ಮನು ಪವಿತ್ರಸ್ಥಾನದ ಅಭಿರುಚಿಯುಳ್ಳವನಾಗಿ ಧ್ಯಾನಿಸಿದೊಡನೆ ಸರ್ವ ಪರಪದಾರ್ಥಗಳಿಂದ ವಿರಕ್ತನಾಗುತ್ತಾನೆ. ಪುಣ್ಯೋದಯದಿಂದ ಪ್ರಾಪ್ತವಾದ ನಾರಾಯಣ, ಬಲಭದ್ರ, ಪ್ರತಿನಾರಾಯಣ, ಚಕ್ರವರ್ತಿ, ಕಾಮದೇವ, ಇಂದ್ರ, ಧರಣೇಂದ್ರ, ಅಹಮಿಂದ್ರ ಮೊದಲಾದ ಪದವಿಗಳು ಕರ್ಮಜನಿತವೆಂದೂ, ನಾಶಶೀಲವೆಂದೂ, ಆತ್ಮಶುದ್ಧಸ್ವರೂಪದಿಂದ ಭಿನ್ನವೆಂದೂ ಪರಿಭಾವಿಸಿ, ಅವೆಲ್ಲವುಗಳ ಮಮತೆಯನ್ನು ಬಿಡುತ್ತಾನೆ. ಇದೇ ಪ್ರಕಾರವಾಗಿ ಯಾವ ಶುಭಭಾವನೆಗಳಿಂದ, ಲೌಕಿಕ ಶ್ರೇಷ್ಠಪದವಿಗಳ ಪ್ರಾಪ್ತಿಗೆ ಯೋಗ್ಯವಾದ ಪುಣ್ಯಬಂಧವಾಗುವುದನ್ನೂ ಕೂಡ ಇಚ್ಛಿಸಲಾರನು. ಧರ್ಮದಲ್ಲಿ ಪ್ರೀತಿ, ಪಂಚಪರಮೇಷ್ಠಿಗಳಲ್ಲಿ ಭಕ್ತಿ, ದಯೆ, ಪರೋಪಕಾರ, ಶಾಸ್ತ್ರ ಸ್ವಾಧ್ಯಾಯ ಮೊದಲಾದ ಶುಭಭಾವಗಳಲ್ಲಿಯೇ ವರ್ತಿಸುತ್ತಾನೆ. ಯಾಕೆಂದರೆ ಶುದ್ಧೋಪಯೋಗದಲ್ಲಿ ಅಧಿಕ ಸಮಯವಿರಲು ಸಾಧ್ಯವಾಗದಿರಲು ಆತ್ಮವೀರ್ಯ (ಬಲ) ವು ಸಾಲದು. ಆಗ ಅಶುಭ ಭಾವನೆಗಳಿಂದ ರಕ್ಷಣೆ ಪಡೆಯಲು ಶುದ್ಧಭಾವದಲ್ಲಿ ವರ್ತಿಸುತ್ತಿದ್ದರೂ, ಜ್ಞಾನಿಯು ಅವುಗಳಿಂದ ವಿರಕ್ತನಾಗಿರುತ್ತಾನೆ.

ಸಾಧಕನು ಪರಮಾಣುವಿನಷ್ಟಿರುವ ರಾಗಭಾವವು ಕೂಡ ಬಂಧಕ್ಕೆ ಕಾರಣವೆಂದೇ ತಿಳಿಯುತ್ತಾನೆ. ಹದಿನಾಲ್ಕು ಗುಣಸ್ಥಾನಗಳು ಆತ್ಮನ ಉನ್ನತಿಯ ಶ್ರೇಣಿಗಳಾಗಿದ್ದರೂ ಕೂಡ, ಶುದ್ಧಾತ್ಮನ ಮೂಲವು ಪರಸಂಯೋಗ ರಹಿತವೂ, ಏಕಾಕೀಸ್ವಭಾವದಿಂದ ಭಿನ್ನವೂ ಆಗಿರುತ್ತದೆ. ಆದ್ದರಿಂದ ಜ್ಞಾನಿಯು ಸೋಪಾನಗಳನ್ನು ಹತ್ತುತ್ತಾ, ಕೆಳಗಿನ ಸೋಪಾನಗಳನ್ನು ತ್ಯಾಗ ಯೋಗ್ಯವೆಂದು ತಿಳಿದು ಬಿಡುವಂತೆ, ಇವುಗಳನ್ನೂ ಕೂಡ ತ್ಯಜಿಸುವುದಕ್ಕೆ ಯೋಗ್ಯವೆಂದೇ ಭಾವಿಸುತ್ತಾನೆ. ಕೇವಲ ಶುದ್ಧೋಪಯೋಗವು ಗ್ರಹಣೆಗೆ ಯೋಗ್ಯವೆಂದು ಉತ್ಸಾಹವುಳ್ಳವನಾಗಿ, ಧರ್ಮಪ್ರಚಾರಕಾರ್ಯದ ವಿಚಾರಗಳನ್ನೂ ಕೂಡ ತ್ಯಜಿಸುತ್ತಾ, ದ್ರವ್ಯಾರ್ಥಿಕ ನಯದಿಂದ ಆತ್ಮನು ನಿತ್ಯವೆಂದೂ ಪರ್ಯಾಯಾರ್ಥಿಕ ನಯದಿಂದ ಅನಿತ್ಯವೆಂದೂ, ಅಭೇದನಯದಿಂದ ಏಕರೂಪನೆಂದೂ, ಭೇದರೂಪ ವ್ಯವಹಾರನಯದಿಂದ ಅನಂತರೂಪನಾಗಿರುವನೆಂದೂ ತಿಳಿಯುತ್ತಾನೆ.

ಆತ್ಮನು ಗುಣಪರ್ಯಾಯಗಳ ಸಮೂಹನಾಗಿರುತ್ತಾನೆ. ಲೋಕವು ಷಡ್ದ್ರವ್ಯಗಳ ಸಮುದಾಯವಾಗಿರುತ್ತದೆ. ಕರ್ಮಗಳು ೧೪೮ ಭೇದಗಳುಳ್ಳಗಳಾಗಿವೆ. ಅವುಗಳ ಬಂಧವು ಪ್ರಕೃತಿ, ಸ್ಥಿತಿ, ಅನುಭಾಗ ಮತ್ತು ಪ್ರದೇಶ ಬಂಧಗಳೆಂದು ನಾಲ್ಕು ವಿಧವಾಗಿರುತ್ತವೆ. ಪ್ರಕೃತಿ ಬಂಧ ಮತ್ತು ಪ್ರದೇಶ ಬಂಧವು ಯೋಗಗಳಿಂದಲೂ, ಸ್ಥಿತಿಬಂಧ ಮತ್ತು ಅನುಭಾಗಬಂಧವು ಕಷಾಯಗಳಿಂದಲೂ ಆಗುತ್ತವೆ. ಸಪ್ತತತ್ವ, ನವಪದಾರ್ಥ ಇತ್ಯಾದಿ ಸಕಲವಿಕಲ್ಪಗಳನ್ನು ಬಂಧಕಾರಕಗಳೆಂದೇ ತಿಳಿದು ತ್ಯಜಿಸುತ್ತಾನೆ. ನಿರ್ವಿಕಲ್ಪಸಮಾಧಿ ಮತ್ತು ಸ್ವಾನುಭವಕ್ಕಾಗಿ ತನ್ನಾತ್ಮನಲ್ಲಿಯೇ ತನ್ಮಯನಾಗುತ್ತಾನೆ.

ಹೀಗೆ ಯಾವ ಜ್ಞಾನಿಯು ಮತ್ತು ವಿರಕ್ತ ಪುರುಷನು ಸಕಲ ಪ್ರಪಂಚದ ಕಾರ್ಯಗಳಿಂದ ವಿರಕ್ತನಾಗಿ, ಆತ್ಮಧ್ಯಾನದಿಂದ ಪರಮಾನಂದಮಯವಾದ ಅಮೃತದ ರಸಪಾನವನ್ನು ಮಾಡುವನೋ, ಅವನೇ ಯಥಾರ್ಥ ಪಂಡಿತನೂ, ಐಶ್ವರ್ಯಶಾಲಿಯೂ, ರತ್ನತ್ರಯರೂಪ ಅಪೂರ್ವ ಸಂಪತ್ತಿಗೆ ಅಧಿನಾಯಕನೂ, ಮಹಾಭಾಗ್ಯಶಾಲಿಯೂ, ಭಗವಾನನೂ, ಅತೀಂದ್ರಿಯಜ್ಞಾನ ಅಘನಾ ಸುಖಕ್ಕೆ ಸ್ವಾಮಿಯೂ ಮತ್ತು ಮೋಕ್ಷಲಕ್ಷ್ಮಿಯ ಲಾಭವನ್ನು ಶೀಘ್ರವೇ ಪಡೆಯುವವನೂ ಆಗುವನು.

ಆತ್ಮಾನುಶಾಸನದಲ್ಲಿ ಹೇಳಿರುತ್ತಾರೆ:

**ಯೇಷಾಂ ಭೂಷಣಮಂಗಸಂಗತರಜಃ ಸ್ಥಾನಂ ಶಿಲಾಯಾಸ್ತಲಂ**
**ಶಯ್ಯಾ ಶರ್ಕರಿಲಾ ಮಹೀ ಸುವಿಹಿತಂ ಗೇಹಂ ಗುಹಾ ದ್ವೀಪಿನಾಂ।**
**ಆತ್ಮಾತ್ಮೀಯವಿಕಲ್ಪವೀತಮತಯಸ್ತ್ರುಟ್ಯತ್ತಮೋಗ್ರಂಥಯ-**
**ಸ್ತೇ ನೋ ಜ್ಞಾನಧನಾ ಮನಾಂಸಿ ಪುನತಾಂ ಮುಕ್ತಿಸ್ಪೃಹಾ**
**ನಿಸ್ಪೃಹಾಃ ॥೨೫೯॥**

**ಭಾವಾರ್ಥ**: ಮಹಾತ್ಮರ ಶರೀರದಲ್ಲಿ ಅಂಟಿಕೊಂಡಿರುವ ಧೂಳೇ ಆಭರಣವಾಗಿಯೂ, ಶಿಲಾಪಟ್ಟವೇ ಕುಳಿತುಕೊಳ್ಳುವ ಸ್ಥಾನವೂ, ಮರಳು ಭೂಮಿಯೇ ಶಯನಭೂಮಿಯೂ, ಸಿಂಹಾದಿ ಕಾಡುಮೃಗಗಳು ವಾಸಿಸುವ ಗುಹೆಗಳೇ ಇವರ ಸುಂದರ ಭವನಗಳಾಗಿಯೂ ಇರುತ್ತವೆ. ಅಂತರಂಗ ವಿಕಲ್ಪಗಳನ್ನು ದೂರಗೊಳಿಸುವವರೂ, ಅಜ್ಞಾನರೂಪ ಗ್ರಂಥಿಯನ್ನು ಭೇದಿಸಿದವರೂ, ಸಮ್ಯಗ್‌ಜ್ಞಾನಧನದಿಂದ್ಯುಕ್ತರೂ, ಮೋಕ್ಷಪ್ರೇಮಿಗಳೂ, ಅನ್ಯ ಇಚ್ಛೆಗಳಿಂದ ದೂರವಿರುವವರೂ ಆದ ಯೋಗಿವರ್ಯರ ವೃಂದವು ನಮ್ಮೆಲ್ಲ ಮನಸ್ಸನ್ನು ಪವಿತ್ರಗೊಳಿಸಲಿ.

---

# ಗೃಹಸ್ಥನಿಗಾಗಲಿ, ಮುನಿಗಾಗಲಿ ಆತ್ಮರಮಣವು ಸಿದ್ಧಸುಖದ ಉಪಾಯವಾಗಿದೆ

**ಸಾಗಾರು ವಿ ಣಾಗಾರು ಕು ವಿ ಜೋ ಅಪ್ಪಾಣಿ ವಸೇಇ।**
**ಸೋ ಲಹು ಪಾವಇ ಸಿದ್ಧಿ-ಸುಹು ಜಿಣವರು ಏಮ ಭಣೇಇ ॥೬೫॥**

**ಅನ್ವಯಾರ್ಥ**: ಸಾಗಾರು ವಿ ಣಾಗಾರು ಕು ವಿ–ಗೃಹಸ್ಥನಾಗಲಿ ಅಥವಾ ಮುನಿಯಾಗಲಿ, ಜೋ ಅಪ್ಪಾಣಿ ವಸೇಇ–ಯಾವನು ತನ್ನ ಆತ್ಮನಲ್ಲಿಯೇ ವಾಸಿಸುವನೋ, ಸೋ ಸಿದ್ಧಿ-ಸುಹು ಲಹು ಪಾವಇ–ಅವನು ಅತಿ ಶೀಘ್ರವೇ ಸಿದ್ಧಸುಖವನ್ನು ಪಡೆಯುವನೆಂದು, ಜಿಣವರು ಏಮ ಭಣೇಇ– ಸರ್ವಜ್ಞದೇವನು ಹೇಳಿರುವನು.

**ಭಾವಾರ್ಥ**: ಆತ್ಮನ ಅತೀಂದ್ರಿಯ ಸುಖಕ್ಕೆ, ಆನಂದಕ್ಕೆ ಸಿದ್ಧಿಸುಖ ಅಥವಾ ಸಿದ್ಧಾತ್ಮರ ಸುಖವೆಂದು ಹೇಳುತ್ತಾರೆ. ಶುದ್ಧಾತ್ಮನ ಅನುಭವವು

ಸಿದ್ಧಾತ್ಮನಿಗೇ ಇರುತ್ತದೆ. ಶುದ್ಧಾತ್ಮಾನುಭವವನ್ನು ಹೊಂದುವ ಸಾಧಕನು ಶುದ್ಧಾತ್ಮಾನುಭವವನ್ನು ಸಿದ್ಧಾತ್ಮನಾದಾಗಲೇ ಹೊಂದುತ್ತಾನೆ.

ಯಾವ ಸಾಧನಗಳಿಂದ ಆತ್ಮೀಕ ಆನಂದಾಭಿರುಚಿಯು ಆಗುವುದೋ, ಅದೇ ಮೋಕ್ಷೋಪಾಯವು ಅಥವಾ ಆನಂದಸುಖದ ಸಾಧನವು ಆಗಿರುತ್ತಿದೆ. ಯಾಕೆಂದರೆ ಸಮ್ಯಗ್ದರ್ಶನ, ಸಮ್ಯಗ್ಜ್ಞಾನ ಮತ್ತು ಸಮ್ಯಕ್ಚಾರಿತ್ರ ಈ ಮೂರೂ ಸ್ವಾನುಭವದಲ್ಲಿಯೇ ಗರ್ಭಿತವಾಗಿರುತ್ತವೆ. ಆದುದರಿಂದಲೇ ನೂತನ ಕರ್ಮಗಳ ಸಂವರೆಯಾಗಿ, ಪ್ರಾಚೀನಕರ್ಮಗಳ ನಿರ್ಜರೆಯಾಗುತ್ತನೆ. ಈ ರಾಜಮಾರ್ಗವು ಸೀದಾ ಮೋಕ್ಷಮಾರ್ಗದತ್ತ ಹೋಗಿರುವುದು. ಇದಕ್ಕಿಂತ ಬೇರೆ ಮಾರ್ಗವೇ ಇಲ್ಲವು. ಬಾಹ್ಯಸಾಧನಗಳು ಮನ, ವಚನ, ಕಾಯಗಳ ಶಕ್ತಿಯನ್ನು ನಿರಾಕುಲವನ್ನಾಗಿಮಾಡಲು ಸಾಧನಗಳಾಗಿವೆ. ಮನಸ್ಸು ಎಷ್ಟು ನಿರಾಕುಲವೋ, ಅಷ್ಟೇ ಸ್ವಾನುಭವದಲ್ಲಿ ಕಾರ್ಯವನ್ನೆಸುಗುವುದು ; ಬಾಧೆಯನ್ನುಂಟುಮಾಡಲಾರದು.

ಮನ, ವಚನ, ಕಾಯಗಳನ್ನು ತಡೆಯುವುದರಿಂದಲೇ ಲೋಕದ ಬಲೆಯಿಂದ ಬಿಡುಗಡೆಹೊಂದುವುದಾಗಿದೆ. ಗೃಹಸ್ಥ ಅಥವಾ ಮುನಿಯ ಚಾರಿತ್ರಗಳು ಮೋಕ್ಷಮಾರ್ಗದ ಬಾಹ್ಯಸಾಧನೆಗಳಾಗಿವೆ. ಬಾಹ್ಯಸಾಧನವಾದ ಶ್ರಾವಕರ ಚಾರಿತ್ರವನ್ನು ಪಾಲಿಸುತ್ತಾ ಹೋದರೇನೆ. ಸಾಧುಗಳ ಚಾರಿತ್ರ ಪಾಲನೆಯ ಯೋಗ್ಯತೆಯುಂಟಾಗುವುದು. ಮುನಿಗಳ ಚಾರಿತ್ರವನ್ನು ಪಾಲಿಸದೆ ಕರ್ಮನಾಶವಾಗಲಾರದು. ಪ್ರತಿಯೊಬ್ಬ ಗೃಹಸ್ಥನ ವ್ಯವಹಾರವು ಹನ್ನೊಂದು ಪ್ರತಿಮಾರೂಪವಾಗಿರುವುದು. ಚಾರಿತ್ರಸಾಧನೆಯು ಕ್ರಮಕ್ರಮವಾಗಿ ಮೇಲ್ಮೇಲೆ ಹೆಚ್ಚುತ್ತಾ ಹೋಗುವುದು. ಮೊದಲನೆಯ ನೆಲೆಯ ನಿಯಮಗಳನ್ನು ಎರಡನೇ ನೆಲೆಯವನು ಆಚರಿಸುತ್ತಾನೆ. ಮೊದಲನೇ ಮತ್ತು ಎರಡನೇ ನೆಲೆಯ ನಿಯಮಗಳನ್ನು ಮೂರನೇ ನೆಲೆಯವನು ಆಚರಿಸುತ್ತಾನೆ. ಹೀಗೆ ಮುಂದೆಮುಂದೆಯೂ ಇರುತ್ತದೆ.

ಅವುಗಳ ವರ್ಣನೆಯು ಈ ಪ್ರಕಾರವಿರುತ್ತದೆ:

೧ ದರ್ಶನಪ್ರತಿಮಾ: ಸಮ್ಯಗ್ದರ್ಶನವು ಶಂಕೆ, ಕಾಂಕ್ಷೆ, ವಿಚಿಕಿತ್ಸೆ (ಜುಗುಪ್ಸೆ). ಮೂಢತನ, ಅನುಪಗೂಹನ, ಅಸ್ಥಿತೀಕರಣ, ಅವಾತ್ಸಲ್ಯ

ಮತ್ತು ಅಪ್ರಭಾವನಾ ಎಂಬ ಎಂಟು ದೋಷಗಳಿಂದಲೂ, ಜ್ಞಾನ, ಪೂಜಾ, ಕುಲ, ಜಾತಿ, ಬಲ, ಐಶ್ವರ್ಯ, ತಪ, ರೂಪ (ಶರೀರ) ಎಂಬ ಎಂಟು ಮದ ಗಳಿಂದಲೂ, ಲೋಕ, ದೇವ, ಗುರು ಎಂಬ ಮೂರು ಮೂಢಗಳಿಂದಲೂ, ಕುದೇವ, ಕುಗುರು, ಕುಶಾಸ್ತ್ರ ಮತ್ತು ಕುದೇವ ಪೂಜಕ, ಕುಗುರು ಸೇವೀ, ಕುಶಾಸ್ತ್ರ ಪ್ರಚಾರ ಈ ಆರು ಅನಾಯತನಗಳಿಂದಲೂ ಒಟ್ಟು (8+8+3+6=) 25 ದೋಷಗಳಿಂದ ರಹಿತವಾಗಿದೆ. ಸಮ್ಯಗ್ದೃಷ್ಟಿಯು ನಿಃಶಂಕಾದಿ ಎಂಟು ಅಂಗಗಳಿಂದ್ಯುಕ್ತನಾಗಿ ಅಹಿಂಸಾ, ಸತ್ಯ, ಅಚೌರ್ಯ, ಬ್ರಹ್ಮಚರ್ಯ, ಪರಿ ಗ್ರಹ ತ್ಯಾಗ ಎಂಬ ಐದು ಅಣುವ್ರತಗಳನ್ನು ಏಕದೇಶದಿಂದ ಪಾಲಿಸುವವನಾಗಿ ದೇವಪೂಜೆ, ಗುರುಭಕ್ತಿ, ಸ್ವಾಧ್ಯಾಯ, ಸಂಯಮ, ತಪ, ದಾನಗಳೆಂಬ ಆರು ಕ್ರಿಯೆಗಳನ್ನೂ ಪ್ರತಿನಿತ್ಯವೂ ಪಾಲಿಸುತ್ತಿರಬೇಕು.

೨ **ವ್ರತಪ್ರತಿಮಾ:** ಅಹಿಂಸಾದಿ ಐದು ಅಣುವ್ರತಗಳನ್ನು ನಿರ್ದೋಷ ವಾಗಿ ಪರಿಪಾಲಿಸುತ್ತಾ, ದಿಗ್ವ್ರತ, ದೇಶವ್ರತ, ಅನರ್ಥದಂಡತ್ಯಾಗಗಳೆಂಬ ಮೂರು ಗುಣವ್ರತವನ್ನು ಮತ್ತು ಸಾಮಾಯಿಕ, ಪ್ರೋಷಧೋಪವಾಸ ಭೋಗೋಪಭೋಗಪರಿಮಾಣ, ಅತಿಥಿಸಂವಿಭಾಗಗಳೆಂಬ ನಾಲ್ಕು ಶಿಕ್ಷಾ ವ್ರತಗಳನ್ನೂ ಪಾಲಿಸಲು ಅಭ್ಯಾಸಿಸಬೇಕು.

೩ **ಸಾಮಾಯಿಕಾಪ್ರತಿಮಾ:** ಪ್ರಾತಃಕಾಲ, ಮಧ್ಯಾಹ್ನ, ಸಾಯಂಕಾಲ ಗಳೆಂಬ ಸಂಧ್ಯಾಕಾಲಗಳಲ್ಲಿ ಸಮತಾಭಾವದಿಂದಲೂ, ಶಾಂತಭಾವದಿಂದಲೂ, ಸ್ವಾನುಭವದ ಅಭ್ಯಾಸವನ್ನು ಮಾಡುತ್ತಾಮಾಡುತ್ತಾ ರಾಗದ್ವೇಷಗಳನ್ನು ಬಿಡಬೇಕು.

೪ **ಪ್ರೋಷಧಪ್ರತಿಮಾ:** ಪ್ರತಿಯೊಂದು ತಿಂಗಳಲ್ಲಿ ನಾಲ್ಕು ದಿವಸ ಅಂದರೆ ಎರಡು ಅಷ್ಟಮಿ, ಎರಡು ಚತುರ್ದಶೀ ದಿವಸಗಳಲ್ಲಿ ಉಪವಾಸವನ್ನು ಮಾಡಬೇಕು.

[illegible] **ಸಚಿತ್ತತ್ಯಾಗಪ್ರತಿಮಾ:** ಜೀವಸಹಿತವಾದ ಸಚಿತ್ತ ಆಹಾರಪಾನಾದಿ ಗಳನ್ನು ಸೇವಿಸಬಾರದು.

೬ **ರಾತ್ರಿಭೋಜನತ್ಯಾಗಪ್ರತಿಮಾ:** ರಾತ್ರಿಯಲ್ಲಿ ಅನ್ನ, ಪಾನ, ಖಾದ್ಯ ಮತ್ತು ಲೇಹ್ಯಗಳೆಂಬ ಚತುರ್ವಿಧಾಹಾರವನ್ನು ತಾನು ಸೇವಿಸದೆಯೂ, ಇನ್ನೊಬ್ಬರಿಂದ ಸೇವಿಸುವಂತೆ ಮಾಡದೆಯೂ ಇರಬೇಕು.

೭ ಬ್ರಹ್ಮಚರ್ಯಪ್ರತಿಮಾ: ಮನ, ವಚನ, ಕಾಯಗಳಿಂದ ಬ್ರಹ್ಮಚರ್ಯವನ್ನು ಪಾಲಿಸಬೇಕು. ಅಷ್ಟೇ ಅಲ್ಲ ಸ್ವಸ್ತ್ರೀಯಲ್ಲಿಯೂ ವಿರಕ್ತನಾಗಬೇಕು.

೮ ಆರಂಭತ್ಯಾಗಪ್ರತಿಮಾ: ಹೊಲಗದ್ದೆ ಮೊದಲಾದ ವ್ಯಾಪಾರಾದಿ ಆರಂಭಗಳನ್ನು ಮಾಡದೆ ಇರಬೇಕು. ಅರ್ಥಾತ್ ಆರಂಭ ಹಿಂಸೆಯನ್ನು ಬಿಡಬೇಕೆಂದು ಭಾವವು.

೯ ಪರಿಗ್ರಹಪ್ರತಿಮಾಧಾರಿ: ಭೂಮಿ, ಮನೆ, ಧನ, ಧಾನ್ಯ ಮೊದಲಾದ ಬಾಹ್ಯ ಪರಿಗ್ರಹಗಳನ್ನು ತ್ಯಜಿಸಿ, ಅಲ್ಪವಸ್ತ್ರಾದಿಗಳನ್ನು ಇಟ್ಟುಕೊಂಡು ಏಕಾಂತದಲ್ಲಿ ವಾಸಿಸುತ್ತಾ, ಶ್ರಾವಕರು ಬರಹೇಳಿದಲ್ಲಿ ಹೋಗಿ ಭೋಜನವನ್ನು ಮಾಡಬೇಕು. ಸ್ವಯಂ ಆಹಾರಾದಿಗಳನ್ನು ಮಾಡಿಕೊಳ್ಳಬಾರದು.

೧೦ ಅನುಮತಿ ತ್ಯಾಗ ಪ್ರತಿಮಾ: ಲೌಕಿಕ ಕೆಲಸಕಾರ್ಯಗಳಲ್ಲಿ ಅನುಮತಿಯನ್ನೀಯದೆ, ಭೋಜನ ಸಮಯದಲ್ಲಿ ಬರಹೇಳಿದಲ್ಲಿ ಹೋಗಬೇಕು.

೧೧ ಉದ್ದಿಷ್ಟತ್ಯಾಗಪ್ರತಿಮಾ: ತನಗಾಗಿ ಸಿದ್ಧಪಡಿಸಿದ ಆಹಾರಪದಾರ್ಥಗಳನ್ನು ಸ್ವೀಕರಿಸದೆ, ಭಿಕ್ಷಾವೃತ್ತಿಯಿಂದ ಆಹಾರವನ್ನು ಸೇವಿಸಬೇಕು. ಕ್ಷುಲ್ಲಕನಾಗಿ ಒಂದು ಕೌಪೀನ, ಒಂದು ಖಂಡವಸ್ತ್ರ, ಪಿಂಛಿ ಮತ್ತು ಕಮಂಡಲುಗಳನ್ನಿಟ್ಟುಕೊಳ್ಳಬೇಕು. ಐಲಕನಾಗಿ ಕೇವಲ ಒಂದು ಕೌಪೀನ, ಪಿಂಛಿ ಮತ್ತು ಕಮಂಡಲುಗಳನ್ನಿಟ್ಟುಕೊಳ್ಳಬೇಕು.

ಮತ್ತೆ ವಸ್ತ್ರರಹಿತನಾದ ಸಾಧುವಾಗಬೇಕು. ಅಹಿಂಸಾದಿ ಐದು ಮಹಾವ್ರತಗಳನ್ನು ಪೂರ್ಣರೀತ್ಯಾ ಪಾಲಿಸುವಿಕೆಯು, ೧) **ಈರ್ಯಾಸಮಿತಿ:** ನೋಡಿಕೊಂಡು ಗಮನಮಾಡುವಿಕೆಯು. ೨) **ಭಾಷಾಸಮಿತಿ:** ಶುದ್ಧವಚನಗಳನ್ನಾಡುವಿಕೆಯು. ೩) **ಏಷಣಾಸಮಿತಿ:** (ರಸತ್ಯಾಗ) ಶುದ್ಧಾಹಾರವನ್ನು ಸೇವಿಸುವಿಕೆಯು. ೪) **ಆದಾನ ನಿಕ್ಷೇಪಣಸಮಿತಿ:** ನೋಡಿ ಪರಿಶೋಧಿಸಿ ಪದಾರ್ಥಗಳನ್ನಿಡುವಿಕೆಯು ಮತ್ತು ತೆಗೆದುಕೊಳ್ಳುವಿಕೆಯು. ೫) **ವ್ಯುತ್ಸರ್ಗಸಮಿತಿ:** ಜೀವಜಂತುಗಳಿಲ್ಲದ ಸ್ಥಳದಲ್ಲಿ ಮಲಮೂತ್ರಗಳನ್ನು ವಿಸರ್ಜಿಸುವಿಕೆಯು ಮತ್ತು ಮನ, ವಚನ, ಕಾಯಗಳೆಂಬ ಮೂರು ಗುಪ್ತಿಗಳನ್ನು ಪರಿಪಾಲಿಸುವಿಕೆಯು, ಒಟ್ಟು $5+5+3=13$ ಸಾಧುಗಳ ವ್ಯವಹಾರ

ಚಾರಿತ್ರಗಳಾಗಿವೆ. ಹೀಗೆ ಶ್ರಾವಕರ ಮತ್ತು ಮುನಿಗಳ ವ್ಯವಹಾರಚಾರಿತ್ರಗಳನ್ನು ಪಾಲಿಸುತ್ತಾ, ಸಾಧಕನು ಸ್ವಾನುಭವದ ಅಭ್ಯಾಸಿಯಾಗುತ್ತಾ, ಕ್ರಮಕ್ರಮವಾಗಿ ಆತ್ಮಾನಂದವನ್ನು ಪಡೆದು, ಮೋಕ್ಷಮಾರ್ಗದತ್ತ ಹೋಗುವನು. ಯಾರು ಆತ್ಮನಲ್ಲಿಯೇ ವಾಸಿಸುವರೋ ಅವರೇ ಸಿದ್ಧಿಸುಖವನ್ನು ಪಡೆಯುವರು.

ಪುರುಷಾರ್ಥಸಿದ್ಧ್ಯುಪಾಯದಲ್ಲಿ ಹೇಳಿರುತ್ತಾರೆ:

**ಚಾರಿತ್ರಂ ಭವತಿ ಯತಃ ಸಮಸ್ತಸಾವದ್ಯಯೋಗಪರಿಹರಣಾತ್ ।**
**ಸಕಲಕಷಾಯವಿಮುಕ್ತಂ ವಿಶದಮುದಾಸೀನಮಾತ್ಮರೂಪಂ ತತ್ ॥ ೩೯ ॥**

**ಹಿಂಸಾತೋಽನೃತವಚನಾತ್ಸ್ತೇಯಾದಬ್ರಹ್ಮತಃ ಪರಿಗ್ರಹತಃ ।**
**ಕಾರ್ತ್ಸ್ನ್ಯೈಕದೇಶವಿರತೇಶ್ಚಾರಿತ್ರಂ ಜಾಯತೇ ದ್ವಿವಿಧಂ ॥ ೪೦ ॥**

**ಭಾವಾರ್ಥ:** ಸರ್ವಪಾಪಬಂಧಕ್ಕೆ ಕಾರಣಗಳಾದ ಮನ, ವಚನ, ಕಾಯಗಳ ಪ್ರವೃತ್ತಿಯನ್ನು ತ್ಯಜಿಸುವುದಕ್ಕೆ ವ್ಯವಹಾರಚಾರಿತ್ರವೆಂದೂ, ಸಕಲಕಷಾಯಗಳ ಕಲಂಕಗಳಿಂದ ರಹಿತವೂ, ನಿರ್ಮಲವೂ, ಉದಾಸೀನವೂ ಆದ ಆತ್ಮಾನುಭವಕ್ಕೆ ನಿಶ್ಚಯಚಾರಿತ್ರವೆಂದೂ ತಿಳಿಯಬೇಕು. ಹಿಂಸೆ, ಸುಳ್ಳು, ಕಳ್ಳತನ, ಕುಶೀಲ ಮತ್ತು ಪರಿಗ್ರಹಗಳೆಂಬ ಪಂಚಪಾಪಗಳಿಂದ ಪೂರ್ಣ ವಿರಕ್ತರಾಗುವವರೇ ನಿಜವಾದ ಸಾಧುಗಳು. ಏಕದೇಶವಿರಕ್ತರಾಗುವವರೇ ಶ್ರಾವಕರು.



## ಆತ್ಮಜ್ಞಾನಿಗಳು ಬಹು ವಿರಳ

**ವಿರಲಾ ಜಾಣಹಿಂ ತತ್ತು ಬುಹ ವಿರಲಾ ಣಿಸುಣಹಿಂ ತತ್ತು ।**
**ವಿರಲಾ ಝಾಯಹಿಂ ತತ್ತು ಜಿಯ ವಿರಲಾ ಧಾರಹಿಂ ತತ್ತು ॥ ೬೬ ॥**

**ಅನ್ವಯಾರ್ಥ:** ವಿರಲಾ ಬುಹ ತತ್ತು ಜಾಣಹಿಂ–ಆತ್ಮತತ್ವವನ್ನು ತಿಳಿಯುವ ಪಂಡಿತರು ಬಹಳ ಅಪರೂಪ. ವಿರಲಾ ತತ್ತು ಣಿಸುಣಹಿಂ–ತಾತ್ವಿಕ ವಿಚಾರಗಳನ್ನು ಕೇಳುವವರು ಇನ್ನೂ ಅಪರೂಪ. ವಿರಲಾ ಜಿಯ

ತತ್ತು ಝಾಯಹಿಂ–ಜೀವತತ್ವವನ್ನು ಧ್ಯಾನಿಸುವವರು ಮತ್ತೂ ವಿರಳ. ತತ್ತು ಧಾರಹಿ–ತತ್ವಗಳನ್ನು ಧಾರಣೆಮಾಡುವವರು ಅತಿ ವಿರಳ (ಕಡಿಮೆ).

**ಭಾವಾರ್ಥ :** ಆತ್ಮಜ್ಞಾನ ಪ್ರಾಪ್ತಿಯಾಗುವುದು ಅತ್ಯಂತ ಕಠಿಣವಾಗಿರುತ್ತದೆ. ಈ ಅನುಪಮವಾದ ತತ್ವಗಳನ್ನು ಪಡೆಯುವವರು ಬಹು ಕಡಿಮೆ ಇರುವರು. ಮನೋರಹಿತ ಪಂಚೇಂದ್ರಿಯವರೆಗಿರುವ ಜೀವಗಳಿಗೆ ವಿಚಾರ ಶಕ್ತಿಯು ಇಲ್ಲದಿರುವುದರಿಂದ, ಜೀವಜೀವಾಗಳ ಭೇದವನ್ನು ಹೇಗೆತಾನೇ ತಿಳಿದಾವು? ಸಂಜ್ಞೀ (ಮನಸ್ಸುಳ್ಳ) ಪಂಚೇಂದ್ರಿಯಜೀವಗಳಲ್ಲಿ ನಾರಕಿಯರು ಹಗಲಿರುಳು ಕಷಾಯಗಳ ಕಾರ್ಯದಲ್ಲಿ ಮಗ್ನರಾಗಿರುವಾಗ, ಆತ್ಮಜ್ಞಾನದ ಪ್ರಾಪ್ತಿಯು ಹೇಗಾದೀತು? ತಿರ್ಯಂಚಪ್ರಾಣಿಗಳಾದ ಪಶುಗಳಿಗೂ ಕೂಡ ಆತ್ಮಜ್ಞಾನವು ಲಭಿಸುವುದು ಕಷ್ಟವೇ? ವಿಷಯಭೋಗಗಳಲ್ಲಿ ತೀವ್ರವಾದ ಅಭಿಲಾಷೆಯುಳ್ಳ ದೇವತೆಗಳಿಗೂ ವೈರಾಗ್ಯಭಾವನೆಯುಂಟಾಗುವುದು ಅತಿ ದುರ್ಲಭವೇ ಆಗಿರುತ್ತದೆ. ಆದರೂ ಕೆಲವು ಜೀವಗಳಿಗೆ ಮಾತ್ರ ಆತ್ಮಜ್ಞಾನವುಂಟಾಗುತ್ತದೆ ಮತ್ತು ಮನುಷ್ಯರಿಗೆ ಸುಲಭವಾಗಿದ್ದರೂ ಕೂಡ ತತ್ವಜ್ಞಾನಿಗಳು ಬಹಳ ದುರ್ಲಭವೆಂದೇ ಹೇಳಬೇಕು.

ರಾತ್ರಿ-ಹಗಲು ಶಾರೀರಕ ಕ್ರಿಯೆಗಳಲ್ಲಿ ಮಗ್ನರಾದ ಮಾನವರಿಗೆ ಆತ್ಮೀಕ ವಿಷಯಗಳನ್ನು ಕೇಳಿ ತಿಳಿದುಕೊಳ್ಳುವ ಸಮಯ (ಸನ್ನಿವೇಷ) ವು ದೊರಕುವುದೇ ಇಲ್ಲವು. ಅವರಲ್ಲಿ ಕೆಲವು ಜನರು ವ್ಯವಹಾರಕಾರ್ಯಗಳಲ್ಲಿ ತನ್ಮಯರಾಗಿದ್ದರೂ ಕೂಡ ಧರ್ಮಗ್ರಂಥಗಳನ್ನು ಓದಿಯೋ, ಕೇಳಿಯೋ ಘನ ವಿದ್ವಾಂಸರಾಗುತ್ತಾರೆ. ವ್ಯಾಕರಣ, ಕಾವ್ಯ, ಪುರಾಣ, ವೈದ್ಯ, ಜ್ಯೋತಿಷ್ಯ ಮತ್ತು ಪುಣ್ಯ-ಪಾಪಬಂಧಗಳ ವಿಷಯವಾಗಿ ಬಹುಮುಖಿಯಾದ ಚರ್ಚೆ ಮಾಡುತ್ತಾರೆ. ಆದರೆ ಅವರು ಆಧ್ಯಾತ್ಮಗ್ರಂಥಗಳನ್ನು ಸೂಕ್ಷ್ಮವಾಗಿ ಲಕ್ಷ್ಯವಿಡುವುದಿಲ್ಲವು ಮತ್ತು ವಿಚಾರಿಸುವುದೂ ಇಲ್ಲವು.

ನಿಶ್ಚಯನಯದಿಂದ ತನ್ನಾತ್ಮನೇ ತನಗೆ ಆರಾಧ್ಯದೇವನೆಂದು ವಿಶ್ವಾಸವನ್ನಿಡದ ಅನೇಕ ಪಂಡಿತವರ್ಗವು ತಮ್ಮ ವಿದ್ಯಾಮದದಿಂದ ಮದೋನ್ಮತ್ತರಾಗಿ, ಕ್ರಿಯಾಕಾಂಡದ ಪೋಷಕರಾಗಿ, ಜೀವನವನ್ನು ಕಳೆಯುತ್ತಾರೆ. ಅಂತಹವರ ಮಿಥ್ಯಾತ್ವವು ಮತ್ತು ಅನಂತಾನುಬಂಧೀ ಕಷಾಯಗಳು ಮಂದ

ವಾಗಿ, ಕ್ರಮೇಣ ತತ್ವಗಳಲ್ಲಿ ಅಭಿರುಚಿಯುಂಟಾಗುವುದು. ಅಧ್ಯಾತ್ಮ ಜ್ಞಾನವುಳ್ಳ ವಿದ್ವಾಂಸರು ಬಹಳ ವಿರಳವೇ. ಅಂತಹ ಅಧ್ಯಾತ್ಮ ಉಪದೇಶಕರು ಸಿಗುವವರೆಗೆ, ಶ್ರೋತೃಗಳಿಗೆ ಆತ್ಮಾನುಭವವು (ಜ್ಞಾನವು) ಲಭಿಸುವುದು ಅಸಂಭವವಾಗಿರುತ್ತದೆ.

ಒಂದು ವೇಳೆ ಎಲ್ಲಿಯಾದರೂ ಆತ್ಮಜ್ಞಾನಿಗಳಾದ ಪಂಡಿತರಿದ್ದರೂ ಕೂಡ, ಆತ್ಮರುಚಿಯುಳ್ಳ ಶ್ರೋತೃಗಳು ಸಿಗುವುದು ಕಷ್ಟ. ಯಾರು ಸಾಂಸಾರಿಕ ಮೋಹಜಾಲದಿಂದ ಉದಾಸೀನರಾಗಿರುವರೋ ಅವರು ಮಾತ್ರ ಆತ್ಮೀಕ ವಿಷಯುಗಳನ್ನು ಧ್ಯಾನವಿಟ್ಟು ಕೇಳುತ್ತಾರೆ, ಧರಿಸುತ್ತಾರೆ ಮತ್ತು ಚಿಂತಿಸುತ್ತಾರೆ. ಅವರ ಅಂತರಂಗದಲ್ಲಿಯೇ ಗಾಢವಾದ ರುಚಿಯುಂಟಾಗುವುದು. ಅಂತಹ ಅಧ್ಯಾತ್ಮಿಗಳಲ್ಲಿಯೂ ನಿರ್ವಿಕಲ್ಪ ಸಮಾಧಿಯನ್ನು ಪ್ರಾಪ್ತಮಾಡಿಕೊಳ್ಳುವ ಅನುಭವಿಗಳು ಅತ್ಯಂತ ದುರ್ಲಭರು.

ಆತ್ಮಜ್ಞಾನವು ಅಮೂಲ್ಯ ಪದಾರ್ಥವಾಗಿರುತ್ತದೆ. ಮಾನವಜನ್ಮವನ್ನು ಪಡೆದು ಇದರ ಲಾಭವನ್ನು ಮಾಡಿಕೊಳ್ಳುವವನೇ ನಿರ್ವಾಣಮಾರ್ಗದಲ್ಲಿ ಹೋಗುತ್ತಾನೆ. ಇದೇ ಸಮ್ಯಗ್ದರ್ಶನವಾಗಿರುತ್ತದೆ. ಯಾವಾಗ ಈ ಪ್ರಕಾರದ ಸೂಕ್ಷ್ಮ ವಿಚಾರಮಾಡುವ ಶಕ್ತಿಯು ಪ್ರಾಪ್ತವಾದೊಡನೆ ಪ್ರಮಾದಗಳನ್ನು ಹೊಡೆದೋಡಿಸಿ, ಮೊದಲು ವ್ಯವಹಾರನಯದಿಂದ ಜೀವಾಜೀವಗಳ ವರ್ಣನೆಗೈಯ್ಯುವ ಗ್ರಂಥಗಳನ್ನು ಓದಿ, ಬಂಧ, ಮೋಕ್ಷಗಳ ವ್ಯವಹಾರಸಾಧನಗಳನ್ನರಿತು, ಮತ್ತೆ ನಿಶ್ಚಯನಯವನ್ನು ಪ್ರತಿಪಾದಿಸುವ ಶಾಸ್ತ್ರಗಳನ್ನು ಓದಿ, ಮನನಮಾಡಿಕೊಂಡು, ತನ್ನಾತ್ಮನನ್ನು ದ್ರವ್ಯರೂಪವಾಗಿ ಪರಿಶುದ್ಧವೆಂದು ಭಾವಿಸುತ್ತಾ, ನೀರಿನಿಂದ ಕೆಸರು ಭಿನ್ನವಾಗಿರುವಂತೆ ನನ್ನಾತ್ಮನು ಎಂಟು ಕರ್ಮಗಳು, ರಾಗಾದಿಭಾವಕರ್ಮಗಳು ಮತ್ತು ನೋಕರ್ಮಗಳು ಇವುಗಳಿಂದ ಭಿನ್ನನಾಗಿರುವನೆಂದು ಭೇದವಿಜ್ಞಾನದಿಂದ ತಿಳಿಯುತ್ತಾನೆ.

ಹೀಗೆ ಅಭ್ಯಾಸದ ಬಲದಿಂದ ಸಮ್ಯಗ್ದರ್ಶನವು ಪ್ರಕಾಶಿಸುತ್ತಿರಲು, ಅನಾದಿಕಾಲದ ಅಜ್ಞಾನ ಅಂಧಕಾರವು ದೂರವಾಗುವುದು; ಜನ್ಮವು ಸಾರ್ಥಕವಾಗುವುದು; ನಿರ್ವಾಣಮಾರ್ಗವು ಹಸ್ತಗತವಾಗುವುದು. ಇನ್ನೇನು ಬೇಕು? ಈ ಆತ್ಮಜ್ಞಾನವು ಜನ್ಮಾಂತರದ ಸಂಕಷ್ಟಗಳನ್ನೂ ನಾಶಮಾಡು

ವುದಾಗಿದೆ. ಒಂದುವೇಳೆ ಇದು ದುರ್ಲಭವಾದರೂ ಕೂಡ ಇದರ ಸಲುವಾಗಿ ಪುರುಷಾರ್ಥಮಾಡಿಕೊಂಡು ಇದರ ಲಾಭ ಪಯುಡೆಬೇಕು. ಇದೇ ಮಾನವ ಜನ್ಮದ ಸಾರ್ಥಕತೆಯಾಗಿರುವುದು.

ಸಮಯಸಾರದಲ್ಲಿ ಹೇಳಿರುತ್ತಾರೆ :

**ಸುದ ಪರಿಚಿದಾಣುಭೂದಾ, ಸವ್ವಸ್ಸ ವಿ ಕಾಮಭೋಯಬಂಧಕಹಾ।**
**ಏಯತ್ತಸ್ಸುವಲಂಭೋ, ಣವರಿ ಣ ಸುಲಭೋ ವಿಭತ್ತಸ್ಸ ॥೪॥**

**ಭಾವಾರ್ಥ :** ಸಕಲ ಸಂಸಾರಿಜೀವಗಳು ಕಾಮಭೋಗ ಸಂಬಂಧವಾದ ಕಥೆಗಳನ್ನು ಅನೇಕಾವರ್ತಿ ಕೇಳಿರುವುದರಿಂದಲೂ, ಅನೇಕಬಾರಿ ಕಾಮಭೋಗಸುಖವನ್ನು ಅನುಭವಿಸಿರುವುದರಿಂದಲೂ ಮುಂದೆ ಅನುಭವಿಸುವುದರಿಂದಲೂ ಆ ವಿಷಯವು ಬಹಳ ಸುಲಭವೂ, ಸರಳವೂ ಆಗಿರುತ್ತದೆ. ಆದರೆ ಪರಭಾವರಹಿತವಾದ ತನ್ನ ಸ್ವರೂಪದಲ್ಲಿ ತನ್ಮಯನಾಗುವ ಶುದ್ಧಾತ್ಮ ವಿಷಯವು ಮಾತ್ರ ಸಿಗುವುದು ಅತ್ಯಂತ ದುರ್ಲಭವಾಗಿರುತ್ತದೆ. ಇದನ್ನು ಪ್ರಾಪ್ತ ಮಾಡಿಕೊಳ್ಳುವುದು ಮಹಾಕಠಿಣವಾಗಿದೆ.

ಸಾರಸಮುಚ್ಚಯದಲ್ಲಿ ಹೇಳಿರುತ್ತಾರೆ :

**ಜ್ಞಾನಂ ನಾಮ ಮಹಾರತ್ನಂ ಯನ್ನ ಪ್ರಾಪ್ತಂ ಕದಾಚನ।**
**ಸಂಸಾರೇ ಭ್ರಮತಾ ಭೀಮೇ ನಾನಾದುಃಖವಿಧಾಯಿನಿ ॥೧೩॥**
**ಅಧುನಾ ತತ್ತ್ವಯಾ ಪ್ರಾಪ್ತಂ ಸಮ್ಯಗ್ದರ್ಶನಸಂಯುತಂ।**
**ಪ್ರಮಾದಂ ಮಾ ಪುನಃ ಕಾರ್ಷೀರ್ವಿಷಯಾಸ್ವಾದಲಾಲಸಃ ॥೧೪॥**

**ಭಾವಾರ್ಥ :** ಈ ಜೀವನು ನಾನಾಪ್ರಕಾರ ಭಯಾನಕ ದುಃಖ ಪರಂಪರೆಯಿಂದ ಭರಿತವಾದ ಸಂಸಾರದಲ್ಲಿ ದುಃಖಿಸುತ್ತಾ, ಆತ್ಮಜ್ಞಾನರೂಪ ಶ್ರೇಷ್ಠರತ್ನವನ್ನು ಎಲ್ಲಿಯೂ ಪಡೆಯಲಿಲ್ಲವು. ಈಗಲಾದರೂ ನೀನು ಉತ್ತಮ ಸಮ್ಯಗ್ದರ್ಶನವನ್ನು ಪಡೆದಿರುವೆ. ಆದ್ದರಿಂದ ಪ್ರಮಾದವನ್ನೆಸಗದೆ, ವಿಷಯವಾಸನೆಯಲ್ಲಿ ಮಗ್ನನಾಗದೆ, ಇಂತಹ ಸುಸಮಯವನ್ನು ಕಳೆದುಕೊಳ್ಳಬೇಡ. ಬುದ್ಧಿವಂತಿಕೆಯಿಂದ ವರ್ತಿಸಿ ಸುಖಿಯಾಗು.

# ಕುಟುಂಬ ಮೋಹವು ತ್ಯಾಜ್ಯವಾಗಿದೆ

**ಇಹು ಪರಿಯಣ ಣ ಹು ಮುಹುತಣಉ ಇಹು ಸುಹು-ದುಕ್ಖಹಂ ಹೇಉ**
**ಇಮು ಚಿಂತಂತಹಂ ಕಿಂ ಕರಇ ಲಹು ಸಂಸಾರಹಂ ಛೇಉ ||೬೭||**

**ಅನ್ವಯಾರ್ಥ :** ಇಹು ಪರಿಯಣ ಮುಹುತಣಉ ಣಹು-ಈ ಪರಿವಾರ (ಕುಟುಂಬ) ದವರು ನಿಶ್ಚಯವಾಗಿ ನನ್ನವರಲ್ಲವು. ಇಹು ಸುಹು ದುಕ್ಖಹಂ ಹೇಉ-ಈ ಭಾವವು ಸುಖದುಃಖಾದಿಗಳಿಗೆ ಕಾರಣವಾಗಿರುತ್ತದೆ. ಇಮು ಕಿಂ ಚಿಂತಂತಹಂ-ಈ ಪ್ರಕಾರವಾದ ಚಿಂತನೆಗೈಯುವುದರಿಂದಲೇ, ಸಂಸಾರಹಂ ಛೇಉ ಲಹು ಕರಇ-ಸಂಸಾರಬಂಧನವನ್ನು ಶೀಘ್ರವೇ ನಾಶ ಮಾಡಲು ಸಾಧ್ಯವಾಗುತ್ತದೆ.

**ಭಾವಾರ್ಥ :** ಈ ಸಂಸಾರೀಪ್ರಾಣಿಗಳು ಸುಖದ ಲೋಲುಪಿಗಳಾಗಿ, ತನ್ನ ಸುಖದ ಪ್ರಾಪ್ತಿಗಾಗಿ ಸಹಕಾರವುಳ್ಳ ಪ್ರಾಣಿಗಳೊಡನೆ ಮೋಹವನ್ನಿಟ್ಟು ಕೊಳ್ಳುತ್ತಾನೆ. ಬಾಲ್ಯಕಾಲದಲ್ಲಿ ಮಾತಾಪಿತೃಗಳ ಮೂಲಕ ಪಾಲನೆ, ಪೋಷಣೆಯಲ್ಲಿ ಪ್ರೇಮವನ್ನಿಟ್ಟುಕೊಳ್ಳುತ್ತಾನೆ. ಯೌವನ ಅವಸ್ಥೆಯಲ್ಲಿ ಸ್ತ್ರೀ, ಪುತ್ರ, ಪುತ್ರಿಯರೊಡಗೂಡಿ, ಇಂದ್ರಿಯ ಸುಖದಲ್ಲಿ ಮರುಳನಾಗಿ ಮೋಹಿಯಾಗುತ್ತಾನೆ; ನೌಕರಚಾಕರರಿಂದ ತನಗೆ ಇಂದ್ರಿಯ ಸುಖಭೋಗಗಳಲ್ಲಿ ಸಹಾಯಸಿಕ್ಕಿದಾಗ, ಅವರೊಡನೆ ಮೋಹವನ್ನಿಟ್ಟುಕೊಳ್ಳುತ್ತಾನೆ. ಯಾರಿಂದಾಗಲಿ ಅಥವಾ ಯಾವವಸ್ತುಗಳಿಂದಾಗಲಿ ತನ್ನ ಇಂದ್ರಿಯಸುಖಗಳಿಗೆ ಬಾಧೆಯುಂಟಾಗುವುದೋ ಆಗ ಅದರೊಡನೆ ಅಥವಾ ಅವುಗಳೊಡನೆ ಶತ್ರುತ್ವ ಭಾವವನ್ನು ತೋರಿಸುತ್ತಾನೆ.

ಹೀಗೆ ಬಂಧುಬಾಂಧವರ ಮೋಹಜಾಲದಲ್ಲಿ ಸಿಲುಕುತ್ತಾನೆ. ತನ್ನ ಆತ್ಮನ ಸ್ವರೂಪವಿಚಾರಕ್ಕಾಗಿ ಸಮಯವೇ ಸಿಕ್ಕುವುದಿಲ್ಲವು. ರಾತ್ರಿ ಹಗಲು ಕುಟುಂಬದವರಿಗಾಗಿ ಹಣಸಂಪಾದನೆ ಮತ್ತು ಅದರ ರಕ್ಷಣೆಯಲ್ಲಿ ಮಗ್ನನಾಗುತ್ತಾನೆ. ಯಾರಾದರೂ ಕುಟುಂಬಿಗಳ ಆಯುಷ್ಯ ತೀರಿ ಮರಣಹೊಂದಿದರೆ ಗೋಳಾಡುತ್ತಾನೆ. ಸಂಸಾರದಲ್ಲಿ ಕುಟುಂಬವರ್ಗದ ಸಂಬಂಧವು ಸಾಯಂ

ಕಾಲವಾದೊಡನೆ ಮರಗಳಲ್ಲಿ ಅನೇಕ ಪಕ್ಷಿಗಳು ಅನೇಕ ಕಡೆಗಳಿಂದ ಬಂದು ಸೇರಿ, ಬೆಳಗಾದೊಡನೆ ಅವು ಬೇರೆಬೇರೆಯಾಗಿ ತಮ್ಮತಮ್ಮ ಹೊಟ್ಟೆಪಾಡಿಗೆ ಹೋಗುವಂತೆಯೇ, ಪರಿವಾರದಲ್ಲಿ ಕೆಲವರು ನರಕದಿಂದಲೂ, ಕೆಲವರು ತಿರ್ಯಂಚ ಗತಿಯಿಂದಲೂ, ಇನ್ನೂ ಕೆಲವರು ಮನುಷ್ಯಗತಿಯಿಂದಲೂ ಮತ್ತೂ ಕೆಲವರು ದೇವಗತಿಯಿಂದಲೂ ನಾನಾ ಜೀವಿಗಳು ಬಂದು ಸೇರಿ ನಂತರ ಬಿಟ್ಟುಹೋಗುತ್ತಾರೆ.

ಅವರೆಲ್ಲರೂ ತಮ್ಮ ತಮ್ಮ ಆಯುಷ್ಯವಿರುವವರೆಗಿದ್ದು ಆಯುಷ್ಯವು ತೀರಿದೊಡನೆ, ಪುಣ್ಯಪಾಪಗಳ ಫಲಗನುಗುಣವಾಗಿ ಕೆಲವರು ದೇವಗತಿಗೂ, ಇನ್ನೂ ಕೆಲವರು ಮನುಷ್ಯಗತಿಗೂ, ಇನ್ನೂ ಕೆಲವರು ತಿರ್ಯಂಚಗತಿಗೂ, ಮತ್ತೆ ಕೆಲವರು ನರಕಗತಿಗೂ ಹೋಗುತ್ತಾರೆ. ಯಾರು ಯಾರಿಗೂ ಸಂಬಂಧವಿಲ್ಲವು. ಎಲ್ಲಾ ಪ್ರಾಣಿಗಳು ತಮ್ಮ ಸುಖದ ಸ್ವಾರ್ಥತೆಗಾಗಿಯೇ ಪರರಲ್ಲಿ ಸ್ನೇಹಮಾಡುತ್ತಾರೆ. ಸ್ವಾರ್ಥಸಿದ್ಧಿಯಾಗದಿದ್ದರೆ ಸ್ನೇಹವನ್ನು ತ್ಯಜಿಸಿ ದ್ವೇಷವನ್ನು ಮಾಡುತ್ತಾರೆ. ಪುತ್ರರೂ ತಂದೆತಾಯಿಗಳಿಗೆ ವಿರೋಧಿಗಳಾಗುತ್ತಾರೆ. ವೃದ್ಧಾಪ್ಯದಲ್ಲಿ ಕುಟುಂಬೀಜನರ ಸ್ವಾರ್ಥಸಿದ್ಧಿಯಾಗದಿರುವುದನ್ನು ಕಂಡು ಅವರನ್ನು ತಿರಸ್ಕರಿಸುತ್ತಾರೆ. ಕುಟುಂಬದವರಿಂದ ಇಂದ್ರಿಯವಿಷಯುಗಳಿಗೆ ಅವಕಾಶವಿದ್ದಾಗ ಅದು ಸುಖವೆಂದು ಕಾಣುತ್ತದೆ. ಒಂದುವೇಳೆ ಅವರಿಂದ ವಿಷಯಭೋಗಾದಿಗಳಿಗೆ ಹಾನಿಯುಂಟಾದಾಗ ದುಃಖವೇ ತಲೆದೋರುವುದು.

ಸಮ್ಯಗ್ದೃಷ್ಟಿ ಜ್ಞಾನಿಜೀವಗಳು ನೀರಿನಲ್ಲಿರುವ ಕಮಲದಂತೆ ವರ್ತಿಸಬೇಕು. ಅವರೆಲ್ಲರನ್ನು ತನ್ನಿಂದ ಬೇರೆಯೆಂದೇ ಭಾವಿಸಿ, ಸಾಧ್ಯವಾದಮಟ್ಟಿಗೆ ಉಪಕಾರವನ್ನೂ, ಅವರ ಶಿಕ್ಷಣೆ-ರಕ್ಷಣೆ ಮತ್ತು ಜೀವನ ನಿರ್ವಾಹಕ್ಕೂ ಸಹಾಯಮಾಡಬೇಕು. ಮಾತ್ರವಲ್ಲ ಆತ್ಮಕಲ್ಯಾಣದ ಮಾರ್ಗದಲ್ಲಿ ಹೋಗುವಂತೆಯೂ ಮಾಡಬೇಕು. ಒಂದು ವೇಳೆ ತಮ್ಮ ಕಾರ್ಯವನ್ನು ಮಾಡಲಿಲ್ಲವಾದರೆ ಅದಕ್ಕಾಗಿ ವಿಶಾದಿಸಬಾರದು. ತದ್ವಿರುದ್ಧವಾಗಿ ಅವರಿಂದ ಸುಖದ ಲಾಭದ ಪ್ರಾಪ್ತಿಯಾಗುತ್ತಿದ್ದರೆ, ಲೋಭದಿಂದ ಅವರಿಗೆ ಹಿತವನ್ನೆಸಗಬಾರದು. ಅದರ ಸಲುವಾಗಿ ಅನ್ಯಾಯದಿಂದ ಧನವನ್ನು ಸಂಪಾದಿಸಲುಬಾರದು. ತನ್ನ ಆತ್ಮಕಲ್ಯಾಣವನ್ನು ಮರೆಯಬಾರದು. ಹೀಗೆ ಯಾರು ಕುಟುಂಬ ಪರಿವಾರ

ದವರ ಮೋಹವನ್ನು ತ್ಯಜಿಸುವರೋ ಅವರು ಸ್ವಾಭಾವಿಕವಾಗಿ ವೈರಾಗ್ಯ ಭಾವನೆಯುಳ್ಳವರಾಗುತ್ತಾರೆ.

ಬೃಹತ್ ಸಾಮಾಯಿಕಪಾಠದಲ್ಲಿ ಹೇಳಿರುತ್ತಾರೆ :

**ಕಾಂತಾಸದ್ಮಶರೀರಜಪ್ರಭೃತಯೋಯೇ ಸರ್ವಥಾಽಪ್ಯಾತ್ಮನೋ ।**
**ಭಿನ್ನಾಃ ಕರ್ಮಭವಾಃ ಸಮೀರಣಚಲಾ ಭಾಯಾಬಹಿರ್ಭಾವಿನಃ**
**ತೈಃ ಸಂಪತ್ತಿಮಿಹಾತ್ಮನೋ ಗತಧಿಯೋ ಜಾನಂತಿ ಯೇ ಶರ್ಮದಾಂ**
**ಸ್ವಂ ಸಂಕಲ್ಪವಶೇನ ತೇ ವಿದಧತೇ ನಾಕೀಶಲಕ್ಷ್ಮೀಃಸ್ಫುಟಂ ॥೮೫॥**

**ಭಾವಾರ್ಥ :** ಸ್ತ್ರೀ, ಧನ, ಧಾನ್ಯ, ಪುತ್ರಾದಿಗಳು ನನ್ನಿಂದ ಭಿನ್ನರೂ, ಬಾಹ್ಯರೂ, ಕರ್ಮೋದಯದಿಂದ ಪ್ರಾಪ್ತರಾದವರೂ ಆಗಿರುತ್ತಾರೆ. ಯೌವನದಂತೆ ಅವರ ಸಂಯೋಗವು ಚಂಚಲವಾಗಿರುತ್ತದೆ. ಯಾವ ಮೂಢಾತ್ಮನು ಇವುಗಳ ಸಂಯೋಗದಿಂದ ಸುಖಕರವಾದ ಸಂಪತ್ತಿಯುಂಟಾಗುವುವೆಂದು ಭಾವಿಸುವನೋ, ಅವನು ತನ್ನ ಮನಸ್ಸಿನ ಸಂಕಲ್ಪದಿಂದ ಸ್ವರ್ಗಸಂಪತ್ತಿಯನ್ನು ಪಡೆದಂತೆಯೇ ಸರಿ.



## ಸಂಸಾರದಲ್ಲಿ ನನ್ನವರೆನ್ನುವರು ಯಾರೂ ಇಲ್ಲ

**ಇಂದ-ಫಣಿಂದ-ಣರಿಂದಯ ವಿ ಜೀವಹಂ ಸರಣು ಣ ಹೋಂತಿ ।**
**ಅಸರಣು ಜಾಣಿವಿ ಮುಣಿ-ಧವಲಾ ಅಪ್ಪಾ ಅಪ್ಪ ಮುಣಂತಿ ॥೬೮॥**

**ಅನ್ವಯಾರ್ಥ :** ಇಂದ-ಫಣಿಂದ-ಣರಿಂದಯ ವಿ ಜೀವಹಂ ಸರಣು ಣ ಹೋಂತಿ–ಇಂದ್ರ, ಧರಣೇಂದ್ರ, ಚಕ್ರವರ್ತಿ ಮೊದಲಾದವರು ಈ ಸಂಸಾರೀ ಜೀವಿಗಳ ರಕ್ಷಕರಾಗಲಾರರು. ಮುಣಿ-ಧವಲಾ ಅಸರಣು ಜಾಣಿವಿ–ಉತ್ತಮ ಮುನಿಗಳೇ ತಮ್ಮನ್ನು ಅಶರಣರೆಂದು ತಿಳಿದು, ಅಪ್ಪಾ ಅಪ್ಪ ಮುಣಂತಿ– ತಮ್ಮಿಂದಲೇ ತನ್ನ ಅನುಭವವನ್ನು ಮಾಡಿಕೊಳ್ಳುತ್ತಾರೆ.

**ಭಾವಾರ್ಥ :** ಸಂಸಾರೀ ಪ್ರಾಣಿಗಳು ಅನುಭವಿಸುತ್ತಿರುವ ಕರ್ಮಗಳ ಉದಯವನ್ನು ದೂರಗೊಳಿಸಲು ಸಾಧ್ಯವೇ ಇಲ್ಲವು. ಯಾವಾಗ ಆಯುಃಷ್ಯವು ತೀರಿ ಮರಣಹೊಂದುವಾಗ, ಆತನನ್ನು ಧರಣೇಂದ್ರ, ಇಂದ್ರ, ನರೇಂದ್ರ,

ಮಾಂತ್ರಿಕ, ವಿದ್ವಾಂಸ, ತಪಸ್ವಿ, ಪರಮಮಿತ್ರ, ಮಾತಾಪಿತೃಗಳು, ಪುತ್ರ, ಪುತ್ರಿ, ವೈದ್ಯ, ಜ್ಯೋತಿಷ್ಯ ಇವಾರ್ಯ್ಯಾರಿಂದಲೂ ರಕ್ಷಿಸಲು ಸಾಧ್ಯವಾಗಲಾರದು. ಸರ್ವವಿಧದ ಭೋಗಗಳನ್ನು ಭೋಗಿಸುವ ಚಕ್ರವರ್ತಿಯು ಸ್ವಯಂ ತನ್ನ ದೇಹವನ್ನು ತ್ಯಜಿಸಬೇಕಾಗುವುದು. ಇದರಂತೆ ಇಂದ್ರಾದಿ ದೇವತೆಗಳೂ ದೇವಗತಿ ಸಂಬಂಧವಾದ ಭೋಗಗಳನ್ನು ಬಿಟ್ಟು, ಮನುಷ್ಯಲೋಕದಲ್ಲಿ ಜನಿಸಬೇಕಾಗುವುದು. ಇದೇ ರೀತಿಯಾಗಿ ಪಾಪಕರ್ಮದ ತೀವ್ರ ಉದಯವಾದೊಡನೆ, ರೋಗಶೋಕಾದಿಗಳನ್ನು ಪ್ರತಿಯೊಬ್ಬನೂ ಅನುಭವಿಸಲೇಬೇಕಾಗುವುದು. ಆದರಲ್ಲಿ ಯಾರೂ ಭಾಗಿಗಳಾಗುವುದಿಲ್ಲ. ತಾನೊಬ್ಬನೇ ಅನುಭವಿಸಬೇಕಾಗುವುದು. ತಾಯಿಗೆ ಪುತ್ರನಲ್ಲಿ ಪ್ರೀತಿಯಿರುವುದು ಸ್ವಾಭಾವಿಕವಾಗಿದೆ. ಆ ಪುತ್ರನು ರೋಗಿಯಾದರೆ, ಮೋಹವಶಂಗತಳಾದ ತಾಯಿಯು ದುಃಖಿಸುವಳು. ಆದರೆ ಮಗನಿಗೆ ವೇದನೆಯಾಗದಂತೆ ಮಾಡುವ ಶಕ್ತಿಯು ಮಾತೆಯಲ್ಲಿಲ್ಲ ಅಥವಾ ಮಗನರೋಗವನ್ನು ತಾನು ತೆಗೆದುಕೊಳ್ಳಲೂ ಸಾಧ್ಯವಿಲ್ಲ.

ಯಾರ್ಯ್ಯಾರ ದುಃಖವನ್ನು ಯಾರಿಂದಲೂ ತೆಗೆದುಕೊಳ್ಳಲು ಸಾಧ್ಯವಾಗಲಾರದು. ಹಾಗೆಯೇ ಸಾತಾವೇದನೀಯ ಕರ್ಮ (ಸುಖ) ವನ್ನು ತೆಗೆದುಕೊಳ್ಳಲೂ ಸಾಧ್ಯವಿಲ್ಲವು. ಕರ್ಮಗಳ ಫಲವನ್ನು ಭೋಗಿಸುವುದರಲ್ಲಿ ಎಲ್ಲಾ ಜೀವಗಳು ಸ್ವಯಂ ಸ್ವತಂತ್ರರೇ. ಪಾಪಕರ್ಮಗಳಿಂದ ರಕ್ಷಿಸಲು ಯಾರಿಗೂ ಸಾಧ್ಯವೇ ಇಲ್ಲವು. ಯಾವ ಕರ್ಮವು ಇನ್ನೂ ಸತ್ತೆಯಲ್ಲಿದ್ದು, ಉದಯಕ್ಕೆ ಬರುವಮುಂಚೆ ಕರ್ಮಗಳ ಸ್ಥಿತಿ ಮತ್ತು ಅನುಭಾಗವನ್ನು ಅವನವನೇ ಕಡಿಮೆ ಮಾಡಿ ಕ್ಷಯಮಾಡಿಕೊಳ್ಳಬಹುದು; ಪಾಪಕರ್ಮಗಳನ್ನು ನಿರ್ಬಲಗೊಳಿಸಿ ಪುಣ್ಯಕರ್ಮಗಳನ್ನು ಸಬಲವನ್ನಾಗಿಮಾಡಿಕೊಳ್ಳಬಹುದು. ಅದರಲ್ಲಿ ಅವನವನ ಆತ್ಮನ ಪರಿಣಾಮವೇ ಕಾರಣವಾಗಿರುತ್ತದೆ. ಯಾವನಾದರೂ ತನ್ನ ಶುದ್ಧಾತ್ಮಭಾವನೆಯನ್ನು ಭಾವಿಸಿದರೆ, ಅರಹಂತ, ಸಿದ್ಧ, ಆಚಾರ್ಯ, ಉಪಾಧ್ಯಾಯ, ಸಾಧುಗಳಲ್ಲಿ ಭಕ್ತಿಯನ್ನಿಟ್ಟರೆ ಅಥವಾ ಸಂಪಾದಿಸಿದ ಪಾಪಕರ್ಮಗಳ ಪ್ರತಿಕ್ರಮಣೆಯನ್ನು ಮಾಡಿಕೊಂಡರೆ, ಅವನು ಗುರುಸಮೀಪಕ್ಕೆ ಬಂದು ಅವರಲ್ಲಿ ಆಲೋಚಿಸಿದರೆ, ಅವನು ನಿರ್ಮಲ ಭಾವಗಳಿಂದ ಕರ್ಮಗಳ ಅವಸ್ಥೆಯನ್ನು ಬದಲಾಯಿಸಿಕೊಳ್ಳಬಹುದು ಮತ್ತು ಅವುಗಳನ್ನು ನಾಶಗೊಳಿಸಬಹುದು.

ಆದ್ದರಿಂದ ತನಗೆ ತಾನೇ ರಕ್ಷಕನಲ್ಲದೆ ಅನ್ಯರು ರಕ್ಷಿಸಲಾರರೆಂದು ತಿಳಿದ ಜ್ಞಾನೀ ಮುನಿವರ್ಯರು ತಮ್ಮ ಶುದ್ಧಾತ್ಮಾನುಭವದಲ್ಲಿಯೇ ಮಗ್ನರಾಗಿರುತ್ತಾರೆ. ಆತ್ಮಧ್ಯಾನದಲ್ಲಿ ಉಪಯೋಗಗಳು ಕೆಲಸಕಾರ್ಯಮಾಡದೆ ಇರುವುದರಿಂದ, ಸ್ವಾಧ್ಯಾಯ, ಭಕ್ತಿ, ಚಿಂತನೆಯಲ್ಲಿಯೂ, ಪರೋಪದೇಶದಲ್ಲಿಯೂ, ವೈಯ್ಯಾವೃತ್ಯದಲ್ಲಿಯೂ ಮತ್ತು ತತ್ವಚರ್ಚೆಯಲ್ಲಿಯೂ ಉಪಯೋಗಗಳನ್ನುಪಯೋಗಿಸುತ್ತಾರೆ.

ಜ್ಞಾನೀಸಮ್ಯಗ್ದೃಷ್ಟಿಯು ಅಶರಣಭಾವನೆಯನ್ನು ಭಾವಿಸುತ್ತಾ, ಕರ್ಮಗಳ ಕ್ಷಯಗೊಳಿಸುವ ಉಪಾಯಗಳನ್ನು ಮಾಡುವುದು ಯೋಗ್ಯವಾಗಿರುತ್ತದೆ. ಆದ್ದರಿಂದ ಕರ್ಮಗಳ ಉದಯಕಾಲದಲ್ಲಿ ದುಃಖ, ಖೇದ ಮತ್ತು ಆಕುಲತೆಯಲ್ಲಿ. ಜನ್ಮ ಮರಣ ಸಂಬಂಧವಾದ ಸಂಕಷ್ಟಗಳಲ್ಲಿ ಬೀಳಬಾರದು. ಕರ್ಮಗಳ ಸಂಯೋಗವು ಆತ್ಮನಿಗೆ ಗುಣಕಾರಕವಲ್ಲದಿರುವುದರಿಂದಲೇ, ಜ್ಞಾನಿಯು ಸಂಸಾರಮೋಹವನ್ನು ತ್ಯಜಿಸುತ್ತಾನೆ. ಸಕಲ ಜೀವರಾಶಿಯು ಸತ್ತೆಯು ಭಿನ್ನಭಿನ್ನವೆಂದೇ ತಿಳಿದು, ರಾಗದ್ವೇಷಗಳನ್ನು ಮಾಡುವುದಿಲ್ಲ. ಸಮಭಾವನೆಯಿಂದ ಜಗತ್ತಿನ ಎಲ್ಲಾ ಚಾರಿತ್ರವನ್ನು ನೋಡಿ, ಸಂಪೂರ್ಣ ವೈರಾಗ್ಯವುಳ್ಳವನಾಗಿ, ಆತ್ಮಹಿತದಲ್ಲಿಯೇ ಪ್ರವರ್ತಿಸುತ್ತಾನೆ. ಕರ್ಮಗಳನ್ನು ಕ್ಷಯಮಾಡುವ ಕಾರ್ಯದಲ್ಲಿಯೇ ಕಟೀಬದ್ಧನಾಗಿ, ಆತ್ಮಧ್ಯಾನವೆಂಬ ಅಗ್ನಿಯಿಂದ ಕರ್ಮಗಳನ್ನು ಧ್ವಂಸಮಾಡಿ, ಪರಿಶುದ್ಧನೂ, ಕರ್ಮರಹಿತನೂ ಆಗಿ, ಸರ್ವಸ್ವತಂತ್ರನಾಗಿ, ಎಂದೆಂದಿಗೂ ಕರ್ಮಗಳ ಉದಯಾಧೀನನಾಗುವುದಿಲ್ಲವು. ಕರ್ಮಭೂಮಿಯ ಮಾನವರ ಆಯುಷ್ಯಕ್ಷಯವು ಯಾವಾಗ ಆಗುವುದೆಂದು ಹೇಳಲು ಸಾಧ್ಯವಿಲ್ಲ. ಆದರೆ ಅಕಾಲಮರಣವುಂಟಾಗಬಹುದೆಂದು ತಿಳಿದು, ಅತಿಶೀಘ್ರವೇ ಆತ್ಮಹಿತದಲ್ಲಿ ತನ್ಮಯನಾಗಬೇಕು. ತನ್ನಾತ್ಮನ ಶರಣವೇ ಯಥಾರ್ಥಶರಣವೆಂದು ತೀರ್ಮಾನಿಸಿಕೊಳ್ಳಬೇಕು.

ಸಮಯಸಾರದಲ್ಲಿ ಹೇಳಿರುತ್ತಾರೆ :

**ಜೋ ಅಪ್ಪಾಣಾದು ಮಣ್ಣದಿ ದುಃಹಿದಸುಹಿದೇ ಕರೇಮಿ ಸತ್ತೇತಿ।**
**ಸೋ ಮೂಢೋ ಅಣ್ಣಾಣೀ ಣಾಣೀ ಏತ್ತೋದು ವಿವರೀದೋ॥೨೬೪॥**

**ಭಾವಾರ್ಥ :** ಅಹಂಕಾರದಿಂದ ಮದೋನ್ಮತರಾದ ಕೆಲವರು ತಿಳಿಯುವುದೇನೆಂದರೆ : ಪರಜೀವಿಗಳ ಸುಖದುಃಖಾದಿಗಳಿಗೆ ತಾವೇ ಕಾರಣರಾಗಿರುವಿ

ರೆಂದು ನಂಬಿ ಜಂಭಕೊಚ್ಚಿಕೊಳ್ಳುತ್ತಾರೆ. ಅವರು ನಿಜವಾಗಿಯೂ ಮೂರ್ಖರು ಮತ್ತು ಮಹಾಅಜ್ಞಾನಿಗಳು ಎಂದು ತಿಳಿಯಬೇಕು. ಕಾರಣ ಎಲ್ಲಾ ಜೀವಿಗಳೂ ತಮ್ಮತಮ್ಮ ಪುಣ್ಯಪಾಪಕರ್ಮಗಳ ಉದಯದಿಂದ ದುಃಖಿಗಳೂ, ಸುಖಿಗಳೂ ಆಗುವುದರಿಂದಲೇ, ಜ್ಞಾನಿಗಳು ಅಹಂಕಾರಭಾವದಿಂದ ದೂರವಿರುತ್ತಾರೆ.

ಬೃಹತ್‌ಸಾಮಾಯಿಕಪಾಠದಲ್ಲಿ ಹೇಳಿರುತ್ತಾರೆ:

**ನ ವೈದ್ಯಾ ನ ಪುತ್ರಾ ನ ವಿಪ್ರಾ ನ ಶಕ್ರಾ ನ ಕಾಂತಾ ನ ಮಾತಾ ನ ಭೃತ್ಯಾ ನ ಭೂಪಾಃ।**
**ಯಮಾಲಿಂಗಿತಂ ರಕ್ಷಿತುಂ ಸಂತಿ ಶಕ್ತಾ ವಿಚಿಂತ್ಯೇತಿ ಕಾರ್ಯಂ ನಿಜಂ ಕಾರ್ಯಮಾರ್ಯೈಃ ॥ ೩೩ ॥**

**ಭಾವಾರ್ಥ:** ಮರಣವು ಸಂಭವಿಸುವಾಗ ವೈದ್ಯನಾಗಲಿ, ಪುತ್ರನಾಗಲಿ, ಬ್ರಾಹ್ಮಣನಾಗಲಿ, ಇಂದ್ರನಾಗಲಿ, ಪತ್ನಿಯಾಗಲಿ, ತಾಯಿಯಾಗಲಿ, ನೌಕರನಾಗಲಿ, ರಾಜನಾಗಲಿ ಯಾರೂ ಈ ಜೀವನನ್ನು ಸಂರಕ್ಷಿಸಲಾರರೆಂದು ವಿಚಾರಿಸಿ, ಆತ್ಮಹಿತದತ್ತ ಲಕ್ಷ್ಯವಿಡಬೇಕು.



## ಸದಾ ಜೀವನು ಏಕಾಂಗಿಯೇ

**ಇಕ್ಕ ಉಪಜ್ಜಇ ಮರಇ ಕು ವಿ ದುಹು ಸುಹು ಭುಂಜಇ ಇಕ್ಕು।**
**ಣರಯಹಂ ಜಾಇ ವಿ ಇಕ್ಕ ಜಿಉ ತಹ ಣಿವ್ವಾಣಹಂ ಇಕ್ಕು ॥ ೬೯ ॥**

**ಅನ್ವಯಾರ್ಥ:** ಇಕ್ಕ ಉಪಜ್ಜಇ ಮರಇ ಕು ವಿ–ಜೀವನೊಬ್ಬನೇ ಜನಿಸುವುದು, ಸಾಯುವುದು, ಇಕ್ಕು ದುಹು ಸುಹು ಭುಂಜಇ–ಅವನೊಬ್ಬನೇ ಸುಖದುಃಖಾದಿಗಳನ್ನನುಭವಿಸುವುದು. ಇಕ್ಕ ಜಿಯ ಣರಯಹಂ ಜಾಇ ವಿ–ಒಬ್ಬನೇ ನರಕಕ್ಕೆ ಹೋಗುವುದು. ತಹ ಇಕ್ಕು ಣಿವ್ವಾಣಹಂ–ಹಾಗೆ ಒಬ್ಬನೇ ಮೋಕ್ಷವನ್ನು ಪಡೆಯುವುದು.

**ಭಾವಾರ್ಥ:** ಏಕತ್ವಾನುಪ್ರೇಕ್ಷೆಯನ್ನು ವರ್ಣಿಸುತ್ತಾರೆ: ವ್ಯವಹಾರನಯದಿಂದ ಈ ಜೀವನು ಶರೀರ ಸಹಿತವಾದ ಅಶುದ್ಧಾವಸ್ಥೆಯಲ್ಲಿಯೂ, ಚತು

ರ್ಗತಿಗಳಲ್ಲಿಯೂ ಕರ್ಮಗಳ ಉದಯಕ್ಕನುಸಾರವಾಗಿಯೇ ಭ್ರಮಿಸುತ್ತಿರುತ್ತಾನೆ. ಈ ಭ್ರಮಣೆಯಲ್ಲಿ ಸಿಕ್ಕಿಕೊಳ್ಳುವವನೂ (ಜನ್ಮತಾಳುವವನೂ) ಸಾಯುವವನೂ ಒಬ್ಬನೇ. ಹೀಗೆ ಪ್ರತಿಯೊಂದು ಜನ್ಮದಲ್ಲಿ ಮಾತಾಪಿತೃಗಳ, ಸಹೋದರಸಹೋದರಿಯರು, ಮಿತ್ರರ ಮತ್ತು ಚೇತನಾಚೇತನ ಪದಾರ್ಥಗಳ ಸಂಯೋಗವು ಮತ್ತು ವಿಯೋಗವು ಆಗುತ್ತಿರುತ್ತದೆ. ಇವನೊಬ್ಬನೇ ಏಕಾಂಗಿಯಾಗಿ ಎಲ್ಲವನ್ನೂ ತ್ಯಜಿಸಿ, ಬೇರೆಬೇರೆ ಗತಿಗಳನ್ನು ಹೊಂದಬೇಕಾಗುವುದು. ಜೊತೆಯಲ್ಲಿ ಪುಣ್ಯಪಾಪಗಳು ಮಾತ್ರ ಇದ್ದೇಇರುತ್ತವೆ.

ಈ ಜೀವನು ತನ್ನ ಶುಭಾಶುಭಭಾವನೆಗಳಂತೆ ಕರ್ಮಗಳನ್ನು ಬಂಧಿಸಿಕೊಂಡು, ಅವುಗಳ ಫಲವನ್ನು ಅನುಭವಿಸುತ್ತಾ, ಬಂಧುಬಾಂಧವಾದಿಗಳ ಮೋಹದಲ್ಲಿ ಸಿಲುಕಿ, ಹಿಂಸೆ, ಸುಳ್ಳು, ಕಳ್ಳತನ, ಕುಶೀಲ ಮತ್ತು ಪರಿಗ್ರಹಗಳೆಂಬ ಪಂಚಪಾಪಗಳನ್ನು ಮಾಡುತ್ತಾ, ಅವರಿಗಾಗಿ ಧನ ಸಂಪಾದನೆ ಮಾಡುತ್ತಾನೆ. ಇಂತಹ ಮಹಾಪಾಪಗಳಿಂದ ನರಕಾಯುಬಂಧವಾದೊಡನೆ, ತಾನೊಬ್ಬನೇ ನರಕದಲ್ಲಿ ಹುಟ್ಟಿ ಘೋರದುಃಖವನ್ನು ಸಹಿಸುತ್ತಾನಲ್ಲದೆ, ಯಾವ ಕುಟುಂಬ ಜೀವಿಗಳೂ ಭಾಗಿಗಳಾಗಲಾರರು. ಇದೇ ಪ್ರಕಾರವಾಗಿ ವಾಗಿ ಪುಣ್ಯಗಳನ್ನು ಬಂಧಿಸಿಕೊಂಡು, ಅವುಗಳ ಫಲವಾದ ಸುಖಾದಿಗಳನ್ನು ಹೊಂದಿದರೂ ಕೂಡ, ತಾನೊಬ್ಬನೇ ಅಲ್ಲದೆ, ಅನ್ಯರಾರೂ ಭಾಗಿಗಳಾಗಳಾಗಲಾರರು. ಆತನು ತನ್ನೊಡನೆ ಯಾವ ಪತ್ನಿ, ಪುತ್ರ, ಮಿತ್ರಾದಿಗಳನ್ನು ತೆಗೆದುಕೊಂಡುಹೋಗುವುದಿಲ್ಲ. ಯಾಕೆಂದರೆ ಪ್ರತಿಯೊಂದು ಜೀವದ ಅಸ್ತಿತ್ವವು ಭಿನ್ನವೇ ಆಗಿರುತ್ತವೆ.

ಕರ್ಮಗಳ ಬಂಧವಾಗಲಿ, ಭಾವಗಳ ಪರಿವರ್ತನೆಯಾಗಲಿ, ಸಾತಾ ಅಸಾತಾದಿ ಕರ್ಮಗಳ ಫಲಗಳನ್ನು ಭೋಗಿಸುವುದಾಗಲಿ ಸರ್ವವೂ ಭಿನ್ನ ಭಿನ್ನಗಳೇ ; ನಾಲ್ಕು ಜನ ಅಣ್ಣತಮ್ಮಂದಿರಲ್ಲಿ ಒಂದೇ ರೀತಿಯ ಅವಸ್ಥೆಗಳು ಕಂಡುಬರುವುದಿಲ್ಲ. ಅವರಲ್ಲಿ ಒಬ್ಬನು ಧನವಂತನಾಗಿ ಸಾಂಸಾರಿಕ ಸುಖಗಳನ್ನು ಅನುಭವಿಸುತ್ತಾನೆ. ಇನ್ನೊಬ್ಬನು ನಿರ್ಧನಿಕನಾಗಿ ಕಷ್ಟದಿಂದ ಕಾಲಾಯಾಪನೆಮಾಡುತ್ತಾನೆ. ಮತ್ತೊಬ್ಬನು ವಿದ್ವಾಂಸನಾಗಿ ಲೋಕಮಾನ್ಯನಾಗುತ್ತಾನೆ ಮತ್ತು ನಾಲ್ಕನೆಯವನು ಮೂರ್ಖಶಿರೋಮಣಿಯಾಗಿ ಸರ್ವರಿಂದ ಅಪಮಾನಿತನಾಗುತ್ತಾನೆ. ಯಾವಾಗ ರೋಗಿಯಾದೊಡನೆ

ಅದರ ವೇದನೆಯನ್ನು ತಾನೊಬ್ಬನೇ ಅನುಭವಿಸಬೇಕಲ್ಲದೆ, ತನ್ನ ಸಮೀಪದಲ್ಲಿ ಕುಳಿತುಕೊಂಡಿರುವವರು ಯಾರೂ ವೇದನೆಯನ್ನು ತೆಗೆದುಕೊಳ್ಳಲಾರರು.

ಈ ಜೀವನು ಸಂಸಾರದ ಪ್ರತಿಯೊಂದು ಕಾರ್ಯದಲ್ಲಿ ತಾನೊಬ್ಬನೇ ವರ್ತಿಸುತ್ತಾ, ಸ್ವಾರ್ಥವೆಂಬ ಜೊತೆಗಾರನ ಸಂಗಡವಿರುತ್ತಾನೆ. ಆದರೆ ಸ್ವಾರ್ಥವು ಸಿದ್ಧಿಸಲಿಲ್ಲವಾದರೆ, ಪತ್ನಿ, ಪುತ್ರ, ಮಿತ್ರ ಮತ್ತು ನೌಕರರೇ ಮೊದಲಾದವರ ಸ್ನೇಹವನ್ನು ಬಿಡಲು ಸಿದ್ಧನಾಗುತ್ತಾನೆ. ಆದುದರಿಂದಲೇ ಜ್ಞಾನಿಗಳಾದವರು ಇಂತು ಚಿಂತಿಸಬೇಕು: 'ನಾನೇ ನನ್ನ ಮನ, ವಚನ, ಕಾಯಗಳ ಫಲವನ್ನು ಸ್ವತಃ ಅನುಭವಿಸುವೆನು. ಹೀಗಿರುವಾಗ ಅನ್ಯರಲ್ಲಿ ಅಸತ್ಯವಾದ ಮೋಹಜಾಲದಲ್ಲಿ ಸಿಲುಕಿ, ಪಾಪಕಾರ್ಯಗಳನ್ನು ಸಂಪಾದಿಸಬಾರದು. ವಿವೇಕಪೂರ್ವಕ ಆತ್ಮಹಿತವೇ ಬಂಧುವೆಂದು ಭಾವಿಸುತ್ತಾ ವರ್ತಿಸುತ್ತಿರಬೇಕು. ದೋಣಿಯಲ್ಲಿರುದ ಮಾರ್ಗಸ್ಥರೋಪಾದಿಯಲ್ಲಿ ಸರ್ವರ ಸಂಯೋಗವು ಬಿಟ್ಟುಹೋಗುವಂತೆ, ಸರ್ವವೂ ಅಸ್ಥಿರವೆಂದು ತಿಳಿದಿರಬೇಕು. ಅವರಲ್ಲಿ ರಾಗದ್ವೇಷಮೋಹಗೊಳ್ಳದೆ ಸಮಭಾವನೆಯಿಂದ ವರ್ತಿಸಬೇಕು. ಅಂತರಂಗಿಕವಾಗಿ ನಿರ್ಮೋಹಿಯಾಗಿ, ಅವರಿಗೆ ಉಪಕಾರಾದಿಗಳನ್ನು ನೀರಿನಲ್ಲಿರುವ ಕಮಲದಂತೆ ಅಲಿಪ್ತನಾಗಿ ಮಾಡುತ್ತಿರಬೇಕು.'

ಯಾವ ಪ್ರಕಾರವಾಗಿ ಈ ಜೀವನು ತಾನೊಬ್ಬನೇ ಚತುರ್ಗತಿಗಳಲ್ಲಿ ಭ್ರಮಿತ್ತಿರುವಂತೆ, ರತ್ನತ್ರಯ ಧರ್ಮಗಳ ಆರಾಧನೆಗೈದರೆ, ತಾನೊಬ್ಬನೇ ಮೋಕ್ಷಲಕ್ಷ್ಮಿಯನ್ನು ಪಡೆಯುವನು. ಆದರೆ ಅವನಂತೆ ರತ್ನತ್ರಯಗಳನ್ನು ಪಾಲಿಸಲಿಲ್ಲವಾದರೆ, ನಿರ್ವಾಣವನ್ನು ಪಡೆಯುವುದಿಲ್ಲವು.

ಈ ಜೀವನು ನಿಶ್ಚಯನಯದಿಂದ ಸರ್ವದಾ ಏಕಾಂಗಿಯೇ ಆಗಿದ್ದಾನೆ. ಪ್ರತಿಯೊಂದು ಜೀವದ್ರವ್ಯದ ಕ್ಷೇತ್ರ, ಕಾಲ, ಭಾವಗಳು ಅನ್ಯಜೀವಿಗಳಿಂದ ಭಿನ್ನಗಳಾಗಿಯೂ, ಪರಿಶುದ್ಧಗಳಾಗಿಯೂ ಇರುತ್ತವೆ. ಹಾಗೆ ಎಂಟು ಕರ್ಮಗಳ ಸಂಯೋಗವಾಗಲಿ, ಶರೀರಸಂಯೋಗವಾಗಲಿ, ವಿಭಾವಪರಿಣಾಮಗಳ ಸಂಯೋಗವಾಗಲಿ ಯಾವುದೂ ಇಲ್ಲವು. ಪುದ್ಗಲಾದಿ ಐದು ಅಚೇತನ ದ್ರವ್ಯಗಳ ಸಂಬಂಧವಿಲ್ಲದೆ ಸಿದ್ಧಾತ್ಮನಂತೆ ಶುದ್ಧನೂ, ನಿರಂಜನನೂ ಮತ್ತು ನಿರ್ವಿಕಾರನೂ ಆಗಿರುವನೆಂದೂ, ಏಕಾಂಗಿಯಾಗಿರುವನೆಂದೂ ಪರಿಭಾವಿಸಿ, ತನ್ನಲ್ಲಿಯೇ ತನ್ಮಯನಾಗಬೇಕು.

ಬೃಹತ್ ಸಾಮಾಯಿಕಪಾಠದಲ್ಲಿ ಹೇಳಿರುತ್ತಾರೆ :

**ಗೌರೋ ರೂಪಧರೋ ದೃಢಃ ಪರಿದೃಢಃ ಸ್ಥೂಲಃ ಕೃಶಃ ಕರ್ಕಶೋ**
**ಗೀರ್ವಾಣೋ ಮನುಜಃ ಪಶುರ್ನರಕಭೂಃ ಷಂಡಃ ಪುಮಾನಂಗನಾ।**
**ಮಿಥ್ಯಾ ತ್ವಂ ವಿದಧಾಸಿ ಕಲ್ಪನಮಿದಂ ಮೂಢೋಽವಿಬುಧ್ಯಾತ್ಮನೋ**
**ನಿತ್ಯಂ ಜ್ಞಾನಮಯಸ್ವಭಾವಮಮಲಂ ಸರ್ವವ್ಯಪಾಯಚ್ಯುತಂ**
**॥೭೦॥**

**ಭಾವಾರ್ಥ** : ಎಲೈ ಜೀವನೇ! ನೀನು ಮಹಾಮೂಢನಾಗಿ 'ನಾನು ಬೆಳ್ಳಗಿರುವೆನು, ರೂಪವಂತನಾಗಿರುವೆನು, ಬಲಿಷ್ಠನಾಗಿರುವೆನು, ಶರೀರಧಾರಿಯಾಗಿರುವೆನು, ಕ್ಷೀಣ ಶರೀರಧಾರಿಯಾಗಿರುವೆನು, ಕಠೋರಿಯಾಗಿರುವೆನು, ದೇವನಾಗಿರುವೆನು, ಮನುಷ್ಯನಾಗಿರುವೆನು, ತಿರ್ಯಂಚನಾಗಿರುವನು, ನಾರಕಿಯಾಗಿರುವೆನು, ನಪುಂಸಕನಾಗಿರುವೆನು, ಸ್ತ್ರೀಯಾಗಿರುವೆನು, ಪುರುಷನಾಗಿರುವೆನು' ಎಂಬ ಮಿಥ್ಯಾಕಲ್ಪನೆಯಲ್ಲಿ ಮುಳುಗುತ್ತಿರುವೆ. ಆದರೆ ಯಥಾರ್ಥವಾಗಿ 'ನಿನ್ನಾತ್ಮನು ಏಕಾಕಿಯೂ, ಜ್ಞಾನಸ್ವರೂಪಿಯೂ, ನಿರ್ಮಲನೂ, ಸಕಲ ದುಃಖಪರಂಪರೆಯಿಂದ ರಹಿತವಾದ ಅವಿನಾಶೀ ದ್ರವ್ಯವೂ ಆಗಿರುವನು' ಎಂಬುದನ್ನು ತಿಳಿಯುವುದಿಲ್ಲ. ಇದೇ ಆಶ್ಚರ್ಯದ ಸಂಗತಿಯಾಗಿದೆ.



## ನಿರ್ಮೋಹಿಯಾಗಿ ಆತ್ಮನನ್ನು ಧ್ಯಾನಿಸು

**ಎಕ್ಕಲಉ ಜಇ ಜಾಇಸಿಹಿ ತೋ ಪರಭಾವ ಚಏಹಿ।**
**ಅಪ್ಪಾ ಝಾಯಹಿ ಣಾಣಮಉ ಲಹು ಸಿವ-ಸುಕ್ಖ ಲಹೇಹಿ ॥೭೦॥**

**ಅನ್ವಯಾರ್ಥ** : ಜಇ ಎಕ್ಕಲಉ ಜಾಇಸಿಹಿ-ಒಂದುವೇಳೆ ನೀನೊಬ್ಬನೇ ಹೋಗುವುದು. ತೋ ಪರಭಾವ ಚಏಹಿ – ಆದರೆ ರಾಗದ್ವೇಷ ಮೋಹಾದಿ ಪರಭಾವಗಳನ್ನು ತ್ಯಜಿಸಿ, ಣಾಣಮಉ ಅಪ್ಪಾ ಝಾಯಹಿ– ಜ್ಞಾನಮಯನಾದ ಆತ್ಮನನ್ನು ಧ್ಯಾನಿಸು. ಲಹು ಸಿವ-ಸುಕ್ಖ ಲಹೇಹಿ– ಶೀಘ್ರವೇ ಮೋಕ್ಷಸುಖವನ್ನು ಪಡೆಯುವಿ.

**ಭಾವಾರ್ಥ** : ಆಚಾರ್ಯರು ಅಪ್ಪಣೆಕೊಡಿಸುತ್ತಾರೇನೆಂದರೆ: ಎಲೈ ಶಿಷ್ಯನೇ! ನೀನು ಒಂದು ದಿವಸ ಮರಣಹೊಂದುವುದು ನಿಶ್ಚಯವಿದ್ದಪಕ್ಷದಲ್ಲಿ

ಪರಲೋಕಕ್ಕೆ ನೀನೊಬ್ಬನೇ ಹೋಗಬೇಕಾಗಿ ಬರುವುದು. ನಿನ್ನ ಜೊತೆಯಲ್ಲಿ ಯಾವ ಚೇತನಾಚೇತನ ಪದಾರ್ಥಗಳು ಬರುವುದಿಲ್ಲ. ಹೀಗಿದ್ದರೂ ಕೂಡ ರಾಗವನ್ನಿಟ್ಟುಕೊಂಡಿದ್ದ ವಸ್ತುಗಳೆಲ್ಲವುಗಳನ್ನು ಇಲ್ಲಿಯೇ ಬಿಟ್ಟು ಹೋಗುವಾಗ, ಅವುಗಳಲ್ಲಿ ಮೋಹವನ್ನಿಟ್ಟುಕೊಳ್ಳುವುದು ವ್ಯರ್ಥವಾಗಿದೆ. ಅಂತಹ ಕ್ಷಣಭಂಗುರ ಪದಾರ್ಥಗಳಲ್ಲಿ ಸ್ನೇಹವನ್ನಿಟ್ಟುಕೊಳ್ಳುವುದು ಶೋಕ ದುಃಖಾದಿಗಳಿಗೆ ಕಾರಣವಾಗಿರುತ್ತದೆ.

ಆದ್ದರಿಂದ ನೀನು ಕಷಾಯಾಗ್ನಿಯು ಕಡಿಮೆಯಾಗುವಂತೆಯೂ, ತೃಷ್ಣಾರೂಪ ಅಗ್ನಿಯು ಶಾಂತವಾಗುವಂತೆಯೂ, ಇಷ್ಟವಿಯೋಗ, ಅನಿಷ್ಟ ಸಂಯೋಗರೂಪ ಕಷ್ಟದುಃಖಾದಿಗಳುಂಟಾಗದಿರುವಂತೆಯೂ, ಶಾಂತಿಪ್ರವಾಹವು ಹರಿಯುವಂತೆಯೂ, ಸದಾ ಆತ್ಮರೂಪ ಉಪವನದಲ್ಲಿ ರಮಿಸುವಂತೆಯೂ, ಸರ್ವಲೋಕಾಲೋಕಗಳನ್ನು ತಿಳಿಯುವಂತೆಯೂ, ಎಂದೆಂದಿಗೂ ದುಃಖವಾಗದಿರುವ, ನಿರ್ಬಾಧವೂ ಸಂಪೂರ್ಣಸ್ವಾಧೀನವೂ ಆದ, ಅವಿನಶ್ವರವೂ ಅನುಪಮವೂ ಆದ, ಶಾಶ್ವತವಾದ ಮೋಕ್ಷಸುಖದ ಪ್ರಾಪ್ತಿಯಾಗುವಂತೆಯೂ ಆಗುವ ಕಾರ್ಯಗಳನ್ನು ಮಾಡುತ್ತಿರಬೇಕು. ಈ ಕಾರ್ಯಗಳನ್ನು ಮರಣಕ್ಕಿಂತ ಮೊದಲೇಮಾಡಲು ಯತ್ನಿಸಬೇಕು. ಯಾಕೆಂದರೆ ಈ ಮನುಷ್ಯ ದೇಹದಿಂದಲೇ ಶಿವಪದಪ್ರಾಪ್ತಿಯಾಗುವುದಲ್ಲದೆ, ದೇವ, ನಾರಕೀ ಮತ್ತು ತಿರ್ಯಂಚ ಶರೀರಗಳಿಂದ ಎಂದೆಂದಿಗೂ ಪ್ರಾಪ್ತವಾಗಲಾರದು.

ಈ ಪ್ರಕಾರದ ಸುಸಮಯವನ್ನು ಕಳೆದುಕೊಳ್ಳದೆ ದ್ರವ್ಯ. ಕ್ಷೇತ್ರ, ಕಾಲ, ಭಾವಗಳೆಲ್ಲವು ನಮಗೆ ಸಂಬಂಧಪಟ್ಟವುಗಳಲ್ಲವೆಂದು ತಿಳಿದು, ರಾಗವನ್ನು ತ್ಯಜಿಸುವುದೇ ದೊಡ್ಡ ಉಪಾಯವಾಗಿರುತ್ತದೆ. ಕೇವಲ ತನ್ನ ಜ್ಞಾನಸ್ವರೂಪೀ ಆತ್ಮನ ದ್ರವ್ಯಕ್ಷೇತ್ರಕಾಲಭಾವಾದಿಗಳನ್ನು ತನ್ನವೆಂದು ತಿಳಿದು. ಅದರಲ್ಲಿಯೇ ಅಭಿರುಚಿಯುಳ್ಳವನಾಗಿ, ತನ್ನಲ್ಲಿಯೇ ಪ್ರೇಮಯುಳ್ಳವನಾಗಬೇಕು. ಅದರಲ್ಲಿಯೇ ತನ್ಮಯನಾಗಿ ಧ್ಯಾನಾಭ್ಯಾಸವನ್ನುಮಾಡಿಕೊಂಡು ಆತ್ಮರಸವನ್ನು ಪಾನಮಾಡಲು ಪ್ರಯತ್ನಿಸಬೇಕು. ಜಗತ್ತಿನಲ್ಲಿ ಅನಂತಾನಂತ ಆತ್ಮರುಗಳ ಅನಂತಾನಂತ ಪುದ್ಗಲಗಳ, ಅಸಂಖ್ಯಾತ ಕಾಲಾಣುಗಳ ಒಂದು ಧರ್ಮ ದ್ರವ್ಯದ, ಒಂದು ಅಧರ್ಮದ್ರವ್ಯದ ಮತ್ತು ಒಂದು ಆಕಾಶದ್ರವ್ಯದ ದ್ರವ್ಯ,

ಕ್ಷೇತ್ರ, ಕಾಲ, ಭಾವಗಳು ಆತ್ಮದ್ರವ್ಯದ ದ್ರವ್ಯ, ಕ್ಷೇತ್ರ, ಕಾಲ, ಭಾವಗಳ ಅಪೇಕ್ಷೆಯಿಂದ ಭಿನ್ನಗಳೇ ಆಗಿರುತ್ತದೆ.

ನನ್ನ ಆತ್ಮನು ಅಖಂಡನೂ, ಅಭೇದನೂಆದ ಏಕದ್ರವ್ಯವೂ, ಅಸಂಖ್ಯಾತ ಪ್ರದೇಶ ಕ್ಷೇತ್ರವೂ ಆಗಿರುತ್ತಾನೆ. ಪರಿಣಮನ ಕಾಲವು ಸಮಯಮಾತ್ರ ವಾಗಿರುತ್ತದೆ. ಜ್ಞಾನ, ದರ್ಶನ, ಸುಖ, ವೀರ್ಯ ಶುದ್ಧಭಾವಗಳೇ ನನ್ನ ಸರ್ವಸ್ವಗಳಾಗಿವೆ. ಕರ್ಮಸಂಯೋಗದಿಂದುಟಾಗುವ ರಾಗದ್ವೇಷಮೋಹಾದಿ ಭಾವಗಳು, ಸಂಕಲ್ಪ ವಿಕಲ್ಪಗಳು, ವಿಭಾವಗಳಾದ ಮತಿಜ್ಞಾನಾದಿ ನಾಲ್ಕು ಜ್ಞಾನಗಳು ಇವೆಲ್ಲವೂ ಪರವಸ್ತುಗಳಾಗಿವೆ. ಯಾವಯಾವ ಭಾವಗಳಲ್ಲಿ ಪುದ್ಗಲಗಳ ನಿಮಿತ್ತಗಳಿರುತ್ತವೆಯೋ, ಅವೆಲ್ಲವೂ ನನ್ನ ಸ್ವಾಭಾವಿಕ ಭಾವ ಗಳಲ್ಲ. ನಾನಾದರೋ ಏಕಕಾರವೂ, ಪರಮಶುದ್ಧವೂ, ಸ್ವಸಂವೇದನಗೋಚ ರವೂ, ಅವಿನಾಶಿಯೂ ಆದ ದ್ರವ್ಯವಾಗಿರುತ್ತೇನೆ.

ಭವ್ಯಾತ್ಮನಾದ ಪುರುಷನು ಪರಮವೈರಾಗ್ಯಮನಸ್ಕನಾಗಿ, ಪರಮಾಣು ಪ್ರಮಾಣಮಾತ್ರವೂ ಸಂಬಂಧ ನನ್ನದಲ್ಲವೆಂದು ಭಾವಿಸುತ್ತಾ, ಸಾಂಸಾರಿಕ ಸುಖವು ಕ್ಷಣಭಂಗುರವೂ, ಆಕುಲಮಯವೂ ಆದ ದುಃಖವೆಂದು ತಿಳಿದು, ತನ್ನಾತ್ಮಧ್ಯಾನದಲ್ಲಿಯೇ ಮಗ್ನನಾಗಿ ಆತ್ಮಾನುಭವವನ್ನು ಹೊಂದುತ್ತಾನೆ. ಇದೇ ಸರ್ವಶ್ರೇಷ್ಠ ಉಪಾಯವಾಗಿರುತ್ತದೆ. ಹೀಗೆ ಅನಂತ ಆತ್ಮರುಗಳು ಈ ಶ್ರೇಷ್ಠಭಾವನೆಯಿಂದಲೇ ಶಿವಸುಖವನ್ನು ಪಡೆದಿರುತ್ತಾರೆ. ಆದ್ದರಿಂದ ನೀನು ಕೂಡಾ ಈ ಉಪಾಯದಿಂದಲೇ ಮೋಕ್ಷಸುಖವನ್ನು ಪಡೆಯುವಿ.

ಸಮಯಸಾರದಲ್ಲಿ ಹೇಳಿರುತ್ತಾರೆ :

**ಏಕೋ ಮೋಕ್ಷಪಥೋ ಯ ಏಷ ನಿಯತೋ ದೃಗ್ಜ್ಞಪ್ತಿ**
**ವೃತ್ಯಾತ್ಮಕ-**
**ಸ್ತತ್ರೈವ ಸ್ಥಿತಿಮೇತಿ ಯಸ್ತಮನಿಶಂ ಧ್ಯಾಯೇಚ್ಚ ತಂ ಚೇತತಿ।**
**ತಸ್ಮಿನ್ನೇವ ನಿರಂತರ ವಿಹರತಿ ದ್ರವ್ಯಾಂತರಾಣ್ಯ ಸ್ಪೃಶನ್**
**ಸೋಽವಶ್ಯಂ ಸಮಯಸ್ಯ ಸಾರಮಚಿರಾನ್ನಿತ್ಯೋದಯಂ ವಿಂದತಿ**
॥೪೭-೧೦॥

**ಭಾವಾರ್ಥ :** ಸಮ್ಯಗ್ದರ್ಶನಜ್ಞಾನಚಾರಿತ್ರಗಳ ಏಕರೂಪವೇ ನಿಶ್ಚಿತ ಮೋಕ್ಷಮಾರ್ಗವಾಗಿರುತ್ತದೆ. ಯಾರಾದರೂ ಅನ್ಯದ್ರವ್ಯಗಳನ್ನು ಸ್ಪರ್ಶಿಸದೆ,

ಆತ್ಮದ್ರವ್ಯವೊಂದರ ಆತ್ಮಮಯಭಾವದಲ್ಲಿರುತ್ತಾ, ಧ್ಯಾನಿಸುತ್ತಾ, ಅದರಲ್ಲಿಯೇ ವಿಹರಿಸುತ್ತಾ ಇದ್ದರೆ, ಅವರು ಶೀಘ್ರವೇ ನಿತ್ಯಉದಯರೂಪ ಸಮಯಸಾರ ಅರ್ಥಾತ್ ಶುದ್ಧಾತ್ಮಲಾಭವನ್ನು ಪಡೆದುಕೊಂಡು, ನಿರಂತರ ಪರಮ ಆನಂದ ಮಯನಾಗುತ್ತಾರೆ.



## ಪುಣ್ಯವನ್ನು ಪಾಪವೆಂದು ತಿಳಿಯುವಾತನೇ ಜ್ಞಾನಿಯು

**ಜೋ ಪಾಉ ವಿ ಸೋ ಪಾಉ ಮುಣಿ ಸವ್ವು ಇ ಕೋ ವಿ ಮುಣೇಇ।**
**ಜೋ ಪುಣ್ಣು ವಿ ಪಾಉ ವಿ ಭಣಇ ಸೋ ಬುಹ ಕೋ ವಿ ಹವೇಇ ॥೭೧॥**

**ಅನ್ವಯಾರ್ಥ :** ಜೋ ಪಾಉ ವಿ ಸೋ ಪಾಉ ಮುಣಿ–ಯಾವುದು ಪಾಪವೋ ಅದನ್ನು ಪಾಪವೆಂದೇ ತಿಳಿದು, ಸವ್ವು ಇ ಕೋ ವಿ ಮುಣೇಇ– ಸರ್ವರು ಅದನ್ನು ಪಾಪವೆಂದೇ ತಿಳಿಯುತ್ತಾರೆ. ಜೋ ಪುಣ್ಣು ವಿ ಪಾಉ ವಿ ಭಣಇ–ಯಾರದರೂ ಪುಣ್ಯಕರ್ಮವನ್ನೂ ಕೂಡ ಪಾಪವೆಂದು ಹೇಳುವ, ಸೋ ಬುಹ ಕೋ ವಿ ಹವೇಇ– ಬುದ್ಧಿವಂತರು ಅತಿ ವಿರಳರೇ !

**ಭಾವಾರ್ಥ :** ಸಕಲ ಸಂಸಾರೀ ಪ್ರಾಣಿಗಳು ಸಂಸಾರದುಃಖದಿಂದ ಹೆದರುತ್ತಿದ್ದರೂ ಕೂಡ, ಇಂದ್ರಿಯಸುಖವನ್ನೇ ಇಚ್ಛಿಸುತ್ತವೆ. ಸಾಧಾರಣ ವಾಗಿ ಪಾಪವು ದುಃಖವನ್ನೂ, ಪುಣ್ಯವು ಸುಖವನ್ನೂ ಉಂಟುಮಾಡುತ್ತ ದೆಂದು ಸರ್ವರಿಗೂ ತಿಳಿದ ವಿಷಯವಾಗಿದೆ. ಧಾರ್ಮಿಕ ವಿಷಯವಾಗಿ ಮಾತನಾಡುತ್ತಿರುವಾಗ, ಪಾಪಕಾರ್ಯಗಳನ್ನೆಸಗಬಾರದು. ಆದರೆ ಪುಣ್ಯ ಕಾರ್ಯಗಳನ್ನೇ ಮಾಡಬೇಕೆಂದು ಭಾವನೆಯಾಗುವುದು. ಪುಣ್ಯದಿಂದ ಧನ, ಧಾನ್ಯ, ಪುತ್ರ, ಮಿತ್ರ ಮತ್ತು ರಾಜ್ಯಾದಿ ವೈಭವಗಳ ಪ್ರಾಪ್ತಿಯಾಗು ವುದು. ಇಂದ್ರ, ಅಹಮಿಂದ್ರ, ಚಕ್ರವರ್ತಿ, ನಾರಾಯಣ, ಪ್ರತಿನಾರಾಯಣ, ಕಾಮದೇವ, ತೀರ್ಥಂಕರ ಮೊದಲಾದ ಶ್ರೇಷ್ಠ ಸ್ಥಾನಗಳು ಪುಣ್ಯದಿಂದಲೇ ಲಭಿ ಸುವುವು. ಆದರೂ ಆಚಾರ್ಯರು ಅಪ್ಪಣೆಕೊಡಿಸುವುದೇನೆಂದರೆ: ಯಾರು ಸಂಸಾರ ಸಂಬಂಧವಾದ ಭೋಗವಸ್ತುಗಳ ಲೋಭದಿಂದ ಪುಣ್ಯಕರ್ಮಗಳನ್ನು

ಗ್ರಹಣಮಾಡುವುದು ಯೋಗ್ಯವೆಂದು ತಿಳಿಯುವರೋ, ಅವರು ಮಿಥ್ಯಾದೃಷ್ಟೀ ಅಜ್ಞಾನಿಗಳು. ಸಮ್ಯಗ್ದೃಷ್ಟಿಗಳಾದ ಜ್ಞಾನಿಗಳು ಪಾಪಕರ್ಮದಂತೆ ಪುಣ್ಯ ಕರ್ಮವನ್ನೂ ಕೂಡ ಬಂಧನವೆಂದೇ ಭಾವಿಸುತ್ತಾರೆ. ಅವರು ಸಂಸಾರ ಬಂಧಕ್ಕೆ ಕಾರಣಗಳಾದ ಪುಣ್ಯಕರ್ಮಗಳಿಗೂ ಪಾಪವೆಂದೇ ಹೇಳುತ್ತಾರೆ. ಇವೆಲ್ಲವೂ ಸ್ವಾಧೀನತೆಯ ಘಾತಕಗಳಾಗಿವೆ. ಇದರಿಂದ ಸಂಸಾರದಲ್ಲಿ ಇರಬೇಕಾಗುತ್ತದೆ. ವಿಷಯಭೋಗದಲ್ಲಿ ಸಿಕ್ಕಬೇಕಾಗುತ್ತದೆ. ಆದುದರಿಂದ ಜ್ಞಾನಿಯಾದವನಿಗೆ ಆತ್ಮೀಕ ಆನಂದವೊಂದೇ ಇಷ್ಟವಾದುದು. ಆ ನಿಃಸಾರ ವಾದ ದುಃಖಗಳಿಂದ ಬಿಡುಗಡೆಯಾಗಿ ಸಿದ್ಧಪರಮಾತ್ಮಾವಸ್ಥೆಯು ಲಭಿಸ ಬೇಕಾದರೆ, ಪುಣ್ಯಕರ್ಮಗಳಿಂದ ರಹಿತನಾಗಿರಬೇಕು. ಆದ್ದರಿಂದ ಜ್ಞಾನೀ ಜೀವನು ಬಂಧನದೃಷ್ಟಿಯಿಂದ ಪುಣ್ಯಪಾಪಕರ್ಮಗಳೆರಡನ್ನೂ ಸಮಾನ ದೃಷ್ಟಿ ಯಿಂದ ಭಾವಿಸುತ್ತಾನೆ.

ಪುಣ್ಯಪಾಪಗಳೆರಡರ ಬಂಧಕ್ಕೆ ಕಾರಣಗಳು ಕಷಾಯಗಳ ಮಲಿನ ತೆಯು, ಮಂದಕಷಾಯಗಳಿಂದ ಪುಣ್ಯವೂ, ತೀವ್ರಕಷಾಯಗಳಿಂದ ಪಾಪವೂ ಬಂಧವಾಗುತ್ತದೆ. ಕಷಾಯಗಳು ಆತ್ಮನ ಚಾರಿತ್ರ ಗುಣಗಳ ಘಾತಕಗಳಾ ಗಿವೆ. ಇವೆರಡರ ಸ್ವಭಾವವು ಪುದ್ಗಲವೇ ಆಗಿರುತ್ತದೆ. ಸಾತಾವೇದ ನೀಯ, ಶುಭ ಆಯು, ಶುಭನಾಮ, ಉಚ್ಛಗೋತ್ರ ಇವುಗಳು ಪುಣ್ಯಕರ್ಮ ಗಳಾಗಿವೆ. ಅಸಾತಾವೇದನೀಯ, ಅಶುಭ ಆಯು, ಅಶುಭನಾಮ, ನೀಚ ಗೋತ್ರ ಮತ್ತು ನಾಲ್ಕು ಘಾತಿಕರ್ಮಗಳು ಪಾಪಕರ್ಮಗಳಾಗಿವೆ. ಈ ಕರ್ಮವರ್ಗಣೆಗಳು ಆತ್ಮಚೇತನ ಸ್ವಭಾವದಿಂದ ಭಿನ್ನಗಳಾಗಿವೆ.

ಪುಣ್ಯಕರ್ಮಗಳ ಅನುಭವವು ಸುಖರೂಪಗಳಾಗಿಯೂ, ಪಾಪಕರ್ಮ ಗಳ ಅನುಭವವು ದುಃಖರೂಪಗಳಾಗಿಯೂ ಇರುತ್ತವೆ. ಇವೆರಡರ ಅನು ಭವವು ಆತ್ಮನ ಸ್ವಾಭಾವಿಕ ಅನುಭವದಿಂದ ವಿರುದ್ಧವೂ ಮತ್ತು ಶುಭ ಆತ್ಮ ನಲ್ಲಿ ರಮಿಸಲು ಘಾತಕಗಳೂ ಆಗಿರುತ್ತವೆ. ಇವೆರಡರ ಅನುಭವವು ಕಷಾ ಯಗಳ ಕಲುಷತೆಯ ಸ್ವಾದಗಳಾಗಿವೆ. ಪುಣ್ಯಪಾಪಗಳೆರಡು ಪುನಃ ಪುನಃ ಬಂಧಕ್ಕೆ ಕಾರಣಗಳಾಗಿರುತ್ತವೆ. ಇವುಗಳಲ್ಲಿ ತನ್ಮಯನಾದರೆ, ಕರ್ಮಬಂಧ ವಲ್ಲದೆ ಮತ್ತೊಂದಿಲ್ಲವು. ಈ ಬಂಧವು ಮೋಕ್ಷಮಾರ್ಗಕ್ಕೆ ವಿರೋಧಿಯೆಂದು ತಿಳಿದ ಜ್ಞಾನಿಯು, ಪಾಪಕರ್ಮಗಳಂತೆ ಪುಣ್ಯಕರ್ಮಗಳು ಗ್ರಹಣೆಗೆ ಅಯೋ

ಗ್ಯವೆಂದೇ ಭಾವಿಸುತ್ತಾನೆ. ಅವನು ಅವೆರಡರಿಂದ (ಶುಭಾಶುಭಭಾವನೆಗಳೆರಡರಿಂದ) ವಿರಕ್ತನಾಗಿ, ಕರ್ಮವು ಕ್ಷಯಕಾರಕವೆಂದೂ ಮತ್ತು ಆತ್ಮಾನಂದದಾಯಕ ಶುದ್ಧೋಪಯೋಗವು ಮಾನ್ಯವೆಂದೂ ತೀರ್ಮಾನಿಸಿಕೊಂಡಿರುತ್ತಾನೆ.

ಸಮ್ಯಗ್ದೃಷ್ಟಿಯು ಅವಿರತನಾಗಿದ್ದರೂ ಗೃಹಸ್ಥನಾಗಿ ಧರ್ಮ, ಅರ್ಥ, ಕಾಮ ಪುರುಷಾರ್ಥಸಾಧನೆಯಲ್ಲಿ ಅನುರಕ್ತನಾಗಿದ್ದರೂ ಕೂಡ, ಚಾರಿತ್ರ ಮೋಹನೀಯ ಕರ್ಮದುದಯಾಧೀನನಾಗಿ ಶುಭಾಶುಭ ಕಾರ್ಯಗಳನ್ನು ಮಾಡುತ್ತಾನೆ. ಆದರೆ ಈ ಎಲ್ಲಾ ಕಾರ್ಯಗಳು ತನ್ನಾತ್ಮನ ಹಿತಕಾರಿಗಳಲ್ಲವೆಂದು ತಿಳಿದು, ಆತ್ಮಾರಾಮದಲ್ಲಿಯೇ ತನ್ಮಯನಾಗಲು, ವೀತರಾಗತ್ವದ ಸೇವೆ ಮತ್ತು ಸಿದ್ಧಾತ್ಮರಲ್ಲಿ ಸ್ನೇಹಿಯಾಗಿರುತ್ತಾನೆ.

ಆತ್ಮವೀರ್ಯದ ಹೀನತೆಯಿಂದ ಕಷಾಯಗಳ ಉದಯವನ್ನು ಸಹಿಸಲು ಆಗದಿರುವುದರಿಂದ, ಗೃಹಸ್ಥನು ಯೋಗ್ಯಕಾರ್ಯಗಳನ್ನು ಮಾಡಿದರೂ ಅವುಗಳಲ್ಲಿ ಆಸಕ್ತನಾಗುವುದಿಲ್ಲ. ಪೂಜೆ, ಪರೋಪಕಾರ, ದಾನಾದಿ ಕಾರ್ಯಗಳನ್ನು ಮಾಡಿಯೂ ಪುಣ್ಯಬಂಧವನ್ನು ಮತ್ತು ಸಾಂಸಾರಿಕ ಇಂದ್ರಿಯಸುಖವನ್ನಿಚ್ಛಿಸದೆ, ಕರ್ಮರಹಿತ ಅವಸ್ಥೆಯಲ್ಲಿ ಉತ್ಸಾಹವುಳ್ಳವನಾಗಿರುವುದಲ್ಲದೆ, ಆ ಕಾರ್ಯಗಳಲ್ಲಿ ಉದ್ಯುತನಾಗಿರುತ್ತಾನೆ. ಯದ್ಯಪಿ ಶುಭಪರಿಣಾಮಗಳ ಫಲವು ಪುಣ್ಯಬಂಧಕ್ಕೆ ಕಾರಣವಾಗಿದ್ದರೂ, ಜ್ಞಾನಿಯು ಅವನ್ನು ಕೂಡ ಪಾಪಕರ್ಮಗಳಂತೆ ತಿಳಿಯುತ್ತಾನೆ. ಮೋಕ್ಷಮಾರ್ಗಪಥಿಕನಾದ ಜ್ಞಾನಿಯು ನಿಶ್ಚಯ ರತ್ನತ್ರಯಮಯ ಧರ್ಮವು ಅಥವಾ ಸ್ವಭಾವವು ಉಪಾದೇಯವಾಗಿರುವುದೆಂದೇ ತಿಳಿದಿರುತ್ತಾನೆ. ಪುಣ್ಯವನ್ನೂ ಕೂಡ ಪಾಪವೆಂದೇ ತಿಳಿದು, ಅದನ್ನೂ ತ್ಯಜಿಸಲು ಉದ್ಯುಕ್ತನಾಗುತ್ತಾನೆ.

ಸಮಯಸಾರಕಲಶದಲ್ಲಿ ಹೇಳಿರುತ್ತಾರೆ :

**ಸಂನ್ಯಸ್ತವ್ಯಮಿದಂ ಸಮಸ್ತಮಪಿ ತತ್ಕರ್ಮೈವ ಮೋಕ್ಷಾರ್ಥಿನಾ-**
**ಸಂನ್ಯಸ್ತೇ ಸತಿ ತತ್ರ ಕಾ ಕಿಲ ಕಥಾ ಪುಣ್ಯಸ್ಯ ಪಾಪಸ್ಯ ವಾ ।**
**ಸಮ್ಯಕ್ತ್ವಾದಿನಿಜಸ್ವಭಾವಭವನಾನ್ಮೋಕ್ಷಸ್ಯ ಹೇತುರ್ಭವ-**
**ನ್ನೈಃಕರ್ಮಪ್ರತಿಬದ್ಧಮುದ್ಧತರಸ ಜ್ಞಾನಂ ಸ್ವಯಂ ಧಾವತಿ**
॥ ೧೦-೪ ॥

**ಭಾವಾರ್ಥ :** ಮೋಕ್ಷಾರ್ಥಿಯು ಸರ್ವಕರ್ಮಗಳನ್ನು ತ್ಯಜಿಸಿಯೇ ಸಿದ್ಧನಾಗುವಾಗ, ಪುಣ್ಯಪಾಪಗಳ ವಿಷಯವಾಗಿ ಹೇಳುವುದೇನು? ಅಂತಹ ಜ್ಞಾನಿಯು ಅಂತರಂಗವಲ್ಲಿ ಸಮ್ಯಗ್ದರ್ಶನ ಮೊದಲಾದ ಆತ್ಮೀಕ ಸ್ವಭಾವ ಗಳಿಂದಲೂ ಮತ್ತು ಕರ್ಮರಹಿತಭಾವದಲ್ಲಿ ತನ್ಮಯರೂಪ ಶಾಂತಿರಸದಿಂದಲೂ ತುಂಬಿದ, ಮೋಕ್ಷಕ್ಕೆ ಕಾರಣವಾದ ಆತ್ಮಜ್ಞಾನದಲ್ಲಿ ಸ್ವಯಂ ವಿರಾಜಮಾನ ನಾಗುತ್ತಾನೆ.



# ಪುಣ್ಯಕರ್ಮವು ಚಿನ್ನದ ಬೇಡಿ

**ಜಹ ಲೋಹಮ್ಮಿಯ ಣಿಯಡ ಬುಹ ತಹ ಸುಣ್ಣಮ್ಮಿಯ ಜಾಣಿ।**
**ಜೇ ಸುಹ ಅಸುಹ ಪರಿಚ್ಚಯಹಿ ತೇ ವಿ ಹವಂತಿ ಹು ಣಾಣಿ ॥೭೨॥**

**ಅನ್ವಯಾರ್ಥ** : ಬುಹ–ಎಲೈ ಪಂಡಿತನೇ! ಜಹ ಲೋಹಮ್ಮಿಯ ಣಿಯಡ ತಹ ಸುಣ್ಣಮ್ಮಿಯ ಜಾಣಿ–ಹೇಗೆ ಕಬ್ಬಿಣದ ಬೇಡಿಯಿರುವುದೋ ಹಾಗೆ ಚಿನ್ನದ ಬೇಡಿ ಇರುವುದೆಂದು ತಿಳಿದು, ಜೇ ಸುಹ ಅಸುಹ ಪರಿಚ್ಚಯಹಿ- ಯಾರು ಶುಭಾಶುಭಭಾವಗಳೆರಡನ್ನು ತ್ಯಜಿಸುತ್ತಾರೆಯೋ, ತೇ ವಿ ಹು ಣಾಣಿ ಹವಂತಿ–ಅವರೇ ನಿಶ್ಚಯವಾಗಿ ಜ್ಞಾನಿಗಳು.

**ಭಾವಾರ್ಥ :** ಪುಣ್ಯಪಾಪಗಳೆರಡೂ ಬಂಧನಗಳಾಗಿರುತ್ತವೆ. ಪುಣ್ಯವು ಚಿನ್ನದಬೇಡಿ, ಪಾಪವು ಕಬ್ಬಿಣದ ಬೇಡಿ ಎಂದು ಹೇಳಿರುತ್ತಾರೆ. ಅವೆರಡೂ ಸಂಸಾರದಲ್ಲಿ ಸುತ್ತಿಸುತ್ತವೆ. (ಸಂಸಾರದಲ್ಲಿ ತಡೆದು ನಿಲ್ಲಿಸುವಂತವುಗಳಾಗಿವೆ.) ಯಾವಾಗ ಈ ಎರಡು ಬೇಡಿಗಳು ತುಂಡಾಗುವುವೋ, ಆಗಲೇನೇ ಈ ಜೀವವು ಸ್ವಾಧೀನವಾದ ಮೋಕ್ಷಸುಖವನ್ನು ಹೊಂದುತ್ತದೆ. ಆದರಿಂದ ಜ್ಞಾನಿಯಾದ ವನು ಪುಣ್ಯಪಾಪಗಳ ಬಂಧನವನ್ನು ಹೇಯವೆಂದು ತಿಳಿಯುವುದುಚಿತವಾಗಿ ರುತ್ತದೆ. ಮಂದಕಷಾಯಗಳ ಭಾವಕ್ಕೆ ಶುಭೋಪಯೋಗವೆಂದೂ, ತೀವ್ರ ಕಷಾಯಗಳ ಭಾವಕ್ಕೆ ಅಶುಭೋಪಯೋಗವೆಂದೂ ಹೇಳುತ್ತಾರೆ. ಇವೆರಡ ರಿಂದಲೂ ಕರ್ಮಗಳ ಬಂಧವಾಗುತ್ತದೆ. ನಾಲ್ಕು ಘಾತಿಯ ಕರ್ಮ ಅಥವಾ ಬಂಧ ಎರಡೂ ಉಪಯೋಗದಿಂದ ಆಗುತ್ತವೆ.

ಅಘಾತಿಕರ್ಮಗಳ ಬೇಡಿಗಳಾದ ಸಾತಾವೇದನೀಯಾದಿ ಪುಣ್ಯಪ್ರಕೃತಿಗಳ ಬಂಧವು ಶುಭಭಾವದಿಂದಲೂ ಅಸಾತಾವೇದನೀಯಾದಿ ಪಾಪಪ್ರಕೃತಿಗಳ ಬಂಧವು ಅಶುಭಭಾವದಿಂದಲೂ ಆಗುತ್ತದೆ. ಆಯುಷ್ಯಕರ್ಮವನ್ನು ಬಿಟ್ಟು ಉಳಿದ ಏಳು ಕರ್ಮಗಳ ಸ್ಥಿತಿಯು ಮಂದಕಷಾಯದಿಂದ ಕಡಿಮೆಯಾಗಿಯೂ ತೀವ್ರಕಷಾಯದಿಂದ ಹೆಚ್ಚಾಗಿಯೂ ಆಗುತ್ತದೆ. ಆಯುಷ್ಯಕರ್ಮದಲ್ಲಿ ನರಕಸ್ಥಿತಿಯು ಮಂದಕಷಾಯದಿಂದ ಕಡಿಮೆಯಾಗಿಯೂ ತೀವ್ರಕಷಾಯದಿಂದ ಹೆಚ್ಚಾಗಿಯೂ ಆಗುತ್ತದೆ. ಆದರೆ ತಿರ್ಯಂಚ, ಮನುಷ್ಯ, ದೇವ ಸ್ಥಿತಿಯು ಮಂದಕಷಾಯದಿಂದ ಹೆಚ್ಚಾಗಿಯೂ ತೀವ್ರಕಷಾಯದಿಂದ ಕಡಿಮೆಯಾಗಿಯೂ ಆಗುತ್ತದೆ. ಅನುಭಾಗವು (ಅನುಭವವು) ಪಾಪಕರ್ಮಗಳಲ್ಲಿ ಅಂದರೆ ನಾಲ್ಕು ಘಾತಿಕರ್ಮಗಳಲ್ಲಿ ಮತ್ತು ಅಸಾತಾವೇದನೀಯಾದಿ ಪಾಪ ಕರ್ಮಗಳಲ್ಲಿ ಮಂದಕಷಾಯದಿಂದ ಕಡಿಮೆಯಾಗಿಯೂ ತೀವ್ರಕಷಾಯದಿಂದ ಹೆಚ್ಚಾಗಿಯೂ ಆಗುತ್ತದೆ. ಆದರೆ ಅನುಭಾಗವು ಸಾತಾವೇದನೀಯಾದಿ ಪುಣ್ಯಕರ್ಮಗಳಲ್ಲಿ ಮಂದಕಷಾಯದಿಂದ ಹೆಚ್ಚಾಗಿಯೂ ತೀವ್ರಕಷಾಯದಿಂದ ಕಡಿಮೆಯಾಗಿಯೂ ಆಗುತ್ತದೆ. ಪಾಪಕರ್ಮದಫಲದಿಂದ ನರಕ, ತಿರ್ಯಂಚ ಅಥವಾ ಕ್ಷುದ್ರ ಮಾನವಾದಿ ಭವಗಳಲ್ಲಿ ಜನಿಸಿ ದುಃಖವನ್ನನುಭವಿಸಬೇಕಾಗುತ್ತದೆ. ಪುಣ್ಯಕರ್ಮದಫಲದಿಂದ ದೇವಗತಿಯಲ್ಲಾಗಲಿ ಅಥವಾ ಶ್ರೇಷ್ಠ ಮಾನವಭವದಲ್ಲಾಗಲಿ ಜನಿಸಿ, ಪಂಚ ಇಂದ್ರಿಯಗಳ ಭೋಗಗಳನ್ನು ಅನುಭವಿಸಬೇಕಾಗುತ್ತದೆ.

ಪ್ರಾಯಶಃ ಸಂಸಾರೀ ಪ್ರಾಣಿಗಳ ಭಾವಗಳು ನಿಮಿತ್ತಾಧೀನಗಳಾಗಿವೆ. ವಿಷಯಾಸಕ್ತನಾದ ಮಾನವನು ವಿಷಯಭೋಗಗಳ ಅಧಿಕಸಾಮಗ್ರಿಗಳನ್ನು ಪಡೆದು ಅವನ್ನು ತೀವ್ರವಾಗಿ ಭೋಗಿಸಲು ಆಶೆಪಡುತ್ತಾನೆ. ಅಜ್ಞಾನಿಯು ಇಂದ್ರಿಯ ಭೋಗಗಳಲ್ಲಿಯೇ ತನ್ಮಯನಾಗುತ್ತಾನೆ. ಆದರಿಂದ ವಿಷಯ ವಾಸನೆಯು ಅಧಿಕವಾಗುವುದಲ್ಲದೆ ಕಡಿಮೆಯಾಗಲಾರದು. ಆಗ ಆತ್ಮಹಿತವನ್ನೇ ಮರೆತುಬಿಡುತ್ತಾನೆ ಮತ್ತು ನಾನಾಪ್ರಕಾರದ ಅನ್ಯಾಯ ಕೆಲಸಗಳಿಂದಲೇ ಧನಸಂಪಾದನೆಯನ್ನೂ ಮತ್ತು ಇಚ್ಛಿತಭೋಗಗಳ ಪ್ರಾಪ್ತಿಗಾಗಿ ಅನೇಕ ಪ್ರಯತ್ನಗಳನ್ನೂ ಮಾಡುತ್ತಿರುತ್ತಾನೆ. ಒಂದುವೇಳೆ ಅವು

ಪ್ರಾಪ್ತವಾಗದಿದ್ದರೆ ದುಃಖಿಸುತ್ತಾನೆ; ಪ್ರಾಪ್ತವಾದೊಡನೆ ಅವುಗಳನ್ನು ಭೋಗಿಸುತ್ತಾ ತೃಷ್ಣಾಪಿಶಾಚಿಯನ್ನು ಹೆಚ್ಚಿಸಿಕೊಳ್ಳುತ್ತಾನೆ; ಅವುಗಳ ವಿಯೋಗವಾದೊಡನೆ ಶೋಕಾಕುಲನಾಗುತ್ತಾನೆ.

ಪುಣ್ಯಕರ್ಮದ ಫಲದಿಂದ ಪ್ರಾಪ್ತವಾದ ವಿಷಯಭೋಗಗಳಲ್ಲಿ ಸಿಲುಕುವುದರಿಂದ, ವಿಷಯಾಮಾನವನು ನರಕ, ನಿಗೋದಾಗಳಲ್ಲಿ ಜನ್ಮತಾಳುತ್ತಾನೆ. ದೇವತೆಗಳಾದ ಭವನ, ವ್ಯಂತರ, ಜ್ಯೋತಿಷಿದೇವತೆಗಳು ಮತ್ತು ಒಂದು, ಎರಡನೇ ಸ್ವರ್ಗದ ದೇವತೆಗಳು ಸತ್ತು, ಏಕೇಂದ್ರಿಯಗಳಾದ ಪೃಥ್ವೀಕಾಯಿಕ ಜಲಕಾಯಿಕ, ವನಸ್ಪತಿಕಾಯಿಕಗಳಲ್ಲಿ ಹುಟ್ಟಬಹುದು. ಮೂರನೇ ಸ್ವರ್ಗದಿಂದ ಹನ್ನೆರಡನೇ ಸ್ವರ್ಗದವರೆಗಿರುವ ದೇವತೆಗಳು ಪಂಚೇಂದ್ರಿಯ ತಿರ್ಯಂಚಗಳಾಗಿ ಹುಟ್ಟಬಹುದು. ಆದರೆ ಹದಿಮೂರನೇ ಸ್ವರ್ಗದಿಂದ ನವಗ್ರೈವೇಯಕದವರೆಗಿರುವ ದೇವತೆಗಳು ಮಾನವರಾಗಿಯೇ ಜನಿಸುತ್ತಾರೆ. ವಿಷಯಭೋಗಗಳ ಆಕುಲತೆಗೇನೆ ತೃಷ್ಣಾರೋಗವೆಂದು ಹೇಳುವುದು. ಆ ರೋಗದಿಂದ ಪೀಡಿತವಾದ ಪ್ರಾಣಿಗಳು ಭಯದಿಂದ ವಿಷಯವಾಸನೆಯ ಶಮನಕ್ಕಾಗಿ ವಿಷಯಭೋಗಗಳಲ್ಲಿಯೇ ಹೋಗುತ್ತಾರೆ. ಇವುಗಳನ್ನು ಭೋಗಿಸಿ, ಕ್ಷಣಿಕ ತೃಪ್ತಿಗಾಗಿ ಪುನಃ ಅಧಿಕ ತೃಷ್ಣೆಗಳನ್ನು ಹೆಚ್ಚಿಸಿಕೊಳ್ಳುತ್ತಾನೆ.

ಆ ಜೀವನು ಅನೇಕಾವರ್ತಿ ದೇವಗತಿ ಮತ್ತು ಮನುಷ್ಯಗತಿ ಸಂಬಂಧವಾದ ಇಂದ್ರಿಯವಿಷಯಭೋಗಗಳನ್ನು ಭೋಗಿಸಿದರೂ, ತೃಷ್ಣಾದಾಹವು ಶಾಂತವಾಗಿಲ್ಲವು. ಆದುದರಿಂದಲೇ ಜ್ಞಾನಿಗಳು ವಿಷಯ ಸುಖವನ್ನು ಹೇಯವೆಂದು ತಿಳಿಯುತ್ತಿರುವಾಗ, ವಿಷಯಸುಖಗಳಿಗೆ ಕಾರಣವಾದ ಪುಣ್ಯಕರ್ಮವನ್ನೂ, ಪುಣ್ಯಬಂಧಕ್ಕೆ ಕಾರಣವಾದ ಶುಭೋಪಯೋಗವನ್ನೂ ಕೂಡ ಹೇಯವೆಂದೇ ತಿಳಿಯುತ್ತಾರೆ. ಕೇವಲ ಶುದ್ಧೋಪಯೋಗಭಾವನೆಯನ್ನು ಭಾವಿಸುವುದರಿಂದ, ತಿರ್ಯಂಚಗತಿಯಲ್ಲಿಯೂ ಅತೀಂದ್ರಿಯಸುಖವುಂಟಾಗಿ ಕರ್ಮಕ್ಷಯವುಂಟಾಗುತ್ತದೆ. ಅಂದರೆ ಮೋಕ್ಷವು ಖಚಿತವೆಂದೇ ತಿಳಿಯಬೇಕು.

ಶುದ್ಧೋಪಯೋಗದಲ್ಲಿ ಸ್ಥಿರನಾಗಲು ಶಕ್ತಿಇಲ್ಲದಿದ್ದ ಜ್ಞಾನೀಜೀವನು ಶುಭೋಪಯೋಗದಲ್ಲಿ ವರ್ತಿಸುತ್ತಾನೆ. ಆದರೂ ಪುಣ್ಯವನ್ನಿಚ್ಛಿಸಲಾರನು

ಪುಣ್ಯಬಂಧವು ವಸ್ತುಸ್ವಭಾವದಿಂದಲೇ ಆಗುತ್ತಿರುತ್ತದೆ. ಆದುದರಿಂದ ಬಂಧ ಕಾರಕಗಳಾದ ಶುಭೋಪಯೋಗದಿಂದ ವಿರಕ್ತನಾಗಿದ್ದು, ಬಹು ಶೀಘ್ರವೇ ಶುದ್ಧೋಪಯೋಗವನ್ನು ಪಡೆಯಲು ಪ್ರಯತ್ನಿಸುತ್ತಾನೆ.

ಶ್ರೀ ಕುಂದಕುಂದಾಚಾರ್ಯರು ಪ್ರವಚನಸಾರದಲ್ಲಿ ಹೇಳುತ್ತಾರೆ:

**ಜದಿ ಸಂತಿ ಹಿ ಪುಣ್ಣಾಣಿ ಯ ಪರಿಣಾಮ ಸಮುಬ್ಭವಾಣಿ ವಿವಿಹಾಣಿ।**
**ಜಣಯಂತಿ ವಿಸಯತಣ್ಹಂ ಜೀವಾಣಂ ದೇವದಂತಾಣಂ ॥ ೭೪ ॥**
**ತೇ ಪುಣ ಉದಿಣ್ಣ ತಣ್ಹಾ ದುಹಿದಾತಣ್ಹಾಹಿ ವಿಸಯಸೋಕ್ಖಾಣಿ।**
**ಇಚ್ಛಂತಿ ಅಣುಹವಂತಿ ಯ ಆಮರಣಂ ದುಃಖಸಂತತ್ತಾ ॥ ೭೫ ॥**

**ಭಾವಾರ್ಥ**: ಶುಭೋಪಯೋಗದಿಂದ ಬಂಧಿತವಾದ ನಾನಾ ಪ್ರಕಾರ ಪುಣ್ಯಕರ್ಮಗಳು ದೇವಪರ್ಯಂತರವರೆಗಿರುವ ಶರೀರಾದಿಗಳಿಗೆ ವಿಶೇಷ ಸಾಮಗ್ರಿಗಳ ಸಂಯೋಗಗಳನ್ನುಂಟುಮಾಡಿ, ವಿಷಯಗಳ ತೃಷ್ಣೆಯನ್ನುಂಟು ಮಾಡುತ್ತವೆ. ಆ ದೇವಾದಿ ತೃಷ್ಣೆಗಳ ಕಾರಣದಿಂದಲೇ ಆ ದೇವತೆಗಳು ದುಃಖಿತರಾಗುತ್ತಾರೆ. ಈ ತೃಷ್ಣಾರೋಗದಿಂದ ಪೀಡಿತರಾಗಿ, ವಿಷಯಸುಖ ವನ್ನೇ ಇಚ್ಛಿಸುತ್ತಾರೆ; ಮರಣಪರ್ಯಂತ ಭೋಗಿಸುತ್ತಿದ್ದು ದುಃಖಗಳಿಂದ ದೂರವಿದ್ದರೂ ಕೂಡ ಆ ತೃಷ್ಣಾಮಹಾರೋಗದಿಂದ ದೂರವಾಗುವುದಿಲ್ಲ.

## ಭಾವನಿಗ್ರ್ರಂಥವೇ ಮೋಕ್ಷಮಾರ್ಗವು

**ಜಇಯಾ ಮಣು ಣಿಗ್ಗಂಥು ಜಿಯ ತಇಯಾ ತುಹುಂ ಣಿಗ್ಗಂಥು।**
**ಜಇಯಾ ತುಹುಂ ಣಿಗ್ಗಂಥು ಜಿಯ ತೋ ಲಬ್ಭಇ ಸಿವಪಂಥು॥೭೩॥**

**ಅನ್ವಯಾರ್ಥ**: ಜಿಯ ಜಇಯಾ ಮಣು ಣಿಗ್ಗಂಥು–ಎಲೈ ಜೀವನೇ! ಯಾವಾಗ ನಿನ್ನ ಮನಸ್ಸು ನಿಗ್ರ್ರಂಥವಾಗಿರುವುದೋ, ತಇಯಾ ತುಹುಂ ಣಿಗ್ಗಂಥು–ಆಗಲೇ ನೀನು ನಿಜವಾದ ನಿಗ್ರಂಥನು, ಜಿಯ ಜಇಯಾ ತುಹುಂ ಣಿಗ್ಗಂಥು–ಎಲೈ ಜೀವನೇ! ನೀನು ನಿಗ್ರ್ರಂಥವಾದೊಡನೆ, ತೋ ಸಿವಪಂಥು ಲಬ್ಭಇ–ಮೋಕ್ಷಮಾರ್ಗವನ್ನು ಪಡೆದಂತೆಯೇ ಸರಿ.

**ಭಾವಾರ್ಥ**: ನಿಗ್ರ್ರಂಥ ಪದವಿಯೇ ಸಾಧುಗಳ ಪದವಿಯು. ಸಂಯಮ ವನ್ನು ಸಾಧುವೇ ಸಾಧಿಸುತ್ತಾನೆ. ಯಾಕೆಂದರೆ ಸಕಲ ಆರಂಭ ಪರಿಗ್ರಹ

ಗಳನ್ನು ತ್ಯಜಿಸಿ, ಅಹಿಂಸಾದಿ ಐದು ಮಹಾವ್ರತಗಳನ್ನು ನಿರ್ದೋಷವಾಗಿ ಪಾಲಿಸಲು ಸಮರ್ಥನಾದವನೇ ನಿಜವಾದ ಸಾಧುವು. ಗೃಹಸ್ಥಾವಸ್ಥೆಯಲ್ಲಿ ಆರಂಭ ಮತ್ತು ಪರಿಗ್ರಹಗಳ ಕಾರಣದಿಂದ ಹಿಂಸಾದಿ ಪಂಚ ಪಾಪಗಳು ಬಿಡುಗಡೆಯಾಗಲು ಸಾಧ್ಯವಿಲ್ಲ. ಅಲ್ಲಿ ಮನಸ್ಸಿನ ನಿಶ್ಚಲತೆಗೆಭಾಧಕಗಳಾದ ಪರಿಗ್ರಹಗಳ ಚಿಂತೆಯು ಇದ್ದೇಇರುವುದು. ಪ್ರತ್ಯಾಖ್ಯಾನ ಕಷಾಯಗಳ ಉದಯದಿಂದಲೂ, ನಿಮಿತ್ತಪೂರ್ಣವಾದ ವೈರಾಗ್ಯವುಂಟಾಗದಿರುವುದರಿಂದಲೂ ಗೃಹಸ್ಥನಿಗೆ ಉತ್ತಮ ಧರ್ಮಧ್ಯಾನವುಂಟಾಗಲಾರದು. ಆದುದರಿಂದಲೇ ತೀರ್ಥಂಕರಾದಿ ಮಹಾಪುರುಷರೂ ಕೂಡ ಗೃಹಸ್ಥಾವಸ್ಥೆಯನ್ನು ತ್ಯಜಿಸಿ ಮುನಿಗಳಾಗಿರುವುದು.

ಪರಿಗ್ರಹಾದಿಗಳ ಮಮತೆಯನ್ನುಂಟುಮಾಡವುದಕ್ಕೆ ನಿಮಿತ್ತಗಳಾದ ಬಾಹ್ಯ ಪರಿಗ್ರಹಗಳ ತ್ಯಾಗವಾಗಿರುವುದರಿಂದಲೇ ಮಹಾಪುರುಷರು ಸ್ತ್ರೀ, ಪುತ್ರ, ಧನ, ಧಾನ್ಯ, ರಾಜ್ಯ, ಸಂಪತ್ತಿ ಮೊದಲಾದವುಗಳನ್ನು ತ್ಯಜಿಸಿ, ಪ್ರಕೃತಿರೂಪವನ್ನು ತಾಳುವರು. ಅರ್ಥಾತ್: ವಸ್ತ್ರ ಭೂಷಣಗಳನ್ನು ತ್ಯಜಿಸಿದ ಬಾಲಕರಂತೆ ನಗ್ನರಾಗುತ್ತಾರೆ. ಎಷ್ಟರವರೆಗೆ ವಸ್ತ್ರಾ ಭೂಷಣಗಳಿರುತ್ತವೆಯೋ ಅಷ್ಟರವರೆಗೆ ಪರಿಪೂರ್ಣ ಪರಿಗ್ರಹಗಳ ತ್ಯಾಗವೆಂದೆನ್ನಿಸಿಕೊಳ್ಳುವುದಿಲ್ಲ. ದಿಕ್ಕುಗಳೇ ವಸ್ತ್ರಗಳೆಂದು ಕಲ್ಪಿಸುವುದೇ ದಿಗಂಬರ ಅಥವಾ ನಿರ್ಗ್ರಂಥ ವೇಷವು. ನಗ್ನಧಾರಿಯು ಜೀವಗಳ ರಕ್ಷಣಾರ್ಥವಾಗಿ ಪಿಂಛ ಮತ್ತು ಕಮಂಡಲು (ಮರದಿಂದಮಾಡಿದ ಕಮಂಡಲು) ಗಳನ್ನು ಶೌಚಾದಿ ಶುದ್ಧಿಗಾಗಿ ಇಟ್ಟುಕೊಂಡಿರುತ್ತಾನೆ. ಒಂದುವೇಳೆ ಶಾಸ್ತ್ರವನ್ನು ಜ್ಞಾನಸಲುವಾಗಿ ಇಟ್ಟುಕೊಳ್ಳಬೇಕಾಗುತ್ತದೆ. ಇವೆಲ್ಲವೂ ಅಂತರಂಗ ನಿರ್ಗ್ರಂಥನಾಗಲು ನಿಮಿತ್ತಕಾರಣಗಳಾಗಿವೆ. ಅಗ್ನಿ ಮತ್ತು ಜಲಗಳೆಂಬ ನಿಮಿತ್ತ ಕಾರಣಗಳಿದ್ದರೆ, ಅಕ್ಕಿ ಬೆಂದು ಅನ್ನರೂಪವಾಗುವಂತೆ, ನಿಮಿತ್ತಕಾರಣಗಳಿದ್ದರೇನೆ ಉಪಾದಾನ ಕಾರಣವು ಕಾರ್ಯವನ್ನೆಸಗುವುದು.

ಅಂತರಂಗದಲ್ಲಿ ಮನಸ್ಸನ್ನು ಗ್ರಂಥ (ಗಂಟು) ರಹಿತವನ್ನಾಗಿಮಾಡಬೇಕು. ಮನಸ್ಸಿನಿಂದಲೇ ಸಕಲ ರಾಗದ್ವೇಷಮೋಹ ಮೊದಲಾದವುಗಳನ್ನು ದೂರಪಡಿಸಿ. ಮಿಥ್ಯಾದರ್ಶನ, ಕ್ರೋಧ, ಮಾನ, ಮಾಯಾ, ಲೋಭ, ಹಾಸ್ಯ, ರತಿ, ಅರತಿ, ಶೋಕ, ಭಯ ಜುಗುಪ್ಸಾ, ಸ್ತ್ರೀವೇದ, ಪುಂವೇದ, ನಪುಂಸಕವೇದ

ಬುದ್ಧಿಪೂರ್ವಕ ಈ ಹದಿನಾಲ್ಕು ಪ್ರಕಾರದ ಅಂತರಂಗ ಪರಿಗ್ರಹಗಳನ್ನು ತ್ಯಜಿಸ ಬೇಕು. ಇವುಗಳನ್ನು ತ್ಯಜಿಸಿದ ಸಮ್ಯಗ್ದೃಷ್ಟಿಗೆ ಕಷ್ಟವನ್ನುಂಟುಮಾಡಿದರೂ ಕೂಡ ಉತ್ತಮ ಕ್ಷಮಾಧಾರಿಯಾಗಿಯೂ, ವಿದ್ಯಾ, ತಪ, ಸಂಯಮಗಳುಂಟಾ ದರೂ ಪರಮ ಕೋಮಲನಾಗಿಯೂ, ಮನ, ವಚನ, ಕಾಯಗಳ ಸರಳತೆಯು ಳ್ಳವನಾಗಿಯೂ, ಎಲ್ಲಾ ಪರವಸ್ತುಗಳ ಲೋಭವನ್ನು ಬಿಟ್ಟು ಪರಮಸಂತೋಷಿ ಯಾಗಿಯೂ, ಪವಿತ್ರನಾಗಿಯೂ, ಹಾಸ್ಯವಿಲ್ಲದ ಗಂಭೀರಮುದ್ರೆಯುಳ್ಳವ ನಾಗಿಯೂ, ರತಿ-ಅರತಿಗಳಿಲ್ಲದ ಸಮಭಾವಿಯಾಗಿಯೂ, ಶೋಕರಹಿತವಾದ ಪ್ರಸನ್ನನಾಗಿಯೂ, ನಿರ್ಭಯ ನಿರ್ಮಲನಾಗಿಯೂ, ಜುಗುಪ್ಸೆ ಇಲ್ಲದ ವಸ್ತು ಸ್ವಭಾವಗಳ ಮರ್ಮಿಯಾಗಿಯೂ, ಪುಂವೇದಾದಿ ಮೂರುವೇದವಿಲ್ಲದವನಾ ಗಿಯೂ, ಪರಮ ಬ್ರಹ್ಮಚಾರಿಯಾಗಿಯೂ ಇರುವನು. ಇವನೇ ಪರಮಶ್ರೇಷ್ಠ ನಾದ ಯೋಗಿಯಾಗುವನು.

ಮನಸ್ಸಿನ ಎಲ್ಲ ಮಮತಾಭಾವಗಳಾದ ರಾಗದ್ವೇಷಗಳ ಕೊಳೆಯನ್ನು ಕಿತ್ತು ಒಗೆದಿರುವಿಕೆ, ಪರಮ ವೀತರಾಗ ಸಮದರ್ಶತ್ವ, ಜೀವಕೋಟಿಗಳಲ್ಲಿ ಕರುಣಾಭಾವ, ಪರಮಸಂತೋಷ ಆತ್ಮರಸದ ಅಭಿರುಚಿ, ವಿಷಯರಸ ವಿರತ ಮೊದಲಾದ ಭಾವನೆ ಇವೇ ನಿರ್ಗ್ರಂಥ ಸ್ಥಾನವು. ಬೀಜದ ಬಾಹ್ಯಸಿಪ್ಪೆಯನ್ನು ಹೋಗಲಾಡಿಸದೆ ಒಳಭಾಗದಲ್ಲಿರುವ ತೆಳುವಾದ ಸಿಪ್ಪೆಯನ್ನು ದೂರಮಾಡದೆ ಶುದ್ಧವಾದ ಅಕ್ಕಿಯ ಪ್ರಾಪ್ತಿಯು ಹೇಗೆ ಆಗುವುದಿಲ್ಲವೋ ಹಾಗೆ ಬಾಹ್ಯಪರಿ ಗ್ರಹಗಳನ್ನು ತ್ಯಜಿಸದೆ, ಅಂತರಂಗರಾಗಭಾವಗಳು ದೂರವಾಗದು. ಅದರಂತೆ ಬಾಹ್ಯದಲ್ಲಿ ನಿರ್ಗ್ರಂಥನಾಗದೆ, ಅಂತರಂಗನಿರ್ಗ್ರಂಥವು ಸಿದ್ಧಿಸಲಾರದು. ಒಂದು ವೇಳೆ ಬಾಹ್ಯನಿರ್ಗ್ರಂಥನಾದರೂ ಅಂತರಂಗ ನಿರ್ಗ್ರಂಥನಾಗದೆ, ವಿತರಾಗಿ ಯಾಗದೆ, ಸರ್ವದರ್ಶಿಯಾಗದೆ, ಆತ್ಮಾನಂದ ರಸಿಕನಾಗದೆ ಇದ್ದರೆ, ಆತನು ಯಥಾರ್ಥ ನಿರ್ಗ್ರಂಥನಲ್ಲವು.

ಭಾವನಿರ್ಗ್ರಂಥವೇ ನಿಜವಾದ ಮೋಕ್ಷಮಾರ್ಗವಾಗಿದೆ. ಕೇವಲ ವ್ಯವ ಹಾರ ಚಾರಿತ್ರವು ಮೋಕ್ಷಮಾರ್ಗವಾಗಲಾರದು. ರತ್ನತ್ರಯಮಯೀ ಅಂತ ರಂಗ ಸ್ವಾನುಭವರಮಣರೂಪವೇ ನಿಶ್ಚಯಚಾರಿತ್ರವು. ಅದೇ ಯಥಾರ್ಥ ಶಿವ ಪಂಥವೂ ಆಗಿರುತ್ತದೆ. ಈ ಮಾರ್ಗದಿಂದ ಗಮನಮಾಡುತ್ತಿರುವ ಜ್ಞಾನಿಯು ಮೋಕ್ಷನಗರವನ್ನು ತಲುಪುವನು.

ಪುರುಷಾರ್ಥಸಿದ್ಧ್ಯುಪಾಯದಲ್ಲಿ ಹೇಳಿರುತ್ತಾರೆ :

**ಮಿಥ್ಯಾತ್ವವೇದರಾಗಾಸ್ತಥೈವ ಹಾಸ್ಯಾದಯಶ್ಚ ಷಡ್‌ದೋಷಾಃ।**
**ಚತ್ವಾರಶ್ಚ ಕಷಾಯಶ್ಚತುರ್ದಶಾಭ್ಯಂತರಾ ಗ್ರಂಥಾಃ ॥ ೧೧೬ ॥**
**ನಿಜಶಕ್ತ್ಯಾ ಶೇಷಾಣಾಂ ಸರ್ವೇಷಾಮಂತರಂಗಸಂಗಾನಾಂ।**
**ಕರ್ತವ್ಯಃ ಪರಿಹಾರೋ ಮಾರ್ದವಶೌಚಾದಿಭಾವನಯಾ ॥ ೧೨೬ ॥**
**ಬಹಿರಂಗಾದಪಿ ಸಂಗಾದ್ಯಸ್ಮಾತ್ಪ್ರಭವತ್ಯಸಂಯಮೋಽನುಚಿತಃ।**
**ಪರಿವರ್ಜಯೇದಶೇಷಂ ತಮಚಿತ್ತಂ ವಾ ಸಚಿತ್ತಂ [redacted] ॥ ೧೨೭ ॥**

**ಭಾವಾರ್ಥ :** ಮಿಥ್ಯಾತ್ವ ಮೊದಲಾದ ಹದಿನಾಲ್ಕು ಪ್ರಕಾರದ ಅಂತರಂಗ ಗ್ರಂಥಿಗಳನ್ನು ತನ್ನ ಶಕ್ತಿಯಿಂದ ತ್ಯಜಿಸಿ, ಮಾರ್ದವ, ಶೌಚ ಮೊದಲಾದ ಭಾವನೆಗಳಿಂದ ಪರಿಣಾಮವನ್ನು ಪವಿತ್ರವಾಗಿಟ್ಟುಕೊಳ್ಳಬೇಕು. ಯಾಕೆಂದರೆ ಬಾಹ್ಯಪರಿಗ್ರಹಗಳಿಂದ ಅಯೋಗ್ಯ ಅಸಂಯಮಗಳಾಗುತ್ತವೆ ಆದ್ದರಿಂದ ಎಲ್ಲಾ ಸಚಿತ್ತ ಅಚಿತ್ತ ಪರಿಗ್ರಹಗಳನ್ನು ತ್ಯಾಗಮಾಡಿ, ಭಾವ ಮತ್ತು ದ್ರವ್ಯ ನಿರ್ಗ್ರಂಥನಾಗಬೇಕು.



## ದೇಹದಲ್ಲಿ ಪರಮಾತ್ಮನಿರುತ್ತಾನೆ

**ಜಂ ವಡಮಜ್ಝಹಂ ಬೀಉ ಫುಡು ಬೀಯಹಂ ವಡು ವಿ ಹು ಜಾಣು।**
**ತಂ ದೇಹಹಂ ದೇಉ ವಿ ಮುಣಹಿ ಜೋ ತಇಲೋಯ-ಪಹಾಣು ॥ ೭೪ ॥**

**ಅನ್ವಯಾರ್ಥ:** ಜಂ ವಡಮಜ್ಝಹಂ ಬೀಉ ಫುಡು–ಯಾವ ಪ್ರಕಾರವಾಗಿ ವಟವೃಕ್ಷದಲ್ಲಿ ಅದರ ಬೀಜವು ಸ್ಪಷ್ಟರೂಪ ವ್ಯಾಪಕವಾಗಿರುತ್ತದೆಯೋ, ಬೀಯಹಂ ವಡು ವಿ ಹು ಜಾಣು–ಹಾಗೆ ವಟವೃಕ್ಷವನ್ನೂ ಕೂಡ ತಿಳಿ. ತಂ ದೇಹಹಂ ದೇಉ ವಿ ಮುಣಹಿ–ಅದರಂತೆ ಈ ಶರೀರದಲ್ಲಿ ಆ ದೇವನನ್ನು ಕೂಡಾ ಅನುಭವಮಾಡಿಕೊ. ಜೋ ತಇಲೋಯ-ಪಹಾಣು–ಅದು ತ್ರೈಲೋಕ್ಯದಲ್ಲಿ ಪ್ರಧಾನವಾದುದು.

**ಭಾವಾರ್ಥ :** ಹೇಗೆ ವಟವೃಕ್ಷದಲ್ಲಿ ಬೀಜವು, ಬೀಜದಲ್ಲಿ ವಟವೃಕ್ಷವು ವ್ಯಾಪಕವಾಗಿರುತ್ತದೆಯೋ ಹಾಗೆ ತನ್ನಾತ್ಮನು ತನ್ನ ಶರೀರದಲ್ಲಿ ವ್ಯಾಪಕ

ನಾಗಿರುತ್ತಾನೆ; ಶರೀರಪ್ರಮಾಣನಿರುತ್ತಾನೆ: ಶರೀರ ಆಕಾರ ರೂಪದಲ್ಲಿ ರುತ್ತಾನೆ. ಈ ಆತ್ಮನೋ ಸ್ವಯಂ ಮೂರು ಲೋಕದಲ್ಲಿ ಪ್ರಧಾನಪದಾರ್ಥ ವಾದ ಪರಮಾತ್ಮನಾಗಿರುತ್ತಾನೆ ಹೀಗೆ ಜ್ಞಾನಿಯು ವಿಚಾರಮಾಡಬೇಕು. ಯಾಕೆಂದರೆ ನನ್ನ ಆರಾಧನೆ ಧ್ಯಾನಯೋಗ್ಯವಾದ ನನ್ನಾತ್ಮನೇ ಆಗಿರುತ್ತಾನೆ. ಉತ್ತಮ ಆಸನದಲ್ಲಿ ಕುಳಿತುಕೊಂಡು ಈ ನನ್ನ ಶರೀರದ ಆಕಾರವಿರುವಂತೆಯೇ ನನ್ನ ಆತ್ಮದೇವನ ಆಕಾರವಿದೆಯೆಂದು ವಿಚಾರಿಸತಕ್ಕದ್ದು.

ಆತ್ಮನು ಅಸಂಖ್ಯಾತಪ್ರದೇಶಿಯಾಗಿದ್ದರೂ ಕೂಡ ಶರೀರಪ್ರಮಾಣ ನಿರುತ್ತಾನೆ. ಆತ್ಮದೇವನನ್ನು ತೈಜಸ, ಕಾರ್ಮಣ ಮತ್ತು ಔದಾರಿಕಗಳೆಂಬ ಮೂರು ಶರೀರಗಳಿಂದ ಭಿನ್ನನೆಂದೂ, ಸಕಲ ರಾಗಾದಿಭಾವಗಳಿಂದ ಭಿನ್ನ ನೆಂದೂ ವಿಚಾರಿಸಬೇಕು. ಕರ್ಮನಿಮಿತ್ತದಿಂದುಂಟಾಗುವ ಔದಾಯಿಕ, ಔಪಶಮಿಕ, ಕ್ಷಾಯೋಪಶಮಿಕಭಾವಗಳಿಂದ ಭಿನ್ನವಾದ ಒಂದು ಶುದ್ಧ ಪಾರಿ ಣಾಮಿಕ ಸ್ವಭಾವಧಾರಿಯೆಂದು ಚಿಂತಿಸುತ್ತಿರಬೇಕು. ಯಾವಾಗ ದ್ರವ್ಯ ದೃಷ್ಟಿಯಿಂದ ಜೀವನೊಡನೆ ಕರ್ಮಗಳ ಸಂಯೋಗವು ದೃಷ್ಟಿಗೋಚರವಾಗು ವುದಿಲ್ಲವೋ ಆಗ ಕರ್ಮಗಳ ಅಪೇಕ್ಷೆಯಿಂದುಂಟಾಗುವ ಭಾವಗಳೂ ಕೂಡ ವಿಚಾರಕೋಟಿಗೆ ಬೀಳಲಾರವು. ಯದ್ಯಪಿ ಕ್ಷಾಯಿಕಭಾವವು ಆತ್ಮನ ನಿಜ ವಾದ ಭಾವವಾಗಿದ್ದರೂ ಕರ್ಮಕ್ಷಯದಿಂದುಂಟಾಗಿರುವುವು. ಈ ದೃಷ್ಟಿ ಯಿಂದ ಕರ್ಮವು ಸಾಪೇಕ್ಷವು. ಕರ್ಮಗಳ ಅಪೇಕ್ಷೆಯಿಂದ ಗ್ರಹಣೆಮಾಡದ ದ್ರವ್ಯಾರ್ಥಿಕನಯದಲ್ಲಿ ಈ ಕ್ಷಾಯಿಕಭಾವ ವಿಚಾರವೂ ಕೂಡ ಬರಲಾರದು. ಅನಾದಿಯಿಂದ ಅನಂತಕಾಲದವರೆಗೆ ಸಕಲವಸ್ತುಗಳನ್ನು ತನ್ನ ಮೂಲಸ್ವಭಾವ ದಲ್ಲಿಯೇ ಕಾಣುವುದು ದ್ರವ್ಯಾರ್ಥಿಕ ನಯವಾಗಿರುತ್ತದೆ.

ಈ ದೃಷ್ಟಿಯಿಂದ ನೋಡಿದರೆ ಆತ್ಮನೊಡನೆ ಎಂದೆಂದಿಗೂ ಕರ್ಮಗಳ ಸಂಬಂಧ ಇರಲಿಲ್ಲ ಮತ್ತು ಉಂಟಾಗುವುದೂ ಇಲ್ಲ. ತ್ರಿಕಾಲದಲ್ಲಿಯೂ ಒಂದೇ ಸ್ವರೂಪದಲ್ಲಿ ಶುದ್ಧ ಸ್ಫಟಿಕಮಣಿಯಂತೆ ತೋರುವವನೇ ಆತ್ಮನಾಗಿರು ತ್ತಾನೆ. ಯದ್ಯಪಿ ಕರ್ಮಗಳ ಸಂಯೋಗದಿಂದ ಮನುಷ್ಯ, ನರಕ, ಪಶು, ದೇವ ಮೊದಲಾದ ಪರ್ಯಾಯಗಳಲ್ಲಿದ್ದರೂ ದ್ರವ್ಯದೃಷ್ಟಿಯಿಂದ ಈ ಆತ್ಮನು ಹೇಗೆ ಇರುವನೋ ಹಾಗೇ ಇರುವನು. ಇವನು ತನ್ನ ಸ್ವರೂಪವನ್ನು ಕಳೆದು ಕೊಂಡಿಲ್ಲ. ಪರ್ಯಾಯದ ದೃಷ್ಟಿಯಿಂದ ಚಂಚಲವಿರುವನೆಂದು ಕಾಣು

ತ್ತದೆ. ಇದರಲ್ಲಿ ಮನವಚನಕಾಯಗಳ ನಿಮಿತ್ತದಿಂದ ಪ್ರದೇಶಗಳ ಕಂಪನವು ಆಗುತ್ತದೆ ಮತ್ತು ಯೋಗಶಕ್ತಿ ಕರ್ಮ ಮತ್ತು ನೋಕರ್ಮಗಳನ್ನು ಗ್ರಹಣ ಮಾಡುತ್ತದೆ. ಹಾಗಿದ್ದರೂ ದ್ರವ್ಯದೃಷ್ಟಿಯಿಂದ ಮನ, ವಚನ, ಕಾಯ ಗಳಿಂದ ರಹಿತನೂ ಚಂಚಲವಿಲ್ಲದ ಪರಮ ನಿಶ್ಚಲನೂ ಆಗಿರುತ್ತಾನೆ; ಕರ್ಮ ನೋಕರ್ಮಗಳನ್ನು ಗ್ರಹಿಸಲಾರನು. ಪರವಸ್ತುಗಳ ಗ್ರಹಣೆಯಿಂದಲೂ ಮತ್ತು ಸ್ವಗುಣ ತ್ಯಾಗದಿಂದಲೂ ರಹಿತನಾಗಿರುತ್ತಾನೆ.

ಈ ಆತ್ಮನು ಭೇದ ದೃಷ್ಟಿಯಿಂದ ಅಸ್ತಿತ್ವ, ವಸ್ತುತ್ವ, ದ್ರವ್ಯತ್ವ, ಪ್ರಮೇಯತ್ವ, ಆಗುರುಲಘುತ್ವ, ಪ್ರದೇಶತ್ವ ಈ ಆರು ವಿಧದ ಸಾಮಾನ್ಯಗುಣ ಗಳಿಂದಲೂ ಮತ್ತು ಜ್ಞಾನ, ದರ್ಶನ, ಸುಖ, ವೀರ್ಯ, ಸಮ್ಯಗ್ದರ್ಶನ, ಚಾರಿತ್ರವೇ ಮೊದಲಾದ ಶುದ್ಧಗುಣಗಳಿಂದಲೂ ಕೂಡಿದ್ದರೂ ಕೂಡ, ಅಭೇದ ದೃಷ್ಟಿಯಿಂದ ಒಂದೇರೂಪ ಅಖಂಡ ಸರ್ವಗುಣಗಳ ಪಿಂಡವಾದ ಒಂದು ಶುದ್ಧ ದ್ರವ್ಯವೇ ಆಗಿರುತ್ತಾನೆ. ಯದ್ಯಪಿ ಪರ್ಯಾಯದೃಷ್ಟಿಯಿಂದ ರಾಗದ್ವೇಷ ಮೋಹಾದಿ ವಿಭಾವಪರಿಣಾಮಗಳಿಂದ ಸಂತಪ್ತನೂ ದುಃಖಿಯೂ ಆಗಿರುವಂತೆ ಕಂಡುಬರುತ್ತಿದ್ದರೂ ಕೂಡ ದ್ರವ್ಯದೃಷ್ಟಿಯಿಂದ ನಿಜವಾಗಿಯೂ ವಿಭಾವಪರಿ ಣಮನಗಳಿಲ್ಲದ ಪರಮ ಶಾಂತನೆಂದು ತೋರುತ್ತದೆ. ದ್ರವ್ಯಾರ್ಥಿಕನಯದ ದೃಷ್ಟಿಯಿಂದ ತನ್ನಂತರಂಗದಲ್ಲಿ ಶುದ್ಧಸ್ವರೂಪಿಯಾದ ತನ್ನಾತ್ಮನನ್ನು ನೋಡು ವಂತೆ ಜಗತ್ತಿನ ಸಕಲ ಆತ್ಮರುಗಳನ್ನು ಏಕಾಕಾರವೆಂದೂ ಶುದ್ಧವೆಂದೂ ನೋಡ ಬೇಕು. ಆರುದ್ರವ್ಯಗಳಲ್ಲಿ ಪುದ್ಗಲಾದಿ ಐದು ಅಚೇತನ ದ್ರವ್ಯಗಳಲ್ಲಿ ಶತೃತ್ವ, ಮಿತ್ರತ್ವ ಉಂಟಾಗಲಾರದು. ಆತ್ಮನು ಮಾತ್ರ ಚೈತನ್ಯಮಯನಾಗಿರು ತ್ತಾನೆ.

ಯಾವಾಗ ಎಲ್ಲವನ್ನೂ ಒಂದೇ ವಿಧವಾಗಿ ವಿಚಾರಮಾಡಿದೊಡನೆ, ಮಿತ್ರರೂ ಶತ್ರುವೂ ಇಲ್ಲದೆ ಸರ್ವವೂ ಒಂದೇ ರೀತಿಯಾಗಿ ಭಾಸವಾಗುತ್ತದೆ. ಆಗ ರಾಗದ್ವೇಷಗಳು ದೃಷ್ಟಿಗೋಚರವಾಗುವುದಿಲ್ಲ. ಸಮಭಾವ ಮತ್ತು ಶಾಂತ ರಸದ ಪ್ರವಾಹವು ಹರಿಯುತ್ತದೆ. ಹೀಗೆ ನಿರ್ಗ್ರಂಥ ಮುಮುಕ್ಷುವು ಈ ವಿಧದ ಸಮಭಾವನೆಯಲ್ಲಿ ಕ್ರೀಡಿಸುತ್ತಾ ಸಾಮಾಯಿಕ ಚಾರಿತ್ರವನ್ನು ಪಾಲಿಸುವುದು ಚಿತವಾಗಿರುತ್ತದೆ. ಸ್ವಾನುಭವದಲ್ಲಿ ತಲ್ಲೀನನಾಗಿ, ಎಲ್ಲಾ ನಯಗಳ ವಿಚಾರ

ದಿಂದಲೂ ರಹಿತನಾಗಿ, ಆತ್ಮಾನಂದದಲ್ಲಿ ಮಸ್ತನಾಗುವುದೇ ಆತ್ಮಸಮಾಧಿಯಾಗಿರುತ್ತದೆ.

ಸಮಾಧಿಶತಕದಲ್ಲಿ ಹೇಳಿರುತ್ತಾರೆ:

**ಆತ್ಮಾನಮಂತರೇ ದೃಷ್ಟ್ವಾ ದೃಷ್ಟ್ವಾ ದೇಹಾದಿಕಂ ಬಹಿಃ ।**
**ತಯೋರಂತರವಿಜ್ಞಾನಾದಭ್ಯಾಸಾದಚ್ಯುತೋ ಭವೇತ್ ॥ ೭೯ ॥**

**ಅಚೇತನಮಿದಂ ದೃಶ್ಯಂಮದೃಶ್ಯಂ ಚೇತನಂ ತತಃ ।**
**ಕ್ವ ರುಷ್ಯಾಮಿ ಕ್ವ ತುಷ್ಯಾಮಿ ಮಧ್ಯಸ್ಥೋಽಹಂಭವಾಮ್ಯತಃ ॥ ೪೬ ॥**

**ಭಾವಾರ್ಥ :** ತನ್ನಾತ್ಮನನ್ನು ಅಂತರಂಗದಲ್ಲಿ ಶರೀರಾದಿಗಳನ್ನು ತನ್ನಿಂದ ಬಾಹ್ಯದಲ್ಲಿ ನೋಡುವಾತನು ಮತ್ತು ಶರೀರ, ಆತ್ಮನೆಂಬ ಭೇದ ವಿಜ್ಞಾನದಿಂದ ಆತ್ಮನನ್ನು ಶುದ್ಧ ಅಭೇದನೆಂಬ ಅನುಭವದ ಅಭ್ಯಾಸಮಾಡುವಾತನು ಮೋಕ್ಷಲಕ್ಷ್ಮಿಯನ್ನು ಪಡೆಯುತ್ತಾನೆ. ಜ್ಞಾನಿಯಾದವನು ವಿಚಾರಿಸುವುದೇನೆಂದರೆ: ಇಂದ್ರಿಯಗಳಿಂದ ತಿಳಿಯುವ ವಸ್ತುಗಳೆಲ್ಲವೂ ಅಚೇತನ. ಚೇತನಾಮಯನಾದ ಆತ್ಮನು ಇಂದ್ರಿಯಗಳಿಂದ ತಿಳಿಯಲು, ನೋಡಲು ಸಾಧ್ಯವಾಗದಿರುವಾಗ, ನಾನು ಯಾವ ವಸ್ತುವಿನಲ್ಲಿ ಪ್ರಸನ್ನಚಿತ್ತನಾಗಬೇಕು? ಯಾವವಸ್ತುಗಳಲ್ಲಿ ಅಪ್ರಸನ್ನನಾಗಬೇಕು? ನಾನು ನಿಜವಾಗಿಯೂ ವೀತರಾಗಿಯೂ, ಸಮಭಾವಿಯಾಗಿಯೂ ಇರುತ್ತೇನೆ.



## ತಾನೇ ಜಿನನೆಂಬ ಅನುಭವವು ಮೋಕ್ಷೋಪಾಯವಾಗಿರುತ್ತದೆ.

**ಜೋ ಜಿಣ ಸೋ ಹಉಂ ಸೋ ಜಿ ಹಉಂ ಏಹಉ ಭಾಉ ಣಿಭಂತು**
**ಮೋಕ್ಖಹಂ ಕಾರಣ ಜೋಇಯಾ ಅಣ್ಣು ಣ ತಂತು ಣ ಮಂತು ॥೭೫॥**

**ಅನ್ವಯಾರ್ಥ :** ಜೋ ಜಿಣ ಸೋ ಹಉಂ- ಯಾವನು ಜಿನದೇವನಿರುತ್ತಾನೆಯೋ ಅವನೇ ನಾನಿರುತ್ತೇನೆ. ಸೋ ಜಿ ಹಉಂ-ಅವನೇ ನಾನು. ಏಹಉ ಣಿಭಂತು ಭಾಉ-ಅಂತಹ ಸಂಶಯವಿಲ್ಲದ ಭಾವನೆಯನ್ನು ಭಾವಿಸಬೇಕು. ಜೋಇಯಾ-ಎಲೈ ಯೋಗಿಶ್ವರನೇ! ಮೋಕ್ಖಹಂ ಕಾರಣ ಅಣ್ಣು

ತಂತು ೫ ಮಂತು ೫–ಇದೇ ಮೋಕ್ಷೋಪಾಯವಾಗಿರುತ್ತದೆ. ಅಲ್ಲದೆ ಯಾವ ತಂತ್ರವೂ, ಮಂತ್ರವೂ ಇಲ್ಲ.

**ಭಾವಾರ್ಥ :** ನಿಶ್ಚಯನಯದಿಂದ ತನ್ನಾತ್ಮನನ್ನು ಇದ್ದಂತೆ ತಿಳಿಯು ವುದೇ ಸಂಕ್ಷೇಪವಾದ ಮೋಕ್ಷೋಪಾಯವಾಗಿರುತ್ತದೆ. ಮೂಲಸ್ವಭಾವ ದಿಂದ ಇವನು ಜಿನೇಂದ್ರ ಪರಮಾತ್ಮನೇ ಆಗಿರುತ್ತಾನೆ. ಕರ್ಮರಹಿತನಾದ ಆತ್ಮನು ಜಿನೇಂದ್ರ ಸರ್ವಜ್ಞನು. ನಿಶ್ಚಯನಯದಿಂದ ತನ್ನಾತ್ಮನು ದ್ರವ್ಯಭಾವ ಮತ್ತು ನೋಕರ್ಮದಿಂದ ರಹಿತನಿದ್ದಾನೆ. ವ್ಯವಹಾರನಯದಿಂದ ಅಥವಾ ಪರ್ಯಾಯದೃಷ್ಟಿಯಿಂದ ನನ್ನ ಆತ್ಮನು ಕರ್ಮಸಹಿತನಾಗಿ ಅಶುದ್ಧನಿದ್ದಾನೆ. ಆದರೂ ಶುದ್ಧವಾಗುವ ಶಕ್ತಿಯನ್ನಿಟ್ಟುಕೊಂಡಿರುತ್ತಾನೆ; ಕಾರಣ ಸಮಯ ಸಾರನಿದ್ದಾನೆ. ಜಿನೇಶ್ವರನ ಆತ್ಮನು ಶುದ್ಧನೂ ಮತ್ತು ಕರ್ಮಸಮಯಸಾರ ಇದ್ದಾನೆ. ಇದೇ ಭೇದವು. ಆದರೂ ನಿಶ್ಚಯನಯದಿಂದಾಗಲೀ ಅಥವಾ ದ್ರವ್ಯದೃಷ್ಟಿಯಿಂದಾಗಲೀ ಈ ಭೇದ ದೃಷ್ಟಿಗೋಚರವಾಗುವುದಿಲ್ಲ.

ಎಲ್ಲಾ ದೃಷ್ಟಿಯಿಂದಲೂ ಆತ್ಮ ಮತ್ತು ಪರಮಾತ್ಮ ಸರಿಸಮಾನರೇ. ಆದರೆ ಕೇವಲ ಸತ್ತೆಯ ಅಪೇಕ್ಷೆಯಿಂದ ಭಿನ್ನತೆ ಇರುತ್ತದೆ. ಆತ್ಮನ ಯಾವ ದ್ರವ್ಯ,ಕ್ಷೇತ್ರ.ಕಾಲಭಾವಗಳಿರುವುವೋ ಅವೆಲ್ಲವೂ ಅನ್ಯಆತ್ಮರುಗಳಿಗಿರುತ್ತವೆ. ಪ್ರತಿಯೊಂದು ಆತ್ಮರುಗಳ ಚತುಷ್ಟಯಗಳು ಸಮಾನವೂ ಸದೃಶವೂ ಇರು ತ್ತವೆ. ಒಂದೇ ಅಲ್ಲ, ಒಂದೊಂದರಂತೆ ಇರುತ್ತವೆ. ಉದಾ : ಸಹಸ್ರಾರು ಗೋಧಿಕಾಳುಗಳ ದೃಷ್ಟಿಯಿಂದ ಸಮಾನ ಆಕಾರಗಳುಳ್ಳವುಗಳಾಗಿದ್ದರೂ ಕೂಡ, ಒಂದೊಂದು ಕಾಳು ಭಿನ್ನಭಿನ್ನವೇ. ಅದರಂತೆ ಪ್ರತಿಯೊಂದು ಆತ್ಮ ದ್ರವ್ಯ ತನ್ನ ಅನಂತಗುಣ ಮತ್ತು ಪರ್ಯಾಯಗಳ ಅಭೇದ ಮತ್ತು ಅಖಂಡ ಪಿಂಡವಾಗಿದೆ.

ಕ್ಷೇತ್ರಾಪೇಕ್ಷೆಯಿಂದ ಅಸಂಖ್ಯಾತಪ್ರದೇಶಿಯಾದ ಪ್ರತಿಯೊಂದು ಆತ್ಮವು ಪ್ರತಿಸಮಯದಲ್ಲಿ ಪರಿಣಮನಶೀಲವೇ ಆಗಿರುತ್ತದೆ. ಆತ್ಮನು ಅಗುರುಲಘುತ್ವ ಗುಣದ ಮೂಲಕ ಶುದ್ಧಸ್ವಭಾವದಲ್ಲಿ ಸದೃಶ ಪರಿಣಮನಮಾಡುತ್ತಿರುತ್ತಾನೆ. ಪ್ರತಿಯೊಂದು ಆತ್ಮನು ಜ್ಞಾನ, ದರ್ಶನ, ಸುಖ, ವೀರ್ಯ, ಸಮ್ಯಕ್ತ್ವ ಚಾರಿತ್ರ ಮೊದಲಾದ ಶುದ್ಧಭಾವಗಳ ಅಧಿಪತಿಯಾಗಿರುತ್ತಾನೆ. ಆದ್ದರಿಂದ

ನಿಶ್ಚಯನಯದಿಂದ ತನ್ನಾತ್ಮನನ್ನು ಪರಮಾತ್ಮಸ್ವರೂಪವಾಗಿ ನೋಡುವಿಕೆಯು, ಅನುಭವಮಾಡಿಕೊಳ್ಳುವಿಕೆಯು ವೀತರಾಗಭಾವದ ಪ್ರಾಪ್ತಿಯ ಉಪಾಯವಾಗಿದೆ. ಎಷ್ಟು ವೀತರಾಗತೆಯ ಅಂಶವು ಉದಯಿಸುವುದೋ ಅಷ್ಟು ಅಂಶವು ಕರ್ಮಗಳ ಸಂವರೆ ಮತ್ತು ನಿರ್ಜರೆ ಆಗುತ್ತದೆ.

ನೂತನ ಕರ್ಮಗಳ ಆಸ್ರವ ಆಗದೆ ಇರುವಿಕೆ ಮತ್ತು ಪೂರ್ವಬದ್ಧ ಕರ್ಮಗಳ ಉದುರುವಿಕೆ ಇವು ಮೋಕ್ಷಪ್ರಾಪ್ತಿಯ ಉಪಾಯವಾಗಿರುತ್ತದೆ. 'ಸೋಽಹಂ' ಎಂಬಮಂತ್ರಪ್ರಭಾವದಿಂದ ತನ್ನಂತರಂಗದಲ್ಲಿ 'ನಾನೇ ಪರಮಾತ್ಮ. ನನಗೆ ಯಾವ ರಾಗಾದಿಭಾವಗಳಿಂದಲೂ, ಪುಣ್ಯಪಾಪಗಳಿಂದಲೂ, ಯಾವ ವಿಧದ ಕರ್ಮಗಳಿಂದಲೂ, ಮನ, ವಚನ, ಕಾಯಗಳ ಕ್ರಿಯೆಗಳಿಂದಲೂ ಯಾವಬಂಧವೂ ಇಲ್ಲ' ಎಂಬುದಾಗಿ ಭಾವಿಸಬೇಕು.

ನಾನು ಪರಮ ನಿರ್ಮಲವಾದ ಸ್ವಭಾವದಲ್ಲಿಯೇ ಇರುವವನಾಗಿರುತ್ತೇನೆ. ಯಾವನು ಯಥಾರ್ಥವಾಗಿ ಅರಹಂತರ ಮತ್ತು ಸಿದ್ಧಪರಮಾತ್ಮರ ಸ್ವರೂಪವನ್ನು ತಿಳಿಯುತ್ತಾನೆಯೋ ಅವನು ತನ್ನಾತ್ಮನ ಸತ್ಯವಾದ ದ್ರವ್ಯ, ಗುಣ, ಪರ್ಯಾಯಗಳನ್ನು ತಿಳಿಯುವವನಾಗುವನು. ಪರವಸ್ತುಗಳಲ್ಲಿರುವ ದೃಷ್ಟಿಯನ್ನು (ವಿಚಾರವನ್ನು) ಸಂಕೋಚಪಡಿಸಿಕೊಂಡು, ಆತ್ಮದೃಢಚಿಂತನೆಯನ್ನಿಡುವುದರಿಂದಲೇ ಆತ್ಮಧ್ಯಾನವು ಸಿದ್ಧಿಸುವುದು. ಇದೇ ಕರ್ಮಗಳನ್ನು ನಾಶಗೊಳಿಸುವ ಮಹೋಪಾಯ. ಇದೇ ಸ್ವಾನುಭವದ ಕಲೆ, ತಂತ್ರ, ಮಂತ್ರ ಆಗಿರುತ್ತದೆ. ಇದರಿಂದಲೇ ಆತ್ಮನು ಮುಕ್ತಿಯನ್ನು ಸಾಧಿಸಲು ಸಾಧ್ಯ. ಬಾಹ್ಯಚಾರಿತ್ರವಾದರೋ ಮಾನಸಿಕ ಸಂಕಲ್ಪ ವಿಕಲ್ಪಗಳನ್ನು ದೂರಗೊಳಿಸಲು, ಪರಕಾರ್ಯಗಳ ನಿರೋಧಗೈಯ್ಯಲು ಅತ್ಯಾವಶ್ಯಕಗಳಾಗಿವೆ. ಆದುದರಿಂದಲೇ ಪರಿಪೂರ್ಣಶುದ್ಧವಾದ ಆತ್ಮಧ್ಯಾನಕ್ಕೆ ನಿರ್ಗ್ರಂಥಾವಸ್ಥೆ ಅತ್ಯಾವಶ್ಯಕವೂ ಯೋಗ್ಯವೂ ಆಗಿರುತ್ತದೆ. ಅಷ್ಟೇ ಅಲ್ಲ, ಬಾಹ್ಯಾಭ್ಯಂತರ ಪರಿಗ್ರಹಗಳನ್ನು ತ್ಯಜಿಸಿ ನಿರ್ಜನವಾದ ಸ್ಥಾನದಲ್ಲಿಯೇ ಧ್ಯಾನಾಭ್ಯಾಸವನ್ನು ಕೂಡ ಮಾಡುವುದು ಯೋಗ್ಯವಾಗಿರುತ್ತದೆ.

ಅನೇಕಾಂತ ಜ್ಞಾನದಿಂದ ಅಲಂಕೃತನಾಗಿ, ನಾನು ಪರ್ಯಾಯದ ಅಪೇಕ್ಷೆಯಿಂದ ಕರ್ಮಸಹಿತನೂ ಅಶುದ್ಧನೂ ಆಗಿರುವೆನು. ದ್ರವ್ಯದೃಷ್ಟಿಯಿಂದಲಾದರೋ ಕರ್ಮರಹಿತನೂ ಶುದ್ಧನೂ ಆಗಿರುವೆನು ಎಂಬ ಈ ಎರಡು

ದೃಷ್ಟಿಯ ಜ್ಞಾನವನ್ನಿಟ್ಟುಕೊಂಡು ಪರ್ಯಾಯದೃಷ್ಟಿಯಿಂದ (ವಿಚಾರದಿಂದ) ಉಪಯೋಗಗಳನ್ನುಪಯೋಗಿಸದೆ, ದ್ರವ್ಯದೃಷ್ಟಿಯಿಂದ ಉಪಯೋಗವನ್ನುಪಯೋಗಿಸುತ್ತಿರುವಾಗ, ತನ್ನನ್ನು ಜಿನೇಂದ್ರದೇವನೆಂದು ತಿಳಿಯಬೇಕು ಮತ್ತು ಭಾವಿಸಬೇಕು. ಹೀಗೆ ಭಾವಿಸುವವನ ಉಪಯೋಗವು ಉಪಯೋಗಮಯನಾದ ಆತ್ಮನಲ್ಲಿ ತನ್ಮಯನಾಗುವುದು, ಏಕಮೇವವಾಗುವುದು, ಉಪ್ಪಿನ ಹರಳು ನಿರಿನಲ್ಲಿಟ್ಟೊಡನೆ ಕರಗಿ ನೀರಾಗುವಂತೆ, ಉಪಯೋಗವು ಕ್ರೀಡಿಸುವುದು, ಧ್ಯಾತಾ ಧ್ಯೇಯ ಭೇದ ದೂರವಾಗುವಾಗ ದ್ರವ್ಯದೃಷ್ಟಿ (ವಿಚಾರವು) ಕೂಡ ನಿಂತುಹೋಗುವುದು, ಅರಹಂತ ಭಾವನೆಯಲ್ಲಿ ನೆಲೆಸಿಲ್ಲುವುದೇ ಮೋಕ್ಷೋಪಾಯವಾಗಿರುವುದು.

ಪ್ರವಚನಸಾರದಲ್ಲಿ ಹೇಳಿರುತ್ತಾರೆ :

**ಜೋ ಜಾಣದಿ ಅರಹಂತಂ ದವ್ವತ್ತಗುಣತ್ತಪಜ್ಜಯತ್ತೇಹಿಂ।**
**ಸೋ ಜಾಣದಿ ಅಪ್ಪಾಣಂ ಮೋಹೋ ಖಲು ಜಾದಿ ತಸ್ಸ ಲಯಂ**
**॥೮೦॥**

**ಜೀವೋ ವವಗದಮೋಹೋ ಉವಲದ್ಧೋ ತೆಚ್ಚಮಪ್ಪಣೋ**
**ಸಮ್ಮಂ।**
**ಜಹದಿ ಜದಿ ರಾಗದೋಸೆ ಸೋ ಅಪ್ಪಾಣಂ ಲಹದಿ ಸುದ್ಧಂ ॥೮೧॥**

**ಭಾವಾರ್ಥ :** ದ್ರವ್ಯ, ಗುಣ, ಪರ್ಯಾಯಗಳ ಮೂಲಕ ಯಥಾರ್ಥವಾಗಿ ಅರಹಂತರನ್ನು ತಿಳಿಯುವವನು ತನ್ನಾತ್ಮನನ್ನು ಗುರುತಿಸಲು ಸಾಧ್ಯವಾಗುವುದು. ಅಂಥವನ ದರ್ಶನ ಮೋಹನೀಯವೂ ಅಥವಾ ಮಿಥ್ಯಾತ್ವ ಭಾವನೆಯೂ ದೂರವಾಗುವುದು. ಆ ಮೋಹನೀಯ ಕರ್ಮರಹಿತನಾದ ಸಮ್ಯಗ್ದೃಷ್ಟಿ ಜೀವನು ನಿಜವಾದ ಆತ್ಮತತ್ವವನ್ನು ಪ್ರಾಪ್ತಮಾಡಿಕೊಂಡು, ರಾಗದ್ವೇಷಗಳನ್ನು ತ್ಯಜಿಸಿ, ವೀತರಾಗನಾದೊಡನೆ, ತನ್ನನ್ನು ಪರಿಶುದ್ಧಮಾಡಿಕೊಳ್ಳುವನು.



## ಆತ್ಮಗುಣಗಳನ್ನೇ ಭಾವಿಸಬೇಕು

**ಬೇ ತೇ ಚಲು ಪಂಚ ವಿ ಣವಹಂ ಸತ್ತ್ರಹಂ ಛಹ ಪಂಚಾಹಂ।**
**ಚಲುಗುಣ-ಸಹಿಯೆವು ಸೋ ವುುಣಹ ಏಯಇಂಲಕ್ಖಣ ಜಾಹಂ ॥೭೬॥**

**ಅನ್ವಯಾರ್ಥ :** ಸೋ–ಆ ತನ್ನ ಆತ್ಮನನ್ನು, ಬೇ ತೇ ಚವು ಪಂಚ ವಿ ಣವಹಂ ಸತ್ತ್ರಹಂ ಛಹ ಪಂಚಾಹಂ ಚಲುಗುಣ-ಸಹಿಯಲು ಮುಣಹ–ಎರಡು, ಮೂರು, ನಾಲ್ಕು, ಐದು, ಒಂಭತ್ತು, ಏಳು, ಆರು, ಐದು ಮತ್ತು ನಾಲ್ಕು ಗುಣಸಹಿತನೆಂದು ತಿಳಿ. ಜಾಹಂ ಏಯಇಂ ಲಕ್ಖಣ–ಇವು ಆ ಪರ ಮಾತ್ಮನ ಅಥವಾ ಆತ್ಮನ ಲಕ್ಷಣಗಳಾಗಿರುತ್ತವೆ.

**ಭಾವಾರ್ಥ :** ಆತ್ಮಧ್ಯಾನಕ್ಕಾಗಿ ಆತ್ಮಸ್ವರೂಪಭಾವನೆಗೈಯ್ಯುವುದು ಯೋಗ್ಯವಾಗಿರುತ್ತದೆ. ನಿಶ್ಚಯನಯದಿಂದ ಆತ್ಮನು ಸತ್‌ಪದಾರ್ಥವೂ, ಜ್ಞಾಯಕಅಖಂಡಪ್ರಕಾಶರೂಪವೂ, ಕೇವಲ ಅನುಭವಗಮ್ಯವೂ ಆಗಿರುತ್ತದೆ. ವ್ಯವಹಾರನಯದಿಂದ ಅನೇಕ ಪ್ರಕಾರವಾಗಿ ವಿಚಾರಿಸತಕ್ಕದ್ದು. ಎರಡುವಿಧ ದಿಂದ ವಿಚಾರಿಸುವುದಾದರೆ ಆತ್ಮನು ಗುಣಪರ್ಯಾಯ ಸಹಿತನಾಗಿರುತ್ತಾನೆ. ತನ್ನಲ್ಲಿ ಅನೇಕ ಗುಣಗಳನ್ನು ಮತ್ತು ಪರ್ಯಾಯಗಳನ್ನಿಟ್ಟುಕೊಂಡಿರುತ್ತಾನೆ ಅಥವಾ ಜ್ಞಾನದರ್ಶನ ಸ್ವರೂಪನಾಗಿರುತ್ತಾನೆ. ಏಕಕಾಲದಲ್ಲಿ ತನ್ನನ್ನು ಮತ್ತು ಸಕಲ ಪದಾರ್ಥಗಳನ್ನು ತಿಳಿಯುವವನೂ ನೋಡುವವನೂ ಆಗಿರು ತ್ತಾನೆ. ಮೂರು ವಿಧವಾಗಿ ವಿಚಾರಿಸುವುದಾದರೆ ಇವನು ಉತ್ಪಾದ, ವ್ಯಯ, ಧ್ರೌವ್ಯರೂಪನಾಗಿರುತ್ತಾನೆ. ಪ್ರತಿಸಮಯದಲ್ಲಿ ಪರ್ಯಾಯಗಳ ಪರಿವರ್ತನೆ ಯಾಗುವುದರಿಂದ ಉತ್ಪತ್ತಿ, ವಿನಾಶಗಳನ್ನು ಹೊಂದುತ್ತಿದ್ದರೂ ಕೂಡ ತನ್ನ ಸ್ವಭಾವದಿಂದ ಅವಿನಾಶಿಯಾಗಿರುತ್ತಾನೆ ಅಥವಾ ಇವನು ಸಮ್ಯಗ್ದರ್ಶನ, ಸಮ್ಯಜ್ಞಾನ ಮತ್ತು ಸಮ್ಯಕ್ಚಾರಿತ್ರಸ್ವರೂಪನಾಗಿರುತ್ತಾನೆ.

ನಾಲ್ಕು ಪ್ರಕಾರವಾಗಿ ವಿಚಾರಿಸುವುದಾದರೆ ಈ ಆತ್ಮನು ಸಮ್ಯಗ್ದರ್ಶನ, ಸಮ್ಯಗ್ಜ್ಞಾನ, ಸಮ್ಯಕ್ಚಾರಿತ್ರ ಮತ್ತು ಸಮ್ಯಕ್ ತಪಸ್ಸು ಈ ನಾಲ್ಕು ಆರಾ ಧನಾಸ್ವರೂಪನಾಗಿರುತ್ತಾನೆ ಅಥವಾ ಅನಂತದರ್ಶನ, ಅನಂತಜ್ಞಾನ, ಅನಂತ ಸುಖ, ಅನಂತ ವೀರ್ಯ ಈ ನಾಲ್ಕು ಅನಂತಚತುಷ್ಟಯಸ್ವರೂಪನಾಗಿರು

ತ್ತಾನೆ ಅಥವಾ ಸುಖ, ಸತ್ತಾ, ಚೈತನ್ಯ, ಬೋಧಗಳೆಂಬ ನಾಲ್ಕು ಭಾವ ಪ್ರಾಣಧಾರಿಯಾಗಿರುತ್ತಾನೆ ಅಥವಾ ದ್ರವ್ಯ, ಕ್ಷೇತ್ರ, ಕಾಲ, ಭಾವಗಳ ಅಧಿಪತಿಯಾಗಿರುತ್ತಾನೆ. ಐದು ವಿಧವಾಗಿ ವಿಚಾರಿಸುವುದಾದರೆ ಇವನು ಅನಂತ ದರ್ಶನ, ಅನಂತಜ್ಞಾನ, ಕ್ಷಾಯಿಕಸಮ್ಯಕ್ತ್ವ, ಕ್ಷಾಯಿಕಚಾರಿತ್ರ ಮತ್ತು ಅನಂತ ವೀರ್ಯಸ್ವರೂಪನಾಗಿರುತ್ತಾನೆ ಅಥವಾ ಔಪಶಮಿಕ, ಕ್ಷಾಯಿಕ, ಕ್ಷಾಯೋಪಶಮಿಕ, ಔದಾಯಿಕ,ಪಾರಿಣಾಮಿಕಗಳೆಂಬೈದು ಭಾವಗಳಲ್ಲಿ ಪರಿಣಮನಶಕ್ತಿಯುಳ್ಳವನಾಗಿರುತ್ತಾನೆ ಅಥವಾ ಅರಹಂತ, ಸಿದ್ಧ, ಆಚಾರ್ಯ, ಉಪಾಧ್ಯಾಯ, ಸಾಧುಪರಮೇಷ್ಠಿ ಪದಧಾರಿಯಾಗಿರುತ್ತಾನೆ ಅಥವಾ ನಾರಕ, ಪಶು, ದೇವ, ಮನುಷ್ಯ,ಸಿದ್ಧಗತಿ ಈ ಐದು ಗತಿಗಳಲ್ಲಿ ಹೋಗುವ ಶಕ್ತಿಯುತನಾಗಿರುತ್ತಾನೆ. ಆರು ವಿಧವಾಗಿ ವಿಚಾರಿಸಿದರೆ ಇವನು ಅನಂತಜ್ಞಾನ, ಅನಂತದರ್ಶನ, ಅನಂತ ವೀರ್ಯ, ಅನಂತಸುಖ, ಕ್ಷಾಯಿಕಸಮ್ಯಕ್ತ್ವ, ಕ್ಷಾಯಿಕ ಚಾರಿತ್ರಗಳೆಂಬ ಆರು ಗುಣನಿಧಿಯಾಗಿರುತ್ತಾನೆ ಅಥವಾ ಪೂರ್ವ, ಪಶ್ಚಿಮ, ದಕ್ಷಿಣ, ಉತ್ತರ, ಊರ್ಧ್ವ ಮತ್ತು ಅಧೋ ದಿಕ್ಕುಗಳಲ್ಲಿ ಹೋಗುವ ಶಕ್ತಿಧಾರಿಯಾಗಿರುತ್ತಾನೆ ಅಥವಾ ಅಸ್ತಿತ್ವ, ವಸ್ತುತ್ವ, ದ್ರವ್ಯತ್ವ, ಪ್ರಮೇಯತ್ವ, ಪ್ರದೇಶತ್ವ. ಅಗುರುಲಘುತ್ವ ಈ ಆರು ಸಮ್ಯಕ್‌ಗುಣಗಳಧಾರಿಯಾಗಿರುತ್ತಾನೆ.

ಏಳು ವಿಧವಾಗಿ ವಿಚಾರಿಸುವುದಾದರೆ ಈ ಆತ್ಮನು ಅನಂತಜ್ಞಾನ, ಅನಂತದರ್ಶನ, ಅನಂತಸುಖ, ಅನಂತಜ್ಞಾನಚೇತನಾ, ಅನಂತವೀರ್ಯ, ಕ್ಷಾಯಿಕಸಮ್ಯಕ್ತ್ವ ಮತ್ತು ಕ್ಷಾಯಿಕಚಾರಿತ್ರ ಈ ಏಳು ಗುಣನಿಧಿಯಾಗಿರುತ್ತಾನೆ ಅಥವಾ ಸ್ಯಾದಸ್ತಿ, ಸ್ಯಾನ್ನಾಸ್ತಿ, ಸ್ಯಾದವಕ್ತವ್ಯ, ಸ್ಯಾದಸ್ತಿನಾಸ್ತಿ, ಸ್ಯಾದಸ್ತಿಅವಕ್ತವ್ಯ, ಸ್ಯಾನ್ನಾಸ್ತಿಅವಕ್ತವ್ಯ ಮತ್ತು ಸ್ಯಾದಸ್ತಿನ್ನಾಸ್ತಿಅವಕ್ತವ್ಯ ಈ ಏಳು ಭಂಗಿಗಳಿಂದ ಸಿದ್ಧನಾಗುತ್ತಾನೆ ಅಥವಾ ಜೀವ, ಅಜೀವ, ಆಸ್ರವ, ಬಂಧ, ಸಂವರ, ನಿರ್ಜರಾ ಮತ್ತು ಮೋಕ್ಷ ಈ ಏಳು ತತ್ವಗಳ ವ್ಯವಸ್ಥೆಗೆ ಕಾರಣನಾಗಿರುತ್ತಾನೆ ಅಥವಾ ನೈಗಮ, ಸಂಗ್ರಹ, ವ್ಯವಹಾರ, ಋಜುಸೂತ್ರ ಶಬ್ದ, ಸಮಭಿರೂಢ ಮತ್ತು ಏವಂಭೂತ ಈ ಏಳು ನಯಗಳಿಂದಲೂ ವಿಚಾರಿಸಲ್ಪಡಲು ಸಾಧ್ಯವಾಗುತ್ತಾನೆ.

ಒಂಭತ್ತು ಪ್ರಕಾರವಾಗಿ ವಿಚಾರಿಸುವುದಾದರೆ ಈ ಆತ್ಮನು ಅನಂತ ಜ್ಞಾನ, ಅನಂತದರ್ಶನ, ಅನಂತದಾನ, ಅನಂತಲಾಭ, ಅನಂತಭೋಗ,

ಅನಂತಉಪಭೋಗ, ಅನಂತವೀರ್ಯ, ಕ್ಷಾಯಿಕಸಮ್ಯಕ್ತ್ವ ಮತ್ತು ಕ್ಷಾಯಿಕ ಚಾರಿತ್ರ ಈ ಒಂಭತ್ತು ಕೇವಲಲಬ್ಧಿಸ್ವರೂಪನಾಗಿರುತ್ತಾನೆ ಅಥವಾ ಪುಣ್ಯ ಪಾಪಸಹಿತವಾದ ಸಪ್ತತತ್ವಗಳು ಅಂದರೆ ನವಪದಾರ್ಥಗಳಲ್ಲಿರುತ್ತಾನೆ. ಜೀವನ ಅಪೇಕ್ಷೆಯಿಂದ ಒಂಭತ್ತು ಪದಾರ್ಥಗಳ ವಿಚಾರವು ಇರುವುದು. ಹೀಗೆ ಆತ್ಮತತ್ವವನ್ನು ಅನೇಕ ಗುಣಗಳ ಅಥವಾ ಅನೇಕ ಸ್ವಭಾವವೆಂದು ವಿಚಾರಿಸುವುದಾದರೆ ವಸ್ತುವಿನ ವಿಚಾರ ಸಮಭಾವನೆಯಿಂದಲೇ ಆಗಬೇಕು. ರಾಗದ್ವೇಷಗಳನ್ನು ಅಥವಾ ಸಾಂಸಾರಿಕವಿಕಲ್ಪಗಳನ್ನು ಜಯಿಸಬಹುದು. ಗುಣಗಳನ್ನು ಭಾವಿಸುವುದಾದರೆ ಮತ್ತು ವಿಕಲ್ಪರಹಿತ ಭಾವದಲ್ಲಿ ಬರುವುದಾದರೆ ಸ್ವಾನುಭವ ಕ್ರಿಯೆಯುಂಟಾಗುವುದು.

ಸಮಯಸಾರಕಲಶದಲ್ಲಿ ಹೇಳಿರುತ್ತಾರೆ :

**ಚಿತ್ರಾತ್ಮಶಕ್ತಿಸಮುದಾಯಮಯೋಽಯಮಾತ್ಮಾ**
**ಸದ್ಯಃ ಪ್ರಣಶ್ಯತಿ ನಯೇಕ್ಷಣ ಖಂಡ್ಯಮಾನಃ ।**
**ತಸ್ಮಾದಖಂಡಮನಿರಾಕೃತಖಂಡನೇಕ-**
**ಮೇಕಾಂತಶಾಂತಮಚಲಂ ಚಿದಹಂ ಮಹೋಽಸ್ಮಿ ॥೨೪-೧೧॥**

ಭಾವಾರ್ಥ : ಆತ್ಮನು ನಾನಾಪ್ರಕಾರದ ಶಕ್ತಿಯ ಪಿಂಡನಾಗಿರುತ್ತಾನೆ ಒಂದೊಂದು ನಯದಿಂದ ಒಂದೊಂದುಗುಣಗಳ ಪರ್ಯಾಯ ಅಥವಾ ಶಕ್ತಿಯನ್ನು ವಿಚಾರಿಸುವುದರಿಂದ ಆತ್ಮನು ಅಖಂಡರೂಪವಾದ ವಿಚಾರವುಂಟಾಗುವುದು. ಆದ್ದರಿಂದ ಖಂಡವಿಚಾರವನ್ನು ಬಿಟ್ಟು ನನ್ನನ್ನು ನಾನು ಇಂತು ವಿಚಾರಿಸುತ್ತೇನೆಂದರೆ : ಈ ಆತ್ಮನು ಅಖಂಡಸ್ವರೂಪಿಯಾಗಿದ್ದರೂ ಕೂಡ ಅನೇಕ ಭೇದಸ್ವರೂಪಿಯೂ, ಏಕಸ್ವರೂಪಿಯೂ, ಪರಮಶಾಂತನೂ ಮತ್ತು ಚೈತನ್ಯಮಯ ಜ್ಯೋತಿಸ್ವರೂಪನೂ ಆಗಿರುತ್ತಾನೆ.



## ಎರಡನ್ನು ಬಿಟ್ಟು, ಎರಡುಗುಣಗಳನ್ನು ವಿಚಾರಿಸು

**ವೇ ಛಂಡಿವಿ ವೇ ಗುಣ ಸಹಿಉ ಜೋ ಅಪ್ಪಾಣಿ ವಸೇಇ ।**
**ಜಿಣು ಸಾಮಿಉ ಏಮಇಂ ಭಣಇ ಲಹು ಣಿವ್ವಾಣು ಲಹೇಇ ॥೭೭॥**

**ಅನ್ವಯಾರ್ಥ**: ಜೋ ವೇ ಛಂಡಿವಿ-ಎರಡನ್ನು (ರಾಗ ಮತ್ತು ದ್ವೇಷ) ಬಿಟ್ಟು, ವೇ ಗುಣ ಸಹಿಉ ಅಪ್ಪಾಣಿ ವಸೇಇ-ಜ್ಞಾನದರ್ಶನಗಳೆಂಬ ಎರಡು ಗುಣಧಾರೀ ನತ್ಮನಲ್ಲಿರುವುವು. ಲಹು ಣಿವ್ವಾಣು ಲಹೇಇ-ಅವನೇ ಆತಿಶೀಘ್ರ ನಿರ್ವಾಣಪದವಿಯನ್ನು ಪಡೆಯುವನು. ಏಮುಇಂ ಜಿಣು ಸಾಮಿಉ ಭಣಇ-ಎಂದು ಸರ್ವಜ್ಞ ಪರಮಜಿನದೇವನು ಉಪದೇಶವನ್ನಿತ್ತಿರುವನು.

**ಭಾವಾರ್ಥ**: ಬಂಧಕ್ಕೆ ಮೂಲಕಾರಣಗಳಾದ ರಾಗದ್ವೇಷಗಳನ್ನು ತ್ಯಜಿಸಬೇಕು. ತ್ಯಜಿಸುವುದಕ್ಕೆ ಕಾರಣವಾದರೋ ಮೊದಲು ಮಿಥ್ಯಾತ್ವವನ್ನು ಮತ್ತು ಅನಂತಾನುಬಂಧೀ ಕಷಾಯಸಂಬಂಧವಾದ ರಾಗದ್ವೇಷಗಳನ್ನು ಬಿಡುವುದು. ಮಿಥ್ಯಾದೃಷ್ಟಿ ಜೀವನು ಅಂತರಂಗದಲ್ಲಿ ಪರಪದಾರ್ಥಗಳನ್ನು ಆತ್ಮನೆಂದು ಭಾವಿಸುತ್ತಾ ಅವುಗಳಲ್ಲಿ ಅಹಂಕಾರ ಮತ್ತು ಮಮಕಾರಭಾವವನ್ನು ಭಾವಿಸುತ್ತಾನೆ. ಇಂದ್ರಿಯಗಳಿಂದುಂಟಾಗುವ ಪರಾಧೀನಸುಖವನ್ನು ಸತ್ಯಸುಖವೆಂದು ತಿಳಿಯುತ್ತಾನೆ. ಈ ಮಿಥ್ಯಾತ್ವಭಾವನೆಯಿಂದ ವಿಷಯಗಳ ಸೇವನೆಯಿಂದ ಇಂದ್ರಿಯ ಸುಖದ ಅಪೇಕ್ಷೆಮಾಡುತ್ತಾನೆ ಮತ್ತು ಅವುಗಳಲ್ಲಿ ರಾಗಭಾವವನ್ನಿಡುತ್ತಾನೆ. ಇಂದ್ರಿಯಸುಖದ ಹಾನಿಯಾದಾಗ ಅರುಚಿಯುಂಟಾಗಿ ಅವುಗಳಲ್ಲಿ ದ್ವೇಷಭಾವವನ್ನಿಡುತ್ತಾನೆ.

ನಾಲ್ಕು ಕಷಾಯ ಮತ್ತು ಒಂಭತ್ತು ನೋಕಷಾಯಗಳಲ್ಲಿ ಲೋಭ ಮತ್ತು ಮಾಯಾ ಕಷಾಯಗಳಿಗೆ ಮತ್ತು ಹಾಸ್ಯ, ರತಿ, ಸ್ತ್ರೀವೇದ ಪುಂವೇದ ಮತ್ತು ನಪುಂಸಕವೇದ ಈ ಐದು ನೋಕಷಾಯಗಳಿಗೆ ರಾಗವೆಂದು ಹೇಳುತ್ತಾರೆ. ತಥಾ ಕ್ರೋಧ ಮತ್ತು ಮಾನಕಷಾಯಗಳಿಗೆ ಮತ್ತು ಅರತಿ, ಶೋಕ, ಭಯ, ಜುಗುಪ್ಸಾ ಈ ನಾಲ್ಕು ನೋಕಷಾಯಗಳಿಗೆ ದ್ವೇಷವೆಂದು ಹೇಳುತ್ತಾರೆ. ಅನಂತಾನುಬಂಧೀಸಂಬಂಧಗಳಾದ ರಾಗದ್ವೇಷ, ಅಪ್ರತ್ಯಾಖ್ಯಾನ ಕಷಾಯಸಂಬಂಧಿಗಳಾದ ರಾಗದ್ವೇಷ, ಪ್ರತ್ಯಾಖ್ಯಾನಸಂಬಂಧಿಗಳಾದ ರಾಗದ್ವೇಷ, ಸಂಜ್ವಲನಸಂಬಂಧೀಗಳಾದ ರಾಗದ್ವೇಷ ಹೀಗೆ ರಾಗದ್ವೇಷಗಳಲ್ಲಿ ನಾಲ್ಕು ಭೇದಗಳಿವೆ.

ಮಿಥ್ಯಾತ್ವ ಮತ್ತು ಅನಂತಾನುಬಂಧೀ ರಾಗದ್ವೇಷಗಳನ್ನು ದೂರಗೊಳಿಸುವುದಕ್ಕಾಗಿ ಸಮ್ಯಗ್ದರ್ಶನದ ಪ್ರಾಪ್ತಿ ಅತ್ಯಾವಶ್ಯಕವಾಗಿರುತ್ತದೆ. ಈ ಸಮ್ಯಕ್ತ್ವ ಪ್ರಾಪ್ತಿಯ ಉಪಾಯ ತನ್ನಾತ್ಮನ ನಿಜಸ್ವಭಾವದ ಜ್ಞಾನವಾಗಿರು

ವುದರಿಂದಲೇ ಈ ಆತ್ಮನು ಜ್ಞಾನದರ್ಶನಸ್ವಭಾವಧಾರಿಯಾಗಿರುತ್ತಾನೆ. ಸೂರ್ಯನಂತೆ ಸ್ವಪರಪ್ರಕಾಶಕನ ಸರ್ವಜ್ಞನೂ, ಸರ್ವದರ್ಶಿಯೂ, ಸಂಪೂರ್ಣ ವೀತರಾಗನೂ, ಪೂರ್ಣ ಆನಂದಮಯನೂ. ಸ್ವಯಂ ಪರಮಾತ್ಮಸ್ವರೂಪಿಯೂ, ಎಂಟು ಕರ್ಮ, ರಾಗಾದಿಭಾವಕರ್ಮ, ಶರೀರಧಾರಿ ನೋಕರ್ಮಗಳಿಂದ ಭಿನ್ನನೂ ಆಗಿರುತ್ತಾನೆ. ಅತೀಂದ್ರಿಯಸುಖವೇ ಯಥಾರ್ಥ ಸುಖವೆಂದು ತಿಳಿದು, ಆಗಾಗ ತನ್ನ ಜ್ಞಾನ, ತರ್ಶನ ಸ್ವಭಾವಧಾರಿಯಾದ ಆತ್ಮಭಾವನೆಯನ್ನು ಭಾವಿಸುವುದರಿಂದ ಮಿಥ್ಯಾತ್ವ ಮತ್ತು ಅನಂತಾನುಬಂಧೀ ಕಷಾಯಗಳ ಉಪಶಮ, ಕ್ಷಯೋಪಶಮ ಅಥವಾ ಕ್ಷಯ ಆಗುತ್ತದೆ. ಆಗ ಈ ಜೀವನಿಗೆ ಮೂಢತ್ವವು ದೂರವಾಗಿ ಸಮ್ಯಗ್ದರ್ಶನ ಉದ್ಭವಿಸುತ್ತದೆ. ಇದರಿಂದಲೇ ನಿರ್ವಾಣಪದವಿಯ ಪ್ರಾಪ್ತಿಯ ಯೋಗ್ಯತೆ ಮತ್ತು ಸಂಸಾರ ಸಮುದ್ರದಿಂದ ಪಾರಾಗುದ ತೀವ್ರ ಅಭಿರುಚಿ ಉಂಟಾಗುತ್ತದೆ.

ನಾಲ್ಕು ಅಪ್ರತ್ಯಾಖ್ಯಾನ, ನಾಲ್ಕು ಪ್ರತ್ಯಾಖ್ಯಾನ ಮತ್ತು ನಾಲ್ಕು ಸಂಜ್ವಲನ ಈ ಹನ್ನೆರಡ ಕಷಾಯಗಳು ಮತ್ತು ಒಂಭತ್ತು ವಿಧ ನೋಕಷಾಯಗಳ ಉದಯವಿರುವುದರಿಂದಲೇ ಚಾರಿತ್ರದಲ್ಲಿ ಹೀನತೆಕಂಡುಬರುತ್ತದೆ. ಅವಿರತಿ ಸಮ್ಯದೃಷ್ಟಿಗೆ (4+4+4+9)=21 ವಿಧ ಮೋಹನೀಯ ಕರ್ಮದ ಉದಯದಿಂದ ರಾಗದ್ವೇಷಗಳುಂಟಾಗುತ್ತವೆ. ಅವನ್ನು ಅವನು ರೋಗವೆಂದೇ ತಿಳಿಯುತ್ತಾನೆ. ಆತ್ಮಬಲಹೀನತೆಯಿಂದಲೇ ಗೃಹಸ್ಥನು ವಿಷಯಭೋಗಗಳನ್ನನುಭವಿಸುತ್ತಾನೆ ಮತ್ತು ಧರ್ಮ, ಅರ್ಥ, ಕಾಮಪುರುಷಾರ್ಥಗಳನು ಸೇವಿಸುತ್ತಾನೆ. ಆದರೆ ಈ ಮನ, ವಚನ, ಕಾಯಗಳ ಕ್ರಿಯೆಗಳನ್ನು ಆತ್ಮಕರ್ತವ್ಯವೆಂದು ತಿಳಿಯುವುದಿಲ್ಲ. ತ್ಯಾಗಭಾವನೆಯನ್ನಿಟ್ಟುಕೊಂಡಿರುತ್ತಾನೆ. ಇಪ್ಪತ್ತೊಂದು ಕಷಾಯಗಳ ಬಲವನ್ನು ಕಡಿಮೆಮಾಡುವುದಕ್ಕಾಗಿಯೇ ದೇವಪೂಜೆ, ಗುರುಭಕ್ತಿ, ಸ್ವಾಧ್ಯಾಯ ಸಾಮಾಯಿಕಾದಿಗಳ ಮೂಲಕ ತನ್ನಾತ್ಮನ ಶುದ್ಧಜ್ಞಾನ, ದರ್ಶನ ಸ್ವಭಾವಗಳ ಚಿಂತನೆಗೈಯುತ್ತಾನೆ. ಆತ್ಮಾನುಭವದ ಅಭ್ಯಾಸಮಾಡುತ್ತಾನೆ. ಈ ಆತ್ಮೀಕ ಪುರುಷಾರ್ಥದಿಂದಲೇ ಅಪ್ರತ್ಯಾಖ್ಯಾನಾವರಣ ಕಷಾಯಗಳ ಉದಯವಿಲ್ಲದಿರುವಾಗ ಕೇವಲ (4+4+9=) 17 ಕಷಾಯಗಳ ಉದಯವಿರುತ್ತದೆ. ಆಗಲೇ ಶ್ರಾವಕರ ಚಾರಿತ್ರವನ್ನು ಸ್ವೀಕರಿಸಿ ಶ್ರಾವಕನಾಗುತ್ತಾನೆ.

ಯಾವಾಗ ಆತ್ಮಾನುಭವದ ಅಭ್ಯಾಸದಿಂದ ಪ್ರತ್ಯಾಖ್ಯಾನ ಕಷಾಯಗಳ ಉದಯವು ಕಡಿಮೆಯಾಗುವುದೋ, ಆಗ ಹನ್ನೊಂದು ಪ್ರತಿಮೆಗಳ ರೂಪವಾಗಿ ಚಾರಿತ್ರವನ್ನು ಹೆಚ್ಚಿಸಿಕೊಳ್ಳುತ್ತಾನೆ. ಪ್ರತ್ಯಾಖ್ಯಾನ ಕಷಾಯಗಳ ಉದಯವಿಲ್ಲದಿರುವಾಗ ಕೇವಲ (4+9=) 13 ವಿಧದ ಕಷಾಯಗಳ ಉದಯವನ್ನಿಟ್ಟುಕೊಂಡು ವಸ್ತ್ರಾದಿಪರಿಗ್ರಹಗಳನ್ನು ತ್ಯಜಿಸಿ ಸಾಧುವಾಗುವನು.

ಈ ಸಾಧುಸ್ಥಾನದಲ್ಲಿ ಧರ್ಮಧ್ಯಾನದ ಅಭ್ಯಾಸದಿಂದ ಕಷಾಯಗಳ ಬಲವನ್ನು ಕಡಿಮೆಮಾಡಿಕೊಂಡು, ಉಪಶಮಶ್ರೇಣಿಯಲ್ಲಿ ಶುಕ್ಲಧ್ಯಾನದ ಮೂಲಕ ಹದಿಮೂರುಕಷಾಯಗಳ ಸೊಕ್ಕನ್ನಡಗಿಸಿ ವೀತರಾಗಿಯಾಗಿ ಪುನಃ ಹಿಂದಕ್ಕೆ ಬರುತ್ತಾನೆ. ಆದರೆ ಕ್ಷಪಕಶ್ರೇಣಿಯಲ್ಲಿ ಇವುಗಳನ್ನು ನಾಶಮಾಡಿ ವೀತರಾಗಿಯಾಗಿ ಅವನು ಮೋಕ್ಷಗಾಮಿಯಾಗುತ್ತಾನೆ. ಕ್ಷಪಕಶ್ರೇಣಿಯನ್ನೇರಿಯೇ ಹನ್ನೆರಡನೆಯ ಕ್ಷೀಣಮೋಹಗುಣಸ್ಥಾನಕ್ಕೆ ಬಂದು ಉಳಿದ ಮೂರು ಘಾತಿಕರ್ಮಗಳನ್ನು ನಾಶಮಾಡಿ, ಕೇವಲೀ ಭಗವಾನರಾದ ಅರಹಂತ ಪರಮಾತ್ಮನಾಗುತ್ತಾನೆ. ಜ್ಞಾನದರ್ಶನ ಗುಣಗಳ ಭಾವನೆಯನ್ನು ಭಾವಿಸುತ್ತಾ ಅನಂತಜ್ಞಾನ, ಅನಂತದರ್ಶನ, ಅನಂತವೀರ್ಯ ಮತ್ತು ಅನಂತಸುಖಗಳನ್ನು ಪ್ರಕಟಿಸಿಕೊಳ್ಳುತ್ತಾನೆ.

ಹೀಗೆ ರಾಗದ್ವೇಷಗಳನ್ನು ತ್ಯಜಿಸಿ ಜ್ಞಾನದರ್ಶನಗಳುಳ್ಳ ಆತ್ಮಪ್ರಾಪ್ತಿ ಮಾಡಿಕೊಳ್ಳಬೇಕು.

ಸಮಯಸಾರಕಲಶದಲ್ಲಿ ಹೇಳಿರುತ್ತಾರೆ :

**ಅಧ್ಯಾಸ್ಯ ಶುದ್ಧನಯಮುದ್ಧತಬೋಧಚಿನ್ಹಮೈಕಾಗ್ರ್ಯಮೇವ**
**ಕಲಯಂತಿ ಸದೈವ ಯೇ ತೇ।**
**ರಾಗಾದಿಮುಕ್ತಮನಸಃ ಸತತಂ ಭವಂತಃ ಪಶ್ಯಂತಿ ಬಂಧವಿಧುರಂ**
**ಸಮಯಸ್ಯ ಸಾರಂ ॥೮॥೫॥**

**ಭಾವಾರ್ಥ :** ಶುದ್ಧನಿಶ್ಚಯನಯದ ಮೂಲಕ ಮಹಾಜ್ಞಾನಲಕ್ಷಣಾಧಾರಿಯು ತನ್ಮಾತ್ರ ಏಕ ಸ್ವಭಾವದ ಅನುಭವವನ್ನು ಮಾಡಿಕೊಳ್ಳುತ್ತಾನೆ. ಅವನು ರಾಗಾದಿಭಾವಗಳಿಂದ ಬಿಡುಗಡೆಯಾಗಿ ಬಂಧರಹಿತ ಶುದ್ಧಾತ್ಮನನ್ನೇ ನೋಡುತ್ತಾನೆ.

# ಮೂರನ್ನು ಬಿಟ್ಟು ಮೂರು ಗುಣಗಳನ್ನು ವಿಚಾರಿಸು

**ತಿಹಿಂ ರಹಿಯಉ ತಿಹಿಂ ಗುಣ-ಸಹಿಉ ಜೋ ಅಪ್ಪಾಣಿ ವಸೇಇ ।**
**ಸೋ ಸಾಸಯ-ಸುಹ-ಭಾಯಣು ವಿ ಜಿಣವರು ಏಮ ಭಣೇಇ ॥೭೮॥**

**ಅನ್ವಯಾರ್ಥ:** ತಿಹಿಂ ರಹಿಯಉ–ರಾಗ, ದ್ವೇಷ, ಮೋಹ ಈ ಮೂರರಿಂದ ರಹಿತನಾಗಿ, ತಿಹಿಂ ಗುಣ-ಸಹಿಉ ಅಪ್ಪಾಣಿ ಜೋ ವಸೇಇ–ಸಮ್ಯಗ್ದರ್ಶನ, ಜ್ಞಾನ, ಚಾರಿತ್ರಗಳೆಂಬ ಮೂರು ಗುಣಗಳಿಂದ ಯುಕ್ತನಾದ ಆತ್ಮನಲ್ಲಿ ಯಾವನು ನಿವಾಸಿಸುವನೋ, ಸೋ ಸಾಸಿಯ-ಸುಹ-ಭಾಯಣು ವಿ–ಅವನು ಶಾಶ್ವತವಾದ ಸುಖಕ್ಕೆ ಪ್ರಾತ್ರನಾಗುವನೆಂದು, ಜಿಣವರು ಏಮ ಭಣೇಇ–ತೀರ್ಥಂಕರರು ಹೇಳುತ್ತಾರೆ.

**ಭಾವಾರ್ಥ:** ಸಮ್ಯಗ್ದೃಷ್ಟಿ ಜೀವನಿಗೆ ಎಂಟು ಕರ್ಮಗಳ ಬಂಧವು ಆತ್ಮಸ್ವಭಾವದಿಂದ ಭಿನ್ನವೆಂದು ನಿಶ್ಚಯವಾಗುವುದು. ಇವುಗಳಲ್ಲಿ ಮೋಹನೀಯ ಕರ್ಮ ಬಲಿಷ್ಠವೂ ಮುಖ್ಯವೂ ಆಗಿರುತ್ತದೆ. ಇದರ ಉದಯದಿಂದಾಗಲಿ ಅಥವಾ ಪ್ರಭಾವದಿಂದಾಗಲಿ ಜೀವನ ಉಪಯೋಗ ರಾಗದ್ವೇಷಗಳಿಂದಲೇ ಮಲಿನವಾಗುತ್ತದೆ. ಇದರಿಂದಲೇ ಕರ್ಮಬಂಧ ಆಗುತ್ತದೆ. ವಿವೇಕಿ ಜೀವನು ಮಲಿನವಾದ ನೀರಿನಲ್ಲಿ ನಿರ್ಮಲ ಬೀಜವನ್ನಿಟ್ಟು, ನೀರಿನಿಂದ ಕಷ್ಮಲವನ್ನು ಬೇರ್ಪಡಿಸಿ, ನೀರನ್ನು ಉಪಯೋಗಿಸುವಂತೆ, ಭೇದವಿಜ್ಞಾನದ ಬಲದಿಂದ ರಾಗದ್ವೇಷಮೋಹಗಳನ್ನು ಆತ್ಮನಿಂದ ಬೇರ್ಬಡಿಸಿ, ವೀತರಾಗ ವಿಜ್ಞಾನಮಯ ಆತ್ಮಾನುಭವವನ್ನು ಪಡೆದುಕೊಳ್ಳುತ್ತಾನೆ. ಈ ರಾಗದ್ವೇಷ ಮೋಹಗಳನ್ನು ದೂರಗೊಳಿಸಲು ಜ್ಞಾನಿಯು ಮೋಹನೀಯಕರ್ಮದಿಂದಲೂ, ರಾಗದ್ವೇಷಮೋಹಭಾವಗಳಿಂದಲೂ ತಥಾ ಅವುಗಳನ್ನುಂಟುಮಾಡುವ ಬಾಹ್ಯ ಕಾರಣಗಳಿಂದಲೂ ಉದಾಸೀನನಾಗುತ್ತಾನೆ.

ವ್ಯವಹಾರನಯದಿಂದ ನೋಡುವಾಗ ಸಂಸಾರೀ ಜೀವಗಳಲ್ಲಿ ಭೇದವು ಕಂಡುಬರುತ್ತದೆ. ಮಿತ್ರ, ಶತ್ರು, ತಂದೆ, ತಾಯಿ, ಪುತ್ರ, ಪುತ್ರಿ, ಸ್ವಾಮಿ, ಸೇವಕ, ಧ್ಯಾತ, ಧ್ಯೇಯ, ಸುಂದರ, ಕುರೂಪಿ, ರೋಗಿ, ನಿರೋಗಿ, ಧನಿಕ,

ಬಡವ, ವಿದ್ವಾಂಸ, ಮೂರ್ಖ, ಬಲಿ, ನಿರ್ಬಲಿ, ಉಚ್ಚಕುಲಿ, ನೀಚಕುಲಿ, ಸಾಧು. ಗೃಹಸ್ಥ. ರಾಜ, ಪ್ರಜೆ, ದೇವ, ನಾರಕಿ, ತಿರ್ಯಂಚ, ಮಾನವ, ತ್ರಸ, ಸ್ಥಾವರ, ಸೂಕ್ಷ್ಮ, ಬಾದರ, ಪರ್ಯಾಪ್ತ, ಅಪರ್ಯಾಪ್ತ. ಪ್ರತ್ಯೇಕ, ಸಾಧಾರಣ, ಪಾಪಿ, ಪುಣ್ಯಶಾಲಿ. ಲೋಭಿ, ಸಂತೋಷಿ, ಮಾಯಾವಿ, ಸರಳಿ, ಮಾನಿ, ವಿನಯಿ, ಕ್ರೋಧಿ, ಕಪಟಿ, ಸ್ತ್ರೀ, ಪುರುಷ, ಬಾಲಕ, ವೃದ್ಧ, ಅನಾಥ, ಸನಾಥ, ಸಿದ್ಧ, ಸಂಸಾರಿ ಮೊದಲಾದವುಗಳಲ್ಲಿ ಇದು ಹೇಯವೆಂಬ ಮತ್ತು ಇದು ಉಪಾದೇಯವೆಂಬ ಭೇದಗಳು ಕಂಡುಬರುವಾಗ ವಿಷಯ ಲೋಲುಪಿಯೂ ಕಷಾಯಧಾರಿಯೂ ಆದ ಜೀವನು ಇಷ್ಟವಸ್ತುಗಳಲ್ಲಿ ರಾಗ ವನ್ನೂ ಅನಿಷ್ಟವಸ್ತುಗಳಲ್ಲಿ ದ್ವೇಷವನ್ನೂ ಕಲ್ಪಿಸಿಕೊಳ್ಳುತ್ತಾನೆ. ಈ ಎಲ್ಲಾ ಬಾಹ್ಯ ವ್ಯವಹಾರಗಳಲ್ಲಿ ಕಂಡುಬರುವ ಪ್ರಪಂಚವು ರಾಗದ್ವೇಷಮೋಹ ಗಳನ್ನುಂಟುಮಾಡಲು ನಿಮಿತ್ತಕಾರಣಗಳಾಗಿವೆ. ಆದ್ದರಿಂದಲೇ ಜ್ಞಾನಿಯು ರಾಗದ್ವೇಷಮೋಹಾದಿ ಭಾವಗಳನ್ನುಂಟುಮಾಡುವ ಮಲಿನತೆಯುಂಟಾಗದಂತೆ ನಿಶ್ಚಯನಯದಿಂದ ಲೋಕವನ್ನು ನೋಡುತ್ತಾನೆ. ಆಗ ಆರು ದ್ರವ್ಯಗಳು ಮೂಲಸ್ವಭಾವಗಳಲ್ಲಿ ಒಂದಕ್ಕೊಂದು ಭಿನ್ನಭಿನ್ನವಾಗಿರುತ್ತವೆಂದು ದೃಷ್ಟಿಗೆ ಬೀಳುತ್ತವೆ.

ಸಕಲ ಪುದ್ಗಲಪರಮಾಣುರೂಪ, ಧರ್ಮಾಸ್ತಿಕಾಯ, ಅಧರ್ಮಾಸ್ತಿ ಕಾಯ, ಆಕಾಶ, ಅಸಂಖ್ಯಾತ ಕಾಲಾಣುಗಳೆಲ್ಲವೂ ತಮ್ಮ ತಮ್ಮ ಸ್ವಭಾವ ದಲ್ಲಿಯೇ ದೃಷ್ಟಿಗೋಚರವಾಗುತ್ತವೆ. ಹಾಗೆಯೇ ಎಲ್ಲ ಜೀವಗಳು ಒಂದೇ ವಿಧವಾಗಿ ಶುದ್ಧವೆಂದೂ ಭಾಸವಾಗುತ್ತವೆ. ಯಾವಾಗ ತನ್ನನ್ನು ಶುದ್ಧವೆಂದು ಭಾವಿಸುವಾಗಲೇ ಸಮಭಾವನೆಯುಂಟಾಗುತ್ತದೆ. ರಾಗದ್ವೇಷಮೋಹಾದಿ ಗಳನ್ನು ಬಾಹ್ಯನಿಮಿತ್ತಬುದ್ಧಿಯಿಂದ ಕಿತ್ತು ಎಸೆದೊಡನೆ, ಆಸ್ರವವಿಲ್ಲದೆ ಆ ಭಾವಗಳ ನಿರೋಧವಾಗುತ್ತದೆ. ಹೀಗೆ ಜ್ಞಾನೀ ಜೀವನು ಆತ್ಮಾನುಭವ ಕ್ಕಾಗಿ ರಾಗದ್ವೇಷಾದಿಗಳನ್ನು ದೂರಗೊಳಿಸಿ, ತನ್ನಾತ್ಮನ ಮೂರು ಗುಣ ಗಳನ್ನು ಧ್ಯಾನಿಸಬೇಕು.

ಸಮ್ಯಕ್ತ್ವ, ಜ್ಞಾನ, ಚಾರಿತ್ರ ಇವು ಮೂರು ಆತ್ಮನ ಗುಣಗಳಾಗಿವೆ. ಈ ಯಥಾರ್ಥ ಗುಣಗಳನ್ನು ಧರಿಸುವುದೇ ಆತ್ಮನ ಸ್ವಭಾವವಾಗಿದೆ. ತನ್ನನ್ನು ತಾನು, ಪರವಸ್ತುವನ್ನು ಪರ ಎಂಬ ವಿಷಯದಲ್ಲಿ ಸತ್ಯ ಶ್ರದ್ಧಾನವನ್ನಿಡುವವನೇ

ಸಕಲ ಲೋಕಾಲೋಕಗಳ ದ್ರವ್ಯ, ಗುಣ, ಪರ್ಯಾಯಗಳನ್ನು ಏಕಕಾಲದಲ್ಲಿ ನೋಡುವ, ತಿಳಿಯುವವನಾಗುತ್ತಾನೆ ಮತ್ತು ಪರಮ ಚಾರಿತ್ರಗುಣದಿಂದ ಪರಮ ವೀತರಾಗ ರತ್ನತ್ರಯ ಸ್ವರೂಪನಾದ ಈ ಆತ್ಮನು ಅಭೇದ ದೃಷ್ಟಿಯಿಂದ ಏಕರೂಪನಾಗುತ್ತಾನೆ. ಶುದ್ಧ ಸ್ಫಟಿಕಮಣಿಯಂತೆ ನಿರ್ಮಲನೂ, ಪರಮ ನಿರಂಜನನೂ, ನಿರ್ವಿಕಾರನೂ, ಪರಮಜ್ಞಾನಿಯೂ, ಪರಮಪ್ರಶಾಂತನೂ ಮತ್ತು ಪರಮಾನಂದಮಯನೂ ಆಗುತ್ತಾನೆ. ಈ ಪ್ರಕಾರವಾಗಿ ಅನೇಕಾಂತವರ್ತಿ ಆತ್ಮತತ್ವವನ್ನು ಧ್ಯಾನಿಸಿದೊಡನೆ ಪರಿಣಾಮಗಳ ಸ್ಥಿರತೆ ಮತ್ತು ಸ್ವಯಂ ಆತ್ಮಾನುಭವ ಪ್ರಕಟವಾಗುತ್ತದೆ. ಇದಕ್ಕೇನೆ ಮೋಕ್ಷ ಮಾರ್ಗವೆಂದು ಹೇಳುವುದು.

ಆತ್ಮಾನುಭವದ ಸಮಯದಲ್ಲಿ ಅತೀಂದ್ರಿಯ ಆನಂದ ರಸಾಸ್ವಾದವುಂಟಾಗುತ್ತದೆ. ಈ ಆತ್ಮಾನುಭವದಿಂದಲೇ ಕ್ಷಪಕಶ್ರೇಣಾರೂಢನಾಗಿ, ಅರಹಂತ ಪರಮಾತ್ಮಸ್ವರೂಪನಾಗಿ, ಅನಂತಸುಖವನ್ನು ಅನುಭವಿಸುವವನಾಗುತ್ತಾನೆ.

ಸಮಯಸಾರ ಕಲಶದಲ್ಲಿ ಹೇಳಿರುತ್ತಾರೆ :

**ಸರ್ವತಃ ಸ್ವರಸನಿರ್ಭರಭಾವಂ ಚೇತಯೇ ಸ್ವಯಮಹಂ ಸ್ವಮಿಹೈಕಂ।**
**ನಾಸ್ತಿ ನಾಸ್ತಿ ಮಮ ಕಶ್ಚನ ಮೋಹಃ ಶುದ್ಧ ಚಿದ್‌ಘನಮಹೋ-**
**ನಿಧಿರಸ್ಮಿ ॥ ೩೦-೧॥**

**ಭಾವಾರ್ಥ :** ನಾನು ನನ್ನಿಂದಲೇ ನನ್ನ ಆತ್ಮೀಕ ಶುದ್ಧರಸದಿಂದ ಪರಿಪೂರ್ಣ ಚೈತನ್ಯ ಪ್ರಭುವಿನ ಅನುಭವ ಪಡೆದುಕೊಳ್ಳುತ್ತೇನೆ. ಕೇವಲ ಶುದ್ಧ ಜ್ಞಾನಭಂಡಾರಿಯಾದ ನನಗೆ ಯಾವ ಮೋಹಾದಿ ಕರ್ಮಗಳ ಬಂಧವೂ ಇಲ್ಲ.

## ನಾಲ್ಕನ್ನು ತ್ಯಜಿಸಿ ನಾಲ್ಕು ಗುಣಸಹಿತನನ್ನು ಧ್ಯಾನಿಸಬೇಕು

**ಚಉ ಕಸಾಯ ಸಣ್ಣಾ ರಹಿಉ ಚಉ ಗುಣ ಸಹಿಯಉ ವುತ್ತು।**
**ಸೋ ಅಪ್ಪಾ ಮುಣಿ ಜೀವ ತುಹುಂ ಜಿಮ ಪರು ಹೋಹಿ ಪವಿತ್ತು**
**॥ ೭೯॥**

ಅನ್ವಯಾರ್ಥ : ಚಉ ಕಸಾಯು-ನಾಲ್ಕು ಕ್ರೋಧಾದಿ ಕಷಾಯಗಳು, ಸಣ್ಣಾ-ಆಹಾರ, ಭಯ, ಮೈಥುನ, ಪರಿಗ್ರಹಗಳೆಂಬ ನಾಲ್ಕು ಸಂಜ್ಞೆಗಳು, ರಹಿಉ-ಇವುಗಳಿಂದ ರಹಿತನೂ, ಚಉ ಗುಣ ಸಹಿಯಉ ಅಪ್ಪಾ ವುತ್ತು-ಮತ್ತು ದರ್ಶನ, ಜ್ಞಾನ, ಸುಖ ಮತ್ತು ವೀರ್ಯಗಳೆಂಬ ನಾಲ್ಕು ಗುಣಗಳಿಂದ್ಯು ಕ್ತನೂ ಆದವನಿಗೆ ಆತ್ಮನೆಂದು ಹೇಳಿರುವರು. ಜೀವ ತುಹುಂ ಸೋ ಮುಣಿ-ಎಲೈ ಜೀವನೇ ನೀನು ಹಾಗೆಂದು ಮನನಮಾಡು. ಜಿಮ ಪರು ಪವಿತ್ತು ಹೋಹಿ-ಆದರಿಂದ ನೀನು ಪರಮ ಪವಿತ್ರನಾಗುವಿ.

ಭಾವಾರ್ಥ : ಈ ನಾಲ್ಕು ಕಷಾಯಗಳು ಆತ್ಮನನ್ನು ಮಲಿನವನ್ನಾಗಿ ಮಾಡುವವುಗಳಾಗಿವೆ. ಚಾರಿತ್ರ ಮೋಹನೀಯ ಕರ್ಮಪ್ರಕೃತಿಗಳಾದ ಕ್ರೋಧ, ಮಾನ, ಮಾಯ ಮತ್ತು ಲೋಭಗಳ ಉದಯವಾದೊಡನೆ ಕ್ರೋಧಾದಿ ಭಾವಗಳು ಪ್ರಕಟವಾಗುತ್ತವೆ. ಅವುಗಳು ಆತ್ಮಸ್ವಭಾವಮಾತ್ರವಲ್ಲವೆಂದೂ, ಆತ್ಮತತ್ವವು ಇವುಗಳಿಂದ ರಹಿತವಾದ ಪರಮವೀತರಾಗವೆಂದೂ ತಿಳಿದ ಸಾಧಕನು ಸ್ವಯಂ ಈ ಕಷಾಯಗಳಿಂದ ರಕ್ಷಣೆಪಡೆದುಕೊಂಡು, ಸದಾ ಶಾಂತ ಸ್ವಭಾವದಿಂದ ಮತ್ತು ಸಮಭಾವನೆಯಿಂದ ಇರಲು ಪ್ರಯತ್ನ ಗೈಯುವವನಾಗಿ ವ್ಯವಹಾರದಲ್ಲಿ ಗೌಣಭಾವವನ್ನಿಡಬೇಕು.

ಈ ಲೋಕವನ್ನು ನಿಶ್ಚಯನಯದಿಂದ ನೋಡುವ ಅಭ್ಯಾಸಮಾಡುತ್ತಾ ವಸ್ತುಸ್ವರೂಪವನ್ನು ವಿಚಾರಿಸುತ್ತಾ ರೋಗಿಯಲ್ಲಿ ದಯಭಾವವನ್ನಿಡುವಂತೆಯೂ, ಅಪರಾಧಿಯಲ್ಲಿ ಕ್ರೋಧವನ್ನಿಡದೆ ದಯಭಾವವನ್ನಿಡುವಂತೆಯೂ ತನ್ನಾತ್ಮನನ್ನು ಸುಧಾರಿಸಲು ಪ್ರಯತ್ನಿಬೇಕು.

ಆತ್ಮನು ಶ್ರೇಷ್ಠಮಾರ್ಗದಲ್ಲಿ ನಡೆಯುವಂತೆ ಸತತ ಪ್ರಯತ್ನವಿರಬೇಕು. ಕ್ರೋಧವು ನಿರ್ಬಲರಮೇಲೆ ತನ್ನಶಕ್ತಿಯನ್ನು ಬೀರುವುದು. ಆದರ ಸ್ವಲ್ಪ ಸಮಯ ಸುದೀರ್ಘವಾಗಿ ವಿಚಾರಿಸಿದರೆ ನಿರ್ಬಲರಮೇಲೆ ದಯಾಭಾವನೆಯುಂಟಾಗುವುದಲ್ಲದೆ ಕ್ರೋಧ ಉಂಟಾಗಲಾರದು. ಕ್ಷಣಭಂಗುರವಾದ ಧನಲಕ್ಷ್ಮೀ ಮೊದಲಾದವುಗಳಲ್ಲಿಯೂ ವಿದ್ಯಾ, ತಪ ಮೊದಲಾದವುಗಳಲ್ಲಿಯೂ ಅಭಿಮಾನ ಪಡಬಾರದು. ಫಲದ ಭಾರದ ವೃಕ್ಷವು ಜೊಗ್ಗುವಂತೆ, ಜ್ಞಾನಿಯ ಸಂಪತ್ತು ವಿದ್ಯೆ, ತಪಸ್ಸು, ಬಲಾದಿಗಳು ಅಧಿಕವಾಗುತ್ತಿದ್ದರೂ, ಕೋಮಲ ಸ್ವಭಾವ

ಮತ್ತು ವಿನಯಶಾಲಿಗಳಾಗಬೇಕು. ಪರರಿಗೆ ಮೋಸಗೊಳಿಸುವ ಭಾವವನ್ನು ಮನಸ್ಸಿನಿಂದ ಬೇರ್ಪಡಿಸಿ, ನಿರ್ವಂಚಕನಾಗಿ ವರ್ತಿಸಬೇಕು. ಸರಳವೂ, ಸತ್ಯವೂ ಆದ ವ್ಯವಹಾರವನ್ನಿಟ್ಟುಕೊಂಡು, ಲೋಭಮಲವನ್ನು ಸಂತೋಷ ಭಾವದಿಂದ ಜಯಿಸಬೇಕು.

ಆಹಾರ, ಭಯ, ಮೈಥುನ ಮತ್ತು ಪರಿಗ್ರಹಗಳೆಂಬ ನಾಲ್ಕು ಸಂಜ್ಞೆಗಳಂತೆ ಲೋಭ ಕಷಾಯವೂ, ಭಯ, ವೇದ ಎಂಬ ನೋಕಷಾಯಗಳೂ ಕೂಡ ಸಂಜ್ಞೆಗಳೇ ಆಗಿರುತ್ತವೆ. ಇವುಗಳಿಂದಲೂ ಆತ್ಮಸ್ವಭಾವವು ಭಿನ್ನವೇ ಇದ್ದು, ಪರಮ ನಿಸ್ಪೃಹಸ್ವಭಾವವಾಗಿರುತ್ತದೆ. ಆದ್ದರಿಂದ ಆಹಾರ ಸಂಜ್ಞೆಯನ್ನು ಸಂತೋಷಭಾವನೆಯಿಂದಲೂ, ಭಯವನ್ನು ನಿರ್ಭಯಭಾವನೆಯಿಂದಲೂ, ಮೈಥುನ ಸಂಜ್ಞೆಯನ್ನು ಬ್ರಹ್ಮಚರ್ಯಭಾವನೆಯಿಂದಲೂ ಮತ್ತು ಪರಿಗ್ರಹ ಸಂಜ್ಞೆಯನ್ನು ಅಪರಿಗ್ರಹ ಮತ್ತು ತೃಷ್ಣಾರಹಿತಭಾವನೆಯಿಂದಲೂ ಜಯಿಸಬೇಕು. ಉತ್ತಮಕ್ಷಮಾ, ಮಾರ್ದವ, ಆರ್ಜವ, ಶೌಚಗಳೆಂಬ ನಾಲ್ಕು ಗುಣಗಳಿಂದ ಯುಕ್ತನಾಗಿ ಆತ್ಮನು ಜ್ಞಾನ, ದರ್ಶನ, ಸುಖ ಮತ್ತು ವೀರ್ಯಗಳೆಂಬ ನಾಲ್ಕು ಅನಂತಚತುಷ್ಟಯ ಸಹಿತನೆಂದೂ ಧ್ಯಾನಿಸತಕ್ಕದ್ದು.

ಪವಿತ್ರನಾಗಬೇಕಾದರೆ ಪವಿತ್ರವಸ್ತುವನ್ನೇ ಚಿಂತಿಸುವುದು ದೊಡ್ಡ ಉಪಾಯವಾಗಿದೆ "ನಾನು ಕಷಾಯಗಳಿಂದಲೂ, ಸಂಜ್ಞೆಗಳಿಂದಲೂ ರಹಿತನಾದ ಶುದ್ಧಾತ್ಮ ಮತ್ತೆ ಆದರಂತೆ ಸಕಲ ಲೋಕದ ಆತ್ಮರುಗಳೂ ಕೂಡ ಪರಿಶುದ್ಧ" ಎಂಬ ಭಾವನೆಯಿಂದಲೇ ಸ್ವಾನುಭವದ ಪ್ರಾಪ್ತಿಯಾಗುತ್ತದೆ. ಈ ಸ್ವಾನುಭವಕ್ಕೇನೆ ಧರ್ಮಧ್ಯಾನವೆಂದೂ, ಶುಕ್ಲಧ್ಯಾನವೆಂದೂ ಹೇಳುತ್ತಾರೆ.

ಕಷಾಯವೇ ಕರ್ಮಗಳ ಸ್ಥಿತಿ ಮತ್ತು ಅನುಭಾಗಬಂಧಕ್ಕೆ ಕಾರಣವಾಗಿರುವಾಗ, ವೀತರಾಗಭಾವನೆ ಕರ್ಮಗಳ ಸ್ಥಿತಿ ಮತ್ತು ಅನುಭಾಗಗಳನ್ನು ನೀರಸಮಾಡುವಂಥದ್ದಾಗಿದೆ. ಉದಾ : ಅಗ್ನಿತಾಪದಿಂದ ಅಶುದ್ಧ ಸುವರ್ಣವು ಶುದ್ಧವಾಗಿರುವಂತೆಯೇ ಆತ್ಮಧ್ಯಾನದ ಪ್ರಾಪ್ತಿಯ ಪ್ರಭಾವದಿಂದ ಅಶುದ್ಧ ಆತ್ಮನು ಪವಿತ್ರನಾಗುತ್ತಾನೆ ಮತ್ತು ಮಲಿನ ವಸ್ತ್ರವು ಸಾಬೂನು ಮೊದಲಾದವುಗಳ ಉಪಯೋಗದಿಂದ ನಿರ್ಮಲವಾಗುವಂತೆ, ಕರ್ಮಮಲದಿಂದ ಮಲಿನನಾದ ಆತ್ಮನು ಜ್ಞಾನವೈರಾಗ್ಯರೂಪವಾದ ಸಾಬೂನು ಉಪಯೋಗ

ದಿಂದ ಧ್ಯಾನಪೂರ್ವಕವೋ, ಸ್ವಾನುಭವರೂಪ ಅಭ್ಯಾಸದಿಂದಲೋ ಶುದ್ಧ ನಾಗುತ್ತಾನೆ. ಮುಮುಕ್ಷುವು ಆತ್ಮರೂಪ ಉದ್ಯಾನವನದಲ್ಲಿ ರಮಿಸುತ್ತಿರ ಬೇಕು ; ಕ್ರೀಡಿಸುತ್ತಿರಬೇಕು.

ಆತ್ಮಾನುಶಾಸನದಲ್ಲಿ ಹೇಳಿರುತ್ತಾರೆ :

**ಹೃದಯಸರಸಿ ಯಾವನ್ನಿರ್ಮಲೇಽಪ್ಯತ್ಯಗಾಧೆ**
**ವಸತಿ ಬಲು ಕಷಾಯಗ್ರಾಹಚಕ್ರಂ ಸಮಂತಾತ್ ।**
**ಶ್ರಯತಿ ಗುಣಗುಣೋಽಯಂ ತನ್ನ ತಾವದ್ವಿಶಂಕಂ**
**ಸಮದಮಯಮಶೇಷೈಸ್ತಾನ್ ವಿಜೇತುಂ ಯತಸ್ವ ॥ ೨೧೩ ॥**

**ಭಾವಾರ್ಥ :** ಗಂಭೀರ (ಆಳ) ವೂ ನಿರ್ಮಲವೂ ಆದ ಮನಸ್ಸೆಂಬ ಸರೋವರದಲ್ಲಿ ನಾಲ್ಕುಕಡೆಯಿಂದ ಕಷಾಯಗಳೆಂಬ ಮೀನು, ಮೊಸಳೆಗಳು ಎಷ್ಟರವರೆಗೆ ವಾಸಮಾಡುವವೋ ಅಷ್ಟರವರೆಗೆ ಗುಣಗಳ ಸಮೂಹವು ಸಂಶಯ ವಿಲ್ಲದೆ ವಾಸಮಾಡಲಾರವು. ಆದುದರಿಂದಲೇ ನೀನು ಸಮತಾಭಾವ, ಇಂದ್ರಿಯದಮನ ಮತ್ತು ವಿನಾಯಾದಿಗಳಿಂದ ಆ ಕಷಾಯಗಳನ್ನು ಜಯಿ ಸಲು ಪ್ರಯತ್ನಿಸಬೇಕು.



# ಐದು ಯುಗಲದಿಂದ ರಹಿತನಾಗಿ ಹತ್ತು ಗುಣಗಳಿಂದ್ಯುಕ್ತನಾಗಿ ಆತ್ಮನನ್ನು ಧ್ಯಾನಿಸು

**ವೇ-ಪಂಚಹಂ ರಹಿಯಉ ಮುಣಹಿ ವೇ-ಪಂಚಹಂ ಸಂಜುತ್ತು ।**
**ವೇ-ಪಂಚಹಂ ಜೋ ಗುಣಸಹಿಉ ಸೋ ಅಪ್ಪಾ ಣಿರು ವುತ್ತು ॥೮೦॥**

**ಅನ್ವಯಾರ್ಥ :** ವೇ-ಪಂಚಹಂ ರಹಿಯಉ–ಎರಡು ಪ್ರಕಾರ ಐದ ರಿಂದ ರಹಿತನಾಗಿ ಅರ್ಥಾತ್ ಪಂಚೇಂದ್ರಿಯಗಳು ಮತ್ತು ಐದು ಅವ್ರತ ಗಳನ್ನು ತ್ಯಜಿಸಿ, ವೇ-ಪಂಚಹಂ ಸಂಜುತ್ತು ಮುಣಹಿ–ಎರಡು ಪ್ರಕಾರ ಐದು, ಅಂದರೆ ಐದು ಇಂದ್ರಿಯದಮನರೂಪ ಸಂಯಮವುಳ್ಳವನಾಗಿ ಮತ್ತು ಐದು ಮಹಾವ್ರತಸಹಿತನಾಗಿ ಆತ್ಮನನ್ನು ಚಿಂತಿಸು. ಜೋ ವೇ-ಪಂಚಹಂ ಗುಣ ಸಹಿಉ ಸೋ ಅಪ್ಪಾ ಣಿರು ವುತ್ತು–ಹೀಗೆ ಯಾವನು ಹತ್ತುಗುಣಗಳಾದ

ಉತ್ತಮ ಕ್ಷಮಾದಿ ಸಹಿತನೂ, ಅನಂತಜ್ಞಾನಾದಿ ಹತ್ತುಗುಣಗಳಿಂದ್ಯುಕ್ತನೂ ಆಗಿರುವವನೇ ನಿಶ್ಚಯದಿಂದ ಆತ್ಮನೆಂದು ಹೇಳಿಸಿಕೊಳ್ಳುವನು.

**ಭಾವಾರ್ಥ:** ನಿಶ್ಚಿಂತನಾಗಿ ಆತ್ಮನ ಚಿಂತನೆಗೈಯ್ಯಬೇಕು. ಐದು ಇಂದ್ರಿಯ ವಿಷಯಗಳಲ್ಲಿ ತನ್ಮಯವಾದ ಉಪಯೋಗವು ಆತ್ಮೀಕ ವಿಷಯ ವನ್ನು ಚಿಂತಿಸಲಾರದು. ಆದುದರಿಂದ ಇಂದ್ರಿಯಗಳನ್ನು ಸಂಯಮದಲ್ಲಿಟ್ಟು ಕೊಂಡು ಇಂದ್ರಿಯವಿಜಯಿಯಾಗಬೇಕು. ಹಾಗೆ ಪ್ರಾಪಂಚಿಕ ಆರಂಭಾದಿ ಗಳಿಂದ ಬಿಡುಗಡೆಹೊಂದಲು ಹಿಂಸೆ, ಸುಳ್ಳು, ಕಳ್ಳತನ, ಕುಶೀಲ, ಪರಿಗ್ರಹ ಗಳೆಂಬೈದು ಅವಿರತ ಭಾವಗಳಿಂದ ವಿರಕ್ತನಾಗಿ ಅಹಿಂಸಾ, ಸತ್ಯ, ಅಚೌರ್ಯ, ಬ್ರಹ್ಮಚರ್ಯ, ಪರಿಗ್ರಹತ್ಯಾಗಗಳೆಂಬೈದು ಮಹಾವ್ರತಗಳನ್ನು ಪರಿಪಾಲಿಸುತ್ತಿರ ಬೇಕು. ಸಾಧುಸ್ಥಾನದಲ್ಲಿ ದ್ರವ್ಯ ಮತ್ತು ಭಾವಗಳ ರೂಪವಾಗಿ ನಿರ್ಗ್ರಂಥ ನಾಗಿ, ಏಕಾಕೀಭಾವದಿಂದ ಶುದ್ಧನಿಶ್ಚಯದ ಮೂಲಕ ತನ್ನ ಶುದ್ಧಾತ್ಮನನ್ನು ಚಿಂತಿಸುತ್ತಿರಬೇಕು.

ಭೇದ ದೃಷ್ಟಿಯಿಂದಲೇ ಆತ್ಮನನ್ನು ಚಿಂತಿಸುತ್ತಾ ದಶ (ಹತ್ತು) ಲಕ್ಷಣ ರೂಪವಾಗಿ ವಿಚಾರಿಸಬೇಕು. ಆಗ ಕ್ರೋಧಾದಿ ವಿಕಾರಗಳಿಂದ ರಹಿತನಾಗಿ, ಭೂದೇವಿಯಂತೆ ಉತ್ತಮಕ್ಷಮಾ ಗುಣಧಾರಿಯಾಗಿಯೂ, ಮಾನಕಷಾಯದ ಅಭಾವದಿಂದ ಉತ್ತಮ ಮಾರ್ದವ ಗುಣಧಾರಿಯಾಗಿಯೂ, ಮಾಯಾ ಕಷಾ ಯದ ಅಭಾವದಿಂದ ಉತ್ತಮ ಆರ್ಜವ ಗುಣಧಾರಿಯಾಗಿಯೂ, ಅಸತ್ಯ ಜ್ಞಾನದ ಅಭಾವದಿಂದ (ಇಲ್ಲದಿರುವುದರಿಂದ) ಉತ್ತಮ ಸತ್ಯಧರ್ಮಧಾರಿ ಯಾಗಿಯೂ, ಲೋಭ ಕಷಾಯದ ಅಭಾವದಿಂದ ಉತ್ತಮ ಶೌಚಗುಣಧಾರಿ ಯಾಗಿಯೂ, ಅಸಂಯಮ ಅಭಾವದಿಂದ ಸ್ವರೂಪದಲ್ಲಿ ಕ್ರೀಡಿಸುವ ರೂಪ ಉತ್ತಮ ಸಂಯಮ ಗುಣಧಾರಿಯಾಗಿಯೂ, ಸಕಲ ಇಚ್ಛೆಗಳು ದೂರವಾಗಿರು ವುದರಿಂದ ಆತ್ಮನ ಶುದ್ಧವಾದ ವೀತರಾಗಭಾವದಿಂದ ತಪಸ್ಸುಗೈಯ್ಯುವ ಶ್ರೇಷ್ಠಗುಣಧಾರಿಯಾಗಿಯೂ ಇರುವನು. ಈ ಆತ್ಮನು ತನ್ನ ಶುದ್ಧ ಪರಿಣತಿ ಯನ್ನು ಅಥವಾ ಆತ್ಮಾನಂದವನ್ನು ತನಗೆ ದಾನವನ್ನೆಸಗುವುದರಿಂದ ಉತ್ತಮ ತ್ಯಾಗಧರ್ಮಗುಣಧಾರಿಯಾಗಿದ್ದಾನೆ. ಈ ಆತ್ಮನು ಉತ್ತಮ ಆಕಿಂಚನ್ಯ ಗುಣಧಾರಿಯಾಗಿದ್ದಾನೆ. ಈ ಆತ್ಮಾಂತರಂಗದಲ್ಲಿ ಅನ್ಯಆತ್ಮರುಗಳ, ಪುದ್ಗಲ ದ್ರವ್ಯಗಳ, ಧರ್ಮ-ಅಧರ್ಮ-ಆಕಾಶ-ಕಾಲಗಳ ಅಭಾವವಿರುವುದರಿಂದ ಈತನು

ಅಪರಿಗ್ರಹವುಳ್ಳವನಾಗಿ, ಪರಮ ಅಸಂಗನಾಗಿ, ಬ್ರಹ್ಮಭಾವದಲ್ಲಿ ಮಗ್ನನಾಗಿ ರುವುದರಿಂದ ಉತ್ತಮ ಬ್ರಹ್ಮಚರ್ಯ ಗುಣಧಾರಿಯಾಗಿದ್ದಾನೆ. ಹೀಗೆ ತನ್ನಾತ್ಮನು ಹತ್ತು ಉತ್ತಮ ಗುಣಗಳಿಂದ ಭರಿತನಾಗಿರುವನೆಂದೂ ವಿಚಾ ರಿಸತಕ್ಕದ್ದು.

ಈ ಆತ್ಮನು ಅನಂತಜ್ಞಾನ, ಅನಂತದರ್ಶನ, ಕ್ಷಾಯಿಕ ಸಮ್ಯಕ್ತ್ವ, ಕ್ಷಾಯಿಕಚಾರಿತ್ರ, ಅನಂತದಾನ, ಅನಂತಲಾಭ, ಅನಂತಭೋಗ, ಅನಂತ ಉಪಭೋಗ, ಅನಂತವೀರ್ಯ, ಅನಂತಸುಖಗಳೆಂಬ ವಿಶೇಷ ಹತ್ತು ಗುಣ ಧಾರಿಯಾದ ಪರಮಾತ್ಮ ಸ್ವರೂಪನಾಗಿರುತ್ತಾನೆ. ಇವನು ಸರ್ವಜ್ಞ ಮತ್ತು ಸರ್ವದರ್ಶಿಯಾಗಿದ್ದರೂ ಕೂಡ ಆತ್ಮಜ್ಞ ಮತ್ತು ಆತ್ಮದರ್ಶಿಯಾಗಿರುತ್ತಾನೆ. ಇವನು ಜ್ಞೇಯಾಪೇಕ್ಷೆಯಿಂದಲೇ ಸರ್ವಜ್ಞನೆಂದೂ, ಸರ್ವದರ್ಶಿಯೆಂದೂ ಹೇಳಿಸಿಕೊಳ್ಳುವನು. ಶುದ್ಧ ಸಮ್ಯಗ್ದರ್ಶನಧಾರಿಯಾಗಿದ್ದು ನಿರಂತರ ಆತ್ಮ ಪ್ರತೀತಿಯಲ್ಲಿಯೇ ಇರುತ್ತಾನೆ. ಸರ್ವಕಷಾಯಗಳ ಅಭಾವದಿಂದ ಪರಮ ವೀತರಾಗ ಯಥಾಖ್ಯಾತ ಚಾರಿತ್ರದಿಂದ ವಿಭೂಷಿತನಾಗಿರುತ್ತಾನೆ. ತನ್ನ ಆನಂದವನ್ನು ತನಗೆ ಕೊಡುವುದರಿಂದ ಅನಂತದಾನಶಾಲಿಯಾಗಿರುತ್ತಾನೆ. ನಿರಂತರ ಸ್ವಾತ್ಮಾನಂದದ ಪ್ರಾಪ್ತಿಮಾಡಿಕೊಳ್ಳುವುದೇ ಅನಂತಲಾಭವಾಗಿರು ತ್ತದೆ. ಸದಾ ಸ್ವಾತ್ಮಾನಂದ ಭೋಗವಾಗಿರುತ್ತದೆ. ತನ್ನಾತ್ಮನನ್ನು ಬಾರಿ ಬಾರಿಗೂ ಉಪಭೋಗಿಸುವುದೇ ಉಪಭೋಗವಾಗಿರುತ್ತದೆ. ಈ ಗುಣಗಳ ಲ್ಲಿಯೇ ಪರಿಣಮಿಸುವವನಾಗಿ ಎಂದೆಂದಿಗೂ ಭೇದಭಿನ್ನನಾಗದಿರುವುದೇ ಅನಂತವೀರ್ಯವಾಗಿರುತ್ತದೆ. ಜ್ಞಾನಾವರಣ, ದರ್ಶನಾವರಣ, ಮೋಹ ನೀಯ ಮತ್ತು ಅಂತರಾಯಕರ್ಮಗಳಿಂದ ರಹಿತನಾಗಿ ಅನಂತಸುಖ ಸಮುದ್ರ ಸ್ವರೂಪನಾಗಿರುತ್ತಾನೆ.

ಅಭೇದ ನಯದಿಂದ ಅಖಂಡ ಆತ್ಮನನ್ನು ಧ್ಯಾನಿಸುವಾಗ ಸ್ವಾನುಭವದ ಲಾಭವಾಗುವುದು. ಅದೇ ಆತ್ಮದರ್ಶನವೂ, ಸುಖಶಾಂತಿ ಪ್ರದಾಯಕ ಭಾವವೂ, ಆತ್ಮಸಮಾಧಿಯೂ, ನಿಶ್ಚಯರತ್ನತ್ರಯಗಳ ಏಕತೆಯೂ ಆಗಿರು ತ್ತದೆ. ಮುಮುಕ್ಷುವು ನಿಶ್ಚಿಂತನಾಗಿ ಪರಮಪ್ರೇಮಭಾವದಿಂದ ತನ್ನಾತ್ಮನ ಆರಾಧನೆಗೈಯ್ಯಬೇಕು.

ಬೃಹತ್ ಸಾಮಾಯಿಕಪಾಠದಲ್ಲಿ ಹೇಳಿರುತ್ತಾರೆ :

ವ್ಯಾವೃತ್ಯೇಂದ್ರಿಯಗೋಚರೋರುಗಹನೇ ಲೋಲಂ ಚರಿಷ್ಣುಂ ಚಿರಂ
ದುರ್ವಾರಂ ಹೃದಯೋದರೆ ಸ್ಥಿರಂತರಂ ಕೃತ್ವಾ ಮನೋಮರ್ಕಟಂ।
ಧ್ಯಾನಂ ಧ್ಯಾಯತಿ ಮುಕ್ತಯೇ ಶ್ರಮ ಮತೇರ್ನಿರ್ಮುಕ್ತಭೋಗ-ಸ್ಪೃಹೋ
ನೋಪಾಯೇನ ವಿನಾ ಕೃತಾ ಹಿ ವಿಧಯಃ ಸಿದ್ಧಿಂ ಲಭಂತೇ ಧ್ರುವಂ ॥ ೫೪ ॥

**ಭಾವಾರ್ಥ :** ದುರ್ವಾರ ಮನಸ್ಸೆಂಬ ಮರ್ಕಟನು (ಕಪಿಯು) ಬಹು ಕಾಲದಿಂದ ಲೋಲುಪಿಯಾಗಿ ಪಂಚೇಂದ್ರಿಯಗಳೆಂಬ ವನದಲ್ಲಿ ವಿಹರಿಸುತ್ತಾ ಇದ್ದಾನೆ. ಈ ದುರ್ವಾರ ಮನಸ್ಸೆಂಬ ಕಪಿಯನ್ನು ಅಲ್ಲಿಂದ ತಡೆದು ತನ್ನ ಹೃದಯದಲ್ಲಿ ದೃಢವಾಗಿ ಬಂಧಿಸಿ, ಸರ್ವಭೋಗಲಾಲಸೆಯನ್ನು ತ್ಯಜಿಸಿ, ಪರಿಶ್ರಮಪಟ್ಟು ಕೇವಲ ಮೋಕ್ಷದ ಸಲುವಾಗಿ ಆತ್ಮನನ್ನು ಧ್ಯಾನಿಸಬೇಕು. ಯಾಕೆಂದರೆ ಉಪಾಯಗಳಿಲ್ಲದೆ ಸಿದ್ಧಿಯಾಗಲಾರದು. ಉಪಾಯದಿಂದ ನಿಶ್ಚಲಕಾರ್ಯ ಸಿದ್ಧಿಸುತ್ತದೆ.

## ಆತ್ಮತತ್ವರತಿಯಲ್ಲಿ ತಪತ್ಯಾಗಗಳೆಲ್ಲವೂ ಇವೆ

ಅಪ್ಪಾ ದಂಸಣು ಣಾಣು ಮುಣಿ ಅಪ್ಪಾ ಚರಣು ವಿಯಾಣಿ ।
ಅಪ್ಪಾ ಸಂಜಮು ಸೀಲ ತಲು ಅಪ್ಪಾ ಪಚ್ಚಕ್ಖಾಣಿ ॥ ೮೧ ॥

**ಅನ್ವಯಾರ್ಥ :** ಅಪ್ಪಾ ದಂಸಣು ಣಾಣು ಮುಣಿ–ಆತ್ಮನನ್ನೇ ಸಮ್ಯಗ್ದರ್ಶನ ಮತ್ತು ಸಮ್ಯಗ್ಜ್ಞಾನನೆಂದೂ, ಅಪ್ಪಾ ಚರಣು ವಿಯಾಣಿ–ಮತ್ತು ಸಮ್ಯಕ್ಚಾರಿತ್ರನೆಂದೂ ತಿಳಿ. ಅಪ್ಪಾ ಸಂಜಮು ಸೀಲ ತಉ–ಆತ್ಮನೇ ಸಂಯಮನೆಂದೂ ಶೀಲನೆಂದೂ ತಪೋರೂಪನೆಂದೂ, ಅಪ್ಪಾ ಪಚ್ಚಕ್ಖಾಣಿ–ಆತ್ಮನೇ ಪ್ರತ್ಯಾಖ್ಯಾನ ಅಥವಾ ತ್ಯಾಗವೆಂದೂ ತಿಳಿ.

**ಭಾವಾರ್ಥ :** ನಿಶ್ಚಯನಯದಿಂದ ಆತ್ಮಭಾವದಲ್ಲಿ ಕ್ರೀಡಿಸುವುದರಿಂದಲೇ ಮೋಕ್ಷಪ್ರಾಪ್ತಿಯ ಸಾಧನಗಳೆಲ್ಲಾ ಪ್ರಾಪ್ತವಾಗುತ್ತವೆ. ವ್ಯವ

ಹಾರನಯದಿಂದ ದೇವ ಗುರು ಶಾಸ್ತ್ರಗಳಲ್ಲಿ ಮತ್ತು ಜೀವಾದಿ ಸಪ್ತತತ್ವಗಳಲ್ಲಿ ಶ್ರದ್ಧಾನವಿಡುವುದೇ ಸಮ್ಯಗ್ದರ್ಶನವಾಗಿದೆ. ನಿಶ್ಚಯನಯದಿಂದ ಆತ್ಮನ ನಿಜವಾದ ಸಮ್ಯಕ್ತ್ವಗುಣವೇ ಸಮ್ಯಗ್ದರ್ಶನವಾಗಿರುತ್ತದೆ. ಶ್ರದ್ಧೆ ಮತ್ತು ಅಭಿರುಚಿಯುಳ್ಳ ಆತ್ಮನ ಸ್ಥಿರತೆಗೆ ಭಾವನಿಕ್ಷೇಪರೂಪ ಯಥಾರ್ಥ ಪರಿಣಮನ ಶೀಲವೇ ಸಮ್ಯಗ್ದರ್ಶನವಾಗಿದೆ. ವ್ಯವಹಾರದಲ್ಲಿ ಶಾಸ್ತ್ರಗ್ರಂಥಗಳ ಪರಿ ಜ್ಞಾನವೇ ಸಮ್ಯಗ್ಜ್ಞಾನವಾಗಿದೆ. ನಿಶ್ಚಯನಯದಿಂದ ಯಾವ ಜ್ಞಾನದಲ್ಲಿ ತನ್ನಾತ್ಮ ಶುದ್ಧ ಸ್ವಭಾವವು ಪ್ರಕಾಶಿಸುವುದೋ ಅದು ಸಮ್ಯಗ್ಜ್ಞಾನವಾಗಿ ರುತ್ತದೆ.

ವ್ಯವಹಾರದಲ್ಲಿ ಸಾಧುಗಳ ಮಹಾವ್ರತ, ಶ್ರಾವಕರ ಅಣುವ್ರತ ರೂಪ ವಾದ ಆಚರಣೆಯೇ ಸಮ್ಯಕ್ಚಾರಿತ್ರವಾಗಿರುತ್ತದೆ. ನಿಶ್ಚಯನಯದಿಂದ ವೀತ ರಾಗಭಾವವೇ ಸಮ್ಯಕ್ಚಾರಿತ್ರವಾಗಿದೆ. ಎಲ್ಲಿ ಆತ್ಮನಲ್ಲಿ ಸ್ಥಿರತೆಯಿರುವುದೋ ಅಲ್ಲಿ ನಿಶ್ಚಯ ಸಮ್ಯಕ್ಚಾರಿತ್ರವಿರುತ್ತದೆ. ವ್ಯವಹಾರದಲ್ಲಿ ಪಂಚೇಂದ್ರಿಯಗಳ ಮತ್ತು ಮನಸ್ಸಿನ ನಿರೋಧವೇ ಇಂದ್ರಿಯಸಂಯಮವೂ ಪೃಥ್ವೀಕಾಯಾದಿ ಆರು ಪ್ರಕಾರದ ಪ್ರಾಣಿಗಳ ಸಂರಕ್ಷಣೆಯೇ ಪ್ರಾಣಿಸಂಯಮವೂ ಆಗಿರುತ್ತದೆ. ನಿಶ್ಚಯನಯದಿಂದ ತನ್ನ ಶುದ್ಧ ಸ್ವಭಾವದಲ್ಲಿ ತನ್ನನ್ನು ಸಂಯಮರೂಪ ವಾಗಿಟ್ಟು, ಬಾಹ್ಯದಲ್ಲಿ ರಾಗದ್ವೇಷಗಳಿಂದ ರಹಿತನಾಗಿರುವುದೇ ಆತ್ಮನ ಧರ್ಮ ಸಂಯಮವಾಗಿರುತ್ತದೆ.

ವ್ಯವಹಾರದ ಮನ, ವಚನ, ಕಾಯ ಮತ್ತು ಕೃತ, ಕಾರಿತ, ಅನು ಮೋದಗಳ (3 × 3=) 9 ಪ್ರಕಾರದ ಕಾಮವಿಕಾರಗಳನ್ನು ದೂರೀಕರಿಸಿ, ಶೀಲವ್ರತವನ್ನು ಪಾಲಿಸುವುದೇ ಬ್ರಹ್ಮಚರ್ಯ. ನಿಶ್ಚಯನಯದಿಂದ ಬ್ರಹ್ಮ ಸ್ವರೂಪನಾದ ಆತ್ಮನಲ್ಲಿ ವಿಹರಿಸುವುದೇ ನಿಶ್ಚಯಬ್ರಹ್ಮಚರ್ಯವಾಗಿರುತ್ತದೆ. ಅದೇ ಆತ್ಮಸ್ವರೂಪವಾಗಿರುತ್ತದೆ. ವ್ಯವಹಾರದಿಂದ ಹನ್ನೆರಡು ವ್ರತಗಳ ನ್ನಾಚರಿಸುವುದೇ ತಪಸ್ಸು. ಇವು ಆತ್ಮೀಕಭಾವದಲ್ಲಿ ಪ್ರಕಾಶವನ್ನು ಪಡೆ ಯಲು ಸಹಾಯಕವಾಗಿವೆ.

**6 ಬಾಹ್ಯತಪಸ್ಸು :** ೧) ಯೋಗಿಯು ಇಂದ್ರಿಯಗಳ ದಮನಕ್ಕಾಗಿ ಯೂ, ಮನ, ವಚನ, ಕಾಯಗಳ ಶುದ್ಧತೆಗಾಗಿಯೂ ಉಪವಾಸಾದಿಗಳನ್ನು ಕೈಗೊಳ್ಳುವುದು ಅನಶನ ತಪಸ್ಸಾಗಿದೆ.

೨) ಧ್ಯಾನಸ್ವಾಧ್ಯಾಯಾದಿ ಕಾರ್ಯಗಳಲ್ಲಿ ಪ್ರಮಾದಗಳುಂಟಾಗದಿರುವುದಕ್ಕಾಗಿಯೂ ನಿದ್ರೆಯನ್ನು ಜಯಿಸುವುದಕ್ಕಾಗಿಯೂ, ಶರೀರವು ನಿರೋಗವಾಗಿರುವುದಕ್ಕೋಸ್ಕರವಾಗಿಯೂ ಹೊಟ್ಟೆಹಸಿವೆಗಿಂತ ಕಡಿಮೆಭೋಜನ ಮಾಡುವುದು ಅವಮೋದರ್ಯ ತಪಸ್ಸಾಗಿದೆ.

೩) ಆಹಾರವನ್ನು ಸ್ವೀಕರಿಸಲು ಗ್ರಹಸ್ಥರು ವಿಶೇಷರೂಪ ಆರಂಭವನ್ನು ಮಾಡದೆ ಇರುವ ನಿಯಮವನ್ನು ತೆಗೆದುಕೊಳ್ಳುವುದು, ತನ್ನ ಪರಿಣಾಮಗಳ ಪರಿಶೋಧನೆಗಾಗಿ ತನ್ನ ನಿಯಮ ಪೂರ್ಣವಾಗದಿದ್ದರೆ ಸಂತೋಷಪೂರ್ವಕ ನಿರಾಹಾರವಾಗಿರುವುದು ಇವುಗಳಿಗೆ ವೃತ್ತಿಪರಿಸಂಖ್ಯಾನ ತಪಸ್ಸೆಂದು ಹೆಸರು.

೪) ರಸನೇಂದ್ರಿಯವನ್ನು (ನಾಲಿಗೆಯನ್ನು) ವಶಪಡಿಸಿಕೊಳ್ಳುವುದಕಾಗಿಯೂ, ಶರೀರದಲ್ಲಿ ಮದೋನ್ಮತ್ತತೆ ಉಂಟಾಗದಿರುವುದಕ್ಕಾಗಿಯೂ ಹಾಲು, ಮೊಸರು, ತುಪ್ಪ, ಎಣ್ಣೆ, ಉಪ್ಪು, ಸಕ್ಕರೆ ಈ ಎಲ್ಲಾ ಪದಾರ್ಥಗಳನ್ನು ಅಥವಾ ಕೆಲವು ರಸವಸ್ತುಗಳನ್ನು ಯೋಗಿಯು ತ್ಯಜಿಸಿ ಶರೀರರಕ್ಷಣೆಗಾಗಿಯೂ, ಧರ್ಮಸೇವನೆಗಾಗಿಯೂ ಸಂತೋಷಪೂರ್ವಕ ಆಹಾರಾದಿಗಳನ್ನು ಸ್ವೀಕರಿಸುವುದು ರಸಪರಿತ್ಯಾಗ ತಪಸ್ಸಾಗಿದೆ.

೫) ಸ್ತ್ರೀ, ಪುರುಷ, ನಪುಂಸಕ, ಪಶು ಮೊದಲಾದವುಗಳಿಂದ ಮಾನಸಿಕ ವಿಕಾರ ಉಂಟಾಗದಿರುವುದಕ್ಕಾಗಿ, ಧ್ಯಾನಸ್ವಾಧ್ಯಾಯಗಳ ಸಿದ್ಧಿಗಾಗಿ ಏಕಾಂತಸ್ಥಾನದಲ್ಲಿ ಮಲಗುವುದೂ, ಕುಳಿತುಕೊಳ್ಳುವುದೂ ಮತ್ತು ಶಾರೀರಿಕ ಮಾನಸಿಕ ಆಲಸ್ಯಾದಿ ಸ್ವಭಾವವನ್ನು ದೂರಗೊಳಿಸುವುದಕ್ಕಾಗಿ ಕಠಿಣ ನಿರ್ಜನ ಸ್ಥಳಗಳಲ್ಲಿ ಕುಳಿತುಕೊಂಡು ಧ್ಯಾನವನ್ನು ಮಾಡುವುದೂ ವಿವಿಕ್ತ ಶಯ್ಯಾಸನ ತಪಸ್ಸಾಗಿದೆ.

೬) ಯೋಗಿಯು ನದೀತಟ, ವೃಕ್ಷತಟ, ಪರ್ವತ, ಗುಹೆ, ಮೊದಲಾದ ಸ್ಥಾನಗಳಲ್ಲಿ ಕುಳಿತುಕೊಂಡು ನಗ್ನನಾಗಿದ್ದು ಶೀತತಾಪವನ್ನು ಸಹಿಸುತ್ತಾನೆ. ನೋಡುವವರಿಗೆ ಮುನಿಗಳು ತಮ್ಮ ಶರೀರಾದಿಗಳಿಗೆ ಕಷ್ಟವನ್ನು ಕೊಡುತ್ತಿರುವರೆಂದು ತೋರುತ್ತಿದ್ದರೂ ಮುಮುಕ್ಷುಗಳು ಆತ್ಮಾನಂದದಲ್ಲಿ ಮಗ್ನರಾಗಿರುತ್ತಾರೆ. ಇದು ಕಾಯಕ್ಲೇಶ ತಪಸ್ಸಾಗಿದೆ.

೯ ಅಂತರಂಗ ತಪಸ್ಸು : ೧) ಮಲಿನವಾದ ವಸ್ತ್ರವನ್ನು ನೀರಿನಿಂದ ತೊಳೆದು (ಒಗೆದು) ಪವಿತ್ರಗೊಳಿಸುವಂತೆ, ಮನವಚನಕಾಯಗಳ ಸಂಬಂಧ ವಾದ ಯಾವವಿಧದ ದೋಷಗಳುಂಟಾದರೂ ಅವುಗಳನ್ನು ಪ್ರಾಯಶ್ಚಿತ್ತಾದಿ ಮೂಲಕವೋ, ಪ್ರತಿಕ್ರಮಣಮಾಡಿಯೋ ಶುದ್ಧಗೊಳಿಸುವುದು ಮತ್ತು ಭಾವ ಗಳನ್ನು ನಿರ್ಮಲಗೊಳಿಸುವುದು ಪ್ರಾಯಶ್ಚಿತ್ತ ತಪಸ್ಸಾಗಿದೆ.

೨) ರತ್ನತ್ರಯ ಧರ್ಮ ಮತ್ತು ಆ ಧರ್ಮಧಾರಿಗಳಲ್ಲಿ ಭಕ್ತಿಯನ್ನಿಡು ವುದು ಮತ್ತು ವಿನಯದಿಂದಿರುವುದು ವಿನಯ ತಪಸ್ಸಾಗಿದೆ.

೩) ರೋಗಿಗಳೂ ಅಶಕ್ತರೂ ಮತ್ತು ವೃದ್ಧರೂ ಆದ ಸಾಧುಗಳನ್ನು ನೋಡಿ ಶರೀರದಿಂದಲೂ ಉಪದೇಶಾದಿಗಳಿಂದಲೂ ಅವರ ಆತ್ಮನಿಗೆ ಶಾಂತಿ ಮತ್ತು ಸಂತೋಷವನ್ನುಂಟುಮಾಡುವುದು ಸೇವಾಧರ್ಮವಾಗಿರುತ್ತದೆ ಅಥವಾ ವೈಯ್ಯಾವೃತ್ಯ ತಪಸ್ಸಾಗಿದೆ.

೪) ಆತ್ಮಜ್ಞಾನದ ನಿರ್ಮಲತೆಗಾಗಿಯೂ ಆರುದ್ರವ್ಯಗಳ ಗುಣಪರ್ಯಾ ಯಗಳ ವಿಶೇಷ ಜ್ಞಾನಕ್ಕಾಗಿಯೂ ಶಾಸ್ತ್ರಗ್ರಂಥಗಳ ಪಠಣ, ಪಾಠಣ, ಮನನ ಮತ್ತು ಕಂಠಸ್ಥಮಾಡುವುದು ದೊಡ್ಡ ಉಪಕಾರವಾದ ಸ್ವಾಧ್ಯಾಯತಪಸ್ಸಾ ಗಿರುತ್ತದೆ.

೫) ಅಂತರಂಗದ ವಿಭಾವಗಳ, ಬಾಹ್ಯದ ಶರೀರಾದಿ ಬಾಹ್ಯವಸ್ತುಗಳ ವಿಶೇಷ ಮಮತ್ವತ್ಯಾಗವೇ ವ್ಯುತ್ಸರ್ಗ ತಪಸ್ಸಾಗಿದೆ.

೬) ಏಕಾಂತದಲ್ಲಿ ಧರ್ಮಧ್ಯಾನಮಾಡುವುದೇ ಧ್ಯಾನತಪಸ್ಸಾಗಿದೆ.

ಈ ಹನ್ನೆರಡು ವಿಧ ತಪಸ್ಸುಗಳಿಂದ ವರ್ತಿಸುವವನಾಗಿ ತನ್ನನ್ನು ತಪ ಸ್ಸಿನಸಗುವುದೇ ನಿಶ್ಚಯತಪವಾಗಿದೆ. ನಿಯಮ, ಯಮ ರೂಪವಾಗಿ ಯಾವು ದಾದರೊಂದು ಭೋಜನಪಾನಾದಿಗಳನ್ನೋ ಅಥವಾ ವಸ್ತುಗಳನ್ನೋ ತ್ಯಜಿ ಸುವುದು ವ್ಯವಹಾರ ಪ್ರತ್ಯಾಖ್ಯಾನವಾಗಿರುತ್ತದೆ.

ತನ್ನಾತ್ಮನು ಸಕಲಪರಪದಾರ್ಥಗಳಿಂದಲೂ ಪರಭಾವಗಳಿಂದಲೂ ಭಿನ್ನನೆಂಬ ಅನುಭವಮಾಡಿಕೊಳ್ಳುವುದೇ ನಿಶ್ಚಯಪ್ರತ್ಯಾಖ್ಯಾನವಾಗಿರುತ್ತದೆ. ಇದರ ಅಭಿಪ್ರಾಯವೇನೆಂದರೆ ಈ ಉಪಯೋಗಗಳು ತನ್ನಾತ್ಮನ ಶುದ್ಧ

ಸ್ವರೂಪದಲ್ಲಿ ಕ್ರೀಡಿಸುತ್ತಾ ಸ್ವಾನುಭವದಲ್ಲಿರುವಾಗ ಅದು ಯಥಾರ್ಥವಾಗಿ ನಿಶ್ಚಯರತ್ನಯ ರೂಪವೋಕ್ಷಮಾರ್ಗವಾಗಿರುತ್ತದೆ. ತಪವೇ ಸಂಯಮವೂ ಶೀಲವೂ ತಪವೂ ಪ್ರತ್ಯಾಖ್ಯಾನವೂ ಆಗಿದೆ. ಅದ್ದರಿಂದ ಆತ್ಮಸ್ಥವಾಗುವುದೇ ಯೋಗ್ಯವಾಗಿದೆ.

ಸಮಯಸಾರದಲ್ಲಿ ಹೇಳಿರುತ್ತಾರೆ :

**ಆದಾ ಖು ಮಜ್ಝ ಣಾಣೇ ಆದಾ ಮೇ ದಂಸಣೇ ಚರಿತ್ತೇ ಯ ।**
**ಆದಾ ಪಚ್ಚಕ್ಖಾಣೇ ಆದಾ ಮೇ ಸಂವರೇ ಜೋಗೇ ॥೧೮॥**

**ಭಾವಾರ್ಥ :** ನಿಶ್ಚಯವಾಗಿ ನನ್ನ ಜ್ಞಾನ, ದರ್ಶನ, ಚಾರಿತ್ರಾದಿಗಳಲ್ಲಿ ಆತ್ಮನಿರುತ್ತಾನೆ. ಯಾವಾಗ ರತ್ನತ್ರಯಗಳಲ್ಲಿ ರಮಿಸುವಾಗ ಆತ್ಮ ಸಮಿಾಪವನ್ನೇ ಹೊಂದುತ್ತಾನೆ. ತ್ಯಾಗಭಾವದಲ್ಲಿರುವುದೂ ಕೂಡ ಆತ್ಮನಲ್ಲಿ ನಿಲ್ಲುವುದಾಗಿದೆ. ಆಸ್ರವನಿರೋಧರೂಪ ಸಂವರಭಾವದಲ್ಲಿ ಅಥವಾ ಏಕಾಗ್ರ ಯೋಗಾಭ್ಯಾಸದಲ್ಲಿ ಕೂಡಾ ಆತ್ಮನೇ ಸಮ್ಮುಖನಾಗಿರುತ್ತಾನೆ.



## ಪರಭಾವಗಳ ತ್ಯಾಗವೇ ಸನ್ಯಾಸ

**ಜೋ ಪರಯಾಣಇ ಅಪ್ಪ ಪರು ಸೋ ಪರು ಚಯಇ ಣಿಭಂತು ।**
**ಸೋ ಸಣ್ಣಾಸು ಮುಣೇಹಿ ತುಹುಂ ಕೇವಲ-ಣಾಣಿಂ ಉತ್ತು ॥೮೨॥**

**ಅನ್ವಯಾರ್ಥ :** ಜೋ ಅಪ್ಪ ಪರು ಪರಯಾಣಇ-ಯಾವನು ಆತ್ಮನ ಮತ್ತು ಪರವಸ್ತುಗಳ ಜ್ಞಾನವನ್ನು ಇಟ್ಟುಕೊಂಡಿರುವನೋ, ಸೋ ಣಿಭಂತು ಪರು ಚಯಇ-ಅವನು ಯಾವ ಪ್ರಕಾರದ ಭ್ರಾಂತಿ ಇಲ್ಲದೆ ಪರವಸ್ತುಗಳನ್ನು ತ್ಯಜಿಸುತ್ತಾನೆ. ತುಹುಂ ಸೋ ಸಣ್ಣಾಸು ಮುಣೇಹಿ-ಅದನ್ನೇ ನೀನು ಸನ್ಯಾಸವೆಂದು ಅಥವಾ ತ್ಯಾಗವೆಂದು ತಿಳಿ. ಕೇವಲ ಣಾಣಿಂ ಉತ್ತು-ಹಾಗೆಂದು ಕೇವಲಜ್ಞಾನಿಗಳು ಹೇಳಿದ್ದಾರೆ.

**ಭಾವಾರ್ಥ :** ಅಂತರಂಗದಲ್ಲಿ ಪರಭಾವಗಳ ಮಮತ್ವಪರಿಣಾಮ ಇಲ್ಲದಿರುವುದೇ ಸನ್ಯಾಸ. ಬಾಹ್ಯಪರಿಗ್ರಹಗಳ ತ್ಯಾಗ ಅಂತರಂಗತ್ಯಾಗಭಾವಕ್ಕೆ ನಿಮಿತ್ತಸಾಧಕಗಳಾಗಿವೆ.

ಈ ಸನ್ಯಾಸದ ಪ್ರಾರಂಭ ಅವಿರತ ಸಮ್ಯಗ್ದೃಷ್ಟಿಗೇನೆ ಸಾಧ್ಯವಾಗುತ್ತದೆ ಸಮ್ಯಗ್ದೃಷ್ಟಿ 'ತನ್ನ ಸ್ವಾಮಿ ತನ್ನಾತ್ಮನೇ ಆಗಿದ್ದಾನೆ. ಆತ್ಮನ ಅಭೇದ ರೂಪ ದ್ರವ್ಯತ್ವ ನನ್ನ ದ್ರವ್ಯವೇ ಆಗಿದೆ. ನನ್ನ ಆತ್ಮನ ಅಸಂಖ್ಯಾತ ಪ್ರದೇಶೀ ಕ್ಷೇತ್ರವೇ ನನ್ನ ಕ್ಷೇತ್ರವಾಗಿದೆ. ನನ್ನಾತ್ಮನ ಗುಣಗಳು ಸಮಯಸಮಯ ದಲ್ಲಿ ಪರಿಣಮನವಾಗುವುದೇ ನನ್ನ ಕಾಲವಾಗಿದೆ. ನನ್ನ ಆತ್ಮನ ಶುದ್ಧಗುಣ ಗಳೇ ನನ್ನ ಭಾವವಾಗಿದೆ. ನಾನು ಸಿದ್ಧಾತ್ಮರಂತೆ ಶುದ್ಧನಿರಂಜನ ನಿರ್ವಿ ಕಾರನೂ, ಸಂಪೂರ್ಣ ಜ್ಞಾನದರ್ಶನಶಾಲಿಯೂ, ಆತ್ಮರೂಪಸಂಪತ್ತಿಗೆ ಅಧಿ ಪತಿಯೂ, ಪರಮ ಆನಂದಮಯ ಅಮೃತಕ್ಕೆ ಅಗಾಧ ಸಾಗರನೂ, ಪರಮ ಕೃತಕೃತ್ಯನೂ ಮತ್ತು ಜೀವನ್ಮುಕ್ತನೂ ಆಗಿದ್ದೇನೆ' ಎಂದು ತಿಳಿಯುತ್ತಾನೆ.

"ನನ್ನ ಸಂಬಂಧವು ಅನ್ಯ ಆತ್ಮರುಗಳೊಡನೆಯಾಗಲಿ, ಪುದ್ಗಲ, ಸ್ಕಂಧ, ಪರಮಾಣುಗಳೊಡನೆಯಾಗಲಿ, ಧರ್ಮ, ಅಧರ್ಮ, ಆಕಾಶ, ಕಾಲಾದಿಗಳೊ ಡನೆಯಾಗಲಿ, ಎಂಟುಕರ್ಮ, ಶರೀರಾದಿಗಳೊಡನೆಯಾಗಲಿ, ರಾಗಾದಿಭಾವ ಗಳೊಡನೆಯಾಗಲಿ, ಇಂದ್ರಿಯಸುಖಾಭಿಲಾಷೆಗಳೊಡನೆಯಾಗಲಿ ಇಲ್ಲ. ನನ್ನ ಅತೀಂದ್ರಿಯ ಜ್ಞಾನ, ಸುಖಗಳೇ ಸತ್ಯಜ್ಞಾನ, ಸತ್ಯಸುಖಗಳಾಗಿವೆ. ಆ ನನ್ನ ಸುಖಸಂಪತ್ತಿಯು ನನ್ನಲ್ಲಿಯೇ ಇರುವುದು" ಹೀಗೆ ಸಮ್ಯಗ್ದೃಷ್ಟೀ ತ್ಯಾಗಿಯು ತಿಳಿದು, ಶ್ರದ್ಧೆ ಮತ್ತು ಜ್ಞಾನದ ಪರಿಣತಿಯ ಅಪೇಕ್ಷೆಯಿಂದ ಪರಮ ಸನ್ಯಾಸಿಯೂ ಪರಮತ್ಯಾಗಿಯೂ ಆಗುತ್ತಾನೆ. ಹೇಗೆಂದರೆ ಪ್ರವೀಣ ಪುರುಷನು ತನ್ನಲ್ಲುಂಟಾಗುವ ರೋಗಗಳನ್ನು ಗುರುತಿಸಿ ಅವನ್ನು ಹಾನಿಕಾರಕಗಳೆಂದು ತಿಳಿದು, ಆ ರೋಗಗಳ ಆಗಮನದ ವಿಷಯವಾಗಿ ಪೂರ್ಣರೀತ್ಯಾ ಉದಾಸೀನನಾಗುತ್ತಾನೆ. ಹೀಗೆ ಸಮ್ಯಕ್ತ್ವವುಳ್ಳ ಜೀವನು ಮೂಲಕರ್ಮಗಳ ಸಂಯೋಗದಿಂದುಂಟಾಗುವ ರಾಗಾದಿಭಾವಗಳನ್ನು, ಶರೀ ರಾದಿರೋಗಗಳನ್ನು ಅಹಿತಕರವೆಂದು ಭಾವಿಸಿ, ಅವುಗಳಲ್ಲಿ ಪೂರ್ಣರೀತ್ಯಾ ವಿರಾಗಿಯಾಗುತ್ತಾನೆ. ಆ ರೋಗದ ನಿವಾರಣೆಗಾಗಿ ಪ್ರಯತ್ನಿಸುವುದು ರೋಗಿಗೆ ಬಾಕಿ ಇರುವುದು. ಅಂತಹ ಪ್ರವೀಣ ರೋಗಿಯು ದೊಡ್ಡಭಾವನೆ ಯಿಂದ ಪ್ರವೀಣನಾದ ವೈದ್ಯರಿಂದ ಹೇಳಲ್ಪಡುವ ಔಷಧಿಯನ್ನು ಸೇವಿಸುತ್ತಾ ಕ್ರಮೇಣ ನಿರೋಗಿಯಾಗುತ್ತಾನೆ. ಹೀಗೆ ಸಮ್ಯಕ್ತ್ವವುಳ್ಳ ಜೀವನು ಚಾರಿತ್ರ ಮೋಹನೀಯ ವಿಕಾರಗಳನ್ನು ದೂರಗೊಳಿಸುವುದಕ್ಕಾಗಿ ಕಟಿಬದ್ಧನಾಗು

ತ್ತಾನೆ. ಮಾತ್ರವಲ್ಲ, ಪರಮಶ್ರೇಷ್ಠ ಗುರುಗಳೆಂಬ ವೈದ್ಯರನ್ನು ಆಶ್ರಯಿಸುತ್ತಾನೆ. ಭಾವಕರ್ಮಗಳೆಂಬ ರೋಗವನ್ನು ಹೋಗಲಾಡಿಸುವುದಕ್ಕಾಗಿ, ನೂತನಕರ್ಮ ಸತ್ತೆಯಲ್ಲಿರುವ ಕರ್ಮಗಳನ್ನು ನಾಶಮಾಡುವುದಕ್ಕಾಗಿ, ನೂತನ ರೋಗಗಳ ಕಾರಣಗಳಿಂದ ರಕ್ಷಣೆ ಹೊಂದುವುದಕ್ಕಾಗಿ ಶುದ್ಧಾತ್ಮನುಭವ ವೆಂಬ ದಿವ್ಯೌಷಧಿಯನ್ನು ಆ ಗುರುಗಳಿಂದ ಸೇವಿಸುತ್ತಾನೆ. ಸಮ್ಯಕ್ತ್ವಿಯು ಸಮಯಸಮಯದಲ್ಲಿ ಸ್ವಾನುಭವವನ್ನುಮಾಡಿಕೊಳ್ಳುತ್ತಾ ಕಷಾಯಗಳ ಅನು ಭವವನ್ನು ಒಣಗಿಸಲು ಪ್ರಯತ್ನಿಸುತ್ತಾನೆ. ಆತ್ಮಬಲವು ವೃದ್ಧಿಯಾಗುತ್ತಿರಲು, ಮಂದಕಷಾಯಗಳ ಉದಯವುಂಟಾದೊಡನೆ ಅಧಿಕ ಸಮಯ ಮನಸ್ಸು ಸ್ಥಿರವಾಗುತ್ತದೆ. ಆಗ ಶ್ರಾವಕ ವ್ರತವನ್ನು (ಚಾರಿತ್ರ) ನಿಮಿತ್ತಕಾರಣ ಗಳೆಂದು ತಿಳಿದು ಧರಿಸುತ್ತಾನೆ. ಮೆಲ್ಲಮೆಲ್ಲನೆ ಹೇಗೆಹೇಗೆ ರಾಗಭಾವ ಕಡಿಮೆಯಾಗುವುದೋ ಆಗ ಶ್ರಾವಕರ ಹನ್ನೊಂದು ಶ್ರೇಣಿರೂಪ ಪ್ರತಿಮೆಗಳನ್ನೇರು ತ್ತಾನೆ. ಇಷ್ಟರವರೆಗೆ ತನ್ನಾತ್ಮ ಶಕ್ತಿಯನ್ನು ಬೆಳೆಸಿಕೊಳ್ಳುತ್ತಾನೆ. ಒಂದು ಅಂತರ್ಮುಹೂರ್ತದಲ್ಲಿ ಅಧಿಕ ಸ್ವಾನುಭವದಿಂದ ಹೊರಗಿರಲಾರನು. ಘಳಿಗೆ ಘಳಿಗೆನಂತರ ಆಗಾಗ ಆತ್ಮತತ್ವದ ಸ್ವಾದವನ್ನು ಸವಿಯುತ್ತಾನೆ. ಚಂಚಲ ಶೀಲ ಪ್ರಪಂಚದ ಸ್ವಾದ ಅವನಿಗೆ ರುಚಿಸದು. ಆತ್ಮರಸದಲ್ಲಿ ತನ್ಮಯನಾದೊಡನೆ ಬಾಹ್ಯವಸ್ತುಗಳನ್ನು ತ್ಯಜಿಸಿ, ನಿರ್ಗ್ರಂಥನಾಗುತ್ತಾನೆ. ಜ್ಞಾನ ಮತ್ತು ಶ್ರದ್ಧಾನದ ಅಪೇಕ್ಷೆಯಿಂದ ಅವಿರತಸಮ್ಯಕ್ತ್ವ ಗುಣಸ್ಥಾನಿಯು ಸನ್ಯಾಸಿ ಆಗಿರುತ್ತಾನೆ. ಆರನೇಯ ಅಥವಾ ಏಳನೇಯ ಗುಣಸ್ಥಾನದಲ್ಲಿನ ಮುನಿಯು ಚಾರಿತ್ರದ ಅಪೇಕ್ಷೆಯಿಂದ ಸನ್ಯಾಸಿಯಾಗಿರುತ್ತಾನೆ. ಅವನು ನಿರ್ಗ್ರಂಥ ಅವಸ್ಥೆಯಲ್ಲಿದ್ದು ಹಗಲಿರುಳು ಸ್ವಾನುಭವ ಅಭ್ಯಾಸವನ್ನು ಮಾಡುತ್ತಿರುತ್ತಾನೆ. ಯದಿ ತದ್ಭವ ಮೋಕ್ಷಗಾಮಿಯಾಗಿದ್ದರೆ ಕ್ಷಾಯಿಕ ಶ್ರೇಣಿಯನ್ನೇರಿ ಅತಿ ಶೀಘ್ರವೇ ನಾಲ್ಕು ಘಾತಿಕರ್ಮಗಳನ್ನು ನಾಶಮಾಡಿ ಕೇವಲ ಜ್ಞಾನಿಯಾಗುತ್ತಾನೆ.: ಮುಖ್ಯಾರ್ಥವೇನೆಂದರೆ : ಆತ್ಮತತ್ವವಲ್ಲದೆ ಪರವಸ್ತು ಗಳ ರಾಗ, ದ್ವೇಷ, ಮೋಹಗಳ ತ್ಯಾಗವೇ ಸನ್ಯಾಸಾವಸ್ಥೆಯಾಗಿರುತ್ತದೆ.

ಸಮಯಸಾರಕಲಶದಲ್ಲಿ ಹೇಳುತ್ತಾರೆ :

**ಸಂನ್ಯಸ್ತವ್ಯಮಿದಂ ಸಮಸ್ತಮಪಿ ತತ್ಕರ್ಮೈವ ಮೋಕ್ಷಾರ್ಥಿನಾ**
**ಸಂನ್ಯಸ್ತೇ ಸತಿ ತತ್ರ ಕಾ ಕಿಲ ಕಥಾ ಪುಣ್ಯಸ್ಯ ಪಾಪಸ್ಯ ವಾ।**

**ಸಮ್ಯಕ್ತ್ವಾದಿ ನಿಜಸ್ವಭಾವಭವನಾನ್ಮೋಕ್ಷಸ್ಯ ಹೇತುರ್ಭವ-
ನ್ನೈಷ್ಕರ್ಮಪ್ರತಿಬದ್ಧಮುದ್ಧತರಸಂ ಜ್ಞಾನಂ ಸ್ವಯಂ ಧಾವತಿ**
||೧೦-೪||

**ಭಾವಾರ್ಥ :** ಮೋಕ್ಷವನ್ನಿಚ್ಛಿಸುವ ಮಹಾತ್ಮನು ಎಲ್ಲಾ ಕ್ರಿಯಾ ಕಾಂಡಗಳ ಮತ್ತು ಮನ, ವಚನ, ಕಾಯ ಕ್ರಿಯೆಗಳ ಮಮತ್ವವನ್ನು ತ್ಯಜಿಸುವುದುಚಿತವಾಗಿದೆ. ಆತ್ಮನ ನಿಜಸ್ವಭಾವದ ಹೊರತು ಸಕಲ ವಸ್ತುಗಳ ತ್ಯಾಗವಾಗುತ್ತಿರಲು ಅಲ್ಲಿ ಪುಣ್ಯಪಾಪ ತ್ಯಾಗದ ವಿಷಯದಲ್ಲಿ ಹೇಳುವುದೇನು? ಪುಣ್ಯಪಾಪ ಎರಡೂ ತ್ಯಾಗವಾಗಿರುತ್ತದೆ. ಸಮ್ಯಗ್ದರ್ಶನ, ಜ್ಞಾನ, ಚಾರಿತ್ರಾದಿಗಳ ಸ್ವಭಾವದಲ್ಲಿರುವುದೇ ಮೋಕ್ಷಮಾರ್ಗ. ಈ ಮೋಕ್ಷಮಾರ್ಗದಲ್ಲಿರುವವನಲ್ಲಿ ಕರ್ಮರಹಿತಭಾವದಿಂದ ಪ್ರಾಪ್ತವೂ ಆತ್ಮೀಕರಸದಿಂದ ಪರಿಪೂರ್ಣವೂ ಆದ ಕೇವಲಜ್ಞಾನವು ಸ್ವಯಂ ಹಸ್ತಗತವಾಗುತ್ತದೆ.

❖❖❖❖❖❖❖❖❖❖❖

## ರತ್ನತ್ರಯ ಧರ್ಮವೇ ಶ್ರೇಷ್ಠ ತೀರ್ಥವು

**ರಯಣತ್ತಯ-ಸಂಜುತ್ತ ಜಿಉ ಉತ್ತಿಮು ತಿತ್ಥು ಪವಿತ್ತು ।
ಮೋಕ್ಖಹ ಕಾರಣ ಜೋಇಯಾ ಅಣ್ಣು ಣ ತಂತು [illegible] ಮಂತು ||೮೩||**

**ಅನ್ವಯಾರ್ಥ :** ಜೋಇಯಾ-ಎಲೈಃಯೋಗಿಯೇ ! ರಯಣತ್ತಯ-ಸಂಜುತ್ತ ಜಿಉ ಉತ್ತಿಮು ಪವಿತ್ತು ತಿತ್ಥು-ರತ್ನತ್ರಯ ಸಹಿತವಾದ ಜೀವವು ಉತ್ತಮವೂ ಮತ್ತು ಪವಿತ್ರವೂ ಆದ ತೀರ್ಥವಾಗಿರುತ್ತದೆ. ಮೋಕ್ಖಹಂ ಕಾರಣ-ಇದೇ ಮೋಕ್ಷೋಪಾಯವಾಗಿರುತ್ತದೆ. ಅಣ್ಣು ತಂತು [illegible] ಮಂತು ಣ-ಬೇರೆಯಾವ ತಂತ್ರವೂ ಮಂತ್ರವೂ ಇಲ್ಲ.

**ಭಾವಾರ್ಥ :** ಕರ್ಮಬಂಧನದಿಂದ ಬಿಡುಗಡೆಯಾಗುವ ಅಥವಾ ಭವ ಸಾಗರದಿಂದ ಪಾರಾಗುವ ಉಪಾಯ ರತ್ನತ್ರಯಧರ್ಮವೇ ಆಗಿರುತ್ತದೆ. ಬೇರೆ ಉಪಾಯಗಳೇ ಇಲ್ಲ. ನಿಶ್ಚಯ ರತ್ನತ್ರಯ ಸಾಕ್ಷಾತ್ ಮೋಕ್ಷಮಾರ್ಗ ವಾಗಿರುತ್ತದೆ ಅಥವಾ ಉಪಾದಾನ ಕಾರಣವಾಗಿರುತ್ತದೆ. ವ್ಯವಹಾರ ರತ್ನತ್ರಯ ಉಪಾದಾನ ಕಾರಣದ ಪ್ರಕಾಶಕ್ಕೆ ಬಾಹ್ಯನಿಮಿತ್ತವಾಗಿರುತ್ತದೆ. ಕಾರ್ಯ ಸಿದ್ಧಿಯು ಉಪಾದಾನ ಮತ್ತು ವಿಭಿನ್ನ ಎರಡು ಕಾರಣಗಳಿರುವುದ

ರಿಂದಲೇ ಆಗುತ್ತದೆ. ಕಿಟ್ಟಕಲಂಕದಿಂದ್ಯುಕ್ತವಾದ ಸುವರ್ಣ ಅಗ್ನಿಯು ಮತ್ತು ಔಷಧಿಗಳ ನಿಮಿತ್ತದಿಂದ ಸ್ವಯಂಪ್ರಕಾಶ ಮತ್ತು ಶುದ್ಧಅಗುವಂತೆ, ಮಲಿನ ವಾದ ಬಟ್ಟೆ ಸಾಬೂನು ಮತ್ತು ನೀರು ನಿಮಿತ್ತದಿಂದ ಶುಭ್ರವಾಗುವಂತೆ, ಅಕ್ಕಿ ಯು ಅಗ್ನಿ ಮತ್ತು ನೀರಿನ ನಿಮಿತ್ತದಿಂದ ಅನ್ನರೂಪವಾಗುವಂತೆ, ಕಡಲೆಕಾಳು ಬೀಸುಕಲ್ಲಿನ ನಿಮಿತ್ತದಿಂದ ಹಿಟ್ಟಾಗುವಂತೆ ಮತ್ತು ನೀರಿನ ನಿಮಿತ್ತದಿಂದ ಎಳ್ಳಿನಿಂದ ಎಣ್ಣೆ ಹೊರಡುವಂತೆ ಆತ್ಮನ ಕಾರ್ಯಸಿದ್ಧಿಯಾಗುವುದು.

ಮೃತ್ (ಮಣ್ಣು) ಸ್ವಯಂ ಘಟರೂಪವಾಗಿ ಆಗುವುದಾದರೂ, ಕುಂಭ ಕಾರನ ಚಕ್ರ (ತಿಗರಿ) ಮೊದಲಾದ ನಿಮಿತ್ತಗಳು ಇದ್ದರೂ ಉಪಾದಾನ ಕಾರಣವೇ ಸ್ವಯಂ ಕಾರ್ಯರೂಪವಾಗುತ್ತದೆ. ಎಷ್ಟರವರೆಗೆ ಕಾರ್ಯವಾಗು ವುದಿಲ್ಲವೋ ಅಷ್ಟರವರೆಗೆ ಆ ನಿಮಿತ್ತವು ಸಹಾಯಕಮಾತ್ರವಾಗಿರುತ್ತದೆ; ತೀರಾ ಭಿನ್ನವೂ ಆಗಿಯೇ ಇರುತ್ತದೆ. (ಉಳಿಯುತ್ತದೆ). ಆತ್ಮನು ತನ್ನ ಶುದ್ಧಿ ಯ ವಿಷಯದಲ್ಲಿ ಅಥವಾ ಉನ್ನತಿಯ ಕಾರ್ಯದಲ್ಲಿ ಸ್ವತಃವೇ ಉಪಾದಾನ ಕಾರಣನಾಗಿದ್ದಾನೆ. ಶರೀರಾದಿ ಬಾಹ್ಯಕ್ರಿಯೆಗಳು ನಿಮಿತ್ತ ಕಾರಣಗಳಾಗಿ ಇರುತ್ತವೆ. ಶರೀರಕ್ಕೆ ವಜ್ರವೃಷಭ ನಾರಾಚಸಂಹನನ, ಸಾಧುಗಳ ಬಾಹ್ಯ ನಿರ್ಗ್ರಂಥವೇಷ, ಚಾರಿತ್ರಾದಿಗಳ ಪ್ರಾಪ್ತಿ ಮತ್ತು ಉತ್ತಮ ಆರ್ಯಕ್ಷೇತ್ರ ದಲ್ಲಿ, ಚತುರ್ಥ ದುಷಮ-ಸುಷಮ ಕಾಲದಲ್ಲಿ ಜನನ ಇವುಗಳಿಲ್ಲದೆ ಆತ್ಮನ ಭಾವಗಳು ವಿಶುದ್ಧಿಯಾಗಲಾರವು. ಆದ್ದರಿಂದ ವ್ಯವಹಾರ ರತ್ನತ್ರಯದ ಅವಲಂಬನೆಯಿಂದಲೇ ನಿಶ್ಚಯ ರತ್ನತ್ರಯಗಳ ಆರಾಧನೆ ಕಾರ್ಯಕಾರೀ ಯಾಗುತ್ತದೆ. ಆತ್ಮನು ತನ್ನ ಆತ್ಮದ್ರವ್ಯ ಸ್ವಭಾವದಿಂದ ಪರಮಶುದ್ಧನೂ ಜ್ಞಾತಾದೃಷ್ಟನೂ ಅನಂತವೀರ್ಯನೂ ಅನಂತಸುಖಸಾಗರನೂ ಪರಮವೀತ ರಾಗನೂ ಎಲ್ಲಾ ಅನ್ಯದ್ರವ್ಯಗಳ ಸತ್ತೆಯಿಂದ ರಹಿತನೂ ಆಗಿರುತ್ತಾನೆ.

ನಾನು ಜ್ಞಾನಚೇತನಾಮಯನು, ಪರಮನಿರಾಕುಲನು ಮತ್ತು ಪರ ಮಾತ್ಮಾದೇವನು ಎಂಬ ದೃಢ ಶ್ರದ್ಧೆಯೇ ನಿಶ್ಚಯ ಸಮ್ಯಗ್ದರ್ಶನ. ಇದರ ಪ್ರಾಪ್ತಿಗೆ ಅಂತರಂಗ ನಿಮಿತ್ತಗಳಾದ ಅನಂತಾನುಬಂಧೀ ಕಷಾಯಗಳು ಮತ್ತು ಮಿಥ್ಯಾತ್ವದ ಉಪಶಮ ಮತ್ತು ಬಾಹ್ಯ ನಿಮಿತ್ತಗಳಾದ ದೇವ, ಶಾಸ್ತ್ರ ಮತ್ತು ಗುರುಗಳ ಶ್ರದ್ಧಾನ, ಜೀವಾದಿ ಸಪ್ತತತ್ವಗಳ ಪರಿಪೂರ್ಣನಂಬಿಕೆ ಮತ್ತು ಆತ್ಮ ಮತ್ತು ಪರವಸ್ತು ಈ ಭೇದ ವಿಜ್ಞಾನಪೂರ್ವಕ ವಿಚಾರ ಇವುಗಳು

ಕಾರಣಗಳಾಗಿ ಮನ, ವಚನ, ಕಾಯಗಳ ಸಕಲ ಕ್ರಿಯೆಗಳೂ ನಿಮಿತ್ತಗಳಾಗಿವೆ. ಅಂತರಂಗ ಮತ್ತು ಬಹಿರಂಗನಿಮಿತ್ತಗಳುಂಟಾಗುವುದರಿಂದಲೇ ನಿಶ್ಚಯ ಸಮ್ಯಗ್ದರ್ಶನ ಆತ್ಮರೂಪ ಭೂಮಿಯಿಂದಲೇ ಉದ್ಭವಿಸುತ್ತದೆ. ಆತ್ಮನೇ ಉಪಾದಾನಕಾರಣನು. ಆತ್ಮನ ಆತ್ಮರೂಪ ಯಥಾರ್ಥ ಜ್ಞಾನವೇ ನಿಶ್ಚಯ ಸಮ್ಯಗ್ಜ್ಞಾನವಾಗಿರುತ್ತದೆ. ಆಗಮಶಾಸ್ತ್ರಗಳ ಮೂಲಕ ತತ್ವಗಳ ಮತ್ತು ದ್ರವ್ಯಗಳ ಮನನವೇ ವ್ಯವಹಾರ ಸಮ್ಯಗ್ಜ್ಞಾನವಾಗಿರುತ್ತದೆ. ಆತ್ಮಾಭ್ಯಾಸದಿಂದಲೂ ಗುರೂಪದೇಶದಿಂದಲೂ ಅಂತರಂಗಿಕ ಉಪಾದಾನನಾದ ಆತ್ಮನಿಂದ ಜ್ಞಾನವು ಪ್ರಕಾಶಿಸುತ್ತದೆ. ಅಂತರಂಗ ವಿಭಿನ್ನಗಳಾದ ಜ್ಞಾನಾವರಣೀಯ, ದರ್ಶನಾವರಣೀಯ ಮತ್ತು ಅಂತರಾಯ ಕರ್ಮಗಳ ಕ್ಷಯೋಪಶಮವಿರುತ್ತದೆ.

ಆತ್ಮನ ಮೂಲಕ ಆತ್ಮನಲ್ಲಿಯೇ ಆತ್ಮನಿಂದ ಪರವಸ್ತುಗಳ ಅವಲಂಬನೆಯಿಲ್ಲದೆ ರಮಿಸುವುದು ನಿಶ್ಚಯ ಸಮ್ಯಕ್ಚಾರಿತ್ರವಾಗಿರುತ್ತದೆ. ಇದಕ್ಕೆ ಅಂತರಂಗ ಚಾರಿತ್ರಮೋಹನೀಯಕರ್ಮದ ಉಪಶಮವೂ ಬಾಹ್ಯ ಸಾಧನ ಶ್ರಾವಕರ ಏಕದೇಶಚಾರಿತ್ರವೂ ಮತ್ತು ಸಾಧುಗಳ ಸಕಲ ಚಾರಿತ್ರವೂ ನಿಮಿತ್ತಕಾರಣವಾಗಿರುತ್ತದೆ.

ಆತ್ಮಾನುಭವವೇ ತೀರ್ಥವೂ ದೋಣಿಯೂ ಆಗಿರುತ್ತದೆ. ಆ ಸಮ್ಯಗ್ದರ್ಶನ, ಸಮ್ಯಗ್ಜ್ಞಾನ ಮತ್ತು ಸಮ್ಯಕ್ಚಾರಿತ್ರ ಇವು ಮೂರು ಆತ್ಮೀಕ ಧರ್ಮಗಳಿಂದಲೇ ರಚಿಸಲ್ಪಟ್ಟಿರುತ್ತವೆ. ಇಂತಹ ದೋಣಿಯನ್ನು ಯಾವ ಆತ್ಮನು ತಾನೇ ಹತ್ತಿಕೊಂಡು ಅದನ್ನು ಆತ್ಮರೂಪೀ ಸಮುದ್ರದಲ್ಲಿ ನಡೆಯಿಸುತ್ತಾನೋ, ಅವನೇ ಮೋಕ್ಷರೂಪದ್ವೀಪವನ್ನು ತಲಪುತ್ತಾನೆ. ಆ ದ್ವೀಪವೂ ಕೂಡ ತಾನೇ. ತನ್ನ ಪೂರ್ಣಭಾವವೇ ಕಾರ್ಯವಾಗಿರುತ್ತದೆ. ಅಪೂರ್ಣ ಭಾವವೇ ಕಾರಣವಾಗಿರುತ್ತದೆ. ಹೀಗೆ ನಿಶ್ಚಿಂತನಾಗಿ ಆತ್ಮಾನುಭವಕ್ಕಾಗಿ ಸತತ ಪ್ರಯತ್ನಪಡುವಾತನೇ, ಪರಮಾನಂದಮಯ ರಸಾಮೃತದ ಸ್ವಾದವನ್ನನುಭವಿಸುತ್ತಾ, ಕರ್ಮಗಳ ಸಂವರೆ ಮತ್ತು ನಿರ್ಜರೆಗೈಯ್ಯುತ್ತಾ, ಪರಮೋನ್ನತಿಯನ್ನು ಪಡೆಯುತ್ತಾನೆ. ಇದೇ ಪರಮಕರ್ತವ್ಯವಾಗಿರುತ್ತದೆ.

ಅಮೃತಚಂದ್ರಾಚಾರ್ಯರು ತತ್ವಾರ್ಥಸಾರದ ಉಪಸಂಹಾರದಲ್ಲಿ ಹೇಳಿರುತ್ತಾರೆ :

**ನಿಶ್ಚಯವ್ಯವಹಾರಾಭ್ಯಾಂ ಮೋಕ್ಷಮಾರ್ಗೋ ದ್ವಿಧಾ ಸ್ಥಿತಃ।**
**ತತ್ರಾದ್ಯಃ ಸಾಧ್ಯರೂಪಃ ಸ್ಯಾದ್ ದ್ವಿತೀಯಸ್ತಸ್ಯ ಸಾಧನಂ ॥ ೨ ॥**
**ಶ್ರದ್ಧಾನಾಧಿಗಮೋಪೇಕ್ಷಾಃ ಶುದ್ಧಸ್ಯ ಸ್ವಾತ್ಮನೋ ಹಿ ಯಾಃ।**
**ಸಮ್ಯಕ್ತ್ವಜ್ಞಾನವೃತ್ತಾತ್ಮಾ ಮೋಕ್ಷಮಾರ್ಗಃ ಸ ನಿಶ್ಚಯಃ ॥ ೩ ॥**
**ಶ್ರದ್ಧಾನಾಧಿಗಮೋಪೇಕ್ಷಾ ಯಾಃ ಪುನಃ ಸ್ಯುಃ ಪರಾತ್ಮನಾ ॥**
**ಸಮ್ಯಕ್ತ್ವಜಾನವೃತ್ತಾತ್ಮಾ ಸ ಮಾರ್ಗೋ ವ್ಯವಹಾರತಃ ॥ ೪ ॥**

**ಭಾವಾರ್ಥ :** ಮೋಕ್ಷಮಾರ್ಗವು ನಿಶ್ಚಯ ಮತ್ತು ವ್ಯವಹಾರಮಾರ್ಗವೆಂದು ಎರಡು ವಿಧ, ನಿಶ್ಚಯಮಾರ್ಗ ಸಾಧ್ಯವೂ ವವ್ಯಹಾರಮಾರ್ಗ ಸಾಧನವೂ ಆಗಿರುತ್ತದೆ. ತನ್ನ ಶುದ್ಧಾತ್ಮನ ಶ್ರದ್ಧಾನ, ಜ್ಞಾನ, ಎಲ್ಲಾ ಪರವಸ್ತುಗಳಿಂದ ಉದಾಸೀನಭಾವರೂಪ ಉಪೇಕ್ಷೆ. ಸ್ವರೂಪದಲ್ಲಿ ಲವಲೀನತೆಯೆಂಬ ನಿಶ್ಚಯರತ್ನತ್ರಯಸ್ವರೂಪ ಮತ್ತು ಆತ್ಮನ ಶುದ್ಧಭಾವ ಇವು ನಿಶ್ಚಯಮಾರ್ಗವಾಗಿರುತ್ತದೆ. ಆರುದ್ರವ್ಯಗಳ ದೃಷ್ಟಿಯಿಂದ ಶ್ರದ್ಧಾನ, ಜ್ಞಾನ ಮತ್ತು ತ್ಯಾಗಗಳು ವ್ಯವಹಾರ ರತ್ನತ್ರಯ ಮೋಕ್ಷಮಾರ್ಗವಾಗಿದೆ. ವ್ಯವಹಾರದ ಆಧಾರದಿಂದಲೇ ನಿಶ್ಚಯದ ಪ್ರಾಪ್ತಿಮಾಡಿಕೊಳ್ಳಬೇಕು.

---

## ರತ್ನತ್ರಯ ಸ್ವರೂಪ

**ದಂಸಣು ಜಂ ಪಿಚ್ಛಿಯಇ ಬುಹ ಅಪ್ಪಾ ವಿಮಲ ಮಹಂತು।**
**ಪುಣು ಪುಣು ಅಪ್ಪಾ ಭಾವಿಯಏ ಸೋ ಚಾರಿತ್ತ ಪವಿತ್ತು ॥ ೮೪ ॥**

**ಅನ್ವಯಾರ್ಥ :** ಅಪ್ಪಾ ವಿಮಲ ಮಹಂತು–ಈ ಆತ್ಮನು ಮಲರಹಿತನೂ ಶುದ್ಧನೂ ಮತ್ತು ಮಹಾಪರಮಾತ್ಮನೂ ಆಗಿರುತ್ತಾನೆ. ಜಂ ಪಿಚ್ಛಿಯಇ ಬುಹ ದಂಸಣು – ಎಂದು ನಂಬಿಕೆಯಿಡುವುದೇ ಸಮ್ಯಗ್ದರ್ಶನವಾಗಿದೆ. ಇದನ್ನು ತಿಳಿಯುವುದು ಸಮ್ಯಗ್ಜ್ಞಾನವಾಗಿದೆ. ಪುಣು ಪುಣು ಅಪ್ಪಾ ಭಾವಿಯಏ ಸೋ ಚಾರಿತ್ತ ಪವಿತ್ತು–ಆಗಾಗ ಆತ್ಮಭಾವನೆಗೈಯ್ಯುವುದೇ ನಿಶ್ಚಯ ಶುದ್ಧಚಾರಿತ್ರವಾಗಿರುತ್ತದೆ.

**ಭಾವಾರ್ಥ :** ತನ್ನಾತ್ಮನ ಯಥಾರ್ಥ ಸ್ವರೂಪವನ್ನು ತಿಳಿದು ಶ್ರದ್ಧೆ ಇಡಬೇಕು. "ಈ ಆತ್ಮವು ಪರಿಣಮನಶೀಲವೂ ಗುಣಸಮೂಹವೂ ಆಗಿರುತ್ತದೆ.

ಆ ಗುಣಗಳಲ್ಲಿಯೇ ಸ್ವಭಾವ ಪರಿಣಮನವಾಗುವುದೇ ದ್ರವ್ಯದ ಧರ್ಮ ವಾಗಿರುತ್ತದೆ. ಪರಿಣಮನ ಶಕ್ತಿಯಿಂದಲೇ ಗುಣಗಳಲ್ಲಿ ಪ್ರತಿಸಮಯದಲ್ಲಿ ಪರ್ಯಾಯಗಳುಂಟಾಗುತ್ತವೆ. ವ್ಯವಹಾರನಯದಿಂದ ತನ್ನಾತ್ಮನು ಕರ್ಮ ಸಹಿತ ಮಲಿನನಾಗಿರುವನೆಂದು ಕಾಣುತ್ತದೆ. ಕರ್ಮಗಳ ಸಂಯೋಗದಿಂದ ಹದಿನಾಲ್ಕು ಗುಣಸ್ಥಾನಗಳು, ಹದಿನಾಲ್ಕು ಮಾರ್ಗಣಾಸ್ಥಾನ ರೂಪ ಆತ್ಮನ ಅವಸ್ಥೆಗಳಾಗುತ್ತವೆ. ಇವೆಲ್ಲವೂ ಆತ್ಮನ ಶುದ್ಧ ಸ್ವಭಾವವಲ್ಲ. ನಿಶ್ಚಯ ನಯದಿಂದ ಈ ಆತ್ಮವು ಯಥಾರ್ಥವಾಗಿ ಮೂಲದ್ರವ್ಯವಾಗಿದೆ." ಎಂದು ತಿಳಿ ಯುವುದು ಯೋಗ್ಯವಾಗಿರುತ್ತದೆ.

ಈ ಆತ್ಮನು ಸತ್‌ಪದಾರ್ಥವಾಗಿರುತ್ತಾನೆ. ಅದರ ಉತ್ಪತ್ತಿಯಾಗಲಿ, ನಾಶವಾಗಲಿ ಇಲ್ಲ. ಸ್ವತಃ ಸ್ಥಿರವಾದ ವಸ್ತುವಾಗಿರುತ್ತದೆ. ಯಾರು ಅದನ್ನು ಉಂಟುಮಾಡಲು ಸಾಧ್ಯವಿಲ್ಲ. ಉಂಟುಮಾಡಿಲ್ಲ, ಅನಾದಿಕಾಲ ದಿಂದಿರುತ್ತದೆ. ಆರು ದ್ರವ್ಯಗಳಿಂದ ಜೀವಾದಿಸಮೂಹರೂಪವಾದ ಈ ಲೋಕವು ಅನಾದಿಕಾಲದಿಂದಿರುತ್ತದೆ. ಈ ಎಲ್ಲಾ ದ್ರವ್ಯಗಳು ಅನಾದಿಕಾಲ ದಿಂದ ಅನಂತಕಾಲದವರೆಗೂ ಸದಾ ಇದ್ದೇ ಇರುತ್ತವೆ. ಅನಂತಜೀವ ಗಳು, ಅನಂತಾನಂತಪುದ್ಗಲಗಳು, ಅಸಂಖ್ಯಾತ ಕಾಲಾಣುಗಳು, ಧರ್ಮದ್ರವ್ಯ ವೊಂದು, ಅಧರ್ಮಾಸ್ತಿಕಾಯವೊಂದು ಮತ್ತು ಆಕಾಶವು ಒಂದು ಇರುವುವು. ಎಲ್ಲಾ ಆತ್ಮವು ಆತ್ಮರೂಪವಾಗಿ ಸರಿಸಮಾನವಾಗಿರುತ್ತವೆ. ಹಾಗಾದರೂ ಪ್ರತಿಯೊಂದು ಆತ್ಮರುಗಳ ಸತ್ತೆಯು ಬೇರೆ ಬೇರೆ ಆತ್ಮರುಗಳ ಸತ್ತೆಯಿಂದ ಭಿನ್ನವೇ ಆಗಿರುತ್ತದೆ.

ತನ್ನಾತ್ಮನು ಏಕಾಂಗಿಯೆಂದೂ, ತನ್ನಾತ್ಮನಿಗೆ ಎಂಟು ಕರ್ಮಗಳ ಬಂಧ ಇಲ್ಲವೆಂದೂ, ರಾಗಾದಿ ವಿಕಾರಭಾವಗಳಿಲ್ಲವೆಂದೂ, ತನ್ನಾತ್ಮನು ಯಾವ ಸ್ಥೂಲ, ಔದಾರಿಕ, ವೈಕ್ರಿಯಕಾದಿ ಶರೀರರಹಿತನೆಂದೂ, ಸ್ಫಟಿಕ ಮಣಿಯಂತೆ ಪರಮನಿರ್ಮಲನೆಂದೂ, ಜ್ಞಾನ, ದರ್ಶನ, ಸುಖ, ವೀರ್ಯವೇ ಮೊದಲಾದ ಗುಣಸಾಗರನೆಂದೂ, ಯಾವುದಕ್ಕೂ ಉಪಾದಾನ ಕಾರಣನಲ್ಲ ನೆಂದೂ, ನಿಮಿತ್ತಕಾರಣನಲ್ಲನೆಂದೂ, ಸಂಸಾರ ಅವಸ್ಥೆಯಲ್ಲಿ ಶರೀರನಾಮ ಕರ್ಮದ ಉದಯದಿಂದ ಚಂಚಲಗಳಾದ ಮನ, ವಚನಗಳ ಮೂಲಕ ಯೋಗ ಗಳಲ್ಲಿ ಪರಿಣಮಿಸುತ್ತಿರುತ್ತಾನೆಂದೂ ತಿಳಿಯಬೇಕು. ಕಷಾಯಗಳುದಯ

ದಿಂದ ಶುಭಾಶುಭ ಉಪಯೋಗಗಳಾಗುತ್ತವೆ. ಇವು ಲೌಕಿಕ ಕಾರ್ಯಗಳಲ್ಲಿ ನಿಮಿತ್ತಗಳಾಗಿರುತ್ತವೆ. ಕುಂಭಕಾರನು ಗಡಿಗೆ, ಮಡಿಕೆಗಳನ್ನು ಬೇಯಿಸಿದರೂ ಮಣ್ಣು ಮಡಿಕೆಯ ಉಪಾದಾನವಾಗಿರುವಂತೆ ಅವನ ಯಾವ ಮನ, ವಚನ, ಕಾಯ ಯೋಗಗಳು ಮತ್ತು ಅಶುಭಯೋಗಗಳು ನಿಮಿತ್ತಗಳಾಗಿವೆ. ಶುದ್ಧಾತ್ಮದಲ್ಲಿ ಯೋಗಗಳ ಕಾರ್ಯಗಳಾಗಲಿ, ಶುಭಾಶುಭ ಉಪಯೋಗಗಳಾಗಲಿ ಇಲ್ಲ. ಆತ್ಮನು ಸ್ವಾಭಾವಿಕವಾಗಿ ಅಕರ್ತೃವೂ ಅಭೋಕ್ತೃವೂ ಆಗಿರುವನಲ್ಲದೆ, ಪರಭಾವಗಳ ಕರ್ತೃವಾಗಲಿ, ಪರಭಾವಗಳ ಭೋಕ್ತೃವಾಗಲಿ ಅಲ್ಲ. ಈ ಆತ್ಮನು ಸ್ವಭಾವದಿಂದ ತನ್ನ ಶುದ್ಧಪರಿಣತಿಯ ಕರ್ತೃವೂ, ಸಹಜ ಶುದ್ಧ ಸುಖದ ಭೋಕ್ತೃವೂ ಪರಮನಿರಾಕುಲನೂ ಸಮಭಾವದ ಅಧಿಪತಿಯಾದ ಪರಮಪವಿತ್ರ ನಿಶ್ಚಲವಾಗಿರುವ ಪರಮಪದಾರ್ಥ ಪರಮಾತ್ಮನೂ ಆಗಿರುತ್ತಾನೆ. ನಾನೂ ಹಾಗೆಯೇ ಇರುವೆನು ಎಂಬ ನಿಶ್ಚಯ ಅನುಭವ ಉಂಟಾದಾಗ ಸಮ್ಯಗ್ದರ್ಶನ ಗುಣದ ಪ್ರಕಟವಾಗುತ್ತದೆ.

ಮಿಥ್ಯಾತ್ವಕರ್ಮ ಮತ್ತು ಅನಂತಾನುಬಂಧೀ ಕಷಾಯಗಳ ಉಪಶಮವಲ್ಲದೆ ಸಮ್ಯಗ್ದರ್ಶನ ಉಂಟಾಗಲಾರದು. ಶಾಸ್ತ್ರಜ್ಞಾನ ಸರಿಯಾಗಿ ಆದರೂ ಕೂಡ ಆತ್ಮಾನುಭವವಾಗದಿರುವವರೆಗೆ ಜ್ಞಾನ ಸಮ್ಯಗ್ಜ್ಞಾನವಾಗಲಾರದು. ಆತ್ಮನ ಶ್ರದ್ಧಾನ ಮತ್ತು ಜ್ಞಾನಗಳಲ್ಲಿ ಬಾರಿ ಬಾರಿಗೂ ಕ್ರೀಡಿಸುವವನಾಗಿ ಅದರಲ್ಲಿ ಆಚರಣಶೀಲನಾಗುವುದೇ ಚಾರಿತ್ರವಾಗಿರುತ್ತದೆ. ಆತ್ಮನು ತಾನು ತನ್ನಲ್ಲಿ ಸ್ಥಿರನಾಗಿ ರತ್ನತ್ರಯಗಳ ಏಕತ್ವವುಂಟಾಗುವುದೇ ಮೋಕ್ಷಮಾರ್ಗವಾಗಿದೆ. ರತ್ನತ್ರಯ ಧರ್ಮ ನಿಶ್ಚಲ ಆತ್ಮಸ್ವಭಾವ ಆಗಿರುತ್ತದೆ.

ಪುರುಷಾರ್ಥಸಿದ್ಧ್ಯುಪಾಯದಲ್ಲಿ ಹೇಳಿರುತ್ತಾರೆ :

**ದರ್ಶನಮಾತ್ಮವಿನಿಶ್ಚಿತಿರಾತ್ಮಪರಿಜ್ಞಾನಮಿಷ್ಯತೇ ಬೋಧಃ ।**
**ಸ್ಥಿತಿರಾತ್ಮನಿ ಚಾರಿತ್ರಂ ಕುತ ಏತೇಭ್ಯೋ ಭವತಿ ಬಂಧಃ ॥ ೨೧೬ ॥**
**ಸಮ್ಯಕ್ತ್ವಚರಿತ್ರಬೋಧಲಕ್ಷಣೋ ಮೋಕ್ಷಮಾರ್ಗ ಇತ್ಯೇಷಃ ।**
**ಮುಖ್ಯೋಪಚಾರರೂಪಃ ಪ್ರಾಪಯತಿ ಪರಂ ಪದಂ ಪುರುಷಂ॥೨೨೨॥**

**ಭಾವಾರ್ಥ :** ತನ್ನಾತ್ಮನ ನಿಶ್ಚಯವೇ ಸಮ್ಯಗ್ದರ್ಶನ, ತನ್ನಾತ್ಮನ ಜ್ಞಾನವೇ ಸಮ್ಯಜ್ಞಾನ ಮತ್ತು ತನ್ನಾತ್ಮನಲ್ಲಿ ಸ್ಥಿರನಾಗುವುದೇ ಸಮ್ಯಕ್ಚಾರಿತ್ರ

ಆಗಿರುತ್ತದೆ. ಈ ಮೂರರಿಂದ ಕರ್ಮಬಂಧ ಆಗುವುದಿಲ್ಲ. ನಿಶ್ಚಯ ವ್ಯವಹಾರ ರತ್ನತ್ರಯ ಸ್ವರೂಪವಾದ ಮೋಕ್ಷಮಾರ್ಗವೇ ಆತ್ಮನನ್ನು ಪರಮ ಪಾವನ ಸ್ಥಾನಕ್ಕೆ ತಲುಪಿಸುತ್ತದೆ.

## ಎಲ್ಲಾ ಗುಣಗಳು ಆತ್ಮಾನುಭವದಲ್ಲಿ ಗರ್ಭಿತವಾಗಿವೆ

**ಜಹಿಂ ಅಪ್ಪಾ ತಹಿಂ ಸಯಲ-ಗುಣ ಕೇವಲಿ ಏಮ ಭಣಂತಿ |**
**ತಿಹಿ ಕಾರಣಏಂ ಜೋಇ ಫುಡು ಅಪ್ಪಾ ವಿಮಲು ಮುಣಂತಿ ||೮೫||**

**ಅನ್ವಯಾರ್ಥ** : ಜಹಿಂ ಅಪ್ಪಾ ತಹಿಂ ಸಯಲ-ಗುಣ-ಆತ್ಮನಿರುವಲ್ಲಿ ಅವನ ಸರ್ವಗುಣಗಳಿರುತ್ತವೆಂದು, ಕೇವಲಿ ಏಮ ಭಣಂತಿ-ಕೇವಲೀಭಗವಂತರು ಹೇಳಿರುತ್ತಾರೆ. ತಿಹಿ ಕಾರಣಏಂ ಜೋಇ ಫುಡು ವಿಮಲು ಅಪ್ಪಾ ಮುಣಂತಿ-ಆದುದರಿಂದಲೇ ಯೋಗಿಗಳು ನಿಶ್ಚಯವಾಗಿ ನಿರ್ಮಲಾತ್ಮನ ಅನುಭವವನ್ನು ಮಾಡಿಕೊಳ್ಳುತ್ತಾರೆ.

**ಭಾವಾರ್ಥ** : ಶುದ್ಧಾತ್ಮನ ಶ್ರದ್ಧಾನವಿರುವಲ್ಲಿ ಜ್ಞಾನ ಮತ್ತು ಧ್ಯಾನ ಇರುತ್ತದೆ. ಅಂದರೆ ಎಲ್ಲಿ ಶುದ್ಧಾತ್ಮಾನುಭವವಿರುವುದೋ ಅಲ್ಲಿ ಉಪಯೋಗ ಪಂಚೇಂದ್ರಿಯ ಮತ್ತು ಮನಸ್ಸು ಸಂಬಂಧವಾದ ವಿಷಯವಾಸನೆಗಳು ದೂರವಾಗಿ ನಿರ್ಮಲಾತ್ಮನಲ್ಲಿ ತಲ್ಲೀನತೆ ಉಂಟಾಗುತ್ತವೆ. ಇದೇ ಯಥಾರ್ಥ ಮೋಕ್ಷಮಾರ್ಗವಾಗಿರುತ್ತದೆ.

ದ್ರವ್ಯಗಳ ಸಕಲಗುಣಗಳು ಅದರಲ್ಲಿಯೇ ಅಡಕವಾಗಿರುತ್ತವೆ. ಕಲ್ಲು ಸಕ್ಕರೆಯನ್ನು ಗ್ರಹಣಮಾಡುವುದರಿಂದ ಅದರ ಗುಣಗಳು ಗ್ರಹಣೆಯಾಗುವಂತೆಯೂ, ಮಾವಿನಹಣ್ಣಿನ ಗ್ರಹಣೆಯಾದೊಡನೆ ಅದರ ಸ್ಪರ್ಶಾದಿ ಸರ್ವ ಗುಣಗಳು ಗ್ರಹಣೆಯಾಗುವಂತೆಯೂ, ಆತ್ಮನ ಗ್ರಹಣೆಯಾದೊಡನೆ ಆತ್ಮನ ಸಕಲ ಗುಣಗಳು ಗ್ರಹಣೆಯಾಗುತ್ತವೆ.

ಆತ್ಮನ ಒಂದೊಂದು ಗುಣಗಳ ಗ್ರಹಣೆಯಾಗುವುದರಿಂದ ಒಂದೊಂದು ಅಂಶಗಳೇ ಗ್ರಹಣೆಯಾಗುವುದಲ್ಲದೆ, ಎಲ್ಲಾ ಗುಣಗಳ ಗ್ರಹಣೆಯಾಗಲಾರವು. ಆದರೂ ಅಖಂಡನೂ ಅಭೇದನೂ ಆದ ಆತ್ಮನೊಬ್ಬನನ್ನು ಗ್ರಹಣೆಮಾಡತ್ತಾ

ಆದರಲ್ಲಿಯೇ ವ್ಯಾಪ್ತನಾದರೆ, ಎಲ್ಲಾ ಗುಣಗಳನ್ನು ಗ್ರಹಣೆಮಾಡಲು ಸಾಧ್ಯ ವಾಗುತ್ತದೆ. ಆದ್ದರಿಂದಲೇ ಯೋಗಿಗಳು ನಿಶ್ಚಲರಾಗಿ ತನ್ನಾತ್ಮನನ್ನೇ ಧ್ಯಾನಿಸುತ್ತಾರೆ. ಹೀಗೆ ಆತ್ಮನನ್ನು ಧ್ಯಾನಿಸುವುದೇ ಸಮ್ಯಗ್ದರ್ಶನ, ಸಮ್ಯ ಗ್ಜ್ಞಾನ, ಸಮ್ಯಕ್ಚಾರಿತ್ರ ಎಂಬ ಮೂರು ರತ್ನತ್ರಯಗಳಾಗಿರುತ್ತವೆ. ಅದೇ ಸಮೀಚೀನ ತಪಸ್ಸು. ಆತ್ಮನಲ್ಲಿ ರಮಿಸುವವನು ರಾಗದ್ವೇಷಗಳ ಅಭಾವ ದಿಂದ ನಿಶ್ಚಯ ಅಹಿಂಸಾವ್ರತದ ಪಾಲಕನಾಗುತ್ತಾನೆ. ಸಕಲ ಅಸತ್‌ಪದಾ ರ್ಥಗಳ ತ್ಯಾಗದಿಂದಲೂ ಮತ್ತು ಎಲ್ಲಾ ಸತ್‌ಪದಾರ್ಥಗಳ ಯಥಾರ್ಥ ಗ್ರಹಣೆ ಯಿಂದಲೂ ಆತ್ಮನಲ್ಲಿ ನಿಶ್ಚಯ ಸತ್ಯವ್ರತವುಂಟಾಗುತ್ತದೆ.

ಪುದ್ಗಲಾದಿಗಳ ಗುಣಪರ್ಯಾಯಗಳ ಸ್ಥಿತಿಯನ್ನು ಗ್ರಹಣೆಮಾಡದೆ, ತನ್ನಾತ್ಮರೂಪ ಸಂಪತ್ತಿಯಲ್ಲಿ ಸಂತೋಷಪಡುವುದೇ ಆತ್ಮನ ನಿಶ್ಚಯ ಅಚೌರ್ಯ ವ್ರತವಾಗಿರುತ್ತದೆ. ಪರವಸ್ತುಗಳ ಗೊಡವೆಗೆ ಹೋಗದೆ ಕೇವಲ ತನ್ನಾತ್ಮ ನಲ್ಲಿ ಏಕಾಗ್ರತೆಯಿಂದ ಪರಬ್ರಹ್ಮಸ್ವರೂಪದಲ್ಲಿ ವಿಹರಿಸುವುದೇ ನಿಶ್ಚಯ ಬ್ರಹ್ಮ ಚರ್ಯವ್ರತವಾಗಿರುತ್ತದೆ. ರಾಗಾದಿ ಸಕಲ ವಿಭಾವ ಪದಾರ್ಥಗಳ ಮಮತ್ವ ತ್ಯಾಗದಿಂದ ಆತ್ಮನ ಸಂಗವಿಲ್ಲದ ಭಾವದಲ್ಲಿ ತನ್ಮಯನಾಗುವುದರಿಂದ ಆತ್ಮನ ನಿಶ್ಚಯ ಪರಿಗ್ರಹ ತ್ಯಾಗವ್ರತವಾಗಿರುತ್ತದೆ. ಆತ್ಮನು ಆತ್ಮನಲ್ಲಿ ಸತ್ಯಭಾವ ದಿಂದ ಸ್ಥಿರನಾಗುವುದೇ ನಿಶ್ಚಯ ಸಾಮಾಯಿಕ. ಯಾವಾಗ ಆತ್ಮಾನುಭವ ವನ್ನು ಮಾಡಿಕೊಳ್ಳುತ್ತಿರಲು ಆಗ ವೀತರಾಗತೆಯುಂಟಾಗುವುದು ಮತ್ತು ಕಾಲಬಂಧಿತಕರ್ಮಗಳ ಸ್ವಯಂ ನಿರ್ಜರೆಯಾಗುವುದು. ಇದೇ ನಿಶ್ಚಯ ಪ್ರತಿಕ್ರಮಣವಾಗಿರುತ್ತದೆ.

ಆತ್ಮರಮಣತೆ ಮತ್ತು ಭಾವಿಯುಂಟಾಗುವ ವಿಭಾವ ಪರಿಣಾಮಗಳ ತ್ಯಾಗ ಇವೇ ನಿಶ್ಚಯ ಪ್ರತ್ಯಾಖ್ಯಾನವಾಗಿರುತ್ತದೆ. ತನ್ನಾತ್ಮನಲ್ಲಿಯಾಗಲಿ, ಗುಣೀಆತ್ಮನಲ್ಲಾಗಲಿ ಪರಮ ಏಕಾಗ್ರಭಾವದಿಂದ ತನ್ಮಯನಾಗುವುದೇ ನಿಶ್ಚಯ ಸ್ತುತಿಯಾಗಿರುತ್ತದೆ. ಆತ್ಮನು ಆತ್ಮನ ಆರಾಧನೆ ಮತ್ತು ವಿನಯ ಮಾಡುವುದೇ ನಿಶ್ಚಯವಂದನೆಯಾಗಿರುತ್ತದೆ.

ಆತ್ಮನು ಶರೀರಾದಿ ಸರ್ವಪರವಸ್ತುಗಳ ಮೋಹವನ್ನು ತ್ಯಜಿಸಿ, ತನ್ನನ್ನು ತನ್ನಲ್ಲಿಯೇ ಸ್ಥಿರಪಡಿಸಿಕೊಳ್ಳುವುದು ನಿಶ್ಚಯ ಕಾಯೋತ್ಸರ್ಗವಾಗಿ

ರುತ್ತದೆ. ಆತ್ಮನು ಮನ, ವಚನ, ಕಾಯಗಳ ಸಕಲ ವಿಕಾರಗಳಿಂದ ಭಿನ್ನನಾಗಿ ಆತ್ಮನೆಂಬ ಗುಪ್ತ ಕೋಟೆಯಲ್ಲಿ ವಿರಾಜಿತನಾಗುವುದೇ ತ್ರಿಗುಪ್ತಿಗಳ ಪಾಲನೆಯಾಗಿರುತ್ತದೆ. ಪಂಚೇಂದ್ರಿಯಗಳ ವಿಷಯಗಳಿಂದ ಉಪಯೋಗಗಳನ್ನು ನಿಲ್ಲಿಸಿ, ಆತ್ಮನೊಬ್ಬನಲ್ಲಿಯೇ ಮಗ್ನನಾಗುವುದೇ ಪಂಚೇಂದ್ರಿಯ ನಿರೋಧ ಸಂಯಮವಾಗಿರುತ್ತದೆ.

ಕ್ರೋಧಾದಿ ನಾಲ್ಕು ಕಷಾಯಗಳಿಂದ ರಹಿತ ಆತ್ಮನಲ್ಲಿ ವಿರಾಜಮಾನನಾಗುವುದೇ ಪರಿಪೂರ್ಣ ಉತ್ತಮ ಕ್ಷಮೆ, ಉತ್ತಮ ಮಾರ್ದವ, ಉತ್ತಮ ಆರ್ಜವ, ಉತ್ತಮ ಶೌಚ ಧರ್ಮಗಳಾಗಿರುತ್ತವೆ. ಆತ್ಮನು ಪರಮ ಶಾಂತನೂ ಪರಮ ಕೋಮಲನೂ ಪರಮ ಸರಳನೂ ಪರಮ ನಿರ್ಮಲನೂ ಆಗಿರುತ್ತಾನೆ. ಆತ್ಮನಿಗೆ ದರ್ಶನ ಗುಣ, ವೀರ್ಯ ಗುಣ, ಆನಂದ ಗುಣ, ಜ್ಞಾನ ಚೇತನ ಇವೆ. ಈ ಎಲ್ಲಾ ಶುದ್ಧಗುಣಗಳು ಆತ್ಮನಲ್ಲಿಯೇ ಇರುತ್ತವೆ. ಯಾವನು ಆತ್ಮಾರಾಧನೆಮಾಡಿಕೊಂಡಿರುವನೋ ಅವನೇ ಆತ್ಮನ ಸರ್ವಗುಣಗಳ ಆರಾಧನೆಮಾಡಿರುವನೆಂದು ಭಾವವು. ಆತ್ಮಧ್ಯಾನದಿಂದಲೇ ಆತ್ಮಗುಣಗಳ ವಿಕಾಸವೂ, ಶ್ರುತಜ್ಞಾನದ ಪೂರ್ಣತೆಯೂ ಅವಧಿಜ್ಞಾನ ಮತ್ತು ಮನಃ ಪರ್ಯಯಜ್ಞಾನ ಸಿದ್ಧಿಯೂ ಮತ್ತು ಕೇವಲಜ್ಞಾನಲಾಭವೂ ಆಗುತ್ತದೆ. ಇದೇ ನಿರ್ವಾಣಪದಪ್ರಾಪ್ತಿಯ ಉಪಾಯವೂ ಆತ್ಮಧ್ಯಾನವೂ ಆಗಿರುತ್ತದೆ.

ತತ್ವಾನುಶಾಸನದಲ್ಲಿ ಹೇಳಿರುತ್ತಾರೆ:

**ಯೋ ಮಧ್ಯಸ್ಥಃ ಪಶ್ಯಂತಿ ಜಾನಾತ್ಯಾತ್ಮಾನಮಾತ್ಮನಾತ್ಮನ್ಯಾತ್ಮಾ।**
**ದೃಗವಗಮಚರಣರೂಪಸ್ಯ ನಿಶ್ಚಯಾನ್ಮುಕ್ತಿಹೇತುರಿತಿ ಜಿನೋಕ್ತಿಃ**
**॥ ೩೨ ॥**

**ಭಾವಾರ್ಥ:** ಯಾವ ವೀತರಾಗೀ ಆತ್ಮನು ಆತ್ಮನಲ್ಲಿ ಆತ್ಮನಮೂಲಕ ಆತ್ಮನನ್ನು ನೋಡುತ್ತಾನೆಯೋ ಅಥವಾ ತಿಳಿಯುತ್ತಾನೆಯೋ ಅವನು ಸ್ವಯಂ ಸಮ್ಯಗ್ದರ್ಶನ, ಸಮ್ಯಗ್ಜ್ಞಾನ, ಸಮ್ಯಕ್ಚಾರಿತ್ರ ರೂಪನಾಗಿ, ನಿಶ್ಚಯ ಮೋಕ್ಷ ಸ್ವರೂಪನಾಗುತ್ತಾನೆಂದು ಸರ್ವಜ್ಞ ಜಿನದೇವರು ಹೇಳಿರುತ್ತಾರೆ.



## ಆತ್ಮನೊಬ್ಬನನ್ನೇ ಚಿಂತಿಸು

**ಎಕ್ಕಲಉ ಇಂದಿಯ ರಹಿಯಉ ಮಣ ವಯ ಕಾಯ ತಿ-ಸುದ್ಧಿ ।**
**ಅಪ್ಪಾ ಅಪ್ಪು ಮುಣೇಹಿ ತುಹುಂ ಲಹು ಪಾವಹಿ ಸಿವ-ಸಿದ್ಧಿ ॥೮೬॥**

**ಅನ್ವಯಾರ್ಥ :** ಎಕ್ಕಲಉ–ಏಕಾಂಗಿಯಾದ ನಿರ್ಗ್ರಂಥನಾಗಿಯೂ, ಇಂದಿಯ ರಹಿಯಉ–ಐದು ಇಂದ್ರಿಯಗಳಿಂದ ವಿರಕ್ತನಾಗಿಯೂ, ಮಣ ವಯ ಕಾಯ ತಿ-ಸುದ್ಧಿ–ಮನ, ವಚನ, ಕಾಯಗಳ ಶುದ್ಧಿಯಿಂದಲೂ, ತುಹುಂ ಅಪ್ಪಾ ಅಪ್ಪು ಮುಣೇಹಿ– ನೀನು ಆತ್ಮನಿಂದಲೇ ಆತ್ಮನನ್ನು ಚಿಂತಿಸು. ಸಿವ-ಸಿದ್ಧಿ ಲಹು ಪಾವಹಿ– ಶ್ರೀಘ್ರವೇ ಮೋಕ್ಷವನ್ನು ಪಡೆಯುವಿ.

**ಭಾವಾರ್ಥ:** ಆತ್ಮಚಿಂತನೆಯನ್ನು ನಿಶ್ಚಿಂತನಾಗಿ ಮಾಡಬೇಕಾದರೆ ಗೃಹಸ್ಥಧರ್ಮವನ್ನು ತ್ಯಜಿಸುವುದು ಅತ್ಯಾವಶ್ಯಕವಾಗಿರುತ್ತದೆ. ಗೃಹಸ್ಥನಿಗೆ ವ್ಯವಹಾರಧರ್ಮ, ಧನಸಂಪಾದನೆ, ಕಾಮಭೋಗಗಳೆಂಬ ಮೂರು ಕಾರ್ಯಗಳಿಂದ ಮನ, ವಚನ, ಕಾಯಗಳ ಚಂಚಲತೆಯೂ, ರಾಗದ್ವೇಷಗಳ ಪರಿಪೂರ್ಣತೆಯೂ, ವ್ಯಾಕುಲತೆಯೂ ಮತ್ತು ಪಂಚೇಂದ್ರಿಯ ಭೋಗಗಳಲ್ಲಿ ಆಸಕ್ತಿಯೂ ಉಂಟಾಗುವುದು.

ಈ ಎಲ್ಲಾ ಚಿಂತೆಗಳಿಲ್ಲದಿರುವಾಗಲೇ ಮನಸ್ಸು ಸ್ಥಿರವಾಗಿ, ಸಂಕಲ್ಪ ವಿಕಲ್ಪಗಳಿಂದ ರಹಿತವಾಗಿ ತನ್ನ ಶುದ್ಧಸ್ವಭಾವದ ಮನನಗೈಯ್ಯಲು ಸಾಧ್ಯವಾಗುತ್ತದೆ. ಆದ್ದರಿಂದ ನಿರ್ಗ್ರಂಥಪದವನ್ನು ಧರಿಸಿ, ನಿರಾಕುಲನೂ ಸ್ತ್ರೀ ಪುತ್ರಾದಿಗಳ ಚಿಂತೆಯಿಂದ ನಿರ್ಮುಕ್ತನೂ ಆಗಬೇಕು. ಆರಂಭ ಮತ್ತು ಪರಿಗ್ರಹ ತ್ಯಾಗವಿಲ್ಲದೆ ಯಥಾಜಾತರೂಪ ಧಾರಣೆ ಆಗಲಾರದು. ಆದುದರಿಂದ ಬಾಲಕನೋಪಾದಿಯಲ್ಲಿ ನಗ್ನ ಮತ್ತು ನಿರ್ವಿಕಾರವಾದ ಪ್ರಾಕೃತಿಕ ಜೀವನ ಬರಬೇಕು. ಸ್ವಲ್ಪವೂ ಪರಿಗ್ರಹಗಳನ್ನಿಟ್ಟುಕೊಳ್ಳದಿರುವುದೂ ಹಸಿವು, ಬಾಯಾರಿಕೆ, ಶೀತ, ಉಷ್ಣ, ದಂಶಮಶಕ ಮೊದಲಾದ ಇಪ್ಪತ್ತೆರಡು ಪರೀಷಹಗಳನ್ನು ಸಹಿಸುವ ಶಕ್ತಿಯನ್ನುಂಟುಮಾಡಿಕೊಳ್ಳುವುದೂ ಸಿದ್ಧಿಸಬೇಕಾದರೆ ಆತ್ಮಧ್ಯಾನ, ನಿರ್ಗ್ರಂಥತ್ವ ಮತ್ತು ನಿರ್ವಿಕಾರ ಇವು ಅತ್ಯಾವಶ್ಯಕವಾಗಿರುತ್ತದೆ. ಎಷ್ಟರವರೆಗೆ ಕಾಮವಿಕಾರವೂ ಸ್ತ್ರೀಪುರುಷ ಭೇದವೂ ಲಜ್ಜಾ

ಭಾವನೆಯೂ ದೂರವಾಗುವುದಿಲ್ಲವೋ ಅಷ್ಟರವರೆಗೆ ಉನ್ನತಮಟ್ಟದ ಸ್ಥಾನ ವನ್ನು ಗ್ರಹಿಸಲು ಸಾಧ್ಯವಾಗುವುದಿಲ್ಲ.

ಗೃಹಸ್ಥಾವಸ್ಥೆಯಲ್ಲಿದ್ದಾಗ ಏಕದೇಶ ಆತ್ಮಧ್ಯಾನ ಸಾಧ್ಯವಾಗುತ್ತದೆ. ನಿರ್ಗ್ರಂಥಾವಸ್ಥೆ ಸಾಕ್ಷಾತ್ ಮಹೋಪಾಯವಾಗಿರುತ್ತದೆ. ಆದ್ದರಿಂದಲೇ ನಿರ್ಗ್ರಂಥ ಮುದ್ರೆಯನ್ನು ಧರಿಸಿ, ಪ್ರಾಚೀನಕಾಲದ ತೀರ್ಥಂಕರಾದಿ ಮಹಾ ಪುರುಷರು ಉಪದೇಶವನ್ನಿತ್ತ ಪ್ರಕಾರ ಆತ್ಮಧ್ಯಾನಮಾಡಿ, ಧರ್ಮಧ್ಯಾನ ಮತ್ತು ಶುಕ್ಲಧ್ಯಾನವನ್ನು ಮಾಡಿಯೇ ಮುಕ್ತಿಯನ್ನು ಸಾಧಿಸುತ್ತಾರೆ. ಸಕಲ ಚಿಂತೆ ಗಳಿಂದ ಬಿಡುಗಡೆ ಹೊಂದಿ, ಏಕಾಂಗಿಯಾಗಿ ಹೀಗೆ ಚಿಂತಿಸುತ್ತಿರಬೇಕು. "ಪುದ್ಗಲಗಳ ಸಂಯೋಗ ಅನಾದಿಕಾಲದಿಂದಿದ್ದರೂ ನಾನು ಇವೆಲ್ಲವುಗಳಿಂದ ಭಿನ್ನನೇ ಆಗಿರುತ್ತೇನೆ. ನಾನು ಶುದ್ಧ ಚೈತನ್ಯಮಯನಾದ ಮೂರ್ತಿಯಾಗಿ ದ್ದೇನೆ. ನನಗೆ ಕರ್ಮಗಳು, ಶರೀರಾದಿಗಳು, ರಾಗದ್ವೇಷಾದಿ ವಿಕಾರೀಭಾವ ಗಳು ಮತ್ತು ಅನ್ಯ ಆತ್ಮರುಗಳ ಸಂಬಂಧ ಇಲ್ಲ. ಅನ್ಯ ಆತ್ಮರುಗಳ ಸತ್ತೆಯು ಭಿನ್ನವೇ ಆಗಿರುತ್ತದೆ. ನಾನಾದರೋ ಸದಾ ಏಕಾಂಗಿಯಾಗಿರುತ್ತೇನೆ" ಎಂದು ಭಾವಿಸುತ್ತಿರಬೇಕು ಮತ್ತು ಪಂಚೇಂದ್ರಿಯ ವಿಷಯಲಾಲಸೆಯಿಂದಲೂ ವಿಜಯಶೀಲನಾಗಿರಬೇಕು.

ಎಲ್ಲಿಯತನಕ ಪಂಚೇಂದ್ರಿಯ ವಿಷಯಲಾಲಸೆಯಿಂದ ಬಿಡುಗಡೆಯಾಗ ಲಾರನೋ ಅಲ್ಲಿಯತನಕ ಗೃಹಸ್ಥ ಅವಸ್ಥೆಯಲ್ಲಿ ಸ್ತ್ರೀಪುತ್ರಾದಿಸಹಿತನಾಗಿ ತನ್ನ ಶಕ್ತಿಗನುಸಾರವಾಗಿ ಆತ್ಮನನ್ನು ಚಿಂತಿಸುತ್ತಿರಬೇಕು. ಲಾಲಸೆಯುಂಟಾ ಗದಂತೆ ಮನಸ್ಸಿನಿಂದ ವಿಷಯವಿಕಾರಗಳನ್ನು ಹೊಡೆದೋಡಿಸಿದಾಗ, ಅತೀಂ ದ್ರಿಯ ಆತ್ಮೀಕ ಸುಖದ ಪ್ರೇಮವೃದ್ಧಿಯಾದಾಗ ಮತ್ತು ಆತ್ಮರಸಸ್ವಾದವಿಲ್ಲದೆ ಎಲ್ಲಾರಸಗಳ ಸ್ವಾದ ನೀರಸವೆಂದು ತೋರಿದಾಗ ಜಿನ ಅಥವಾ ಅತೀಂದ್ರಿಯ ನಾದ ಆತ್ಮಚಿಂತನೆಗೈಯ್ಯಲು ಸಾಧ್ಯವಾಗುವುದು. ಮನಸ್ಸಿನಿಂದ ರಾಗದ್ವೇಷ ಮೋಹಾದಿಗಳನ್ನು ಕಿತ್ತೊಗೆದು, ವೀತರಾಗತೆಯ ರಸದ ರಸಿಕ ಮನಸ್ಸನ್ನಾಗಿ ಮಾಡಬೇಕು. ಮಾತ್ರವಲ್ಲ, ಸರ್ವ ಅಪಧ್ಯಾನಗಳೆಲ್ಲವನ್ನೂ ದೂರಪಡಿಸಿ, ಧರ್ಮಧ್ಯಾನದಿಂದ ಮನಸ್ಸನ್ನು ನಿರ್ಮಲಗೊಳಿಸಬೇಕು. ಸಹಜ ವೈರಾಗ್ಯ ಪ್ರಾಪ್ತವಾಗುವಂತೆಯೂ, ಉಪದ್ರವಾದಿ ಕಷ್ಟಗಳು ಬಂದೊದಗಿದರೂ ಸಹಿ ಸುವ ಶಕ್ತಿ ಹೊಂದುವಂತೆಯೂ ಪ್ರಯತ್ನಿಸಬೇಕು.

ಕ್ರೋಧ, ಮಾನ, ಮಾಯಾ, ಲೋಭಗಳ ಆಕ್ರಮಣದಿಂದ ಮನಸ್ಸನ್ನು ಸಂರಕ್ಷಿಸಿಕೊಳ್ಳಬೇಕು. ವಚನಪ್ರಯೋಗವನ್ನು ಕೇವಲ ಅವಶ್ಯಕ ಧರ್ಮೋಪದೇಶಾದಿ ಕಾರ್ಯಗಳಲ್ಲಿ ಉಪಯೋಗಿಸಬೇಕು. ಮೌನವ್ರತದ ಅಭ್ಯಾಸ ಮಾಡಿಕೊಳ್ಳಬೇಕು. ಸ್ತ್ರೀಕಥೆ, ಭೋಜನಕಥೆ, ದೇಶಕಥೆ, ರಾಜಕಥೆ ಮೊದಲಾದ 25 ವಿಕಥೆಗಳಿಂದ ವಿರಕ್ತನಾಗಬೇಕು. ಸ್ವಪರರಿಗೆ ಪ್ರಿಯವಾಗುವ ಧರ್ಮರಸದಿಂದಭರಿತ ಮಧುರವಚನಗಳನ್ನಾಡುತ್ತಾ ವಚನ ಶುದ್ಧಿಯನ್ನು ಪಾಲಿಸಬೇಕು.

ಶರೀರವನ್ನು ಶುದ್ಧವಾಗಿ ನಿರ್ವಿಕಾರವಾಗಿಟ್ಟುಕೊಳ್ಳಬೇಕು. ಸ್ನಾನಾದಿಗಳನ್ನು ತ್ಯಜಿಸಿ ಶೃಂಗಾರ ಮತ್ತು ಅಲಂಕಾರರಹಿತವಾಗಿಟ್ಟುಕೊಂಡು ಶಾಂತ ಪ್ರಶಾಂತವಾಗಿಟ್ಟುಕೊಳ್ಳಬೇಕು. ನಿಶ್ಚಯವಾಗಿ ರಸಯುಕ್ತವೋ ನೀರಸವೋ ಆದ ಆಹಾರ ಸಿಕ್ಕಿದರೂ ಅದನ್ನು ಕಡಿಮೆಯಾಗಿ ಸ್ವೀಕರಿಸಿ, ರೋಗಗಳುಂಟಾಗದಂತೆ ಇಟ್ಟುಕೊಳ್ಳಬೇಕು. ಹೀಗೆ ಮನ, ವಚನ, ಕಾಯಗಳನ್ನು ಶುದ್ಧವಾಗಿಟ್ಟುಕೊಂಡು, ನಿರ್ಜನಸ್ಥಾನದಲ್ಲಿ ಕುಳಿತು, ಏಕಾಂಗಿಯೂ ಶುದ್ಧವೂ ಅತೀಂದ್ರಿಯವೂ ಆದ ಆತ್ಮನನ್ನು ಅನುಭವಮಾಡಿಕೊಳ್ಳಬೇಕು. ಇವೇ ಮೊದಲಾದ ಉಪಾಯಗಳಿಂದ ಮೋಕ್ಷಸಿದ್ಧಿಯಾಗುತ್ತದೆ.

ಆತ್ಮಾನುಶಾಸನದಲ್ಲಿ ಹೇಳಿರುತ್ತಾರೆ:

**ಮುಹುಃ ಪ್ರಸಾರ್ಯ ಸಜ್ಞಾನಂ ಪಶ್ಯನ್ ಭಾವಾನ್ ಯಥಾಸ್ಥಿತಾನ್ ।**
**ಪ್ರೀತ್ಯಪ್ರೀತೀ ನಿರಾಕೃತ್ಯ ಧ್ಯಾಯೇದಧ್ಯಾತ್ಮವಿನ್ಮುನಿಃ ॥ ೧೭೭ ॥**

**ಭಾವಾರ್ಥ :** ಆತ್ಮಜ್ಞಾನಿಯಾದ ಮುನಿಯು ಸಮ್ಯಜ್ಞಾನದಲ್ಲಿಯೇ ವಿಸ್ತರಿಸುವವನಾಗಿಯೂ, ಪದಾರ್ಥಗಳಿದ್ದಂತೆ ನೋಡುತ್ತಾ ರಾಗದ್ವೇಷ ಪಡದೆ ಸಮತಾಭಾವನೆಯಿಂದ ಆತ್ಮನನ್ನು ಧ್ಯಾನಿಸುವವನಾಗಿಯೂ ಇರುವುದು ಪರಮ ಯೋಗ್ಯವಾಗಿದೆ.



## ಸಹಜ ಸ್ವರೂಪದಲ್ಲಿಯೇ ಕ್ರೀಡಿಸು

**ಜಇ ಬದ್ಧಉ ಮುಕ್ಕಉ ಮುಣಹಿ ತೋ ಬಂಧಿಯಹಿ ಣಿಭಂತು।**
**ಸಹಜ-ಸರುವಇ ಜಇ ರಮಹಿ ತೋ ಪಾವಹಿ ಸಿವ ಸಂತು ॥ ೮೭ ॥**

**ಅನ್ವಯಾರ್ಥ :** ಜಇ ಬದ್ಧಉ ಮುಕ್ಕಉ ಮುಣಹಿ-ಯದಿ ನೀನು ಬಂಧ ಮತ್ತು ಮೋಕ್ಷಗಳ ಕಲ್ಪನೆಯನ್ನು ಮಾಡುವಿ. ತೋ ಣಿಭಂತು ಬಂಧಿಯಹಿ-ಆದರೆ ನೀನು ನಿಃಸಂದೇಹವಾಗಿ ಬಂಧಿಸಲ್ಪಡುವಿ ; ಜಇ ಸಹಜ-ಸರುವಇ ರಮಹಿ-ಒಂದುವೇಳೆ ನೀನು ಸ್ವಾಭಾವಿಕ ಸ್ವರೂಪದಲ್ಲಿ ರಮಿಸುವಿ. ತೋ ಸಂತು ಸಿವ ಪಾವಹಿ-ಹಾಗಾದರೆ ಶಾಂತಸ್ವರೂಪವಾದ ಮೋಕ್ಷವನ್ನು ಪಡೆಯುವಿ.

**ಭಾವಾರ್ಥ :** ಶುದ್ಧಾತ್ಮಾನುಭವವೊಂದೇ ನಿರ್ವಾಣಪದವಿಯ ಉಪಾಯವಾಗಿರುತ್ತದೆ. ಎಲ್ಲಿ ಮನಸ್ಸಿನ ವಿಕಲ್ಪಗಳು, ವಿಚಾರಗಳು ನಿಂತು ಹೋಗುವುವೋ, ಕಾಯವು ಸ್ಥಿರವಾಗುವುದೋ ಮತ್ತು ವಚನಕ್ರಿಯೆ ನಿಂತು ಹೋಗುವುದೋ ಅಲ್ಲಿ ಸ್ವಾನುಭವದ ಪ್ರಕಾಶ ಪ್ರಜ್ವಲಿಸುತ್ತದೆ. ಇದಕ್ಕೇನೆ ನಿರ್ವಿಕಲ್ಪ ಸಮಾಧಿಯೆಂದು ಹೇಳುತ್ತಾರೆ. ಇದೇ ಆತ್ಮಸ್ವಭಾವವೂ ಯಥಾರ್ಥ ಮೋಕ್ಷಮಾರ್ಗವೂ ಸಮ್ಯಗ್ದರ್ಶನ, ಸಮ್ಯಜ್ಞಾನ, ಸಮ್ಯಕ್ಚಾರಿತ್ರಗಳ ಏಕತೆಯೂ ರಾಗದ್ವೇಷಮೋಹ ರಹಿತವಾದ ವೀತರಾಗಭಾವವೂ ಪರಮ ಸಮತಾಭಾವವೂ ಅದ್ವೈತಭಾವವೂ ಸಂವರ ನಿರ್ಜರಾತತ್ವವೂ ಆಗಿರುತ್ತದೆ. ಆದ್ದರಿಂದ ಜ್ಞಾನಿಯು ವ್ಯವಹಾರ ಸಂಬಂಧವಾದ ವಿಚಾರಗಳನ್ನು ಸರ್ವಥಾ ತ್ಯಜಿಸಿದವನಾಗಿರಬೇಕು.

ವ್ಯವಹಾರ ನಯದಿಂದ ನೋಡುವುದಾದರೆ ಆತ್ಮನೊಡನೆ ಕರ್ಮಗಳ ಬಂಧವೂ ಆತ್ಮನೊಡನೆ ಶರೀರವೂ ಆತ್ಮನೊಡನೆ ಕ್ರೋಧ, ಮಾನ, ಮಾಯಾ, ಲೋಭ ಭಾವವೂ ಇರುವುದರಿಂದ ಅಶುದ್ಧನಾದ ಆತ್ಮನನ್ನು ಪರಿಶುದ್ಧಗೊಳಿಸಲು ಮೋಕ್ಷವನ್ನು ಪಡೆದುಕೊಳ್ಳುವುದಿದೆ. ನಾವು ಸಮ್ಯಗ್ದೃಷ್ಟಿಗಳಾಗಿ ನಾಲ್ಕನೆಯ, ಐದನೆಯ, ಆರನೆಯ ಅಥವಾ ಏಳನೆಯ ಗುಣಸ್ಥಾನಗಳಲ್ಲಿರುತ್ತೇವೆ. ಗುಣಸ್ಥಾನಗಳ ಉನ್ನತಿಮಾಡಿಕೊಳ್ಳುತ್ತಾ ಅರಹಂತ ಸಿದ್ಧರಾಗಬೇಕಾಗಿದೆ. ನಾವು ಮನುಷ್ಯಗತಿಯಲ್ಲಿ, ಸಂಜ್ಞೀ ಪಂಚೇಂದ್ರಿಯರಾಗಿ, ತ್ರಸಜೀವಿಗಳಾಗಿ, ಮನವಚನಕಾಯಗಳ ಧಾರಿಗಳಾಗಿ ಇರುತ್ತೇವೆ. ನಾವು ಪುರುಷವೇದದವರಾಗಿದ್ದೇವೆ. ನಮಗೆ ಕಷಾಯಭಾವಗಳೂ ಮತಿಶ್ರುತ ಜ್ಞಾನಗಳೂ ಅಸಂಯಮವೋ ಸಂಯಮವೋ ಅಥವಾ ಸಕಲ ಸಂಯಮವೋ ಇರುವುದು. ನಮಗೆ ಚಕ್ಷುದರ್ಶನ, ಅಚಕ್ಷುದರ್ಶನ, ಶುಭಾಶುಭ ಲೇಶ್ಯೆಯೋ

ಇರುವುದು. ನಾವು ಭವ್ಯರೂ, ನಾವು ಸಮ್ಯಗ್ದೃಷ್ಟಿಗಳೂ, ನಾವು ಪಂಚೇಂದ್ರಿಯ ಜೀವರೂ, ಆಹಾರಕರೂ ಆಗಿರುತ್ತೇವೆ. ಈ ಪ್ರಕಾರ ಗುಣಸ್ಥಾನ ಮತ್ತು ಮಾರ್ಗಣಾಸ್ಥಾನಗಳ ವಿಚಾರವನ್ನೋ ಅಥವಾ ಕರ್ಮಗಳ ಆಸ್ರವ ಭಾವಗಳ ವಿಚಾರವನ್ನೋ ಅಥವಾ ನಾಲ್ಕು ಪ್ರಕಾರದ ಬಂಧ ವಿಚಾರವನ್ನೋ ಅಥವಾ ಸಂವರ ಮತ್ತು ನಿರ್ಜರೆಯ ಕಾರಣಗಳ ವಿಚಾರವನ್ನೋ ವ್ಯವಹಾರ ನಯದ ಮೂಲಕ ವಿಚಾರಮಾಡುವುದರಿಂದ ಇವು ಚಂಚಲವಾಗಿಯೂ ಶುಭೋಪಯೋಗಮಯವಾಗಿಯೂ ಆಗುವುದರಿಂದಲೇ ಬಂಧಕ್ಕೆ ಕಾರಣಗಳಾಗಿರುತ್ತವೆ. ಯಾಕೆಂದರೆ ಈ ಎಲ್ಲಾ ವಿಚಾರಗಳಲ್ಲಿ ಸಂಸಾರ ಅವಸ್ಥೆ ತ್ಯಜಿಸುವುದಕ್ಕೆ ಯೋಗ್ಯ ಮತ್ತು ಮೋಕ್ಷ ಅವಸ್ಥೆ ಗ್ರಹಣೆಗೆ ಯೋಗ್ಯವಾಗಿರುತ್ತದೆ. ಸಂಸಾರದಲ್ಲಿ ರಾಗದ್ವೇಷವೂ ಮೋಕ್ಷದಲ್ಲಿ ವೀತರಾಗವೂ ಇರುತ್ತದೆ. ವೀತರಾಗ ಅವಸ್ಥೆಯನ್ನು ಪಡೆಯಲು ವ್ಯವಹಾರನಯ ಸಂಬಂಧವಾದ ವಿಚಾರಗಳನ್ನು ತಡೆದು, ಕೇವಲ ನಿಶ್ಚಯನಯದಿಂದಲೇ ತನ್ನನ್ನು ಮತ್ತು ಲೋಕವನ್ನು ನೋಡಬೇಕು. ಆಗ ಈ ಜಗತ್ತು ಶುದ್ಧ ಆರುದ್ರವ್ಯಗಳ ಸಮುದಾಯವೆಂದು ತೋರುತ್ತದೆ. ಎಲ್ಲಾ ಪರಮಾಣು ರೂಪ ಪುದ್ಗಲಗಳು ಅಬಂಧವೆಂದೂ ಸಕಲ ಜೀವಗಳು ಶುದ್ಧ ವೀತರಾಗ ಸ್ವರೂಪವೆಂದೂ ಕಾಣುತ್ತವೆ. ಹೀಗೆ ನೋಡುವುದರಿಂದ ರಾಗದ್ವೇಷಗಳ ಕಾರಣಗಳೆಲ್ಲಾ ದೃಶ್ಯವಾದ ದೃಷ್ಟಿಯಿಂದ ದೂರವಾಗಿ ಸಮತಾಭಾವ ಉಂಟಾಗುವುದು. ಆಮೇಲೆ ಕೇವಲ ತನ್ನಾತ್ಮನನ್ನೇ ನೋಡಬೇಕು.

ಎಲ್ಲಿಯವರೆಗೆ ಈ ವಿಚಾರ ಇರುತ್ತದೋ ಅಲ್ಲಿಯವರೆಗೆ ಮನೋವಿಕಲ್ಪಗಳಿರುತ್ತವೆ. ಹೀಗೆ ವಿಚಾರಗೈಯ್ಯುತ್ತಾ ಮನಸ್ಸು ಸ್ಥಿರವಾಗಿ, ಸಹಜಸ್ವರೂಪದಲ್ಲಿ ರಮಿಸತೊಡಗುತ್ತದೆ. ಸ್ವಾನುಭವ ಉದಯಿಸುತ್ತದೆ. ಇದರಿಂದ ಬಹಳ ಕರ್ಮಗಳ ನಿರ್ಜರೆಯಾಗುತ್ತದೆ. ಇದರ ಪ್ರಾಪ್ತಿಯೇ ಮೋಕ್ಷಮಾರ್ಗವೆಂದು ತಿಳಿಯಬೇಕು. ಸ್ವಾನುಭವ ಉದಯಿಸುವಾಗಲೇ ಮೋಕ್ಷಮಾರ್ಗವುಂಟಾಗುತ್ತದೆ. ಸ್ವಾನುಭವವಿಲ್ಲದೆ ಮಾನಸಿಕ ವಿಚಾರ, ಶಾಸ್ತ್ರಪಠಣ, ಕಾಯವ್ಯಾಪಾರ, ಮಹಾವ್ರತ, ಅಣುವ್ರತಾದಿಗಳಿಗೂ ಮೋಕ್ಷಮಾರ್ಗವೆಂದು ಹೇಳುವುದು ಯಥಾರ್ಥವಾದುದಲ್ಲ. ಆದರೆ ಅದು ವ್ಯವಹಾರ ಮಾತ್ರವಾಗಿರುತ್ತದೆ.

ಉದಾ : ಚಿನ್ನದ ವರೆಯುಲ್ಲಿರುವ ಖಡ್ಗಕ್ಕೆ ಚಿನ್ನದ ಖಡ್ಗವೆಂದು ಹೇಳು ವಂತೆಯೇ ಸರಿ.

ಕೆಂಪು ಬಣ್ಣದ ಸಂಯೋಗದಿಂದ ನೀರನ್ನು ಕೆಂಪುವರ್ಣದ್ದೆಂದೂ ಅಗ್ನಿಯ ಸಂಯೋಗದಿಂದ ಉಷ್ಣವೆಂದು ಹೇಳುವಂತೆಯೂ ಮತ್ತು ತುಪ್ಪ ಇರುವುದರಿಂದ ಕೊಡವನ್ನು ತುಪ್ಪದ ಕೊಡವೆಂದೂ ಹೇಳುವಂತೆ, ಮನವಚನ ಕಾಯಗಳ ಕ್ರಿಯೆಗೆ ಮೋಕ್ಷಮಾರ್ಗವೆಂದು ಹೇಳುವುದು ವ್ಯವಹಾರಮಾತ್ರ ವಾಗಿರುತ್ತದೆ. ಈ ಪ್ರಕಾರದ ಸ್ವಾನುಭವ ಸಾಧಕನ ಅವಸ್ಥೆಯಲ್ಲಿ ಅಲ್ಪ ಕಾಲಮಾತ್ರವಿರುತ್ತದೆ. ವಜ್ರ ವೃಷಭ ನಾರಾಚ ಸಂಹನನಧಾರಿಗಳಲ್ಲಿ ಒಂದುವೇಳೆ ಮುಹೂರ್ತಕ್ಕಿಂತ ಸ್ವಲ್ಪ ಕಡಿಮೆ ಸಮಯದವರೆಗೆ ಉಂಟಾದರೆ ನಾಲ್ಕು ಘಾತಿಕರ್ಮಗಳ ಬಂಧನ ನಾಶವಾಗಿ ಕೇವಲಜ್ಞಾನಪ್ರಾಪ್ತಿಯಾಗು ತ್ತದೆ.

ಸ್ವಾನುಭವ ಬಿಟ್ಟುಹೋದನಂತರ ಸಾಧಕನಿಗೆ ನಿಶ್ಚಯನಯ ಅಥವಾ ದ್ರವ್ಯಾರ್ಥಿಕ ನಯದ ಮೂಲಕ ಶುದ್ಧ ತತ್ವವನ್ನು ಚಿಂತಿಸಬೇಕು. ಒಂದು ವೇಳೆ ಉಪಯೋಗ ಸ್ಥಿರವಾಗಲಿಲ್ಲವಾದರೆ, ವ್ಯವಹಾರನಯ ಅಥವಾ ಪರ್ಯಾಯ ನಯಗಳಮೂಲಕ ಸಪ್ತತತ್ವ, ಹನ್ನೆರಡು ಭಾವನೆ, ದಶಧರ್ಮ, ಗುಣಸ್ಥಾನ, ಮಾರ್ಗಣಾಸ್ಥಾನ ಮೊದಲಾದವುಗಳನ್ನು ಚಿಂತಿಸುತ್ತಾ ಶಾಸ್ತ್ರ ವನ್ನು ಪಠಿಸಿ, ಉಪದೇಶ ಮೊದಲಾದ ವ್ಯವಹಾರ ಧರ್ಮವನ್ನಾಚರಿಸಬೇಕು. "ನಾನು ಬಹುಬೇಗನೆ ಸ್ವಾನುಭವವನ್ನು ಪಡೆಯಬೇಕು" ಎಂಬ ಭಾವನೆ ಮಾತ್ರ ಇರಲೇಬೇಕು. ಈ ಉಪಾಯದಿಂದಲೇ ಯಾವ ತತ್ವಜ್ಞಾನಿ ಸಹ ಜಾತ್ಮ ಸ್ವರೂಪವನ್ನು ಚಿಂತಿಸುವನೋ ಅವನು ಪರಮ ಶಾಂತ ನಿರ್ವಾಣ ಸುಖದ ಪಾತ್ರನಾಗುತ್ತಾನೆ.

ಸಮಯಸಾರಕಲಶದಲ್ಲಿ ಹೇಳಿರುತ್ತಾರೆ :

**ಜಹ ಬಂಧೇ ಚಿಂತಂತೋ ಬಂಧಣಬದ್ಧೋ ಣ ಪಾವದಿ ವಿಮೋಕ್ಖಂ।**
**ತಹ ಬಂಧೇ ಚಿಂತಂತೋ ಜೀವೋವಿ ಣ ಪಾವದಿ ವಿಮೋಕ್ಖಂ**
**॥ ೩೧೧ ॥**

**ಜಹ ಬಂಧೇ ಛಿತ್ತೂಣಯ ಬಂಧಣಬದ್ಧೋ ದು ಪಾವದಿ ವಿಮೋಕ್ಖಂ**
**ತಹ ಬಂಧೇ ಛಿತ್ತೂಣಯ ಜೀವೋ ಸಂಪಾವದಿ ವಿಮೋಕ್ಖಂ॥೩೧೩॥**

ಭಾವಾರ್ಥ : ಬಂಧನಬದ್ಧನಾದ ಜೀವನು ಬಂಧನದ ವಿಷಯವಾಗಿ ಚಿಂತಿಸುವಮಾತ್ರದಿಂದ ಬಂಧನದಿಂದ ಬಿಡುಗಡೆಯಾಗಲಾರನು ಮತ್ತು "ಇದು ಕರ್ಮಬಂಧವಿರುತ್ತದೆ, ಕರ್ಮದಿಂದ ಮುಕ್ತನಾಗಬೇಕು" ಮೊದಲಾದ ಚಿಂತನೆಯಿಂದ ಮೋಕ್ಷಪ್ರಾಪ್ತಿಯಾಗಲಾರದು. ಹೇಗೆಂದರೆ ಬಂಧನಬದ್ಧನಾದ ಪುರುಷನು ಬಂಧನವನ್ನು ಕತ್ತರಿಸಿದರೇನೆ ಬಂಧನದಿಂದ ನಿರ್ಮುಕ್ತನಾಗುತ್ತಾನೆ. ಭವ್ಯಾತ್ಮನು ಕರ್ಮಬಂಧನವನ್ನು ಭೇದಿಸಿಯೇ ಮುಕ್ತನಾಗುತ್ತಾನೆ. ಬಂಧನದ ಭೇದಕ್ಕೆ ಸ್ವಾನುಭವವೊಂದೇ ಮಹೋಪಾಯವಾಗಿರುತ್ತದೆ.



## ಸಮ್ಯಗ್ದೃಷ್ಟಿ ಸದ್ಗತಿಯನ್ನು ಪಡೆಯುತ್ತಾನೆ

**ಸಮ್ಮಾಇಟ್ಠೀ-ಜೀವಡಹಂ ದುಗ್ಗಇ-ಗಮಣು ಣ ಹೋಇ।**
**ಜಇ ಜಾಇ ವಿ ತೋ ದೋಸು ಣವಿ ಪುವ್ವ-ಕ್ಕಿಉ ಖವಣೇಇ ॥೮೮॥**

ಅನ್ವಯಾರ್ಥ : ಸಮ್ಮಾಇಟ್ಠೀ-ಜೀವಡಹಂ ದುಗ್ಗಇ-ಗಮಣು ಣ ಹೋಇ–ಸಮ್ಯಗ್ದೃಷ್ಟೀ ಜೀವಗಳ ಗಮನವು ನೀಚಗತಿಗಳಲ್ಲಿ ಆಗಲಾರದು. ಜಇ ಜಾಇ ವಿ ತೋ ದೋಸು ಣವಿ ಒಂದುವೇಳೆ (ಕದಾಚಿತ್) ನೀಚಗತಿಯಾದರೂ ಕೂಡ ಹಾನಿ ಇಲ್ಲ. ಪುವ್ವ-ಕ್ಕಿಉ ಖವಣೇಇ–ಇದು ಪೂರ್ವಕೃತ ಕರ್ಮಗಳನ್ನು ನಾಶಗೊಳಿಸುವುದು.

**ಭಾವಾರ್ಥ :** ಆತ್ಮನ ಪರಿಶುದ್ಧ ಸ್ವರೂಪದ ಗಾಢ ಅಭಿರುಚಿಯಿರುವ, ಅತೀಂದ್ರಿಯಸುಖದಲ್ಲಿ ಪರಮ ಪ್ರೇಮವನ್ನಿಡುವ ಭವ್ಯ ಜೀವನಿಗೇ ಸಮ್ಯಗ್ದೃಷ್ಟಿಯೆಂದು ಹೇಳುತ್ತಾರೆ. ಅವನೇ ಮೋಕ್ಷನಗರದ ಪಥಿಕನಾಗುತ್ತಾನೆ. ಸಂಸಾರದಿಂದ ವಿಮುಖನಾಗುತ್ತಾನೆ. ಆತನ ಅಂತರಂಗದಲ್ಲಿ ಎಂಟುವಿಧದ ಲಕ್ಷಣ ಅಥವಾ ಚಿನ್ಹೆಗಳುಂಟಾಗುತ್ತವೆ.

**ಸಂಬೇಓ ಣಿವ್ವೇಓ ಣಿಂದಾ ಗರುಹಾ ಉಪಸಮೋಭತ್ತಿ।**
**ಬಂಧನಂ ಅಣುಕಂಪಾ ಗುಣದ್ಧ ಸಮ್ಮತ ಜುತ್ತಸ್ಸ॥**

೧) **ಸಂವೇಗ:** ಧರ್ಮದಲ್ಲಿ ಪ್ರೇಮವಿರುವುದು.

೨) **ನಿರ್ವೇದ:** ಸಂಸಾರ ಶರೀರ ಭೋಗಗಳಿಂದ ವಿರಕ್ತನಾಗಿರುವುದು. ಚತುರ್ಗತಿಯಲ್ಲಿ ಆಕುಲತೆ ಇರುವುದು. "ಈ ಶರೀರ ಕಾರಾಗೃಹ ಸಮಾನವಾಗಿರುತ್ತದೆ. ಇಂದ್ರಿಯ ಭೋಗ ಅತೃಪ್ತಿಕಾರಕವೂ ಮತ್ತು ನಾಶಶೀಲವೂ ಆಗಿರುತ್ತದೆ" ಎಂದು ತಿಳಿಯುವುದು.

೩) **ನಿಂದಾ:** ತನ್ನ ಅವಗುಣಗಳನ್ನು ದೋಷಕಾರಕಗಳೆಂದು ತಿಳಿಯುವುದು.

೪) **ಗರ್ಹಾ:** ಆತ್ಮಬಲದ ಹೀನತೆಯಿಂದಲೂ, ಕಷಾಯಗಳ ಉದಯದಿಂದಲೂ ನಿರ್ಬಲನಾದ ಆತ್ಮನು ಲೌಕಿಕ ಕಾರ್ಯಗಳಲ್ಲಿ ಪ್ರವರ್ತಿಸುತ್ತಾನೆ ಮತ್ತು ಆರಂಭಾದಿಗಳನ್ನು ಮಾಡುತ್ತಾನೆ. ಆತನು ಆದಕ್ಕಾಗಿ ತನ್ನ ಮನಸ್ಸಿನಲ್ಲಿ ತನ್ನಾತ್ಮ ನಿಂದೆಯನ್ನು ಮಾಡುತ್ತಾನೆ ಮತ್ತು ಅನ್ಯರಿಂದಲೂ ಕೂಡ ನಿಂದೆ ಮಾಡಿಸಿಕೊಳ್ಳುತ್ತಾನೆ. ಆಗ ಅವನು ನಿರ್ವಾಣ ಪದವಿಯನ್ನೇ ಶ್ರೇಷ್ಠವೆಂದು ಪರಿಭಾವಿಸುವುದು. ಮಾತ್ರವಲ್ಲ ತನ್ನ ಮನವಚನಕಾಯಗಳ ಕ್ರಿಯೆಗಳನ್ನು ತ್ಯಜಿಸುವುದು ಯೋಗ್ಯವೆಂದು ಭಾವಿಸುವುದು.

೫) **ಉಪಶಮ:** ಸಮ್ಯಗ್ದೃಷ್ಟಿಯ ಅಂತರಂಗದಲ್ಲಿ ಶಾಂತಭಾವವೇ ಪ್ರಧಾನವಾಗಿರುವುದು. ಪ್ರತಿಯೊಂದು ಕಾರ್ಯವನ್ನು ಸಮ್ಯಗ್ದೃಷ್ಟಿಯು ಜ್ಞಾನಪೂರ್ವಕವಾಗಿಯೇ ಮಾಡುವುದು. ಸಮ್ಯಗ್ದೃಷ್ಟಿಗೆ ಆತ್ಮಾನುಭವದ ಪ್ರತಾಪದಿಂದ ಸ್ವಾಭಾವಿಕವಾದ ಶಾಂತಭಾವನೆಯು ಜಾಗೃತವಾಗುವುದು. ಆದರೆ ಒಂದೇ ಸರ್ತಿ ಕ್ರೋಧಾದಿಗಳಲ್ಲಿ ಪರಿಣತವಾಗುವುದಿಲ್ಲ. ವಿಪರೀತ ಕಾರಣಗಳಿಂದ ಕರ್ಮಗಳ ಉದಯ ಮತ್ತು ಫಲಗಳ ವಿಚಾರವಾಗಿ ಚಿಂತಿಸುತ್ತಿರುವುದು.

೬) **ಭಕ್ತಿ:** ಸಮ್ಯಕ್ತ್ವವುಳ್ಳ ಜೀವನು ಜಿನದೇವ, ಜಿನಗುರು, ಜಿನವಾಣಿಗಳಲ್ಲಿ ಗಾಢಶ್ರದ್ಧೆಯುಳ್ಳವನಾಗಿರುವುದು. ಸ್ತುತಿ, ವಂದನೆ, ಪೂಜೆ, ಸ್ವಾಧ್ಯಾಯಾದಿಗಳನ್ನು ಮಾಡುತ್ತಿರುವುದು. ಆ ಕ್ರಿಯೆಗಳೆಲ್ಲವನ್ನೂ ಮೋಕ್ಷಸುಖದ ಸಹಕಾರಿಕಾರಣಗಳೆಂದು ಭಾವಿಸುವುದು.

೭) ವಾತ್ಸಲ್ಯ: ಸಹಧರ್ಮಿ ಬಂಧುಗಳಲ್ಲಿ ಧರ್ಮಪ್ರೇಮವನ್ನಿಟ್ಟು ಕೊಳ್ಳುವುದು. ಧರ್ಮಭಾವನೆಯಿಂದ ಅವರ ಸೇವೆಯನ್ನೆಸಗುವುದು.

೮) ಅನುಕಂಪಾ: ಸಕಲ ಪ್ರಾಣಿವರ್ಗಗಳಲ್ಲಿ ದಯಾಭಾವವನ್ನಿಡುವುದು. ಮನ, ವಚನ, ಕಾಯಗಳ ಮೂಲಕ ಎಲ್ಲಾ ಜೀವಿಗಳಿಗೂ ಕಷ್ಟವನ್ನುಂಟುಮಾಡಬೇಕೆಂದು ಯೋಚಿಸದಿರುವುದು. ಶಕ್ತಿಯನ್ನು ಮರೆಮಾಚದೆ ಜೀವಕೋಟಿಗಳ ಹಿತವನ್ನು ಬಯಸುವುದು.

ಯಾವ ಪ್ರಾಣಿಗಳಿಗೂ ಅನ್ಯಾಯ ವ್ಯವಹಾರವನ್ನೆಸಗದಿರುವ ತತ್ವಜ್ಞಾನಿಯು ದುರ್ಗತಿಗೆ ಎಳೆದುಕೊಂಡು ಹೋಗುವ ಪಾಪಕರ್ಮಗಳಿಂದ ಬಂಧಿಸಿಕೊಳ್ಳಲಾರನು.

ಮಿಥ್ಯಾತ್ವ ಗುಣಸ್ಥಾನದಲ್ಲಿ ೧) ಮಿಥ್ಯಾತ್ವ ೨) ಹುಂಡಕ ಸಂಸ್ಥಾನ ೩) ನಪುಂಸಕವೇದ ೪) ಅಸಂಪ್ರಾಪ್ತ ಸೃಪಾಟಿಕಾಸಂಹನನ ೫) ಏಕೇಂದ್ರಿಯ ೬) ಸ್ಥಾವರ ೭) ಆತಪ ೮) ಸೂಕ್ಷ್ಮ ೯) ಸಾಧಾರಣ ೧೦) ಅಪರ್ಯಾಪ್ತ ೧೧) ದ್ವೀಂದ್ರಿಯ ೧೨) ತ್ರೀಂದ್ರಿಯ ೧೩) ಚತುರಿಂದ್ರಿಯ ೧೪) ನರಕಗತಿ ೧೫) ನರಕಗತ್ಯಾನುಪೂರ್ವಿ ೧೬) ನರಕಾಯು–ಈ ಹದಿನಾರು ವಿಧ ಬಂಧ.

ಹಾಗೆಯೇ ಸಾಸಾದನಗುಣಸ್ಥಾನದಲ್ಲಿ ೧) ಅನಂತಾನುಬಂಧಿ ಕ್ರೋಧ ೨) ಅನಂತಾನುಬಂಧಿ ಮಾನ ೩) ಅನಂತಾನುಬಂಧಿ ಮಾಯಾ ೪) ಅನಂತಾನುಬಂಧಿ ಲೋಭ ೫) ಸ್ತ್ಯಾನಗೃದ್ಧಿ ೬) ನಿದ್ರಾನಿದ್ರಾ ೭) ಪ್ರಚಲಾಪ್ರಚಲಾ ೮) ದುರ್ಭಗ ೯) ದುಃಸ್ವರ ೧೦) ಅನಾದೇಯ ೧೧) ನ್ಯಗ್ರೋಧಪರಿಮಂಡಲ ಸಂಸ್ಥಾನ ೧೨) ಸ್ವಾತಿ ಸಂಸ್ಥಾನ ೧೩) ಕುಬ್ಜಕ ಸಂಸ್ಥಾನ ೧೪) ವಾಮನ ಸಂಸ್ಥಾನ ೧೫) ವಜ್ರನಾರಾಚ ಸಂಹನನ ೧೬) ನಾರಾಚ ಸಂಹನನ ೧೭) ಅರ್ಧನಾರಾಚ ಸಂಹನನ ೧೮) ಕೀಲಕ ಸಂಹನನ ೧೯) ಅಪ್ರಶಸ್ತವಿಹಾಯೋಗತಿ ೨೦) ಸ್ತ್ರೀವೇದ ೨೧) ನೀಚಗೋತ್ರ ೨೨) ತಿರ್ಯಂಚಗತಿ ೨೩) ತಿರ್ಯಂಚಗತ್ಯಾನುಪೂರ್ವಿ ೨೪) ತಿರ್ಯಂಚಾಯು ೨೫) ಉದ್ಯೋತ. ಹೀಗೆ ೨೫ ವಿಧ ಬಂಧ.

ಈ ಪ್ರಕಾರದ (16+25=) 41 ಪ್ರಕೃತಿಗಳ ಬಂಧದ ಬಿಡುಗಡೆ ಆಗುವುವು. ಅವನಾದರೋ ದೇವಗತಿಯಲ್ಲಾಗಲಿ, ಮನುಷ್ಯಗತಿಯಲ್ಲಾ

ಗಲಿ ಜನಿಸುತ್ತಾನೆ ಅಥವಾ ಒಂದುವೇಳೆ ಸಮ್ಯಕ್ತ್ವವುಳ್ಳ ನಾರಕಿ ಅಥವಾ ದೇವನು ನಿಶ್ಚಯವಾಗಿ ಶ್ರೇಷ್ಠ ಮನುಷ್ಯನಾಗಿಯೇ ಜನ್ಮತಾಳುತ್ತಾನೆ.

ಸಮ್ಯಕ್ತ್ವ ಪ್ರಾಪ್ತಿಗಿಂತ ಮೊದಲೇ ಮನುಷ್ಯ ಅಥವಾ ತಿರ್ಯಂಚ ಜೀವನು ನರಕಾಯುಷ್ಯವನ್ನು ಬಂಧಿಸಿಕೊಂಡಿದ್ದರೆ ಮರಣಾನಂತರ ಮೊದಲನೇ ನರಕದಲ್ಲೇ, ತಿರ್ಯಂಚಾಯುಷ್ಯವನ್ನು ಬಂಧಿಸಿಕೊಂಡಿದ್ದರೆ ಮರಣಾನಂತರ ಭೋಗಭೂಮಿಯಲ್ಲೇ, ಮನುಷ್ಯಾಯುಷ್ಯವನ್ನು ಬಂಧಿಸಿಕೊಂಡಿದ್ದರೆ ಮರಣಾನಂತರ ಉಚ್ಚ ಕುಲದಲ್ಲೇ ಮಾನವನಾಗಿ ಜನಿಸುತ್ತಾನೆ. ಅಲ್ಲಿಯೂ ಕೂಡ ಸಮಭಾವನೆಯಿಂದ ಸುಖದುಃಖಗಳನ್ನು ಭೋಗಿಸುತ್ತಾನೆ. ಸಮ್ಯಕ್ತ್ವಿಯು ಸದಾ ಸುಖವಾಗಿಯೇ ಇರುತ್ತಾನೆ.

ರತ್ನಕರಂಡಕ ಶ್ರಾವಕಾಚಾರದಲ್ಲಿ ಹೇಳಿರುತ್ತಾರೆ:

**ಸಮ್ಯಗ್ದರ್ಶನಶುದ್ಧಾ ನಾರಕತಿರ್ಯಂಚನಪುಂಸಕಸ್ತ್ರೀತ್ವಾನಿ।**
**ದುಷ್ಕುಲ ವಿಕೃತಾಲ್ಪಾಯುರ್ದರಿದ್ರತಾಂ ಚ ವ್ರಜಂತಿ ನಾಪ್ಯವ್ರತಿಕಾಃ**
**॥ ೩೫ ॥**

**ಓಜಸ್ತೇಜೋವಿದ್ಯಾವೀರ್ಯಯಶೋವೃದ್ಧಿವಿಜಯವಿಭವಸ-**
**ನಾಥಾಃ।**
**ಮಹಾಕುಲಾಃ ಮಹಾರ್ಥಾ ಮಾನವತಿಲಕಾ ಭವಂತಿ ದರ್ಶನಪೂತಾಃ**
**॥ ೩೬ ॥**

**ಭಾವಾರ್ಥ:** ಸಮ್ಯಗ್ದರ್ಶನದಿಂದ ಪರಿಶುದ್ಧನಾದ ಜೀವನು ವ್ರತವಿಲ್ಲದವನಾಗಿದ್ದರೂ ಕೂಡ ನಾರಕಿ, ತಿರ್ಯಂಚ, ನಪುಂಸಕ, ಸ್ತ್ರೀ, ನೀಚಕುಲೀನ, ಅಂಗಹೀನ, ಅಲ್ಪಾಯು, ಬಡವ ಮೊದಲಾದ ಅವಸ್ಥೆಗಳನ್ನು ಹೊಂದುವುದಿಲ್ಲ.

ಸಮ್ಯಗ್ದರ್ಶನದಿಂದ ಪವಿತ್ರನಾದ ಜೀವನು ಪರಾಕ್ರಮ, ಕಾಂತಿ, ವಿದ್ಯೆ, ಶಕ್ತಿ, ಕೀರ್ತಿ, ವೃದ್ಧಿ ಮತ್ತು ವಿಜಯದಿಂದ್ಯುಕ್ತನಾದ ಉಚ್ಚ ಕುಲೀನನೂ ಹೆಚ್ಚು ಹಣವಂತನೂ ಆದ ಮಾನವ ಶ್ರೇಷ್ಠನಾಗುತ್ತಾನೆ.



# ಸಮ್ಯಗ್ದೃಷ್ಟಿಯ ಶ್ರೇಷ್ಠ ಕರ್ತವ್ಯ

**ಅಪ್ಪ-ಸರೂವಹಂ ಜೋ ರಮಇ ಛಂಡಿವಿ ಸಹು ವವಹಾರು ।**
**ಸೋ ಸಮ್ಮಾಇಟ್ಠೀ ಹವಇ ಲಹು ಪಾವಇ ಭವಪಾರು ॥೮೯॥**

**ಅನ್ವಯಾರ್ಥ**: ಜೋ ಸಹು ವವಹಾರು ಛಂಡಿವಿ–ಸಕಲ ವ್ಯವಹಾರಗಳನ್ನು ಬಿಟ್ಟು, ಅಪ್ಪ-ಸರೂವಹಂ ರಮಇ–ತನ್ನಾತ್ಮ ಸ್ವರೂಪದಲ್ಲಿ ಯಾವನು ರಮಿಸುವನೋ, ಸೋ ಸಮ್ಮಾಇಟ್ಠೀ ಹವಇ – ಅವನೇ ಸಮ್ಯಗ್ದೃಷ್ಟಿ. ಲಹು ಪಾವಇ ಭವಪಾರು–ಅವನು ಅತಿಶೀಘ್ರವೇ ಸಂಸಾರದಿಂದ ಪಾರಾಗುತ್ತಾನೆ.

**ಭಾವಾರ್ಥ**: ನಿರ್ವಾಣ ಪದವಿಯೇ ಗ್ರಹಣೆಗೆ ಯೋಗ್ಯವಾಗಿರುತ್ತದೆಂದೂ ಕರ್ಮಜನಿತಗಳಾದ ನಾಲ್ಕು ಗತಿಗಳು ಹೇಯವೆಂದೂ ಅನಂತಜ್ಞಾನ, ಅನಂತದರ್ಶನ, ಅನಂತಸುಖ, ಅನಂತವೀರ್ಯಗಳ ಲಾಭವೇ ಪರಮಲಾಭವೆಂದೂ ಶುದ್ಧ ನಿಶ್ಚಯನಯದಿಂದ ನಾನು ಸರ್ವಶುದ್ಧ ಸಿದ್ಧಸಮನೆಂದೂ ವ್ಯವಹಾರ ದೃಷ್ಟಿಯಿಂದ ಕರ್ಮಸಂಯೋಗ ತ್ಯಾಜ್ಯವೆಂದೂ ತಿಳಿದು ಸಂಸಾರಾವಾಸದಲ್ಲಿ ಕ್ಷಣ ಮಾತ್ರ ವಾಸಿಸಲು ಇಷ್ಟವಿಲ್ಲದವನೇ ಸಮ್ಯಗ್ದೃಷ್ಟಿ. "ನಿರ್ವಾಣಪದವಿಯ ಪ್ರಾಪ್ತಿಯ ಉಪಾಯ ಶುದ್ಧಾತ್ಮನ ಶುದ್ಧ ಸ್ವಭಾವದಲ್ಲಿ ರಮಿಸುವುದೊಂದೇ. ಅದರ ಅಭ್ಯಾಸವಾಗಬೇಕಾದರೆ ಎಲ್ಲಾ ವ್ಯವಹಾರಗಳನ್ನು ತ್ಯಜಿಸುವುದು ಮತ್ತು ಗೃಹಸ್ಥಾವಸ್ಥೆಯ ಸಕಲ ವ್ಯವಹಾರಗಳನ್ನು ತ್ಯಜಿಸುವುದು ಯೋಗ್ಯವಾಗಿದೆ" ಎಂದು ಸಮ್ಯಗ್ದೃಷ್ಟಿಯು ವಿಚಾರಿಸುತ್ತಾನೆ.

ಸಮ್ಯಗ್ದೃಷ್ಟಿಯು ಸ್ತ್ರೀಪುತ್ರಾದಿ ಕುಟುಂಬ ಸಂಬಂಧವಾದ ಚಿಂತೆಯನ್ನು ಬಿಟ್ಟು ಧನ, ಧಾನ್ಯ, ಭೂಮಿ, ಮನೆ ಮೊದಲಾದ ಪರಿಗ್ರಹಗಳನ್ನು ತ್ಯಜಿಸಿದ ತೀರ್ಥಂಕರ ಪರಮ ದೇವರಂತೆ, ಯಥಾಖ್ಯಾತರೂಪ ನಗ್ನ ದಿಗಂಬರ ಮುದ್ರೆಯನ್ನು ಧಾರಣೆಮಾಡಿದ ಬಾಲಕರಂತೆ ಸಕಲ ಶಾಂತ ಸ್ವಭಾವದಲ್ಲಿರುತ್ತಾನೆ; ನಿರ್ಜನ ಸ್ಥಾನಗಳಲ್ಲಿ ಆತ್ಮಾನುಭವ ಮಾಡಿಕೊಳ್ಳುತ್ತಾನೆ. ಸಾಧು ಪದದಲ್ಲಿ ಭಿಕ್ಷಾವೃತ್ತಿಯಿಂದ ಶರೀರರಕ್ಷಣೆಮಾಡಿಕೊಳ್ಳುತ್ತಾನೆ; ಉಪಯೋಗ ಆತ್ಮೀಕ ಭಾವದಲ್ಲಿ ರಮಿಸುವವರೆಗೂ ಶುದ್ಧಾತ್ಮ ಸ್ಮರಣೆಯನ್ನುಂಟುಮಾಡುವ

ಶಾಸ್ತ್ರಗ್ರಂಥಗಳ ಮನನಮಾಡುತ್ತಾನೆ; ಧರ್ಮಚರ್ಚೆಯಲ್ಲಿರುತ್ತಾನೆ; ಸ್ತುತಿ, ವಂದನೆ, ಪಠಣ ಪಾಠಣಾದಿ ಕಾರ್ಯಗಳಲ್ಲಿ ನಿರತನಾಗಿರುತ್ತಾನೆ.

ಧರ್ಮಪ್ರಭಾವನೆ ಮಾಡುವುದೇ ಮೊದಲಾದ ಕೆಲವು ಕ್ರಿಯೆಗಳು ವ್ಯವಹಾರ ಧರ್ಮಧ್ಯಾನವಾಗಿವೆ. ಆಹಾರ ವಿಹಾರ ಮತ್ತು ವ್ಯವಹಾರ ಧರ್ಮವನ್ನು ಮಾಡುವವನಾದ ಸಾಧುವು ಇವೇ ಮೊದಲಾದ ವ್ಯವಹಾರಗಳಿಂದಲೂ ಉದಾಸೀನನಾಗಿರುತ್ತಾನೆ. ಆತ್ಮಧ್ಯಾನವು ವೃದ್ಧಿಯಾಗುತ್ತಿದ್ದಂತೆ ವ್ಯವಹಾರ ಕಾರ್ಯಗಳೂ ಕೂಡ ಕಡಿಮೆಯಾಗುತ್ತಾ ಹೋಗುತ್ತವೆ. ಆದರೂ ಸಾಧು ಅವಸ್ಥೆಯಲ್ಲಿ ಆತ್ಮಾನುರಾಗದ ಅಭ್ಯಾಸವುಂಟಾಗಿ, ಒಂದು ಮುಹೂರ್ತ ಕಾಲಕ್ಕಿಂತ ಹೆಚ್ಚುಕಾಲ ಆತ್ಮಾನುಭವದಲ್ಲಿಂಲಾರನು.

ಎಷ್ಟರವರೆಗೆ ಸಾಧುವು ಉಪಶಮ ಅಥವಾ ಕ್ಷಪಕಶ್ರೇಣಿಯನ್ನೇರುವುದಿಲ್ಲವೋ ಅಷ್ಟರವರೆಗೆ ಆರನೆಯ ಮತ್ತು ಏಳನೆಯ ಈ ಎರಡು ಗುಣಸ್ಥಾನಗಳಲ್ಲಿರುತ್ತಾನೆ. ಪ್ರತಿಯೊಂದರ ಅವಧಿಯು ಒಂದು ಅಂತರ್ಮುಹೂರ್ತಕಿಂತ ಅಧಿಕವಿರಲಾರದು. ವ್ಯವಹಾರ ಧರ್ಮವಾಗಲೀ ಅಥವಾ ಕ್ರಿಯೆಯ ಪಾಲನೆಯಾಗಲೀ ಆರನೆಯ ಗುಣಸ್ಥಾನದಲ್ಲಿ ಮಾತ್ರ. ಯದಿ ಈ ಎಲ್ಲ ಕಾರ್ಯಗಳಲ್ಲಿ ಅಂತರ್ಮುಹೂರ್ತಕ್ಕಿಂತ ಅಧಿಕ ಸಮಯಬೇಕಾಗಿಬಂದರೆ ಮಧ್ಯಮಧ್ಯದಲ್ಲಿ ಏಳನೆಯ ಗುಣಸ್ಥಾನ ಕ್ಷಣಕಾಲ ಆತ್ಮ ಆತ್ಮಾನುಭವರೂಪವಾಗುವುದು.

ಯಾವಾಗ ಗೃಹತ್ಯಾಗವಾಗಿ ಸಾಧುಪದ ಗ್ರಹಣೆಯಾದ ಸಮ್ಯಗ್ದೃಷ್ಟಿಯ ಅಂತರಂಗದಲ್ಲಿ ಪ್ರತ್ಯಾಖ್ಯಾನಾವರಣ ಕಷಾಯಗಳ ಉದಯವಾಗದಿದ್ದರೇನೇ ಶೀಘ್ರವೇ ವೈರಾಗ್ಯ ಪ್ರಾದುರ್ಭವಿಸುತ್ತದೆ. ಆತನು ಪರಿಣಾಮಗಳ ಉನ್ನತಿಯ ಪ್ರಾಪ್ತಿಯ ದೃಢತೆಯಿಲ್ಲದೆ ಯಾವ ಉಚ್ಚಕ್ರಿಯೆಗಳನ್ನು ಧರಿಸಲಾರನು. ಸಹಜವಾದ ವೈರಾಗ್ಯವಿಲ್ಲದೆ ಅವನು ತನ್ನ ಪರಿಣಾಮಗಳಿಗನುಸಾರವಾಗಿ ಶ್ರಾವಕಪದದಲ್ಲಿದ್ದು ಯಥಾಸಂಭವದರ್ಶನ ಪ್ರತಿಮೆ ಮೊದಲುಗೊಂಡು ಹನ್ನೊಂದನೆಯ ಉದ್ದಿಷ್ಟತ್ಯಾಗಪ್ರತಿಮೆಯವರೆಗಿರುವ ಚಾರಿತ್ರವನ್ನು ಪಾಲಿಸಿ ಆತ್ಮಾನುಭವಕ್ಕಾಗಿ ಅಧಿಕಸಮಯವನ್ನೇ ಕಳೆಯುತ್ತಾ ಕ್ರಮವಾಗಿ ವ್ಯವಹಾರವನ್ನು ಕಡಿಮೆಮಾಡಿಕೊಳ್ಳುತ್ತಾ ನಿಶ್ಚಯನಯದಲ್ಲಿ ರಮಿಸುವುದಕ್ಕಾಗಿ ಪ್ರಯತ್ನಶೀಲನಾಗುತ್ತಾನೆ.

ಯಾವ ಸಮ್ಯಕ್ತ್ವಿಯ ಅಂತರಂಗದಲ್ಲಿ ಅಪ್ರತ್ಯಾಖ್ಯಾನಾವರಣ ಕಷಾಯಗಳ ಉದಯವಿಲ್ಲದ ಪಂಚಮ ಗುಣಸ್ಥಾನವರ್ತಿ ಶ್ರಾವಕನಿಗೆ ಏಕದೇಶವಾದ ಸಹಜ ವೈರಾಗ್ಯವುಂಟಾಗುವುದು. ಯದಿ ಹಾಗೆಯೇ ಆ ಭಾವನೆಯುಂಟಾಗದಿದ್ದರೆ ಇವನು ನಾಲ್ಕನೇ ಗುಣಸ್ಥಾನದಲ್ಲಿಯೇ ಇದ್ದು. ಯಥಾಸಂಭವವಾಗಿ ಸಮಯವನ್ನು ಕಳೆಯುತ್ತಿರುತ್ತಾನೆ ಮತ್ತು ಸಕಲ ವ್ಯವಹಾರ ಸಂಬಂಧವಾದ ಮನ, ವಚನ, ಕಾಯಗಳ ಕ್ರಿಯೆಗಳನ್ನು ತ್ಯಜಿಸಿ, ಶುದ್ಧಾತ್ಮನನ್ನು ಮನನಗೈಯ್ಯುವವನಾಗಿ. ಸ್ವಾನುಭವವನ್ನು ಮಾಡಿಕೊಳ್ಳುತ್ತಾನೆ. ವ್ಯವಹಾರ ಚಿಂತೆಗಳು ಅಧಿಕವಾಗುತ್ತಿದ್ದರೆ, ಅಧಿಕಸಮಯವನ್ನು ಸ್ವಾನುಭವದಲ್ಲಿ ಕಳೆಯಲು ಸಾಧ್ಯವಾಗುವುದಿಲ್ಲ. ಕೇವಲ ಸ್ವಾನುಭವದಲ್ಲಿರಲು ಪ್ರಯತ್ನಶೀಲನಾಗುತ್ತಾನೆ. ಕಷಾಯಗಳ ಉದಯದಿಂದ ಪುನಃಪುನಃ ಆತ್ಮವೀರ್ಯದ ಕುಂದಕೆಯಿಂದ ಗತ್ಯಂತರವಿಲ್ಲದವನಾಗುತ್ತಾನೆ. ಸಮ್ಯಗ್ದೃಷ್ಟಿ ಜೀವನ ಗುರಿಯು ನಿರ್ವಾಣಪದವಿಯೇ ಆಗಿರುವುದರಿಂದ, ಆತನು ಶೀಘ್ರ ಶಿವಸುಖವನ್ನು ಪಡೆಯುವನು.

ದೇವಸೇನಆಚಾರ್ಯರು ತತ್ವಸಾರದಲ್ಲಿ ಹೇಳಿರುತ್ತಾರೆ !

**ಲಹಇ ▒ ಭವ್ವೋ ಣೋಕ್ಖಂ ಜಾವಇ ಪರದವ್ವ ವಾವಡೋ ಚಿತ್ತೋ।**
**ಉಗ್ಗತವಂಪಿ ಕುಣಂತೋ ಸುದ್ಧೇ ಭಾವೇ ಲಹುಂ ಲಹಇ ॥ ೩೩ ॥**

**ಭಾವಾರ್ಥ :** ಎಷ್ಟರವರೆಗೆ ಮನಸ್ಸು ಪರದ್ರವ್ಯಗಳ ವ್ಯವಹಾರದಲ್ಲಿರುವುದೋ ಆದರಲ್ಲಿ ಮಗ್ನನಾಗುವುದೋ, ಅಷ್ಟರವರೆಗೆ ಭವ್ಯಜೀವನು ಅತಿ ಕಠಿಣವಾದ ತಪಸ್ಸನ್ನು ಮಾಡುತ್ತಿದ್ದರೂ ಕೂಡ ಮೋಕ್ಷವನ್ನು ಪಡೆಯಲಾರನು. ಆದರೂ ಶುದ್ಧ ಆತ್ಮೀಕಭಾವನೆಗಳ ಲಾಭ ಆಗುವುದರಿಂದ, ಶೀಘ್ರವೇ ಮೋಕ್ಷಲಕ್ಷ್ಮಿಯನ್ನು ಪಡೆಯುತ್ತಾನೆ.



## ಸಮ್ಯಕ್ತ್ವವಂತನೇ ಪಂಡಿತನು ಮತ್ತು ಮುಖ್ಯಸ್ಥನು

**ಜೋ ಸಮ್ಮತ್ತ-ಪಹಾಣ ಬುಹು ಸೋ ತಿಇಲೋಯ-ಪಹಾಣು।**
**ಕೇವಲ.ಣಾಣ ವಿ ಲಹು ಲಹಇ ಸಾಸಯ-ಸುಕ್ಖ-ಣಿಹಾಣು ॥ ೯೦॥**

**ಅನ್ವಯಾರ್ಥ :** ಜೋ ಸಮ್ಮತ್ತ-ಪಹಾಣ–ಯಾವನು ಸಮ್ಯಗ್ದರ್ಶನದ ಅಧಿಕಾರಿಯೋ, ಬುಹು–ಅವನು ಪಂಡಿತನು. ಸೋ ತಇಲೋಯು-ಪಹಾಣು–ಅವನೇ ತ್ರಿಲೋಕದಲ್ಲಿ ಪ್ರಧಾನನು. ಸಾಸಯು-ಸುಕ್ಖ-ಣಿಹಾಣು ಕೇವಲ-ಣಾಣ ವಿ ಲಹು ಲಹಇ–ಅವನು ಅವಿನಶ್ವರ ಸುಖವಾದ ಕೇವಲಜ್ಞಾನ ಲಕ್ಷ್ಮಿಯನ್ನು ಬೇಗನೆ ಪ್ರಾಪ್ತಿ ಮಾಡಿಕೊಳ್ಳುತ್ತಾನೆ.

**ಭಾವಾರ್ಥ :** ಸಮ್ಯಗ್ದರ್ಶನ ಸರ್ವಗುಣಗಳಲ್ಲಿ ಪ್ರಧಾನವಾದುದು. ಇದರ ಮಹಿಮೆಯಿಂದ ಜ್ಞಾನ ಸಮ್ಯಗ್ಜ್ಞಾನವಾಗಿಯೂ ಮತ್ತು ಚಾರಿತ್ರ ಸಮ್ಯಕ್ಚಾರಿತ್ರವಾಗಿಯೂ ಆಗುತ್ತದೆ. ಒಂದಂಕಿಯ ಮುಂದೆ ಸೇರಿದ ಬಿಂದು ಸಫಲವಾಗುವಂತೆ, ಸಮ್ಯಕ್ತ್ವಸಹಿತವಾದ ಜ್ಞಾನ, ಚಾರಿತ್ರಗಳು ಮೋಕ್ಷದತ್ತ ತೆಗೆದುಕೊಂಡು ಹೋಗುವವುಗಳಾಗಿವೆ. ಒಂದುವೇಳೆ ಸಮ್ಯಕ್ತ್ವವಿಲ್ಲದಿದ್ದರೆ ಕೇವಲ ಪುಣ್ಯಬಂಧಕ್ಕೆ ಕಾರಣವಾಗುತ್ತದೆ ಮತ್ತು ಸಂಸಾರ ಪರಿಭ್ರಮಣೆಗೆ ಕಾರಣವಾಗುತ್ತದೆ.

ಯಾವಪ್ರಕಾರವಾಗಿ ಬೇರಿಲ್ಲದೆ ವೃಕ್ಷವು ನಿಲ್ಲದಿರುವಂತೆ, ಅಸ್ತಿಭಾರವಿಲ್ಲದೆ ಮನೆಯು ಸ್ಥಿರವಾಗದಿರುವಂತೆ ಸಮ್ಯಕ್ತ್ವರೂಪ ಬೀಜವಿಲ್ಲದೆ ಧರ್ಮರೂಪ ವೃಕ್ಷವು ಬೆಳೆಯಲಾರದು. ಅನೇಕ ಶಾಸ್ತ್ರಗಳ ಜ್ಞಾನವಿದ್ದರೂ ಸಮ್ಯಕ್ತ್ವವಿದ್ದರೇನೆ ಅವನು ನಿಜವಾದ ಜ್ಞಾನಿ. ಅಷ್ಟೇ ಅಲ್ಲ ಜ್ಞಾನವೂ ಕೂಡ ಸಫಲವಾಗುತ್ತದೆ. ಆತ್ಮನನ್ನು ಪರದ್ರವ್ಯಗಳಿಂದ ಮತ್ತು ಪರಭಾವಗಳಿಂದ ಭಿನ್ನವಾದ ಪರಮಶುದ್ಧದ್ರವ್ಯವೆಂದು ವಿಶ್ವಾಸವನ್ನು ತಂದುಕೊಳ್ಳುವುದೇ ದ್ವಾದಶಾಂಗ ಶಾಸ್ತ್ರದ ಸಾರವೂ ನಿಶ್ಚಯ ಸಮ್ಯಗ್ದರ್ಶನವೂ ಆಗಿರುತ್ತದೆ.

ಸಮ್ಯಗ್ದರ್ಶನದ ಪ್ರಾಪ್ತಿಯಾದರೆ ಮೂರು ಲೋಕದ ಸಂಪತ್ತು ಕೂಡ ನಿಃಸಾರವೆಂದೇ ತೋರುತ್ತದೆ. ಸಮ್ಯಗ್ದರ್ಶನ ಸಂಪನ್ನನಾದ ನೀಚ ಚಂಡಾಲನೂ ಕೂಡ ದೇವತೆಗಳಿಂದ ಪೂಜಿಸಲ್ಪಡುತ್ತಾನೆ. ಸಮ್ಯಕ್ತ್ವ ರಹಿತನಾದ ನವಗ್ರೈವೇಯಕ ಅಹಮಿಂದ್ರನಿಗಿಂತ ಸಮ್ಯಕ್ತ್ವ ಸಹಿತನಾದ ಗೃಹಸ್ಥನು ಶ್ರೇಷ್ಠನೆಂದೇ ಭಾವಿಸಬೇಕು. ಸಮ್ಯಕ್ತ್ವರಹಿತವಾದ ಸ್ವರ್ಗವಾಸಕ್ಕಿಂತ ಸಮ್ಯಗ್ದರ್ಶನ ಸಹಿತವಾದ ನರಕವಾಸವೇ ಶ್ರೇಷ್ಠವೆಂದು ನಿಶ್ಚಯಿಸಿಕೊಳ್ಳಬೇಕು.

ಸಮ್ಯಗ್ದರ್ಶನದ ಮಹಿಮೆಯನ್ನು ಎಷ್ಟು ವರ್ಣಿಸಿದರೂ ಅಲ್ಪವೇ. ಯಾಕೆಂದರೆ ಇದರ ಲಾಭದಿಂದ ಅನಾದಿಕಾಲದ ಅಂಧಕಾರ ನಾಶವಾಗಿ, ಉಜ್ವಲವಾದ ಪ್ರಕಾಶ ಪ್ರಜ್ವಲಿಸುತ್ತದೆ. ಆದರಿಂದ ಮನಮೋಹಕವಾಗಿ ಭಾಸವಾಗುತ್ತಿದ್ದ ಸಂಸಾರವನ್ನು ತ್ಯಜಿಸಬೇಕೆಂದು ಮನಸ್ಸುಂಟಾಗುವುದು. ಗ್ರಹಣೆಗೆ ಯೋಗ್ಯವೆಂದು ಭಾಸವಾಗುತ್ತಿದ್ದ ಇಂದ್ರಿಯ ಸುಖ ಅಗ್ರಾಹ್ಯವೆಂದು ಭಾಸವಾಗುತ್ತದೆ. ಯಾವ ಅತೀಂದ್ರಿಯ ಸುಖದ ತಿಳುವಳಿಕೆ ಇರಲಿಲ್ಲವೋ ಅದರ (ಆ ಸುಖದ) ತಿಳುವಳಿಕೆಯುಂಟಾಗಿ ಅದರಲ್ಲಿ ಅಭಿರುಚಿಯುಂಟಾಗುತ್ತದೆ. "ತನ್ನ ಆತ್ಮದ್ರವ್ಯ ಪರಮ ಪರಿಶುದ್ಧ ಜ್ಞಾತೃವೂ ದೃಷ್ಟವೂ ಪರಮಾತ್ಮಸ್ವರೂಪವೂ ಆಗಿರುತ್ತದೆ. ನನ್ನ ಸಂಪತ್ತಿಯಾದರೋ ಅವಿನಾಶಿಯಾದ ಜ್ಞಾನದರ್ಶನ ಸುಖ ವೀರ್ಯಾದಿ ಗುಣಗಳಾಗಿರುತ್ತವೆ" ಎಂಬ ಜ್ಞಾನವುಂಟಾಗುತ್ತದೆ. "ಮೊದಲು ನಾನು ಕರ್ಮಜನಿತ ಅವಸ್ಥೆಗಳಾದ ನಾರಕೀ, ತಿರ್ಯಂಚ, ಮನುಷ್ಯ, ದೇವ, ಸುಂದರ, ಕುರೂಪಿ, ರೋಗಿ, ನಿರೋಗಿ, ಕ್ರೋಧಿ, ಮಾನಿ, ಮಾಯಾವಿ, ಲೋಭಿ, ಸ್ತ್ರೀ, ಪುರುಷ, ನಪುಂಸಕ, ವ್ಯಸನಿ, ಸಂತೋಷಿ, ದುಃಖೀ, ಸುಖೀ, ಪುಣ್ಯಪಾಪ ಕರ್ತೃ, ಪರೋಪಕಾರಿ, ದಾನಿ, ವಿದ್ವಾಂಸ, ವ್ರತಿಕ, ಶ್ರಾವಕ, ಮುನಿ, ತಪಸ್ವಿ, ರಾಜ್ಯ, ಪ್ರಧಾನ ಇವೇ ಮೊದಲಾದ ಅವಸ್ಥೆಗಳನ್ನು ಆತ್ಮನ ಅವಸ್ಥೆಗಳೆಂದು ತಿಳಿದಿದ್ದೆ. ಹೀಗೆ ತಿಳಿದಿದ್ದರಿಂದ ಧನ, ಗದ್ದೆ, ಮನೆ, ಗ್ರಾಮ, ರಾಜ್ಯ, ವಸ್ತ್ರ, ಅಭೂಷಣ, ಸ್ತ್ರೀ, ಪುತ್ರ, ಪುತ್ರಿ, ಸಹೋದರ,ಸಹೋದರಿ, ತಂದೆ, ತಾಯಿ, ಆನೆ ಕುದುರೆ ಮೊದಲಾದವುಗಳು ನನ್ನವೆಂಬ ಅಹಂಕಾರ ಮತ್ತು ಮಮಕಾರದಿಂದ ಅಂಧನಾಗಿ, ರಾತ್ರಿ ಹಗಲು ಕರ್ಮಜನಿತ ಸಂಯೋಗದಲ್ಲಿ ಕ್ರೀಡಿಸುತ್ತಾ ಇದ್ದೆ. ಇಷ್ಟ ವಸ್ತುಗಳ ಗ್ರಹಣೆಯಲ್ಲಿಯೂ ಅನಿಷ್ಟವಸ್ತುಗಳ ತ್ಯಾಗದಲ್ಲಿಯೂ ಉದ್ಯುಕ್ತನಾಗುತ್ತಿದ್ದೆ" ಎಂಬ ಅಜ್ಞಾನ ನಾಶವಾದೊಡನೆ ಸಮ್ಯಗ್ದೃಷ್ಟಿಯ ಅಂತರಾಳದಲ್ಲಿ ಸತ್ಯಜ್ಞಾನ ಪ್ರಜ್ವಲಿಸುತ್ತದೆ ಮತ್ತು ಸಮ್ಯಕ್ತ್ವಿಗೆ ಪರಭಾವಗಳಲ್ಲಿ ಅಹಂಕಾರ ಮತ್ತು ಪರಪದಾರ್ಥಗಳಲ್ಲಿ ಮಮಕಾರವು ದೂರವಾಗುತ್ತದೆ.

ಸಮ್ಯಗ್ದೃಷ್ಟಿ ಗೃಹಸ್ಥಾವಸ್ಥೆಯಲ್ಲಿರುವತನಕ ಕರ್ಮಗಳ ಉದಯವನ್ನು ಉದಯವೆಂದು ತಿಳಿದು, ಸಕಲ ಗೃಹಸ್ಥ ಸಂಬಂಧವಾದ ಲೌಕಿಕ ಕ್ರಿಯೆಗಳನ್ನು ತನ್ನ ಆತ್ಮೀಕ ಕರ್ತವ್ಯಕ್ಕಿಂತ ಭಿನ್ನವೆಂದು ತಿಳಿಯುತ್ತಾನೆ; ಆದರೆ ಆ

ಲೌಕಿಕ ಕ್ರಿಯೆಗಳಲ್ಲಿ ತನ್ಮಯನಾಗುವುದಿಲ್ಲ; ಅಂತರಂಗದಲ್ಲಿ ವಿರಾಗಿಯಾಗಿರುತ್ತಾನೆ. ಕಷಾಯೋದಯದ ಶಮನವಾದೊಡನೆ ಗೃಹಸ್ಥಾವಸ್ಥೆಯನ್ನು ಬಿಟ್ಟು ಸಾಧುವಾಗುತ್ತಾನೆ. ಸಮ್ಯಕ್ತ್ವವಂತನಾದ ಜೀವನು ಯಾವಾಗಲೂ ಭೇದವಿಜ್ಞಾನದ ಮೂಲಕ ತನ್ನ ಶುದ್ಧಾತ್ಮನನ್ನು ಭಿನ್ನರೂಪವಾಗಿ ಧ್ಯಾನಿಸುತ್ತಾನೆ; ಕ್ರಮವಾಗಿ ಆತ್ಮನನ್ನು ನಿರ್ಮಲಗೊಳಿಸುತ್ತಾನೆ. ಸಮ್ಯಕ್ತ್ವಿಯಾದ ಸಾಧುವು ಕ್ಷಪಕಶ್ರೇಣಿಯನ್ನು ಆರೋಹಿಸಿ, ಮೋಹನೀಯ ಮತ್ತು ಉಳಿದ ಜ್ಞಾನಾವರಣಾದಿಗಳನ್ನು ಪೂರ್ಣಕ್ಷಯಗೊಳಿಸಿ ಕೇವಲಜ್ಞಾನಿಯಾಗಿ ಅರಹಂತ ಪರಮಾತ್ಮನಾಗುತ್ತಾನೆ. ಆಗ ಅವಿನಾಶಿಯೂ ಅನಂತವೂ ಆದ ಸುಖಕ್ಕೆ ಪಾತ್ರನಾಗುತ್ತಾನೆ. ಆಗ ಇವನೇ ನಿಜವಾದ ಪರಮಮಿತ್ರನಾಗಿರುತ್ತಾನೆ. ಈ ಮಹಾತ್ಮನೇ ಸಂಸಾರ ದುಃಖದಿಂದ ಬಿಡುಗಡೆಮಾಡಿಸಿ ನಿರ್ವಾಣ ಸ್ಥಾನಕ್ಕೆ ತಲುಪಿಸುವ ಪರಮಹಿತೈಷಿಯಾದ ಪರಮ ಸ್ನೇಹಿತನಾಗಿರುತ್ತಾನೆ.

ಆತ್ಮಾನುಶಾಸನದಲ್ಲಿ ಹೇಳಿದೆ :

**ಸಮಬೋಧವೃತ್ತತಪಸಾಂ ಪಾಷಾಣಸ್ಯೇವ ಗೌರವಂ ಪುಂಸಃ ।**
**ಪೂಜ್ಯಂ ಮಹಾಮಣೇರಿವ ತದೇವ ಸಮ್ಯಕ್ತ್ವಸಂಯುಕ್ತಂ ॥ ೧೫ ॥**

**ಭಾವಾರ್ಥ :** ಸಮ್ಯಗ್ದರ್ಶನವಿಲ್ಲದ ಶಾಂತಭಾವನೆ, ಜ್ಞಾನ, ಚಾರಿತ್ರ ತಪಸ್ಸು ಮೊದಲಾದವುಗಳು ಪಾಷಾಣದಂತೆ ತುಚ್ಛಗಳಾಗಿದೆ. ಒಂದುವೇಳೆ ಸಮ್ಯಗ್ದರ್ಶನಸಹಿತಗಳಾದರೆ ಅವುಗಳ ಮೌಲ್ಯವು (ಬೆಲೆಯು) ಶ್ರೇಷ್ಠ ರತ್ನಗಳಿಗೆ ಸಮಾನವಾಗಿರುತ್ತದೆ.

## ಸಂವರ ಮತ್ತು ನಿರ್ಜರೆಗಳಿಗೆ ಆತ್ಮಸ್ಥಿರತೆಯೇ ಕಾರಣ

**ಅಜರು ಅಮರು ಗುಣ-ಗಣ-ಣಿಲಉ ಜಹಿ ಅಪ್ಪಾ ಥಿರು ಠಾಇ ।**
**ಸೋ ಕಮ್ಮೇಹಿ [illegible] ಬಂಧಿಯಉ ಸಂಚಿಯ-ಪುವ್ವ ವಿಲಾಇ ॥ ೯೧ ॥**

**ಅನ್ವಯಾರ್ಥ :** ಜಹಿ ಅಜರು ಅಮರು ಗುಣ-ಗಣ-ಣಿಲಉ ಅಪ್ಪಾ ಥಿರು ಠಾಇ–ಅಜರ ಅಮರಗುಣಗಳಿಗೆ ನಿಧಿಯಂತಿರುವ ಆತ್ಮನು ಸ್ಥಿರನಾಗಿ

ರುತ್ತಾನೆ. ಸೋ ಕಮ್ಮೇಹಿ ಣ ಬಂಧಿಯುಉ–ಆಗ ಆತ್ಮನು ನೂತನ ಕರ್ಮ ಗಳನ್ನು ಬಂಧಿಸಿಕೊಳ್ಳುವುದಿಲ್ಲ. ಪುವ್ವ ಸಂಚಿಯ ವಿಲಾ ಆ–ಪೂರ್ವಸಂಚಿತ ಕರ್ಮಗಳನ್ನು ನಾಶಗೊಳಿಸುತ್ತಾನೆ.

**ಭಾವಾರ್ಥ:** ನಿಶ್ಚಯನಯದಿಂದ ಈ ಆತ್ಮನು ಜನ್ಮಜರಾಮರಣ ಗಳಿಂದ ರಹಿತನೂ, ಅವಿನಾಶಿಯೂ ಮತ್ತು ಸಾಮಾನ್ಯ ವಿಶೇಷಗುಣಗಳ ಸಮೂಹನೂ ಆಗಿರುತ್ತಾನೆ. ಯಾವಾಗ ಆತ್ಮನನ್ನು ಕರ್ಮಗಳಿಂದಲೂ ಶರೀರಗಳಿಂದಲೂ ಭಿನ್ನನಾದವನೆಂದು ತಿಳಿಯುವನೋ ಆಗ ಆತ್ಮನು ಶುದ್ಧ ನೆಂದೇ ತೋರುತ್ತಾನೆ. ಉದಾ: ಕೆಸರಿನಿಂದ ಕೂಡಿದ ನೀರನ್ನು ನೀರಿನ ಸ್ವಭಾವಾಪೇಕ್ಷೆಯಿಂದ ನೋಡಿದ್ದೇ ಆದರೆ, ನೀರು ಶುದ್ಧವೆಂದೇ ತೋರುತ್ತದೆ. (ಭಾಸವಾಗುತ್ತದೆ). ಸಮ್ಯಗ್ದೃಷ್ಟಿ ಈ ಭೇದವಿಜ್ಞಾನದ ಶಕ್ತಿಯಿಂದ ತನ್ನಾ ತ್ಮನನ್ನು ಕರ್ಮಗಳಿಂದ ಭಿನ್ನನೆಂದೂ ಕರ್ಮೋದಯಜನಿತಭಾವಗಳಿಂದ ಭಿನ್ನನೆಂದೂ ಸ್ವಾಭಾವಿಕ ಜ್ಞಾನ, ದರ್ಶನ, ಸುಖ, ವೀರ್ಯಮಯನೆಂದೂ ಮತ್ತು ನಿರಂಜನ ಪರಮಾತ್ಮನೆಂದೂ ನೋಡಿದಾಗ, ಅವನಿಗೆ ವಿಶೇಷ ಶ್ರದ್ಧಾನ ಉಂಟಾಗುತ್ತದೆ.

ಈ ವಿಧದ ಶ್ರದ್ಧಾನ ಮತ್ತು ಜ್ಞಾನದ ಬಲದಿಂದ ಸಮ್ಯಗ್ದೃಷ್ಟೀ ಜೀವನು ತನ್ನಲ್ಲಿ ಸ್ಥಿರನಾಗುತ್ತಾ ಪುರುಷಾರ್ಥವನ್ನು ಸಾಧಿಸಿಕೊಳ್ಳುತ್ತಾನೆ. ಎಷ್ಟುಕಾಲದವರೆಗೆ ಸ್ವಾನುಭವವಾಗಲೀ ಅಥವಾ ಆತ್ಮಸ್ಥಿರತೆಯ ಪ್ರಾಪ್ತಿ ಯಾಗಲಿ ಆಗುತ್ತದೋ ಅಷ್ಟುಕಾಲದಲ್ಲಿ ಪೂರ್ವಬದ್ಧವಾದ ಕರ್ಮಗಳ ನಿರ್ಜರೆ ಅಧಿಕಪ್ರಮಾಣದಲ್ಲಿ ಆಗುತ್ತದೆ. ಗುಣಸ್ಥಾನಗಳ ರೀತಿಗೆ ಅನುಸಾರವಾಗಿ ಬಂಧವು ನಿಯಮಿತಪ್ರಕೃತಿಗಳಿಂದ ಮಾತ್ರ ಆಗುತ್ತದೆ. ಹಾಗಿದ್ದರೂ ಘಾತಿ ಕರ್ಮಗಳಲ್ಲಿ ಅನುಭಾಗವು ಅತಿಕಡಿಮೆ ಪ್ರಮಾಣದಲ್ಲಿಯೇ ಆಗುತ್ತದೆ. ಅಘಾತಿಕರ್ಮಗಳಲ್ಲಿ ಪಾಪಕರ್ಮಗಳ ಬಂಧವು ಆಗುವುದಿಲ್ಲ. ಆದರೆ ಪುಣ್ಯ ಕರ್ಮಗಳ ಬಂಧವು ಆಗುತ್ತದೆ. ಅವುಗಳಲ್ಲಿ ಅನುಭಾಗ ಬಂಧವು ಅಧಿಕ ಪ್ರಮಾಣದಲ್ಲಿಯೇ ಆಗುತ್ತದೆ. ಆಯುಕರ್ಮವನ್ನು ಬಿಟ್ಟು ಉಳಿದ ಏಳು ಕರ್ಮಗಳ ಸ್ಥಿತಿಬಂಧವು ಕಡಿಮೆ ಪ್ರಮಾಣದಲ್ಲಿಯೇ ಬೀಳುತ್ತದೆ.

ಲೋಭಕಷಾಯದ ಉದಯ ಹತ್ತನೇ ಸೂಕ್ಷ್ಮಸಾಂಪರಾಯ ಗುಣ ಸ್ಥಾನದವರೆಗೇ ಇರುತ್ತದೆ. ಸಾಂಪರಾಯಿಕ ಆಸ್ರವವೂ ಬಂಧವೂ ಈ ಗುಣ

ಸ್ಥಾನದವರೆಗೇ ಇರುತ್ತದೆ. ಹನ್ನೊಂದನೇ ಉಪಶಾಂತಕಷಾಯ ಗುಣಸ್ಥಾನ ಹನ್ನೆರಡನೇ ಕ್ಷೀಣಕಷಾಯ ಗುಣಸ್ಥಾನ ಮತ್ತು ಹದಿಮೂರನೇ ಸಯೋಗ ಕೇವಲಿ ಗುಣಸ್ಥಾನ ಈ ಮೂರು ಗುಣಸ್ಥಾನಗಳಲ್ಲಿ ವೀತರಾಗತೆಯೂ, ಯೋಗಗಳ ಚಂಚಲತೆಯೂ ಮತ್ತು ಈರ್ಯಾಪಥಾಸ್ರವವೂ ಸಾತವೇದ ನೀಯಕರ್ಮದ ಉದಯವೂ ಇರುತ್ತದೆ. ಇಲ್ಲಿ ಕರ್ಮಗಳು ಬಂದು ಫಲ ವನ್ನು ಕೊಟ್ಟು ಹೋಗುತ್ತವೆ.

ಆತ್ಮಸ್ಥಿರತೆ ಇರುವಾಗ ವಿಶೇಷ ಕರ್ಮಗಳ ನಿರ್ಜರೆ ಆಗುತ್ತದೆ. ಹನ್ನೆರಡನೆ ಕ್ಷೀಣಮೋಹ ಗುಣಸ್ಥಾನದಲ್ಲಿ ಸ್ಥಿರತಾರೂಪವಾದ ಏಕತ್ವ ವಿತರ್ಕ ಅವೀಚಾರವೆಂಬ ಹೆಸರುಳ್ಳ ಎರಡನೆಯ ಶುಕ್ಲಧ್ಯಾನವುಂಟಾಗಿ ಒಂದು ಅಂತ ರ್ಮುಹೂರ್ತ ಕಾಲದಲ್ಲಿ ಜ್ಞಾನಾವರಣ, ದರ್ಶನಾವರಣ ಮತ್ತು ಅಂತರಾಯ ಕರ್ಮಗಳ ನಿರ್ಜರೆಯಾಗಿ ಮತ್ತೆ ಈ ಆತ್ಮನು ಅರಹಂತ ಪರಮಾತ್ಮನಾಗು ತ್ತಾನೆ. ಹದಿಮೂರನೆಯ ಮತ್ತು ಹದಿನಾಲ್ಕನೆಯ ಗುಣಸ್ಥಾನದ ಆತ್ಮರಲ್ಲಿ ಪರಮಸ್ಥಿರತೆಇರುವುದರಿಂದ ಬಂಧವಾಗುವುದಿಲ್ಲ. ಅಷ್ಟೇ ಅಲ್ಲ ಪೂರ್ವಬದ್ಧ ವಾಗಿದ್ದ ಕರ್ಮಗಳು ಹದಿನಾಲ್ಕನೆಯ ಗುಣಸ್ಥಾನದ ಅಂತ್ಯದಲ್ಲಿ ಉದುರಿ ಹೋಗಿ ಈ ಆತ್ಮನು ಕರ್ಮರಹಿತನಾಗಿ ಸಿದ್ಧಪರಮಾತ್ಮನಾಗುತ್ತಾನೆ.

ಆತ್ಮನಲ್ಲಿ ಸ್ಥಿರನಾಗುವ ಕಾರ್ಯ ನಾಲ್ಕನೆಯ ಗುಣಸ್ಥಾನದಿಂದ ಪ್ರಾರಂಭವಾಗುತ್ತದೆ. ಅಲ್ಲಿ ಸ್ವರೂಪಾಚರಣಚಾರಿತ್ರ ಇರುತ್ತದೆ. ಆ ಚಾರಿತ್ರ ಅನಂತಾನುಬಂಧೀ ಕಷಾಯಗಳ ಉದಯವಿಲ್ಲದಿರುವುದರಿಂದಲೇ ಪ್ರಕಟವಾಗುತ್ತದೆ.

ಐದನೆಯ ದೇಶಸಂಯಮ ಗುಣಸ್ಥಾನದಲ್ಲಿ ಅಪ್ರತ್ಯಾಖ್ಯಾನ ಕಷಾಯದ ಉದಯ ಇಲ್ಲದಿರುವುದರಿಂದ ಸ್ವರೂಪಾಚರಣದಲ್ಲಿ ಅಧಿಕ ಸ್ಥಿರತೆ, ನಿರ್ಮಲತೆ ಕೂಡ ಉಂಟಾಗುತ್ತದೆ. ಈ ಐದನೇ ಗುಣಸ್ಥಾನದಲ್ಲಿ ಹನ್ನೊಂದು ಶ್ರೇಣಿ ಗಳಿವೆ. ಅವುಗಳನ್ನೇರುತ್ತಾ ಪ್ರತ್ಯಾಖ್ಯಾನ ಕಷಾಯದ ಉದಯ ಮಂದ ಆಗುತ್ತಾ ಆಗುತ್ತಾ ಸ್ವರೂಪದಲ್ಲಿ ಸ್ಥಿರತೆ ಹೆಚ್ಚಾಗುತ್ತಾ ಹೋಗುತ್ತದೆ.

ಆರನೇ ಪ್ರಮತ್ತಗುಣಸ್ಥಾನದಲ್ಲಿ ಪ್ರತ್ಯಾಖ್ಯಾನ ಕಷಾಯದ ಉದಯ ಇಲ್ಲದಿರುವುದರಿಂದ ಮತ್ತಷ್ಟು ಸ್ವರೂಪಾಚರಣದಲ್ಲಿ ಸ್ಥಿರತೆ ಹೆಚ್ಚಾಗುತ್ತದೆ.

ಏಳನೇ ಅಪ್ರಮತ್ತ ಗುಣಸ್ಥಾನದಲ್ಲಿ ಸಂಜ್ವಲನ ಕಷಾಯದ ಉದಯ ಮಂದ ವಾಗಿರುವಾಗ ಪ್ರಮಾದ ಭಾವನೆ ಇಲ್ಲದವನಾಗುವುದರಿಂದ ನಿಶ್ಚಲತೆಯುಂಟಾಗುತ್ತದೆ. ಒಂಭತ್ತನೇ ಅನಿವೃತ್ತಿಕರಣ ಗುಣಸ್ಥಾನದಲ್ಲಿ ಅಧಿಕ ಮಂದ ಕಷಾಯವಿರುವುದರಿಂದ ಮತ್ತಷ್ಟು ಸ್ಥಿರತೆಯುಂಟಾಗುತ್ತದೆ.

ಹತ್ತನೇ ಸೂಕ್ಷ್ಮಸಾಂಪರಾಯಗುಣಸ್ಥಾನದಲ್ಲಿ ಕೇವಲ ಸೂಕ್ಷ್ಮಲೋಭ ಕಷಾಯದ ಉದಯವಿರುವುದರಿಂದ ಅಧಿಕ ಸ್ಥಿರತೆ ಮತ್ತು ಶಾಂತಿ ಉಂಟಾಗುತ್ತದೆ. ಹೀಗೆ ರಾಗದ್ವೇಷವಿಕಾರಗಳು ದೂರವಾಗುತ್ತಿದ್ದಂತೆ ಆತ್ಮನಲ್ಲಿ ಸ್ಥಿರತೆ ಬೆಳೆಯುತ್ತಾ ಬೆಳೆಯುತ್ತಾ ಶುದ್ಧಾತ್ಮಸ್ವರೂಪ (ಸ್ವಭಾವ) ದಲ್ಲಿ ಸ್ಥಿರನಾಗಿ ಆತ್ಮೀಕ ಆನಂದರಸಾಸ್ವಾದವನ್ನೆಸಗುತ್ತಾನೆ. ಇದರಿಂದ ಸಂವರೆ ಮತ್ತು ನಿರ್ಜರೆಯಾಗುತ್ತಾ ಮೋಕ್ಷ ದೊರಕುತ್ತದೆ. ಆದ್ದರಿಂದ ಮುಮುಕ್ಷುವು ಪುರುಷಾರ್ಥಗಳನ್ನು ಸಾಧಿಸುತ್ತಾ ತನ್ನ ಶುದ್ಧಾತ್ಮಭಾವನೆಯನ್ನು ಪ್ರತಿನಿತ್ಯವೂ ಭಾವಿಸಬೇಕು.

ಇಷ್ಟೋಪದೇಶದಲ್ಲಿ ಹೇಳಿರುತ್ತಾರೆ:

**ಅವಿದ್ಯಾಭಿದುರಂ ಜ್ಯೋತಿಃ ಪರಂ ಜ್ಞಾನಮಯಂ ಮಹತ್ ।**
**ತತ್ಪ್ರಷ್ಟವ್ಯಂ ತದೇಷ್ಟವ್ಯಂ ತದ್ ದ್ರಷ್ಟವ್ಯಂ ಮುಮುಕ್ಷುಭಿಃ ॥೪೯॥**

ಭಾವಾರ್ಥ: ಮೋಕ್ಷಪ್ರೇಮಿಗಳ ಆದ್ಯ ಕರ್ತವ್ಯವೇನೆಂದರೆ: ಆತ್ಮ ಸಂಬಂಧವಾಗಿಯೇ ಪ್ರಶ್ನೆಮಾಡುವುದು, ಆದರಲ್ಲಿಯೇ ಪ್ರೇಮವನ್ನಿಡುವುದು, ನೋಡುವುದು ಮತ್ತು ಅನುಭವಮಾಡಿಕೊಳ್ಳುವುದು. ಆತ್ಮಜ್ಯೋತಿಯು ಅಜ್ಞಾನದಿಂದ ರಹಿತವೂ ಪರಮಜ್ಞಾನಮಯವೂ ಮತ್ತು ಸರ್ವಶ್ರೇಷ್ಠವೂ ಆಗಿರುತ್ತದೆ.



## ಆತ್ಮಪ್ರೇಮಿ ಕರ್ಮಗಳಿಂದ ಬಂಧಿಸಲ್ಪಡುವುದಿಲ್ಲ

**ಜಹ ಸಲಿಲೇಣ ಣ ಲಿಪ್ಪಿಯಇ ಕಮಲಣಿ-ಪತ್ತ ಕಯಾ ವಿ ।**
**ತಹ ಕಮ್ಮೇಹಿಂ ಣ ಲಿಪ್ಪಿಯಇ ಜಇ ರಇ ಅಪ್ಪ ಸಹಾವಿ ॥೯೨॥**

**ಅನ್ವಯಾರ್ಥ:** ಜಹ ಕಮಲಣಿ-ಪತ್ತ ಕಯಾ ವಿ ಸಲಿಲೇಣ ಣ ಲಿಪ್ಪಿಯಇ–ಹೇಗೆ ಕಮಲಪತ್ರವು ನೀರಿನಿಂದ ಎಂದೆಂದಿಗೂ ಲಿಪ್ತವಾಗದಿರು

ವುದೋ, ತಹ ಜಣ ಅಪ್ಪ-ಸಹಾವಿ ರಣ ಕಮ್ಮೇಹಿಂ ಣ ಲಿಪ್ಪಿಯಇ-ಹಾಗೆ
ಆತ್ಮೀಕಸ್ವಭಾವದಲ್ಲಿ ತಲ್ಲೀನನಾದ ಜೀವನು ಕರ್ಮಗಳಿಂದ ಲಿಪ್ತನಾಗ
ಲಾರನು.

**ಭಾವಾರ್ಥ:** ಆತ್ಮನಲ್ಲಿ ತನ್ಮಯನಾದ ಭವ್ಯಜೀವನೇ ನಿಜವಾದ ಮೋಕ್ಷಮಾರ್ಗಿ. ಆವನು ರತ್ನತ್ರಯಗಳ ಏಕತ್ವವನ್ನು ಹೊಂದುವುದರಿಂದ, ವೀತರಾಗತೆಯಲ್ಲಿ ಮತ್ತು ಸಮಭಾವನೆಯಲ್ಲಿ ಲೀನನಾಗುವುದರಿಂದ ಮತ್ತು ರಾಗದ್ವೇಷಗಳಲ್ಲಿ ಲೀನನಾಗದಿರುವುದರಿಂದ ಕರ್ಮಗಳಿಂದ ಬಂಧಿಸಲ್ಪಡುವುದಿಲ್ಲ. ವೀತರಾಗಭಾವನೆ ಬಂಧನಾಶಕವಾಗಿದೆ. ರಾಗ, ದ್ವೇಷ ಮತ್ತು ಮೋಹಾದಿಗಳು ಬಂಧಕಾರಕಗಳಾಗಿವೆ. ಮಿಥ್ಯಾತ್ವಭಾವಕ್ಕೆ ಮೋಹವೆಂದೂ ಕಷಾಯಕ್ಕೆ ರಾಗದ್ವೇಷವೆಂದು ಹೇಳುತ್ತಾರೆ. ಸಮ್ಯಕ್ತ್ವಿಯು ನಾಲ್ಕನೆಯ ಗುಣಸ್ಥಾನದಲ್ಲಿದ್ದರೂ ತನ್ನಾತ್ಮ ಗಾಢಶ್ರದ್ಧೆಯ ಕಾರಣದಿಂದ ೪೧ ಕರ್ಮ ಪ್ರಕೃತಿಯ ಬಂಧಕ್ಕೆ ಸಿಲುಕಲಾರನು. ಸಮ್ಯಕ್ತ್ವವಂತನು ನರಕಗತಿ, ತಿರ್ಯಂಚಗತಿಗೆ ಕೊಂಡೊಯ್ಯುವ ಕರ್ಮಪ್ರಕೃತಿಗಳನ್ನು ಬಂಧಿಕೊಳ್ಳಲಾರನು. ಗುಣಸ್ಥಾನಗಳ ಆರೋಹಣೆಗೈಯ್ಯುತ್ತಿರಲು ಆತ್ಮಿಕ ಶಕ್ತಿಯು ವಿಶೇಷರೂಪವಾಗಿ ಪ್ರಕಟವಾಗುವಾಗ ಬಂಧಶಕ್ತಿಯನ್ನು ಅಧಿಕ ಕಡಿಮೆ ಮಾಡಿಕೊಳ್ಳುತ್ತಾನೆ. ೧೨೦ ಬಂಧಕರ್ಮಗಳಿರುತ್ತವೆ.

ಜ್ಞಾನಾವರಣ ೫+ ದರ್ಶನಾವರಣ ೯+ ವೇದನೀಯ ೨+ ಮೋಹನೀಯ ೨೬ (ಮೋಹನೀಯ ೨೮ ರಲ್ಲಿ ಸಮ್ಯಕ್ಮಿಥ್ಯಾತ್ವ ಮತ್ತು ಸಮ್ಯಕ್ತ್ವ ಪ್ರಕೃತಿ ಈ ೨ ಕರ್ಮಗಳು ಬಂಧವಾಗುವುದಿಲ್ಲ. ೨೮–೨=೨೬) +ಆಯು 4 + ನಾಮ ೬೭ (ನಾಮ ೯೩ ರಲ್ಲಿ ೫ ಬಂಧನ ಮತ್ತು ೫ ಸಂಘಾತ ಈ ೧೦ ಕರ್ಮಗಳನ್ನು ಗಣನೆಗೆ ತೆಗೆದುಕೊಳ್ಳದೆ ಇವುಗಳನ್ನು ೫ ಶರೀರಗಳೊಡನೆ ಸೇರಿಸಿದೆ. ಯಾಕೆಂದರೆ ೫+೫=೧೦ ಕರ್ಮಗಳು ೫ ಶರೀರನಾಮಕರ್ಮಗಳಿಲ್ಲದೆ ಇರಲಾರವು. ಹಾಗೆಯೇ ವರ್ಣ, ರಸ, ಗಂಧ, ಸ್ಪರ್ಶ ಇವುಗಳ ಬೇಧಗಳಾದ ೨೦ ನಾಮಕರ್ಮಗಳನ್ನು ಅಬೇಧ ದೃಷ್ಟಿಯಿಂದ ೪ ಎಂದು ಪರಿಗಣಿಸಿದೆ. ಅಂದರೆ ೨೦ – ೪=೧೬ ಕರ್ಮಗಳನ್ನು ಗಣನೆಗೆತೆಗೆದುಕೊಂಡಿಲ್ಲ. ಒಟ್ಟು ೫+೫+೧೬=೨೬ ಕರ್ಮಗಳನ್ನು ಗಣನೆಗೆತೆಗೆದುಕೊಂಡಿಲ್ಲ. ೯೩ – ೨೬=೬೭) +

ಗೋತ್ರ ೨+ ಅಂತರಾಯ ೫. ಒಟ್ಟು ೫+೯+೨+೨೬+೪+೬೭+೨+೫=
೧೨೦ ಬಂಧಕರ್ಮಗಳು ಗುಣಸ್ಥಾನಗಳಲ್ಲಿ ವ್ಯುಚ್ಛಿತ್ತಿಯಾಗುತ್ತವೆ. ಯಾವ ಗುಣಸ್ಥಾನವಲ್ಲಿ ಎಷ್ಟು ಪ್ರಕೃತಿಗಳ ವ್ಯುಚ್ಛಿತ್ತಿಯಿರುವುದೋ ಆ ಪ್ರಕೃತಿಗಳು ಮೇಲ್ಮೇಲಿನ ಗುಣಸ್ಥಾನಗಳಲ್ಲಿ ಬಂಧಿಸಲ್ಪಡುವುದಿಲ್ಲ.

**ಗುಣಸ್ಥಾನಗಳಲ್ಲಿ ಕರ್ಮಗಳ ಬಂಧದ ಬಿಡುಗಡೆ ಸಂಖ್ಯೆ :**

**೧) ಮಿಥ್ಯಾತ್ವಗುಣಸ್ಥಾನ ೧೬ :** ಮೋಹನೀಯಕರ್ಮದಲ್ಲಿ- 1) ಮಿಥ್ಯಾತ್ವ 2) ನಪುಂಸಕವೇದ. ಆಯುಕರ್ಮದಲ್ಲಿ-3) ನರಕಾಯು. ನಾಮಕರ್ಮದಲ್ಲಿ- 4) ನರಕಗತಿ 5) ಏಕೇಂದ್ರಿಯಜಾತಿ 6) ದ್ವೀಂದ್ರಿಯ ಜಾತಿ 7) ತ್ರೀಂದ್ರಿಯಜಾತಿ 8) ಚತುರೀಂದ್ರಿಯಜಾತಿ 9) ಹುಂಡಕ ಸಂಸ್ಥಾನ 10) ಅಸಂಪ್ರಾಪ್ತ ಸೃಪಾಟಿಕಾ ಸಂಹನನ 11) ನರಕಗತ್ಯಾನುಪೂರ್ವಿ 12) ಆತಪ 14) ಸ್ಥಾವರ 15) ಸೂಕ್ಷ್ಮ 16) ಅಪರ್ಯಾಪ್ತಿ 13) ಸಾಧಾರಣ.

**೨) ಸಾಸಾದನಗುಣಸ್ಥಾನ ೨೫ :** ದರ್ಶನಾವರಣೀಯಕರ್ಮದಲ್ಲಿ- 1) ಸ್ತ್ಯಾನಗೃದ್ಧಿ 2) ನಿದ್ರಾನಿದ್ರಾ 3) ಪ್ರಚಲಾಪ್ರಚಲಾ ಮೋಹನೀಯ ಕರ್ಮದಲ್ಲಿ-4) ಅನಂತಾನುಬಂಧಿಕ್ರೋಧ 5) ಅನಂತಾನುಬಂಧಿ ಮಾನ 6) ಅನಂತಾನುಬಂಧಿ ಮಾಯಾ 7) ಅನಂತಾನುಬಂಧಿ ಲೋಭ 8) ಸ್ತ್ರೀವೇದ. ಆಯುಕರ್ಮದಲ್ಲಿ- 9) ತಿರ್ಯಂಚಾಯು. ನಾಮಕರ್ಮದಲ್ಲಿ- 10) ತಿರ್ಯಂಚ ಗತಿ 11) ನ್ಯಗ್ರೋದಪರಿಮಂಡಲಸಂಸ್ಥಾನ 12) ಸ್ವಾತಿಸಂಸ್ಥಾನ 13) ಕುಬ್ಜಕಸಂಸ್ಥಾನ 14) ವಾಮನಸಂಸ್ಥಾನ 15) ವಜ್ರನಾರಾಚಸಂಹನನ 16) ನಾರಾಚಸಂಹನನ 17) ಅರ್ಧನಾರಾಚಸಂಹನನ 18) ಕೀಲಕ ಸಂಹನನ 19) ತಿರ್ಯಗ್ಗತ್ಯಾನುಪೂರ್ವಿ 20) ಉದ್ಯೋತ 21) ಅಪ್ರಶಸ್ತವಿಹಾಯೋಗತಿ 22) ದುರ್ಭಗ 23) ದುಃಸ್ವರ 24) ಅನಾದೇಯ. ಗೋತ್ರಕರ್ಮದಲ್ಲಿ 25) ನೀಚಗೋತ್ರ.

**೩) ಮಿಶ್ರಗುಣಸ್ಥಾನ ೦**

**೪) ಅವಿರತ ಸಮ್ಯಕ್ತ್ವ ಗುಣಸ್ಥಾನ ೧೦ :** ಮೋಹನೀಯ ಕರ್ಮ ದಲ್ಲಿ 1) ಅಪ್ರತ್ಯಾಖ್ಯಾನಾವರಣ ಕ್ರೋಧ 2) ಅಪ್ರತ್ಯಾಖ್ಯಾನಾವರಣ

ಮಾನ 3) ಅಪ್ರತ್ಯಾಖ್ಯಾನಾವರಣ ಮಾಯಾ 4) ಅಪ್ರತ್ಯಾಖ್ಯಾನಾವರಣ ಲೋಭ. ಆಯುಃಕರ್ಮದಲ್ಲಿ 5)ಮನುಷ್ಯಾಯು. ನಾಮಕರ್ಮದಲ್ಲಿ 6)ಮನುಷ್ಯ ಗತಿ 7) ಔದಾರಿಕ ಶರೀರ 8) ಔದಾರಿಕ ಶರೀರಾಂಗೋಪಾಂಗ 9) ವಜ್ರರ್ಷಭನಾರಾಚಸಂಹನನ 10) ಮನುಷ್ಯಗತ್ಯಾನುಪೂರ್ವಿ.

೫) **ದೇಶವಿರತ ಗುಣಸ್ಥಾನ ೪ :** ಮೋಹನೀಯ ಕರ್ಮದಲ್ಲಿ 1) ಪ್ರತ್ಯಾಖ್ಯಾನ ಕ್ರೋಧ 2) ಪ್ರತ್ಯಾಖ್ಯಾನ ಮಾನ 3) ಪ್ರತ್ಯಾಖ್ಯಾನ ಮಾಯಾ 4) ಪ್ರತ್ಯಾಖ್ಯಾನ ಲೋಭ.

೬) **ಪ್ರಮತ್ತವಿರತ ಗುಣಸ್ಥಾನ ೬ :** ವೇದನೀಯ ಕರ್ಮದಲ್ಲಿ 1) ಅಸಾತಾ ವೇದನೀಯ. ಮೋಹನೀಯ ಕರ್ಮದಲ್ಲಿ 2) ಅರತಿ 3) ಶೋಕ. ನಾಮಕರ್ಮದಲ್ಲಿ 4) ಅಶುಭ 5) ಅಸ್ಥಿರ 6) ಅಯಶಃಕೀರ್ತಿ.

೭) **ಅಪ್ರಮತ್ತವಿರತ ಗುಣಸ್ಥಾನ ೧ :** ಆಯುಃಕರ್ಮದಲ್ಲಿ 1) ದೇವಾಯು.

೮) **ಅಪೂರ್ವಕರಣ ಗುಣಸ್ಥಾನ ೩೬ :** ದರ್ಶನಾವರಣ ಕರ್ಮದಲ್ಲಿ 1) ನಿದ್ರಾ 2) ಪ್ರಚಲಾ. ಮೋಹನೀಯಕರ್ಮದಲ್ಲಿ 3) ಹಾಸ್ಯ 4) ರತಿ 5) ಭಯ 6) ಜುಗುಪ್ಸಾ. ನಾಮಕರ್ಮದಲ್ಲಿ 7) ದೇವಗತಿ 8) ಪಂಚೇಂದ್ರಿಯಜಾತಿ 9) ವೈಕ್ರಿಯಕಶರೀರ 10) ಆಹಾರಕಶರೀರ 11) ತೈಜಸ ಶರೀರ 12) ಕಾರ್ಮಣಶರೀರ 13) ವೈಕ್ರಿಯಕಶರೀರಾಂಗೋಪಾಂಗ 14) ನಿರ್ಮಾಣ 15) ಸಮಚತುರಸ್ರಸಂಸ್ಥಾನ 16) ಆಹಾರಕ ಶರೀರಾಂಗೋಪಾಂಗ 17) ಸ್ಪರ್ಶ 18) ರಸ 19) ಗಂಧ 20) ವರ್ಣ 21) ದೇವಗತ್ಯಾನುಪೂರ್ವಿ 22) ಅಗುರುಲಘು 23) ಉಪಘಾತ 24) ಪರಘಾತ 25) ಉಚ್ಛ್ವಾಸ 26) ಪ್ರಶಸ್ತವಿಹಾಯೋಗತಿ 27) ಪ್ರತ್ಯೇಕಶರೀರ 28) ತ್ರಸ 29) ಸುಭಗ 30) ಸುಸ್ವರ 31) ಶುಭ 32) ಬಾದರ 33) ಪರ್ಯಾಪ್ತಿ 34) ಸ್ಥಿರ 35) ಆದೇಯ 36) ತೀರ್ಥಂಕರತ್ವ.

೯) **ಅನಿವೃತ್ತಿಕರಣಗುಣಸ್ಥಾನ [illegible] :** ಮೋಹನೀಯಕರ್ಮದಲ್ಲಿ 1) ಸಂಜ್ವಲನ ಕ್ರೋಧ 2) ಸಂಜ್ವಲನ ಮಾನ 3) ಸಂಜ್ವಲನ ಮಾಯಾ 4) ಸಂಜ್ವಲನ ಲೋಭ 5) ಪುರುಷವೇದ.

**೧೦) ಸೂಕ್ಷ್ಮಸಾಂಪರಾಯಗುಣಸ್ಥಾನ ೧೬ :** ಜ್ಞಾನಾವರಣೀಯ ಕರ್ಮದಲ್ಲಿ 1) ಮತಿಜ್ಞಾನಾವರಣ 2) ಶ್ರುತಜ್ಞಾನಾವರಣ 3) ಅವಧಿಜ್ಞಾನಾವರಣ 4) ಮನಃಪರ್ಯಯಜ್ಞಾನಾವರಣ 5) ಕೇವಲಜ್ಞಾನಾವರಣ. ದರ್ಶನಾವರಣೀಯಕರ್ಮದಲ್ಲಿ 6) ಚಕ್ಷುದರ್ಶನಾವರಣ 7) ಅಚಕ್ಷುದರ್ಶನಾವರಣ 8) ಅವಧಿದರ್ಶನಾವರಣ 9) ಕೇವಲದರ್ಶನಾವರಣ. ನಾಮಕರ್ಮದಲ್ಲಿ 10) ಯಶಸ್ಕೀರ್ತಿ. ಗೋತ್ರಕರ್ಮದಲ್ಲಿ 11) ಉಚ್ಚಗೋತ್ರ. ಅಂತರಾಯಕರ್ಮದಲ್ಲಿ 12) ದಾನಾಂತರಾಯ 13) ಲಾಭಾಂತರಾಯ 14) ಭೋಗಾಂತರಾಯ 15) ಉಪಭೋಗಾಂತರಾಯ 16) ವೀರ್ಯಾಂತರಾಯ.

**೧೧) ಉಪಶಾಂತಕಷಾಯ ಗುಣಸ್ಥಾನದಲ್ಲಿ ೦**

**೧೨) ಕ್ಷೀಣಕಷಾಯಗುಣಸ್ಥಾನದಲ್ಲಿ ೦**

**೧೩) ಸಯೋಗಕೇವಲಿ ಗುಣಸ್ಥಾನದಲ್ಲಿ ೧:** ವೇದನಿಯಕರ್ಮದಲ್ಲಿ 1) ಸಾತಾವೇದನೀಯ.

ಒಟ್ಟು 16 + 25 + 10 + 4 + 6 + 1 + 36 + 5 + 16 + 1 = 120.

ಆತ್ಮಾನುಭವದ ಪ್ರತಾಪದಿಂದ ಕರ್ಮಬಂಧವು ಘಟಿಸುತ್ತಾ (ಕಡಿಮೆಯಾಗುತ್ತಾ) ಹೋಗುತ್ತದೆ. ಅಯೋಗಕೇವಲಿ ಸಂಪೂರ್ಣ ಆತ್ಮಾರಾಮಿ. ಇದರಿಂದ ಯಾವ ಕರ್ಮಬಂಧವಾಗಲಾರದು.

ಸಮಯಸಾರಕಲಶದಲ್ಲಿ ಹೇಳಿರುತ್ತಾರೆ :

**ರಾಗದ್ವೇಷವಿಮೋಹಾನಾಂ ಜ್ಞಾನಿನೋ ಯದಸಂಭವಃ।**
**ತತ ಏವ ನ ಬಂಧೋಽಸ್ಯ ತೇ ಹಿ ಬಂಧಸ್ಯ ಕಾರಣಂ ॥ ೭-೫ ॥**

**ಭಾವಾರ್ಥ :** ಜ್ಞಾನಿಯಾದವನಿಗೆ ರಾಗ, ದ್ವೇಷ, ಮೋಹಾದಿಗಳು ಇಲ್ಲದಿರುವುದರಿಂದಲೇ ಕರ್ಮಗಳು ಬಂಧವಾಗುವುದಿಲ್ಲ. ಈ ರಾಗಾದಿಗಳೇ ಬಂಧಕ್ಕೆ ಕಾರಣಗಳಾಗಿವೆ. ಆತ್ಮರಮಣರೂಪ ತತ್ವದಿಂದ ವೀತರಾಗಭಾವದ ವೃದ್ಧಿಯಾಗುತ್ತಾ ಬಂಧದ ತಡೆಯಾಗುತ್ತದೆ.

* *

## ಸಮಸುಖಭೋಗಿಯೇ ಮೋಕ್ಷಕ್ಕೆ ಪಾತ್ರನು

**ಜೋ ಸಮ ಸುಕ್ಖ ಣಿಲೀಣು ಬುಹು ಪುಣ ಪುಣ ಅಪ್ಪು ಮುಣೇಇ।**
**ಕಮ್ಮಕ್ಖಉ ಕರಿ ಸೋ ವಿ ಫುಡು ಲಹು ಣಿವ್ವಾಣು ಲಹೇಇ ॥೯೩॥**

**ಅನ್ವಯಾರ್ಥ:** ಜೋ ಬುಹು ಸಮಸುಕ್ಖ ಣಿಲೀಣು ಪುಣ ಪುಣ ಅಪ್ಪು ಮುಣೇಇ–ಯಾವ ಜ್ಞಾನಿ ಸುಖದಲ್ಲಿ ತನ್ಮಯನಾಗಿ ಪುನಃ ಪುನಃ ಆತ್ಮಾನುಭವವನ್ನು ಮಾಡಿಕೊಳ್ಳುತ್ತಾನೆಯೋ, ಸೋ ವಿ ಫುಡು ಕಮ್ಮ ಕಮ್ಮಕ್ಖಉ ಕರಿ ಲಹು ಣಿವ್ವಾಣು ಲಹೇಇ–ಅವನು ಶೀಘ್ರವೇ ಕರ್ಮಗಳನ್ನು ನಾಶಗೊಳಿಸಿ ನಿರ್ವಾಣಪದವಿಯನ್ನು ಪಡೆಯುತ್ತಾನೆ.

**ಭಾವಾರ್ಥ :** ನಿರ್ವಾಣಪದವಿ ಪ್ರಾಪ್ತಿಯ ಮಾರ್ಗ ಕಷ್ಟವನ್ನು ಸಹಿಸುವುದೆಂದು ಅರ್ಥವಲ್ಲ. ಆದರೆ ಅದು ಸಮಭಾವದೊಡಗೂಡಿ ಸುಖಭೋಗವಾಗಿರುತ್ತದೆ. ತನ್ನಾತ್ಮನ ಆತ್ಮರೂಪ ಶ್ರದ್ಧಾನವೂ ಜ್ಞಾನವೂ ಮತ್ತು ಅದರಲ್ಲಿಯೇ ತನ್ಮಯನಾಗುವುದೂ ಅರ್ಥಾತ್ ಆತ್ಮಾನುಭವವೂ ನಿಶ್ಚಯ ರತ್ನತ್ರಯ ಸ್ವರೂಪ ಮೋಕ್ಷಮಾರ್ಗವೂ ಆಗಿರುತ್ತದೆ. ಅಲ್ಲಿ ಆತ್ಮನು ಆತ್ಮನಲ್ಲಿಯೇ ತನ್ಮಯನಾಗುತ್ತಾನೆ. ಮಾನಸಿಕ ಕ್ರಿಯೆಗಳು ನಿಂತುಹೋಗುತ್ತವೆ. ವಚನ ಮತ್ತು ಶರೀರ ಸಂಬಂಧನಾದ ಕ್ರಿಯೆಗಳು ಸ್ಥಿರವಾಗುತ್ತವೆ. ಪರಿಣಾಮಗಳು ರಾಗದ್ವೇಷಗಳಿಂದ ರಹಿತವಾಗಿ ಸಮ ಮತ್ತು ಶಾಂತವಾದೊಡನೆ ಆತ್ಮಸ್ಥಿತಿಯೂ ಆತ್ಮೀಕ ಸುಖದ ರುಚಿಯೂ ಉದ್ಭವಿಸುತ್ತದೆ.

ಕಲ್ಲು ಸಕ್ಕರೆಯನ್ನು ತಿನ್ನುವುದರಿಂದ ಮಧುರತ್ವವೂ, ಬೇವಿನ ಎಲೆಯನ್ನು ತಿನ್ನುವುದರಿಂದ ಕಹಿಯೂ, ಲವಣವನ್ನು (ಉಪ್ಪನ್ನು) ಸೇವಿಸುವುದರಿಂದ ಕ್ಷಾರವೂ ಉಂಟಾಗುವಂತೆ, ಆತ್ಮನ ಶುದ್ಧ ಸ್ವಭಾವದಲ್ಲಿ ರಮಿಸುವುದರಿಂದ ಆತ್ಮಾನಂದದ ಸ್ವಾದವುಂಟಾಗುತ್ತದೆ. ಅದೇ ಸಮಯದಲ್ಲಿ ಪೂರ್ವಲಬ್ಧವಾದ ಕರ್ಮಗಳ ಸ್ಥಿತಿಯು ಕಡಿಮೆಯಾಗುತ್ತದೆ. ಆಯುಷ್ಯಕರ್ಮವನ್ನು ಬಿಟ್ಟು ಉಳಿದ ಕರ್ಮಗಳ ಸ್ಥಿತಿಯು ಕಡಿಮೆಯಾಗುತ್ತಾ ಪಾಪಕರ್ಮಗಳ ರುಚಿಯು ಒಣಗಿಹೋಗಿ ಉದುರಿಹೋಗಲು ಪ್ರಾರಂಭಿಸುತ್ತದೆ. ಅಂದರೆ ಪಾಪಕರ್ಮಗಳು ಫಲಕೊಡದೆ ಹೋಗುತ್ತವೆ. ಪುಣ್ಯಕರ್ಮಗಳ ರಸವು

ಹೆಚ್ಚುತ್ತಾ ಹೋಗುತ್ತದೆ. ಅಂದರೆ ಪುಣ್ಯಕರ್ಮಗಳು ಪ್ರಚುರ ಫಲವನ್ನುಂಟು ಮಾಡಿ ಹೋಗುತ್ತವೆ. ಘಾತಿಕರ್ಮಗಳು ನಿರ್ಬಲವಾಗಿ, ಹೊಸ ಕರ್ಮಗಳ ಸಂವರೆ ಆಗುತ್ತದೆ. ಆತ್ಮಾನುಭವದ ಸಮಯದಲ್ಲಿ ಗುಣಸ್ಥಾನಗಳ ಪರಿಪಾಟಿ ಅನುಸಾರವಾಗಿ ಯಾವ ಯಾವ ಘಾತಿಕರ್ಮ ಪ್ರಕೃತಿಗಳ ಬಂಧವು ಆಗುವುದೋ ಅವುಗಳಲ್ಲಿ ಸ್ಥಿತಿ ಮತ್ತು ಅನುಭಾಗಗಳು ಕಡಿಮೆ ಆಗುತ್ತವೆ. ಅಘಾತಿಕರ್ಮಗಳಲ್ಲಿ ಪುಣ್ಯಕರ್ಮಗಳ ಬಂಧಸ್ಥಿತಿಯು ಕಡಿಮೆ ಆಗುತ್ತದೆ ಮತ್ತು ಹೆಚ್ಚು ರಸಯುಕ್ತಗಳಾಗುತ್ತವೆ. ಆಗ ಆಸ್ರವವು ಹೀನವಾಗಿ, ನಿರ್ಜರೆ ಹೆಚ್ಚಾಗಿ ಮೋಕ್ಷಮಾರ್ಗದ ಸಾಧನವಾಗುತ್ತದೆ.

ಸಮ್ಯಗ್ದೃಷ್ಟಿ ಆತ್ಮಸನ್ಮುಖನಾದರೇನೇ ಸತ್ಯವಾದ ಸುಖವನ್ನು ಅನುಭವಿಸುತ್ತಾನೆ. ಆತ್ಮಧ್ಯಾನವೇ ಮೋಕ್ಷಮಾರ್ಗವಾಗಿರುತ್ತದೆ. ಆ ಧ್ಯಾನಿಯೇ ಗುಣಸ್ಥಾನಗಳನ್ನು ಆರೋಹಣೆಮಾಡುತ್ತಾನೆ. ಆದುದರಿಂದ ಮುಮುಕ್ಷುವು ಆತ್ಮಧ್ಯಾನಗೈಯ್ಯುವುದು ಅತ್ಯಾವಶ್ಯಕವಾಗಿರುತ್ತದೆ. ಈ ಆತ್ಮಧ್ಯಾನ ನಿರ್ವಿಕಲ್ಪಕ ಧ್ಯಾನವೆಂದೂ ಸವಿಕಲ್ಪಕ ಧ್ಯಾನವೆಂದೂ ಎರಡುವಿಧವಾಗಿರುತ್ತದೆ. ನಿರ್ವಿಕಲ್ಪಕ ಆತ್ಮಧ್ಯಾನದಿಂದ ನಿರ್ವಿಕಲ್ಪ ಆತ್ಮಧ್ಯಾನವಾಗುತ್ತದೆ. ಇದೇ ಸಾಕ್ಷಾತ್ ಮೋಕ್ಷೋಪಾಯ. ಸವಿಕಲ್ಪಕಧ್ಯಾನ ಅನೇಕ ಪ್ರಕಾರವಾಗಿರುತ್ತದೆ. ನಿಶ್ಚಯನಯದಿಂದ ತನ್ನಾತ್ಮೀಕ ತತ್ವ ವಿಚಾರವೇ ಸಮೀಪ ಸಾಧನೆಯಾಗಿರುತ್ತದೆ. ಆತ್ಮಗುಣಗಳ ಭಾವನೆಯನ್ನು ಭಾವಿಸುತ್ತಾ ಭಾವಿಸುತ್ತಾ ಇದ್ದರೆ ಆತ್ಮಸ್ಥಿರತೆಯುಂಟಾಗುತ್ತದೆ. ನಿಶ್ಚಯನಯದಿಂದ ತನ್ನಾತ್ಮನನ್ನೇ ಪರಿಶುದ್ಧನೆಂದೂ ಮತ್ತು ಜಗತ್ತಿನ ಆತ್ಮರುಗಳನ್ನು ಕೂಡಾ ಪರಿಶುದ್ಧವೆಂದೇ ನೋಡಬೇಕು. ಉಳಿದ ಐದು ದ್ರವ್ಯಗಳ ಮೂಲ ಸ್ವಭಾವವನ್ನೂ ತಿಳಿಯಬೇಕು. ಈ ವಿಚಾರದ ದೀರ್ಘ ಅಭ್ಯಾಸದಿಂದ ರಾಗದ್ವೇಷಗಳು ನಿಲ್ಲಲಾರವು ಮತ್ತು ದ್ವೇಷಭಾವನ ಪ್ರಮಾಣವು ಕ್ಷೀಣವಾಗುತ್ತಾ ಹೋಗುವುದು.

ವ್ಯವಹಾರನಯದ ದೃಷ್ಟಿಯಿಂದ ನೋಡುವುದಾದರೆ ಪೂಜಕ, ಪೂಜ್ಯ ಇದರಿಂದ ಬಂಧಮೋಕ್ಷದ ಕಲ್ಪನೆಯುಂಟಾಗುತ್ತದೆ. ನಿಶ್ಚಯನಯದಿಂದ ಸ್ವತಃ ಪೂಜ್ಯನೂ ಮತ್ತು ಪೂಜಕನೂ ಆದ್ದರಿಂದ ಬಂಧ ಮೋಕ್ಷಗಳ ವಿಕಲ್ಪ ಇರುವುದಿಲ್ಲ. ಈ ಶುದ್ಧ ನಿಶ್ಚಯನಯ ತ್ರಿಕಾಲ ಶುದ್ಧಾತ್ಮದ ದರ್ಶನ

ಮಾಡಿಸುತ್ತದೆ. ನಿಶ್ಚಯನಯದ ವಿಚಾರವೂ ಕೂಡ ಸವಿಕಲ್ಪ ಧ್ಯಾನವೇ ಆಗಿರುತ್ತದೆ. ಸಾಧಕನ ನಿರ್ಬಲತೆಯಿಂದ ಸಾಧುಗಳ ಅಥವಾ ಗೃಹಸ್ಥರ ಉಪಯೋಗ ನಿಶ್ಚಯನಯದ ವಿಚಾರದಲ್ಲಿ ಸ್ಥಿರವಾಗದಿದ್ದರೆ ಮತ್ತೆ ವ್ಯವಹಾರನಯದಿಂದ, ಪದಸ್ಥ, ಪಿಂಡಸ್ಥ, ರೂಪಸ್ಥ ಧ್ಯಾನಗಳ ಮೂಲಕವೋ ಪಂಚಪರಮೇಷ್ಠಿಗಳ ಸ್ವರೂಪ ಮನನ ಮೂಲಕವೋ ಊಂ, ಅರ್ಹಂ, ಹ್ರೀಂ, ಶ್ರೀಂ ಮಂತ್ರದ ಮೂಲಕ ಧ್ಯಾನಿಸತಕ್ಕದ್ದು.

ಒಂದುವೇಳೆ ಇದರಲ್ಲಿಯೂ ಕೂಡ ಉಪಯೋಗಗಳು ಸ್ಥಿರವಾಗಲಿಲ್ಲವಾದರೆ ಅಧ್ಯಾತ್ಮಿಕ ಗ್ರಂಥಗಳನ್ನು ಓದಬೇಕು; ಸ್ತುತಿಗೈಯಬೇಕು; ಭಕ್ತಿ ಅಥವಾ ವಂದನೆ ಗೈಯಬೇಕು; ಉಪದೇಶಮಾಡಬೇಕು ; ಗ್ರಂಥಗಳನ್ನು ಬರೆಯಬೇಕು; ಸಾಧುಸತ್ಪುರುಷರ ಸೇವೆ, ಶುಶ್ರೂಷೆಮಾಡಬೇಕು; ಅಶುಭ ಭಾವಗಳಿಂದ ರಕ್ಷಿಸಿಕೊಳ್ಳಲು ಶುಭಭಾವಗಳಲ್ಲಿ ವರ್ತಿಸಬೇಕು. ಹಾಗೆ ವ್ಯವಹಾರ ಧರ್ಮಗಳ ಭೇದಗಳ ಸಾಧನಗಳೆಲ್ಲಾ ಸವಿಕಲ್ಪ ಧರ್ಮಧ್ಯಾನವಾಗಿರುತ್ತದೆ. ಗೃಹಸ್ಥನ ಮನಸ್ಸು ನಿಶ್ಚಯನಯದ ವಿಚಾರದಲ್ಲಿ ಮಗ್ನವಾಗದಿದ್ದರೆ, ಅವನು ದೇವಪೂಜಾದಿ ಷಟ್‌ಕರ್ಮಗಳನ್ನು ಸಾಧಿಸಬೇಕು. ನಿಷ್ಕಾಮ ಭಾವದಿಂದ ಲೋಕಸೇವೆಯನ್ನು, ತೀರ್ಥಯಾತ್ರೆಗಳನ್ನು ಮಾಡುತ್ತಾ ಎಲ್ಲಾ ಪ್ರಕಾರದ ವ್ಯವಹಾರ ಧರ್ಮಗಳನ್ನು ಮಾಡುತ್ತಾ ಅಶುಭ ಭಾವನೆಗಳಿಂದ ಉಪಯೋಗಗಳನ್ನು ರಕ್ಷಣೆ ಪಡಿಸುತ್ತಾ ಶುದ್ಧಭಾವನೆಗಳನ್ನು ಬೆಳೆಸಿಕೊಳ್ಳುವುದರಲ್ಲಿ ಪ್ರಯತ್ನಶೀಲನಾಗಬೇಕು.

ನಿಶ್ಚಯ ಮತ್ತು ವ್ಯವಹಾರ ಧರ್ಮಗಳೆಂಬ ಹಗ್ಗಗಳೆರಡನ್ನು ಕೈಯ್ಯಲ್ಲಿಟ್ಟುಕೊಂಡೇ ಸಾಧಿಸಬೇಕು. ನಿಶ್ಚಯಧರ್ಮವನ್ನು ಉಪಾದಾನ ಸಾಧನವಾಗಿಯೂ ವ್ಯವಹಾರಧರ್ಮವನ್ನು ನಿಮಿತ್ತಸಾಧನವಾಗಿಯೂ ತಿಳಿದಿರಬೇಕು. ಮುಖ್ಯವಾಗಿ ನಿರ್ವಾಣಪದವಿಯನ್ನೇ ಲಕ್ಷ್ಯವಾಗಿಟ್ಟುಕೊಂಡು ಸಕಲಸುಖಗಳನ್ನು ಭೋಗಿಸುವವನಾಗಿ, ಆತ್ಮಾನುಭವದ ಅಭ್ಯಾಸವನ್ನು ಮಾಡಿಕೊಳ್ಳುವ ಸಾಧಕನು ಶೀಘ್ರವೇ ಮೋಕ್ಷಲಾಭಮಾಡಿಕೊಳ್ಳುತ್ತಾನೆ.

ಸಮಯಸಾರಕಲಶದಲ್ಲಿ ಹೇಳಿರುತ್ತಾರೆ:

ಅತ್ಯಂತಂ ಭಾವಯಿತ್ವಾ ವಿರತಮವಿರತಂ ಕರ್ಮಣಸ್ತತ್ಫಲಾಚ್ಚ।
ಪ್ರಸ್ಪಷ್ಟಂ ನಾಟಯಿತ್ವಾ ಪ್ರಲಯನಭಖಿಲಾಜ್ಞಾನಸಂಚೇತನಾಯಾಃ॥

ಪೂರ್ಣಂ ಕೃತ್ವಾ ಸ್ವಭಾವಂ ಸ್ವರಸಪರಿಗತಂ ಜ್ಞಾನಸಂಚೇತನಾಂ
ಸ್ವಾಂ।
ಸಾನಂದಂ ನಾಟಯಂತಃ ಪ್ರಶಮರಸಮಿತಃ ಸರ್ವಕಾಲಂ ಪಿಬಂತು
॥೪೦-೧೦॥

ಭಾವಾರ್ಥ: ಕರ್ಮವನ್ನೇ ಮಾಡುತ್ತಿರುವ ಪ್ರಪಂಚದಿಂದಲೂ ಮತ್ತು ಕರ್ಮಫಲದಿಂದಲೂ ನಿರಂತರ ವಿರಕ್ತಭಾವನೆಯನ್ನು ಭಾವಿಸಬೇಕು. ಎಲ್ಲಾ ಪ್ರಕಾರದ ಅಜ್ಞಾನ ಚೇತನೆಯನ್ನು ನಾಶಗೊಳಿಸಬೇಕು. ತನ್ನಾತ್ಮೀಕ ಪದದಿಂದ ತನ್ನ ಸ್ವಭಾವವನ್ನು ತಿಳಿದು, ಜ್ಞಾನಚೇತನೆಯನ್ನೋ ಆತ್ಮಾನುಭೂತಿಯನ್ನೋ ಆನಂದ ಮನಸ್ಕನಾಗಿ ಆನಂದಿಸುತ್ತಾ ಸರ್ವಕಾಲ ಶಾಂತ ರಸವನ್ನು ಪಾನಮಾಡುತ್ತಿರಬೇಕು. ಇದೇ ಜ್ಞಾನಿಯ ಪ್ರೇರಣೆಯಾಗಿರುತ್ತದೆ.



## ಆತ್ಮನನ್ನು ಪುರುಷಾಕಾರನೆಂದು ಧ್ಯಾನಿಸು

ಪುರಿಸಾಯಾರ-ಪಮಾಣು ಜಿಯ ಅಪ್ಪಾ ಏಹು ಪವಿತ್ತು।
ಜೋಇಜ್ಜ ಇ ಗುಣ-ಗಣ-ಣಿಲಉ ಣಿಮ್ಮಲ-ತೇಯ-ಫುರಂತು ॥೯೪॥

ಅನ್ವಯಾರ್ಥ: ಜಿಯ-ಎಲೈ ಜೀವನೇ! ಏಹು ಅಪ್ಪಾ ಪುರಿಸಾಯಾರ-ಪಮಾಣು ಪವಿತ್ತು ಗುಣ-ಗಣ-ಣಿಲವು ಣಿಮ್ಮಲ-ತೇಯ-ಫುರಂತು ಜೋಇಜ್ಜ ಇ–ಈ ತನ್ನಾತ್ಮನನ್ನು ಪುರುಷಾಕಾರಪ್ರಮಾಣನೆಂದೂ ಪವಿತ್ರನೆಂದೂ ಗುಣನಿಧಿಯೆಂದೂ ಮತ್ತು ನಿರ್ಮಲ ತೇಜಃಪುಂಜನೆಂದೂ ನೋಡಬೇಕು.

ಭಾವಾರ್ಥ: ಆತ್ಮಭಾವನೆಯನ್ನು ಮಾಡಿಕೊಳ್ಳಲುಪದೇಶಮೀಯುತ್ತಾರೆ. ಏನೆಂದರೆ: ಆತ್ಮನು ಪುರುಷಾಕಾರ ಪ್ರಮಾಣನೂ ಶರೀರವ್ಯಾಪಕನೂ ಆಗಿರುತ್ತಾನೆ. ಯದಿ ಪದ್ಮಾಸನದಲ್ಲಿ ಕುಳಿತುಕೊಂಡಾಗ ಪದ್ಮಾಸನ ಆಕಾರನೆಂದೂ ಕಾಯೋತ್ಸರ್ಗ ಆಸನದಲ್ಲಿರುವಾಗ ಆತ್ಮನನ್ನು ಕಾಯೋತ್ಸರ್ಗ ಆಕಾರನೆಂದೂ ವಿಚಾರಿಸತಕ್ಕದ್ದು. ಯದ್ಯಪಿ ಅತ್ಮನು ಅಸಂಖ್ಯಾತ

ಪ್ರದೇಶಿಯಾಗಿದ್ದರೂ ಯಾವ ಶರೀರದಲ್ಲಿರುವನೋ ಅದೇ ಶರೀರಪ್ರಮಾಣ ನಿರುತ್ತಾನೆ. ಉದಾ: ದೀಪದ ಪ್ರಕಾಶವು ಯಾವ ಪಾತ್ರೆಯಲ್ಲಿರುವುದೋ ಆ ಪಾತ್ರೆಯ ಆಕಾರದಷ್ಟೇ ಪ್ರ ಕಾ ಶ ವು ವ್ಯಾಪಕವಾಗಿರುತ್ತದೆ. ಈ ಆಕಾರಧಾರೀ ಆತ್ಮನು ಪವಿತ್ರನಾಗಿಯೂ ನಿರ್ಮಲವಾದ ನೀರಿನಂತೆ ಮತ್ತು ಶುದ್ಧ ಸ್ಫಟಿಕದಂತೆ ಪರಿಶುದ್ಧನೂ ಆಗಿರುವನು. ಇದರಲ್ಲಿ ಕರ್ಮಗಳ ಬಂಧ ವಾಗಲಿ, ರಾಗಾದಿ ವಿಕಾರಗಳಾಗಲಿ ಅಥವಾ ಅನ್ಯಸಂಬಂಧವಾದ ದೋಷ ಗಳಾಗಲಿ ಇರುವುದಿಲ್ಲ. ದ್ರವ್ಯಾರ್ಥಿಕ ನಯದಿಂದ ಆತ್ಮನನ್ನು ಸದಾ ನಿರಾ ವರಣನೆಂದು ವಿಚಾರಿಸತಕ್ಕದ್ದು. ಇದು ಎಂದೂ ಕಟ್ಟಲ್ಪಟ್ಟಿಲ್ಲ, ಕಟ್ಟಿಲ್ಲ ಎಂದೂ ಕಟ್ಟುವುದಿಲ್ಲ. ಏನೆಂದರೆ: ಆತ್ಮನು ಸಾಮಾನ್ಯ ಮತ್ತು ವಿಶೇಷ ಗುಣಗಳ ಸಮೂಹನೂ ತಿಳಿದವನೂ ನೋಡುವವನೂ (ಜ್ಞಾತಾದೃಷ್ಟಾ) ವೀ ತ ರಾ ಗ ನೂ ಪರಮಾನಂದಮಯನೂ ಪರಮವೀರ್ಯಶಾಲಿಯೂ ಶುದ್ಧ ಸಮ್ಯಕ್ತ್ವಗುಣಧಾರಿಯೂ ಪರಿಶುದ್ಧ ತೇಜಃಪುಂಜನೂ ಆಗಿರು ತ್ತಾನೆ. ಹೀಗೆ ತನ್ನ ಶರೀರದಲ್ಲಿ ವ್ಯಾಪಕನಾದ ಆತ್ಮನನ್ನು ಆಗಾಗ ವಿಚಾ ರಿಸುತ್ತಾ ಮನಸನ್ನು ಸ್ಥಿರಗೊಳಿಸತಕ್ಕದ್ದು. ಇವೇ ಧ್ಯಾನದ ಪ್ರಕಾರಗಳಾ ಗಿವೆ. ಧ್ಯಾತಾ (ಧ್ಯಾನಿಸುವವನು) ಸದಾ ಪರಮನಿಶ್ಚಿಂತನಾಗಬೇಕು. ಶ್ರೇಷ್ಠ ಧ್ಯಾನಿಯೇ ನಿರ್ಗ್ರಂಥಸಾಧುವಾಗತ್ತಾನೆ. ಪರಿಗ್ರಹ ಅಧಿಕಾರಿಯಾಗು ವುದರಿಂದ ಧ್ಯಾನಾವಸ್ಥೆಯಲ್ಲಿ ಅನೇಕ ಚಿಂತೆಗಳುದಯಿಸಿ ಬಾಧೆಯನ್ನುಂಟು ಮಾಡುತ್ತವೆ. ಆದ್ದರಿಂದ ಸಾಧುಗಣವು ಸಕಲಪರಿಗ್ರಹಗಳನ್ನು ತ್ಯಜಿಸಿ, ಧನ ಕುಟುಂಬ ಕ್ಷೇತ್ರಾದಿಗಳ ರಕ್ಷಣೆಯ ಸಂಬಂಧಗಳಾದ ವಿಕಲ್ಪಗಳಿಂದ ರಹಿತರಾಗುತ್ತಾರೆ. ದೇಶವ್ರತೀ (ಅಣುವ್ರತಿ) ಯು ಮಧ್ಯಮ ಧ್ಯಾತೃವೂ, ಅವಿರತ ಸಮ್ಯಕ್ತ್ವಿಯು ಜಘನ್ಯ ಧ್ಯಾತೃವೂ ಎಂದು ತಿಳಿಯಬೇಕು. ಅತಃ ಧ್ಯಾತೃವಿಗೆ ಸಮ್ಯಗ್ಜ್ಞಾನ ಅತ್ಯಾವಶ್ಯಕವಾಗಿರುತ್ತದೆ. ಯಾಕೆಂದರೆ: ಎಷ್ಟ ರವರೆಗೆ ತನ್ನಾತ್ಮನ ಶುದ್ಧ ಸ್ವಭಾವದ ಶ್ರದ್ಧಾನವಾಗಲಾರದೋ ಅಷ್ಟರವರೆಗೆ ಆತನಿಗೆ ಆತ್ಮನಲ್ಲಿ ಪ್ರೇಮವುದ್ಭವಿಸಲಾರದು. ಪ್ರೇಮವಿಲ್ಲದೆ ಅದರಲ್ಲಿ ಆಸಕ್ತಿಯಾಗಲಿ, ಸ್ಥಿರತೆಯಾಗಲಿ ಉಂಟಾಗಲಾರದು. ಧ್ಯಾತೃವಿಗೆ 'ತಾನು ಪರಮಾತ್ಮಸ್ವರೂಪನಾಗಿರುತ್ತೇನೆಂಬ ತಿಳಿವಳಿಕೆ, ಜಗತ್ತಿನ ಈ ಚಕ್ರವರ್ತಿ ಮೊದಲಾದ ಪದವಿಗಳಲ್ಲಿ ಯಾವರಾಗಭಾವವೂ ಇಲ್ಲದಿರುವುದು ಮತ್ತು

ಕೇವಲ ನಿರ್ವಾಣವೇ ಲಕ್ಷ್ಯವಾಗಿರುವುದು" ಈ ಶ್ರದ್ಧಾನವು ಅವಶ್ಯವಾಗಿರ ಬೇಕು.

ಧ್ಯಾನಿಯು ಮಾಯಾ, ಮಿಥ್ಯಾ, ನಿದಾನಗಳೆಂಬ ಶಲ್ಯತ್ರಯಗಳಿಂದ ರಹಿತನೂ ಸಕಲ ಶಂಕಾಕಾಂಕ್ಷೆಗಳಿಲ್ಲದವನೂ ಪರಮ ನಿಸ್ಪೃಹನೂ ಸರ್ವ ತೃಷ್ಣೆಗಳು ಇಲ್ಲದವನೂ ಆಗಿರಬೇಕು. ಧ್ಯಾನದ ಸಮಯದಲ್ಲಿ ಸಮ್ಯಗ್ಜ್ಞಾನದಿಂದ ಕೂಡಿದ ವೈರಾಗ್ಯಮೂರ್ತಿಯಾಗಿರಬೇಕು. ಹಾಗೆ ಧ್ಯಾನಿಯು ಧ್ಯಾನವನ್ನು ಮಾಡುವಾಗ ಉಪದ್ರವವಿಲ್ಲದಿರುವ ಸ್ಥಾನದಲ್ಲಿ ಕ್ಷೋಭವಿಲ್ಲದೆ ಕುಳಿತುಕೊಳ್ಳಬೇಕು. ಸ್ಥಾನವು ಎಷ್ಟು ನಿರ್ಜನವಾಗಿರುವುದೋ ಅಷ್ಟು ಧ್ಯಾನವು ಸಿದ್ಧಿಸುವುದು. ಸ್ತ್ರೀಯರು, ಪುರುಷರು ಮತ್ತು ನಪುಂಸಕರೇ ಮೊದಲಾದವರ ಸಂಪರ್ಕವಿಲ್ಲದುದೂ, ಶೀತೋಷ್ಣ, ಸೊಳ್ಳೆ, ನೊಣ ಮೊದಲಾದವುಗಳ ಬಾಧೆಇಲ್ಲದಿರುವುದೂ, ಪರಮಶಾಂತವೂ ಆದ ಸ್ಥಳವನ್ನು ಧ್ಯಾನಕ್ಕಾಗಿ ಆರಿಸುವುದು ಅತ್ಯಾವಶ್ಯಕವಾಗಿದೆ. ಧ್ಯಾನಕ್ಕೆ ಪ್ರಾತಃಕಾಲ ಸರ್ವಶ್ರೇಷ್ಠವೆಂದೂ, ಸಾಯಂಕಾಲ ಮಧ್ಯವೆಂದೂ, ಮಧ್ಯಾಹ್ನಕಾಲವು ಜಘನ್ಯವೆಂದೂ ಪರಿಗಣಿಸಬೇಕು. ಶರೀರದ ಸ್ವಸ್ಥತೆ, ಮನ, ವಚನ, ಕಾಯಗಳ ಶುದ್ಧತೆ, ಅನ್ಯಚಿಂತನೆಗಳನ್ನು ಭಾವಿಸದೆ ಆತ್ಮಚಿಂತನೆ ಇವುಗಳಿಂದ ಭೂಮಿಯಲ್ಲಾಗಲಿ, ಶಿಲೆಯಲ್ಲಾಗಲಿ, ಮರದ ಆಸನಗಳಲ್ಲಾಗಲಿ, ಚಾಪೆ ಮೊದಲಾದವುಗಳಲ್ಲಾಗಲಿ ಅಥವಾ ಸಮತಲವಾದ ಸ್ಥಾನದಲ್ಲಾಗಲಿ ಧ್ಯಾನವನ್ನು ಮಾಡತಕ್ಕದ್ದು. ಎಷ್ಟರವರೆಗೆ ಧ್ಯಾನಿಸಬೇಕೋ ಅಷ್ಟರವರೆಗೆ ಅನ್ಯಕಾರ್ಯಗಳ ವಿಚಾರವುಂಟಾದಂತೆ ನಗ್ನನಾಗಿ ಮತ್ತು ಮೌನವಾಗಿ ಮಂತ್ರಗಳನ್ನು ಜಪಿಸಬೇಕು. ಆಗ ಯಾವತರಹ ಮಾತುಗಳನ್ನಾಡಬಾರದು. ಶ್ರಾವಕನಾದರೆ ಯಥಾಸಾಧ್ಯವಸ್ತ್ರವುಳ್ಳವನಾಗಿ, ನಿರೋಗಿಯಾಗಿ, ಹಸಿವೆಬಾಯಾರಿಕೆಯಿಂದ ಪೀಡಿತನಾಗದಂತೆ ಹೊಟ್ಟೆ ತುಂಬ ಭೋಜನಮಾಡಿದವನಾಗಿ ಆಸನದಲ್ಲಿ ಕುಳಿತುಕೊಳ್ಳಬೇಕು. ಹೀಗೆ ಧ್ಯಾನಿಯು ಕುಳಿತುಕೊಂಡು ಸ್ವಲ್ಪ ಸಮಯದವರೆಗೆ ಹನ್ನೆರಡು ಭಾವನೆಗಳನ್ನು ಭಾವಿಸುತ್ತಾ, ಮನಸ್ಸನ್ನು ವೈರಾಗ್ಯ ಉಳ್ಳದ್ದಾಗಿ ಮಾಡಿಕೊಳ್ಳಬೇಕು ಮತ್ತು ನಿಶ್ಚಯನಯದಿಂದ ಜಗತ್ತನ್ನು ನೋಡಿ, ರಾಗದ್ವೇಷಗಳನ್ನು ತ್ಯಜಿಸಬೇಕು. ಹಾಗೆಯೇ ತನ್ನಾತ್ಮನನ್ನು ನೋಡಬೇಕು. ಆಗ ಇವನು ನಿತ್ಯ ಶುದ್ಧ ಪರಮ ನಿರಂಜನ ಪರ

ಮಾತ್ಮನಾಗಿ ಶರೀರದಲ್ಲಿ ವ್ಯಾಪಕನಾಗಿ ಪರಮ ನಿರ್ಮಲನಾಗುತ್ತಾನೆ. ಮನಸ್ಸು ನೀರಿನಂತೆಯೂ, ಸ್ಫಟಿಕ ಮಣಿಯಂತೆಯೂ ಇರುತ್ತದೆಂದು ವಿಚಾರಿಸುತ್ತಾ ಧ್ಯಾನಿಸತಕ್ಕದ್ದು ಮತ್ತು ಅದರ ಸ್ಥಿರತೆಗಾಗಿ ಒಂದೊಂದು ಸಲ ಯಾವುದಾದರೊಂದು ಮಂತ್ರವನ್ನು ಜಪಿಸುತ್ತಾ ಅದರ ಅರ್ಥವನ್ನು ವಿಚಾರಿಸತಕ್ಕದ್ದು.

ತತ್ವಾನುಶಾಸನದಲ್ಲಿ ಹೇಳಿರುತ್ತಾರೆ :

**ಮಾಧ್ಯಸ್ಥ್ಯಂ ಸಮತೋಪೇಕ್ಷಾ ವೈರಾಗ್ಯಂ ಸಾಮ್ಯಮಸ್ಪೃಹಃ ।**
**ವೈತೃಷ್ಣ್ಯಂ ಪರಮಃ ಶಾಂತಿರಿತ್ಯೇಕೋಽರ್ಥೋಽಭಿಧೀಯತೇ॥೧೩೯॥**
**ಧಿಧಾಸುಃ ಸ್ವಂ ಪರಂ ಜ್ಞಾತ್ವಾ ಶ್ರದ್ಧಾಯ ಚ ಯಥಾಸ್ಥಿತಿಂ।**
**ವಿಹಾಯಾನ್ಯದನರ್ಥಿತ್ವಾತ್ ಸ್ವಮೇವಾವೈತು ಪಶ್ಯತು ॥೧೪೩॥**

**ಭಾವಾರ್ಥ :** ಧ್ಯಾನಿಯು ಮಾಧ್ಯಸ್ಥಭಾವ, ಸಮತಾ, ಉಪೇಕ್ಷಾ ವೈರಾಗ್ಯ, ನಿಸ್ಪೃಹತಾ, ಅತೃಷ್ಣೆ, ಪರಮಶಾಂತಭಾವನೆ ಮೊದಲಾದವುಗಳಲ್ಲಿ ತನ್ಮಯನಾಗಬೇಕು. ಇವುಗಳ ಮುಖ್ಯಾರ್ಥವು ಒಂದೇ ಆಗಿರುತ್ತದೆ. ಹಾಗೆಯೇ ಆತ್ಮನ ಮತ್ತು ಪರವಸ್ತುಗಳ ಜ್ಞಾನದಲ್ಲಿ ನಂಬಿಕೆಯನ್ನಿಟ್ಟು ವಸ್ತುಸ್ವರೂಪವಿದ್ದಂತೆ ತಿಳಿಯಬೇಕು ಮತ್ತು ನಿಷ್ಪ್ರಯೋಜನವಾದುದನ್ನು ತಿಳಿದು ಬಿಟ್ಟು, ಕೇವಲ ತನ್ನಾತ್ಮನನ್ನೇ ನೋಡಬೇಕು ಮತ್ತು ತಿಳಿಯಬೇಕು.

## ಸಕಲ ಶಾಸ್ತ್ರವನ್ನರಿತವನೇ ಆತ್ಮಜ್ಞಾನಿಯು

**ಜೋ ಅಪ್ಪಾ ಸದ್ಧು ವಿ ಮುಣಇ ಅಸುಇ-ಸರೀರ-ವಿಭಿನ್ನು ।**
**ಸೋ ಜಾಣಇ ಸತ್ಥಇಂ ಸಯಲ ಸಾಸಯ-ಸುಕ್ಖಹಂ ಲೀಣು ॥೯೫॥**

**ಅನ್ವಯಾರ್ಥ :** ಜೋ ಅಸುಇ-ಸರೀರ-ವಿಭಿನ್ನು-ಯಾವನು ಈ ಅಪವಿತ್ರ ಶರೀರದಿಂದ ಭಿನ್ನನೋ, ಸಾಸಯ-ಸುಕ್ಖಹಂ ಲೀಣು-ಶಾಶ್ವತವಾದ ಸುಖದಲ್ಲಿ ತನ್ಮಯನೋ, ಸುದ್ಧು ವಿ ಅಪ್ಪಾ ಮುಣಇ-ಮತ್ತು ಶುದ್ಧಾತ್ಮನ ಅನುಭವವನ್ನು ಮಾಡಿಕೊಳ್ಳುವನೋ, ಸೋ ಸಯಲ ಸತ್ಥಹಂ ಜಾಣಇ-ಅವನು ಸಕಲ ಶಾಸ್ತ್ರಗಳನ್ನು ತಿಳಿದವನಾಗಿರುತ್ತಾನೆ.

**ಭಾವಾರ್ಥ** : ಆತ್ಮನ ಯಥಾರ್ಥ ಪರಿಚಯವನ್ನು ಮಾಡಿಕೊಂಡು ಅದರ ಅಭಿರುಚಿಯಿಂದ ಆತ್ಮ ಸ್ವಾದವುಂಟಾದಾಗಲೇ ಶಾಸ್ತ್ರ ಜ್ಞಾನದ ಸಾಫಲ್ಯವಾಗುತ್ತದೆ. ಯಾಕೆಂದರೆ : ಶುದ್ಧಾತ್ಮನ ಅನುಭವವೇ ಮೋಕ್ಷಮಾರ್ಗವಾಗಿದೆ ಮತ್ತು ಶುದ್ಧಸ್ವರೂಪದ ಭಾವನೆಯಿಂದಲೇ ಆತ್ಮನು ಶುದ್ಧನಾಗುತ್ತಾ ಪರಮಾತ್ಮನಾಗುತ್ತಾನೆ. "ಜಿನವಾಣಿಯ ಅಭ್ಯಾಸವು ತನ್ನಾತ್ಮನ ಜ್ಞಾನಕ್ಕಾಗಿಯೇ ಇರುವುದು" ಎಂಬ ವಿಚಾರವು ಇರಬೇಕು.

ಈಗ ಈ ಆತ್ಮನು ಕರ್ಮ ಸಂಯೋಗದಿಂದ ಮಲಿನವಾಗಿ ತೋರುತ್ತಿದ್ದಾನೆ. ಇದು ಪ್ರವಾಹ ರೂಪವಾಗಿ ಅನಾದಿಯಾಗಿರುತ್ತದೆ. ಮಲಿನವಾದ ನೀರನ್ನು ಎರಡು ದೃಷ್ಟಿಯಿಂದ ವಿಚಾರಿಸುವುದು ಯೋಗ್ಯವಾಗಿರುತ್ತದೆ. ವ್ಯವಹಾರ ದೃಷ್ಟಿಯಿಂದ ನೀರು ಮಲಿನವಾಗಿರುತ್ತದೆ. ಕಾರಣವೇನೆಂದರೆ : ಮಣ್ಣು ಕೆಸರು ಸೇರಿರುವುದರಿಂದ ಅದರ ಮಲಿನತೆಯು ನೀರಿನ ನಿರ್ಮಲತೆಯನ್ನು ಮರೆಮಾಡಿರುತ್ತದೆ. ನಿಶ್ಚಯನಯದಿಂದ ವಿಚಾರಿಸುವುದಾದರೆ ಮಣ್ಣು ಭಿನ್ನವೇ ಆಗಿರುತ್ತದೆ. ನೀರೂ ಕೂಡ ಭಿನ್ನವೇ ಆಗಿರುತ್ತದೆ. ಆಗ ಆ ನೀರು ಸ್ವಾಭಾವಿಕವಾಗಿ ನಿರ್ಮಲವಾಗಿಯೇ ತೋರುತ್ತದೆ. ಅದರಂತೆ ಈ ಆತ್ಮನು ಕರ್ಮ ಪುದ್ಗಲಗಳ ಸಂಯೋಗದಿಂದ ವ್ಯವಹಾರ ನಯದಿಂದ ಅಶುದ್ಧವೆಂದು ಭಾಸವಾಗುತ್ತದೆ. ಆ ಕರ್ಮಗಳು ಆತ್ಮನ ಶುದ್ಧಸ್ವಭಾವವನ್ನು ಮರೆಮಾಡಿರುತ್ತವೆ.

ಶುದ್ಧ ನಿಶ್ಚಯನಯದಿಂದ ಈ ಆತ್ಮನು ಅಪವಿತ್ರವಾದ ಔದಾರಿಕ ಶರೀರದಿಂದ ತೈಜಸ-ಕಾರ್ಮಣ ಶರೀರದಿಂದ ಮತ್ತು ರಾಗಾದಿ ವಿಕಾರ ಭಾವಗಳಿಂದ ಭಿನ್ನನೂ ಪರಮಾನಂದಮಯನೂ ಪರಮಶುದ್ಧ ಜ್ಞಾತಾದೃಷ್ಟನೂ ಆದ ಪರಮಾತ್ಮರೂಪವೆಂದು ದೃಷ್ಟಿಗೋಚರವಾಗುತ್ತದೆ. ಇಂತಹ ವಿಚಾರವು ಧ್ಯಾತೃವಿಗೆ ಪರಮ ಸಹಾಯಕವಾಗಿರುತ್ತದೆ. ಆದುದರಿಂದ ಜಿನವಾಣಿಯಲ್ಲಿ ಎರಡು ನಯಗಳ ಮುಖ್ಯತೆಯಿಂದ ಆತ್ಮಸ್ವರೂಪವನ್ನು ಬೋಧಿಸುವ ಗ್ರಂಥಗಳ ಅಭ್ಯಾಸವನ್ನು ಅವಶ್ಯವಾಗಿ ಮಾಡತಕ್ಕದ್ದು. ಜೀವ, ಅಜೀವ, ಆಸ್ರವ, ಬಂಧ, ಸಂವರ, ನಿರ್ಜರೆ ಮತ್ತು ಮೋಕ್ಷಗಳೆಂಬ ಸಪ್ತತತ್ವಗಳನ್ನು ವ್ಯವಹಾರ ನಯದಿಂದ ತಿಳಿಯುವುದರಿಂದ ಆತ್ಮನ ಅಶುದ್ಧ ಸ್ವರೂಪವೂ ಮತ್ತು ಅಶುದ್ಧದಿಂದ ಪರಿಶುದ್ಧವಾಗುವ ಸಕಲ ಜ್ಞಾನವೂ ಉಂಟಾಗುತ್ತದೆ.

ದ್ರವ್ಯಸಂಗ್ರಹ, ಮೋಕ್ಷಶಾಸ್ತ್ರ ಈ ಎರಡು ಗ್ರಂಥಗಳು ಮಹಾ ಉಪಯೋಗಕಾರಕಗಳಾಗಿವೆ. ಇವುಗಳನ್ನು ಸೂಕ್ಷ್ಮವಾಗಿ ಅಭ್ಯಾಸಮಾಡಿ ಇವುಗಳ ಟೀಕಾ ಗ್ರಂಥಗಳಾದ ಬೃಹತ್ ದ್ರವ್ಯಸಂಗ್ರಹ, ಸರ್ವಾರ್ಥಸಿದ್ಧಿ, ರಾಜವಾರ್ತಿಕ, ಶ್ಲೋಕವಾರ್ತಿಕ, ತತ್ತ್ವರತ್ನಪ್ರದೀಪಿಕೆ ಮೊದಲಾದ ಗ್ರಂಥಗಳನ್ನು ನೋಡಬೇಕು. ಇನ್ನೂ ಹೆಚ್ಚು ಜ್ಞಾನಸಂಪಾದಿಸಬೇಕಾದರೆ ಗೋಮಟಸಾರ ಜೀವಕಾಂಡ, ಕರ್ಮಕಾಂಡಗಳೆರಡನ್ನು ಅಭ್ಯಾಸಿಸಿ, ಆಚಾರಶಾಸ್ತ್ರಗಳಾದ ಮುನಿಗಳ ಮತ್ತು ಶ್ರಾವಕರ ಬಾಹ್ಯಕ್ರಿಯೆಗಳನ್ನು ಪಾಲಿಸುವ, ವಿಧಿವಿಧಾನಗಳನ್ನು ವರ್ಣಿಸುವ ಮೂಲಾಚಾರ ಮತ್ತು ರತ್ನಕರಂಡಕ ಶ್ರಾವಕಾಚಾರಗಳನ್ನು ಮನನಗೈಯ್ಯಬೇಕು. ಹಾಗೆಯೇ ಮಹಾಪುರುಷರ ಜೀವನಚರಿತ್ರೆಗಳನ್ನೂ ಕೂಡ ಓದಿ, ಆ ಮಹಾತ್ಮರು ಮೋಕ್ಷವನ್ನು ಹೇಗೆ ಸಾಧಿಸಿದರೆಂದು ತಿಳಿಯಬೇಕು. ಕರ್ಮ ಸಾಪೇಕ್ಷ ಆತ್ಮನ ಅವಸ್ಥೆಗಳ ಸರಿಯಾದ ಜ್ಞಾನವನ್ನು ಮಾಡಿಕೊಳ್ಳಬೇಕು. ಮತ್ತೆ ನಿಶ್ಚಯನಯದ ಪ್ರಧಾನತೆಯಿಂದ ಆತ್ಮನನ್ನು ಜಯಿಸುವುದಕ್ಕಾಗಿ ಮಹಾತ್ಮರು ಮತ್ತು ಯೋಗಿವರ್ಯರಾದ ಶ್ರೀ ಕುಂದಕುಂದಾಚಾರ್ಯಕೃತ ಪಂಚಾಸ್ತಿಕಾಯ, ಪ್ರವಚನಸಾರ ಅಷ್ಟಪಾಹುಡ, ಸಮಯಸಾರ, ನಿಯಮಸಾರ ಮೊದಲಾದ ಅಧ್ಯಾತ್ಮಗ್ರಂಥಗಳನ್ನು ಚೆನ್ನಾಗಿ ಅಭ್ಯಾಸಮಾಡಬೇಕು ಮತ್ತು ಪರಮಾತ್ಮಪ್ರಕಾಶದ ಮನನಮಾಡಬೇಕು. ಇದರಿಂದ ಕನ್ನಡಿಯೋಪಾದಿಯಲ್ಲಿ ತನ್ನ ಶರೀರದಲ್ಲಿ ಪರಮಾತ್ಮದೇವನು ವಿರಾಜಮಾನನಾಗಿರುವನೆಂಬ ಭಾವನೆ ಬರುತ್ತದೆ.

ಶಾಸ್ತ್ರಜ್ಞಾನದ ಸಲುವಾಗಿ ವ್ಯಾಕರಣ ನ್ಯಾಯವನ್ನು ತಿಳಿಯುವುದು ಅತ್ಯಾವಶ್ಯಕವಾಗಿರುತ್ತದೆ. ಆಗ ಶಬ್ದಜ್ಞಾನ ಮತ್ತು ಯುಕ್ತಿಜ್ಞಾನ ಉತ್ತಮ ರೀತಿಯಿಂದಾಗುತ್ತದೆ. ಮಾತ್ರವಲ್ಲ ಅನ್ಯಮತ ದರ್ಶನಗಳನ್ನು ಜಿನದರ್ಶನದೊಡನೆ ತುಲನಾತ್ಮಕ ದೃಷ್ಟಿಯಿಂದ ತಿಳಿಯಲು ಸಾಧ್ಯವಾಗುತ್ತದೆ. ಯಾರು ಕೇವಲ ವ್ಯವಹಾರ ನಯದಿಂದಲೇ ಆತ್ಮನನ್ನು ತಿಳಿದು ನಿಶ್ಚಯ ನಯದಿಂದ ತಿಳಿಯದಿದ್ದರೆ ಅವನು ತನ್ನ ಶುದ್ಧ ತತ್ವದ ನಿಶ್ಚಯ ಮಾಡಿಕೊಳ್ಳುವುದಿಲ್ಲ ಅಥವಾ ವ್ಯವಹಾರ ನಯವನ್ನು ತಿಳಿಯದೆ ಕೇವಲ ನಿಶ್ಚಯನಯವನ್ನು ತಿಳಿಯುವುದರಿಂದ ಅವನು ಅಶುದ್ಧತೆಯನ್ನು ದೂರೀಕರಿಸುವ ಉಪಾಯವನ್ನು ಕಾಣಲು ಸಾಧ್ಯವಾಗುವುದಿಲ್ಲ.

ಈ ಎರಡು ನಯಗಳ ಪರಸ್ಪರ ವಿರೋಧವಿಲ್ಲದ ಜ್ಞಾನವುಂಟಾದೊಡನೆ ಭೇದವಿಜ್ಞಾನವುದ್ಭವಿಸುತ್ತದೆ. ಭೇದವಿಜ್ಞಾನದ ಅಭ್ಯಾಸವಿಲ್ಲದೆ ತತ್ವಜ್ಞಾನ ಪ್ರಾಪ್ತಿ ಆಗಲಾರದು. ತತ್ವಜ್ಞಾನವಿಲ್ಲದೆ ಆತ್ಮನ ಯಥಾರ್ಥ ಮನನವು ಮತ್ತು ಅನುಭವವು ಆಗಲಾರದು; ಸಮ್ಯಗ್ದರ್ಶನದ ಲಾಭ ಆಗುವುದಿಲ್ಲ. ಶಾಸ್ತ್ರಗಳನ್ನು ಓದಿ ವ್ಯವಹಾರಗಳಲ್ಲಿ ಮಗ್ನನಾಗಿಬಿಟ್ಟು, ಆತ್ಮೀಕ ಆನಂದದ ಸ್ವಾದದ ಅನುಭವವಾಗದಿದ್ದರೆ ಆತನ ಪರಿಶ್ರಮವು ಸಫಲವಾಗಲಾರದು. ಶಾಸ್ತ್ರಗಳನ್ನು ಓದುವುದು ಆತ್ಮನ ಯಥಾರ್ಥ ಜ್ಞಾನಕ್ಕೆ ಕಾರಣ (ಹೇತು) ವಾಗಿರುತ್ತದೆ.

ಪುರುಷಾರ್ಥ ಸಿಧ್ಯುಪಾಯದಲ್ಲಿ ಹೇಳಿರುತ್ತಾರೆ:

**ಅಬುಧಸ್ಯ ಬೋಧನಾರ್ಥಂ ಮುನೀಶ್ವರಾ ದೇಶಯಂತ್ಯ ಭೂತಾರ್ಥಂ**
**ವ್ಯವಹಾರನೇವ ಕೇವಲಮುವೈತಿ ಯಸ್ತಸ್ಯ ದೇಶನಾ ಸಾಸ್ತಿ ॥೬॥**
**ಮಾಣವಕ ಏವ ಸಿಂಹೋ ಯಥಾ ಭವತ್ಯನವಗೀತಸಿಂಹಸ್ಯ।**
**ವ್ಯವಹಾರ ಏವ ಹಿ ತಥಾ ನಿಶ್ಚಯತಾಂ ಯಾತ್ಯ ನಿಶ್ಚಯಜ್ಞಸ್ಯ ॥೭॥**

**ಭಾವಾರ್ಥ:** ಮಹಾತ್ಮರಾದ ಮುನಿವರ್ಯರು ಅಜ್ಞಾನಿಗಳ ಮತ್ತು ಅಸತ್ಯಾರ್ಥವನ್ನೋ ಅಥವಾ ಅಶುದ್ಧ ಪದಾರ್ಥಗಳನ್ನೋ ವರ್ಣಿಸುವವರ ತಿಳಿವಳಿಕೆಗಾಗಿ ವ್ಯವಹಾರನಯವನ್ನುಪದೇಶಿಸಿರುತ್ತಾರೆ. ಆದರೆ ಕೇವಲ ವ್ಯವಹಾರನಯದಿಂದ ವಸ್ತುಗಳನ್ನು ವಿಸ್ತಾರವಾಗಿ ತಿಳಿದು, ನಿಶ್ಚಯನಯದ ನಿಯಮಗಳನ್ನು ತಿಳಿಯದಿದ್ದರೆ, ಜಿನವಾಣಿಯ ನಿಜವಾದ ಜ್ಞಾನ ಆಗುವುದಿಲ್ಲವು. ಹೇಗೆಂದರೆ ಬಾಲಕನಿಗೆ ಮಾರ್ಜಾಲವನ್ನು (ಬೆಕ್ಕನ್ನು) ತೋರಿಸಿ ಹುಲಿಯನ್ನು ವರ್ಣಿಸಲಾಗುತ್ತದೆ. ಆದರೆ ಅವನಿಗೆ ಎಂದಾದರೂ ಹುಲಿಯನ್ನು ತೋರಿಸಿಕೊಡದಿದ್ದರೆ, ಆ ಬಾಲಕನು ಬೆಕ್ಕನ್ನೇ ಹುಲಿಯೆಂದು ತಿಳಿದುಕೊಳ್ಳುತ್ತಾನೆ. ಅದೇರೀತಿ ನಿಶ್ಚಯನಯದ ಜ್ಞಾನವಿಲ್ಲದವರಿಗೆ ನಿಶ್ಚಯನಯದ ತಿಳಿವಳಿಕೆ ಉಂಟುಮಾಡದಿದ್ದರೆ ಅವರು ವ್ಯವಹಾರನಯವನ್ನೇ ನಿಶ್ಚಯನಯವೆಂದೂ ಸತ್ಯವೆಂದೂ ಮತ್ತು ಮೂಲ ಪದಾರ್ಥವೆಂದೂ ತಿಳಿದುಕೊಳ್ಳುತ್ತಾರೆ.



## ಪರಭಾವದ ತ್ಯಾಗವೇ ಕಾರ್ಯಕಾರಿ

**ಜೋ ಣವಿ ಜಾಣಇ ಅಪ್ಪ ಪರು ಣವಿ ಪರಭಾಉ ಚಏಇ।**
**ಸೋ ಜಾಣಉ ಸತ್ಥಇಂ ಸಯಲ ಣ ಹು ಸಿವಸುಕ್ಖು ಲಹೇಇ ॥೯೬॥**

**ಅನ್ವಯಾರ್ಥ :** ಜೋ ಅಪ್ಪ ಪರು ಣವಿ ಜಾಣಇ–ಯಾವನು ಆತ್ಮನನ್ನು ಮತ್ತು ಪರಪದಾರ್ಥಗಳನ್ನು ತಿಳಿಯುವುದಿಲ್ಲವೋ, ಪರಭಾಉ ಣವಿ ಚಏಇ–ಮತ್ತು ಪರಭಾವಗಳನ್ನು ತ್ಯಜಿಸುವುದಿಲ್ಲವೋ, ಸೋ ಸಯಲ ಸತ್ಥ ಇಂ ಜಾಣಇ–ಅವನು ಸಕಲಶಾಸ್ತ್ರಗಳನ್ನರಿತವನಾಗಿದ್ದರೂ ಕೂಡ, ಸಿವ ಸುಕ್ಖು ಣ ಹು ಲಹೇಇ– ಮೋಕ್ಷಸುಖವನ್ನು ಪಡೆಯಲಾರನು.

**ಭಾವಾರ್ಥ :** ಅನೇಕ ಶಾಸ್ತ್ರಗಳನ್ನು ಓದುವುದರ ಫಲವು ಭೇದ ವಿಜ್ಞಾನದ ಪ್ರಾಪ್ತಿಯಾಗಿದೆ. ಅನಾದಿಕಾಲದಿಂದ ಆತ್ಮನ ಮತ್ತು ಸೂಕ್ಷ್ಮಕರ್ಮ ಪುದ್ಗಲಗಳ ಸಂಯೋಗ ಸಂಬಂಧವನ್ನು ಯಾವ ಸಮಯದಲ್ಲಿ ನೋಡಿದರೂ ಆತ್ಮನ ಒಂದೊಂದು ಪ್ರದೇಶದಲ್ಲಿ ತನ್ನ ಕರ್ಮಪುದ್ಗಲ ಕರ್ಮವರ್ಗಣೆಗಳು ಕಂಡುಬರುತ್ತವೆ ಮತ್ತು ಆ ಕರ್ಮಗಳ ಉದಯವು ಕೂಡ ಪ್ರತಿಯೊಂದು ಸಮಯದಲ್ಲೂ ರಾಗ, ದ್ವೇಷ, ಮೋಹಾದಿಗಳಿಂದ ಆದರ ಅನುಭೂತಿಯು ಮಲಿನವಾಗುತ್ತಿರುತ್ತದೆ. ಇವನಿಗೆ ಎಂದೆಂದಿಗೂ ಶುದ್ಧಾತ್ಮಜ್ಞಾನದ ಅನುಭವವು ಆಗುವುದಿಲ್ಲ. ಈತನು ಕರ್ಮಚೇತನಾ ಮತ್ತು ಕರ್ಮಫಲಚೇತನೆಯಲ್ಲಿಯೇ ತನ್ಮಯನಾಗಿಯೂ, ಇಂದ್ರಿಯಸಂಬಂಧವಾದ ತೃಷ್ಣೆಗಳ ಪೂರ್ಣತೆಗಾಗಿ ಮನ, ವಚನ, ಕಾಯಗಳ ಮೂಲಕ ಅನೇಕ ಕಾರ್ಯಗಳನ್ನೆಸಗುವುದರಲ್ಲಿಯೂ ಲವಲೀನನಾಗಿರುತ್ತಾನೆ.

ಧನಸಂಪಾದಿಸುವುದರಲ್ಲಿಯೂ, ಮನೆಕಟ್ಟಿಸುವುದರಲ್ಲಿಯೂ, ವಸ್ತ್ರಗಳನ್ನು ಹೊಲೆಯುವುದರಲ್ಲಿಯೂ, ಹೊಲೆಸುವುದರಲ್ಲಿಯೂ, ಆಭರಣಗಳನ್ನು ಮಾಡಿಸುವುದರಲ್ಲಿಯೂ, ಶೃಂಗಾರಮಾಡಿಕೊಳ್ಳುವುದರಲ್ಲಿಯೂ, ಅಡಿಗೆಮಾಡುವುದರಲ್ಲಿಯೂ, ಸಾಮಗ್ರಿಗಳನ್ನು ಒಂದುಗೂಡಿಸುವುದರಲ್ಲಿಯೂ, ಬಾಧೆಗಳನ್ನು ಹೋಗಲಾಡಿಸುವುದರಲ್ಲಿಯೂ, ಪರಿಗ್ರಹರಕ್ಷಣೆಯ ಉದ್ಯಮದಲ್ಲಿಯೂ ತಲ್ಲೀನನಾಗಿ ಕರ್ಮಚೇತನಾರೂಪ ವರ್ತಿಸುತ್ತಾನೆ. ಯಾವಾಗ ಅಸಾತಾವೇದ

ನೀಯ ತೀವ್ರ ಉದಯವಾಗುವಾಗ ದುಃಖ ನಂತರ ಸುಖಗಳಲ್ಲಿ ಮಗ್ನನಾಗಿ ಕರ್ಮಫಲಚೇತನಾರೂಪನಾಗುತ್ತಾನೆ. ಹುಚ್ಚನಂತೆ ಜಗತ್ತಿನ ಪದಾರ್ಥ ಗಳಲ್ಲಿ ಆಸಕ್ತನಾಗಿ ರಾತ್ರಿ ಹಗಲು ವಿಷಯಸುಖಗಳಲ್ಲಿ ಇಷ್ಟವುಳ್ಳವನಾಗು ತ್ತಾನೆ.

ಆತ್ಮದ್ರವ್ಯವು ಪುದ್ಗಲಗಳಿಂದ ಸರ್ವಥಾ ಭಿನ್ನವೆಂದು, ಪಶುಪಕ್ಷಿಯಾ ಗಲಿ, ಮಾನವನಾಗಲಿ, ರಾಗಿಯಾಗಲಿ, ದ್ವೇಷಿಯಾಗಲಿ ಅಲ್ಲವೆಂದು ತಿಳಿಯು ತಕ್ಕದ್ದು. "ನಾನು ಮಾತ್ರ ನಿಜವಾಗಿ ಪರಮ ವೀತರಾಗಿಯೂ ಜ್ಞಾನ ದರ್ಶನಸುಖವೀರ್ಯಧಾರಿಯೂ ಕರ್ಮಕಲಂಕ ರಹಿತನಾದ ಪರಮಾತ್ಮನೂ ಆಗಿರುವೆನು. ಸರ್ವವಿಧದ ಭಾವ ಮತ್ತು ಪದಾರ್ಥಗಳು ಆತ್ಮನಿಂದ ಭಿನ್ನ ವಾಗಿವೆ. ಯಾವ ಭಾವಗಳನ್ನು ಅನಾದಿಕಾಲದಿಂದ ತನ್ನವೆಂದು ತಿಳಿದು ಕೊಂಡಿರುವೆನೋ ಅವೆಲ್ಲವುಗಳೂ ತನ್ನವಲ್ಲ ಮತ್ತು ತನ್ನ ಪರಿಶುದ್ಧ ವೀತ ರಾಗ ವಿಜ್ಞಾನಮಯಭಾವದ ಪರಿಚಯವು ಅತ್ಯಾವಶ್ಯಕವಾಗಿದೆ" ಎಂಬು ದಾಗಿ ತಿಳಿಯತಕ್ಕದ್ದು. ಆದ್ದರಿಂದ ಶಾಸ್ತ್ರಗಳನ್ನು ಓದುವ ಫಲವು ಏನು ಎಂದರೆ 'ತನ್ನ ಆತ್ಮನಿಗೆ ಆತ್ಮರೂಪ ಮತ್ತು ಪರಕ್ಕೆ ಪರರೂಪ' ಎಂದು ತಿಳಿದು ಕೊಳ್ಳುವುದೇ ಆಗಿದೆ.

ಯಾವನ ಜ್ಞಾನದಲ್ಲಿ ಭೇದವಿಜ್ಞಾನದ ಪ್ರಕಾಶ ಇಲ್ಲವೋ ಆತನ ಶಾಸ್ತ್ರ ಜ್ಞಾನ ಮೋಕ್ಷಮಾರ್ಗದಲ್ಲಿ ಲಾಭಕಾರಕವಾಗಲಾರದು. ಆ ಭೇದಜ್ಞಾನ ಉಂಟಾದೊಡನೆ ಸತ್ಯವಾದ ಆನಂದ ಮತ್ತು ಸ್ವಾಭಾವಿಕವಾದ ಗುಣ ಉದ್ಭ ವಿಸುತ್ತದೆ. ಉದಾ: ಕಲ್ಲುಸಕ್ಕರೆಯ ರುಚಿಯನ್ನು ನೋಡಬೇಕಾದರೆ ಕಲ್ಲು ಸಕ್ಕರೆಯನ್ನೇ ತಿನ್ನುವ ಉಪಯೋಪವನ್ನು ಮಾಡಬೇಕು. ಯದಿ ಉಪ ಯೋಗ ಸ್ಥಿರವಾಗದಿದ್ದರೆ ಕಲ್ಲುಸಕ್ಕರೆಯ ಸ್ವಾದವು ಸಿಕ್ಕಲಾರದು.

ಇದೇ ಪ್ರಕಾರವಾಗಿ ಆತ್ಮಾನಂದವನ್ನು ಪಡೆಯುವುದಕ್ಕಾಗಿ ಕರ್ಮ ಕಲಂಕರಹಿತನಾದ ವೀತರಾಗಿಯೂ ಸಕಲವನ್ನೂ ತಿಳಿಯುವವನೂ ಮತ್ತು ನೋಡುವವನೂ ಆದ ತನ್ನಾತ್ಮನಲ್ಲಿ ಶ್ರದ್ಧೆ ಮತ್ತು ಜ್ಞಾನವುಳ್ಳವನಾಗಿ ರಮಿಸ ಬೇಕಾಗುತ್ತದೆ. ಆಗ ಅನ್ಯಪದಾರ್ಥಗಳಿಂದ ಮತ್ತು ಭಾವಗಳಿಂದ ಉಪ ಯೋಗವನ್ನು ದೂರಗೊಳಿಸಬೇಕಾಗುತ್ತದೆ. ಪರಮಾನಂದಮಯವಾದ

ಸುಖವನ್ನು ಅನಂತಕಾಲದವರೆಗೂ ನಿರಂತರ ಭೋಗಿಸುವುದಕ್ಕಾಗಿ ಜ್ಞಾನ ಮತ್ತು ವೈರಾಗ್ಯ ಸಹಿತವಾದ ಆತ್ಮಾನುಭವವನ್ನು ಪಡೆದುಕೊಳ್ಳಬೇಕು. ನಾನು ಪರಮಶುದ್ಧ ಆತ್ಮದ್ರವ್ಯವೆಂದೂ ನಾನು ಪರಮೇಶ್ವರನೆಂದೂ ನಾನು ಪರಮದೇವನೆಂದೂ ನನ್ನ ಆತ್ಮನು ಪರಮ ಉಪಾಸನೆಗೆ ಯೋಗ್ಯನೆಂದೂ ನನ್ನ ಆರಾಧನೆಯಿಂದಲೇ ಮೋಕ್ಷಪ್ರಾಪ್ತಿಯಾಗುತ್ತದೆಂದೂ ತಿಳಿಯಬೇಕು. ಈ ಅದ್ವೈತ ನಿರ್ವಿಕಲ್ಪಧ್ಯಾನವು ಸಂವರೆ ಮತ್ತು ನಿರ್ಜರೆಗೆ ಕಾರಣವಾಗುತ್ತದೆ. ವೈರಾಗ್ಯಭಾವನೆಯಿಂದ ಈ ಜಗತ್ತಿನ ಭೋಗಾದಿಗಳು ವಿಷದಂತೆ ತ್ಯಜಿಸಲು ಯೋಗ್ಯವಾಗಿರುವವೆಂಬ ತಿಳಿವಳಿಕೆಯುಂಟಾಗಿ ಲೌಕಿಕ ಯಾವ ಸ್ಥಾನಗಳಲ್ಲೂ ಅಭಿಲಾಷೆಯಿರುವುದಿಲ್ಲ. ಶಿವಪದವೊಂದೇ ಕಲ್ಯಾಣಕಾರಿಯಾಗಿರುವುದೆಂಬ ತಿಳುವಳಿಕೆಯುಂಟಾಗಿ, ಮೂರು ಲೋಕದ ಸಂಪತ್ತಿಯಿಂದ ಉದಾಸೀನನಾಗುತ್ತಾ ತನ್ನಾತ್ಮನ ಸ್ವಭಾವದಲ್ಲಿ ಪ್ರೇಮಉಳ್ಳವನಾಗುತ್ತಾನೆ. ಜ್ಞಾನ ಮತ್ತು ವೈರಾಗ್ಯಗಳಿಲ್ಲದೆ ರತ್ನತ್ರಯಧರ್ಮದ ಸ್ವಾದವುಂಟಾಗುವುದಿಲ್ಲ. ಆತ್ಮಾನುಭವರೂಪ ಧ್ಯಾನಾಗ್ನಿ ಕರ್ಮಕಲಂಕವನ್ನು ದಹಿಸುತ್ತದೆ. ಮುಮುಕ್ಷು ಜಿನವಾಣಿಯ ಅಭ್ಯಾಸಮಾಡುತ್ತಾ ಆತ್ಮನನ್ನು ಮತ್ತು ಪರಪದಾರ್ಥಗಳನ್ನು ಚೆನ್ನಾಗಿ ಅರಿತು ಸಮಭಾವಿಯಾಗುತ್ತಾನೆ. ಹೇಗೆಂದರೆ: ಸೂರ್ಯನ ಕಾರ್ಯವು ಜಗತ್ತಿನಲ್ಲಿ ಕೊಳಕುಪ್ರದೇಶ, ನಿರ್ಮಲವಾದ ಪ್ರದೇಶ ಎಂಬ ಭೇದ ಭಾವವಿಲ್ಲದೆ ಎಲ್ಲಾ ಪ್ರದೇಶಗಳನ್ನು ಪ್ರಕಾಶಪಡಿಸುತ್ತದೆ. ಅದರಂತೆ ಆತ್ಮ ಸ್ವಭಾವವು ಸಮಭಾವನೆಯಿಂದ ಪದಾರ್ಥಗಳನ್ನು ಯಥಾರ್ಥವಾಗಿ ತಿಳಿಯುತ್ತದೆ. ಯಾವನು ಯಾರೊಡನೆಯೂ ರಾಗದ್ವೇಷಗಳನ್ನು ಇಟ್ಟುಕೊಳ್ಳದೆ, ಸಮಭಾವದಿಂದಿದ್ದು ಆತ್ಮನನ್ನು ಧ್ಯಾನಿಸುತ್ತಾನೆಯೋ ಅವನೇ ನಿರ್ವಾಣ ಸುಖಕ್ಕೆ ಭಾಗಿಯಾಗುತ್ತಾನೆ.

ಬೃಹತ್ ಸಾಮಾಯಿಕಪಾಠದಲ್ಲಿ ಹೇಳಿರುತ್ತಾರೆ:

**ಭವತಿ ಭವಿನಃ ಸೌಖ್ಯಂ ದುಃಖಂ ಪುರಾಕೃತಕರ್ಮಣಃ**
**ಸ್ಫುರತಿ ಹೃದಯೇ ರಾಗೋ ದ್ವೇಷಃ ಕದಾಚನ ಮೇ ಕಥಂ।**
**ಮನಸಿ ಸಮತಾಂ ವಿಜ್ಞಾಯೇತ್ಥಂ ತಯೋರ್ವಿದಧಾತಿ ಯಃ**
**ಕ್ಷಪಯತಿ ಸುಧೀಃ ಪೂರ್ವಂ ಪಾಪಂ ಚಿನೋತಿ ನ ನೂತನಂ॥೧೦೨॥**

**ಭಾವಾರ್ಥ** : ಜೀವಗಳಿಗೆ ಸಂಸಾರಿಕ ಸುಖದುಃಖಗಳು ತಮ್ಮ ತಮ್ಮ ಪೂರ್ವಭವಗಳಲ್ಲಿ ಬಂಧಿತವಾಗಿದ್ದ ಕರ್ಮಗಳ ಉದಯದಿಂದಲೇ ಉಂಟಾಗುತ್ತವೆ. ಹೀಗಿರುವಾಗ ಜ್ಞಾನಿಯ ಮನಸ್ಸಿನಲ್ಲಿ ಹೇಗೆತಾನೇ ರಾಗದ್ವೇಷಗಳುಂಟಾಗುವುದು? ಜ್ಞಾನಿಯಾದವನು ರಾಗದ್ವೇಷಗಳ ಸ್ವರೂಪವನ್ನು ತಿಳಿದು, ಅವೆಲ್ಲವನ್ನೂ ತ್ಯಜಿಸಿ ಸಮಭಾವನೆಯನ್ನು ಧರಿಸುತ್ತಾನೆ. ಈ ಉಪಾಯದಿಂದಲೇ ಆತನು ಪೂರ್ವಬದ್ಧವಾಗಿದ್ದ ಪಾಪಕರ್ಮಗಳನ್ನು ನಾಶಗೊಳಿಸುವವನಾಗಿ ನೂತನ ಕರ್ಮಗಳನ್ನು ಸಂಗ್ರಹಿಸಿಕೊಳ್ಳಲಾರನು.

•••••••••••

## ಪರಮಸಮಾಧಿಯೇ ಶಿವಸುಖಕ್ಕೆ ಕಾರಣ

**ವಜ್ಜಿಯ ಸಯಲ-ವಿಯಪ್ಪಇಂ ಪರಮ-ಸಮಾಹಿ ಲಹಂತಿ |**
**ಜಂ ವಿಂದಹಿಂ ಸಾಣಂದು ಕ ವಿ ಸೋ ಸಿವ-ಸುಕ್ಖಂ ಭಣಂತಿ ||೯೭||**

**ಅನ್ವಯಾರ್ಥ** : ಸಯಲ-ವಿಯಪ್ಪಇಂ ವಜ್ಜಿಯ – ಸಕಲ ವಿಕಲ್ಪಗಳನ್ನು ತ್ಯಜಿಸಿದನಂತರ, ಪರಮ ಸಮಾಹಿ ಲಹಂತಿ–ಯಾವ ಪರಮಸಮಾಧಿಯನ್ನು ಪಡೆಯುವನೋ, ಜಂ ಕ ವಿ ಸಾಣಂದು ವಿಂದಹಿ – ಆಗ ಯಾವ ಆನಂದವನ್ನನುಭವಿಸುವನೋ, ಸೋ ಸಿವ-ಸುಕ್ಖಂ ಭಣಂತಿ–ಆ ಸುಖಕ್ಕೇನೇ ಮೋಕ್ಷಸುಖವೆಂದು ಹೇಳುತ್ತಾರೆ.

**ಭಾವಾರ್ಥ** : ಆತ್ಮನಸಂಪೂರ್ಣವಾದ ಸ್ವಾಭಾವಿಕ ಸುಖವೇ ಮೋಕ್ಷವಾಗಿರುತ್ತದೆ. ಅದು ಸಿದ್ಧಾತ್ಮರಿಗೆ ಸದಾ ಅನುಭವಕ್ಕೆ ಬರುತ್ತಿರುತ್ತದೆ. ಅಂತಹ ಸುಖದ ಉಪಾಯವೂ ಕೂಡ ಆತ್ಮೀಕ ಆನಂದಾನುಭವಮಯವಾಗಿರುತ್ತದೆ. ಸುಖೀ ಆತ್ಮನೇ ಸಂಪೂರ್ಣ ಸುಖಿಯು. ಇಂತಹ ಆತ್ಮೀಕಸುಖದ ಸ್ವಾದವನ್ನು ಪಡೆಯುವ ಉಪಾಯವಾದರೋ ಶುದ್ಧಾತ್ಮನಲ್ಲಿಯೇ ನಿರ್ವಿಕಲ್ಪ ಸಮಾಧಿಯನ್ನು ಪ್ರಾಪ್ತಿಮಾಡಿಕೊಳ್ಳುವುದಾಗಿದೆ.

ಪ್ರಥಮವಾಗಿ ಜ್ಞಾನಿಯು ತಾನೇ ಸಿದ್ಧಾತ್ಮನಂತೆ ಪರಿಶುದ್ಧನೆಂಬ ವಿಶ್ವಾಸವನ್ನಿಟ್ಟುಕೊಳ್ಳುವುದು ಯೋಗ್ಯವಾಗಿರುತ್ತದೆ. ನನ್ನ ದ್ರವ್ಯವು ನನ್ನ ಸ್ವಭಾವದಿಂದ ಎಂದೆಂದಿಗೂ ಬೇರೆಯಾಗುವುದಿಲ್ಲ. ಕರ್ಮಮಲದಿಂದ ಸ್ವಭಾವವು ಮಲಿನವಾಗುತ್ತಿದ್ದರೂ ಅಂತರಂಗದಿಂದ ನಾಶವಾಗುವುದಿಲ್ಲ. ಹೇಗೆಂ

ದರೆ : ಕೆಸರಿನಿಂದ ಕೂಡಿದ ನೀರಿನ ನಿರ್ಮಲತೆ ಮರೆಯಾದರೂ ನಿರ್ಮಲತೆ ನಾಶಹೊಂದುವುದಿಲ್ಲ. ಆ ನೀರಿಗೆ ನಿರ್ಮಲೀ (ಚಿಲ್ಲದ) ಬೀಜವನ್ನಿಡುವುದ ರಿಂದ ಕೆಸರು ಅಡಿಯಲ್ಲಿ ನಿಂತು ನೀರು ನಿರ್ಮಲವಾಗಿ ತೋರುವಂತೆ ಈ ಆತ್ಮನು ಅನಾದಿಕಾಲದಿಂದ ಜ್ಞಾನಾವರಣಾದಿ ಎಂಟುಕರ್ಮಗಳೊಡನೆ ಸೇರಿ ದ್ದರೂ ಕೂಡ ತನ್ನ ಸ್ವಭಾವವನ್ನು ಬಿಟ್ಟಿಲ್ಲ. ಸಮ್ಯಕ್ತ್ವವಂತನಾದ ಜೀವನು ಶುದ್ಧನಿಶ್ಚಯ ನಯದಿಂದ ತನ್ನಾತ್ಮನೊಡನೆ ಇರುವ ಸಕಲ ಸಂಯೋಗಗಳನ್ನು ದೂರಗೊಳಿಸಿ ಆತ್ಮನನ್ನು ಪರಿಶುದ್ಧವಾಗಿಯೇ ನೋಡುತ್ತಿರುತ್ತಾನೆ.

ಆಗಮ ಗ್ರಂಥಗಳ ಜ್ಞಾನದ ಶ್ರದ್ಧೆಯಿಂದ ತನ್ನಾತ್ಮನು ಪರಿಶುದ್ಧ ನಾಗಿಯೇ ತೋರುತ್ತಾನೆ. ಈ ಭಾವನೆಯ ಧೃಢಸಂಸ್ಕಾರದಿಂದ ಗಾಢನಂಬಿಕೆ ಯಾಗಿ ಸಮ್ಯಕ್ತ್ವವುಂಟಾಗುತ್ತದೆ. ಆಗ ಉಪಯೋಗವು ಸ್ವಯಂ ಪರವಸ್ತು ಗಳಿಂದ ಬಿಟ್ಟು ತನ್ನಾತ್ಮನಲ್ಲಿಯೇ ನಿಲ್ಲುತ್ತದೆ, ಸ್ವಾನುಭವದ ಕಲೆಯು ಜಾಗೃತ ವಾಗುತ್ತದೆ, ಶರೀರ ಸ್ಥಿರವಾಗುತ್ತದೆ, ವಚನ ವಿಲಾಸರಹಿತವಾಗುತ್ತದೆ ಮತ್ತು ಮಾನಸಿಕ ಚಿಂತೆ ನಿಂತುಹೋಗುತ್ತದೆ. ಹೀಗೆ ಯಾವಾಗ ವಿಕಲ್ಪಗಳಿಂದ ರಹಿತವಾದ ಪರಮ ಸಮಾಧಿಯುದ್ಭವಿಸಿದೊಡನೆ ಆತ್ಮರಸಾಮೃತದ ಅಭಿರುಚಿ ಯುಂಟಾಗುತ್ತದೆ. ಇದರಿಂದಲೇ ಕರ್ಮಗಳ ನಿರ್ಜರೆ ಅಧಿಕ ಪ್ರಮಾಣ ದಲ್ಲಾಗುತ್ತದೆ. ಇದಕ್ಕೇನೆ ಧ್ಯಾನಾಗ್ನಿಯೆಂದು ಹೇಳುತ್ತಾರೆ.

ಸಮ್ಯಕ್ತ್ವವುಳ್ಳವನು 'ಸ್ವಾನುಭವದ ರೀತಿಯು ಪ್ರಾಪ್ತವಾಗುವುದೇ ಮೋಕ್ಷೋಪಾಯ' ಎಂದು ತಿಳಿದು, ಸ್ವಾನುಭವದ ಅಭ್ಯಾಸವನ್ನು ಮಾಡುತ್ತಾ ಆತ್ಮಾನುಭವವನ್ನು ಅನುಭವಿಸುತ್ತಾನೆ. ಯಾವನಾದರೊಬ್ಬ ಸಮ್ಯಕ್ತ್ವಿಯು ನಿರ್ಗ್ರಂಥನಾಗಿರಲಿ ಅಥವಾ ವಜ್ರವೃಷಭನಾರಾಚಸಂಹನನಧಾರಿಯಾಗಿರಲಿ ಆತನ ಸ್ವಭಾವವು ಯಥಾಯೋಗ್ಯ ಒಂದು ಅಂತರ್ಮುಹೂರ್ತದವರೆಗೆ ನಿಶ್ಚಲ ವಾದರೆ ನಾಲ್ಕು ಘಾತಿಕರ್ಮಗಳನ್ನು ನಾಶಮಾಡಿ, ಪರಮಾತ್ಮನಾಗಿ, ಅನಂತ ಜ್ಞಾನ, ಅನಂತದರ್ಶನ, ಅನಂತಸುಖ, ಅನಂತವೀರ್ಯಗಳೆಂಬ ಅನಂತ ಚತುಷ್ಟಯಗಳನ್ನು ಪ್ರಕಾಶಪಡಿಸಿಕೊಳ್ಳುತ್ತಾನೆ.

ಸಕಲ ಸಮ್ಯಕ್ತ್ವವುಳ್ಳ ಜೀವಗಳು ಆತ್ಮಹೀನತೆಯಿಂದ ಹಾಗೆ ಮಾಡಿ ಕೊಳ್ಳದೆ, ಶಕ್ತಿಗನುಸಾರವಾಗಿ ಗೃಹಸ್ಥಾವಸ್ಥೆಯಲ್ಲಿ ಒಂದುವೇಳೆ ಇರುತ್ತಿ

ದ್ದರೂ ಕ್ರಮವಾಗಿ ಆತ್ಮಾನುಭವಕ್ಕಾಗಿ ಸಾಮಾಯಿಕದ ಅಭ್ಯಾಸವನ್ನು ಮಾಡಿಕೊಳ್ಳುತ್ತಾರೆ. ಅಧಿಕ ಸಮಯದವರೆಗೆ ಸಾಮಾಯಿಕವನ್ನು ಮಾಡಲು ಆಗದಿರುವುದರಿಂದ ಅವನು ದೇವಪೂಜಾದಿಗಳನ್ನು, ಸ್ತುತಿಯನ್ನು ಮಾಡುವವನಾಗಿ ಸ್ವಾನುಭವವನ್ನು ಪಡೆಯುತ್ತಾನೆ. ಒಂದೊಂದು ಸಲ ಅಧ್ಯಾತ್ಮಗ್ರಂಥಗಳ ಸ್ವಾಧ್ಯಾಯದಿಂದಲೂ ಅಧ್ಯಾತ್ಮ ವಿಷಯಗಳ ಚರ್ಚೆಯಿಂದಲೂ ಮತ್ತು ಅಧ್ಯಾತ್ಮಿಕ ಸಂಬಂಧವಾದ ಭಜನೆಗಳಿಂದಲೂ ಕಾಲವನ್ನು ಕಳೆಯುತ್ತಿರುತ್ತಾನೆ.

ಪಾಪಭಾವನೆಗಳಿಂದ ರಕ್ಷಣೆಪಡೆಯಲು ಶ್ರಾವಕರ ಹನ್ನೆರಡು ವ್ರತಗಳನ್ನು ಪಾಲಿಸುವವನಾಗುತ್ತಾನೆ. ಆಗ ನಿರಾಕುಲವೂ ನಿರ್ಮಲವೂ ಆದ ಭಾವನೆಯುಂಟಾದೊಡನೆ ಸ್ವಾನುಭವದ ಸಮಯ ಅಧಿಕವಾಗುತ್ತದೆ. ಆಗ ವೈರಾಗ್ಯಭಾವನೆಯುಂಟಾಗುತ್ತದೆ. ನಂತರ ಅವನು ಮನೆಯನ್ನು ಬಿಟ್ಟು ಸಾಧುವಾಗುತ್ತಾನೆ. ಪರಿಗ್ರಹಗಳ ತ್ಯಾಗವಾದೊಡನೆ ಆರಂಭಾದಿ ಪರಿಗ್ರಹಗಳನ್ನು ಮಾಡದಿರುವುದರಿಂದ ನಿರಾಕುಲತೆಯುಂಟಾಗುತ್ತದೆ. ಕ್ಷೋಭವಿಲ್ಲದ ಮನಸ್ಸಿನಿಂದ ನಿಶ್ಚಯನಯದ ಮೂಲಕ ಸಕಲ ಜೀವಕೋಟಿಯನ್ನು ಸಮಾನವೆಂದು ಪರಿಭಾವಿಸುತ್ತಾ ರಾಗದ್ವೇಷಗಳನ್ನು ಜಯಿಸುತ್ತಾನೆ ಮತ್ತು ವೀತರಾಗಿಯಾಗಿ ಆಗಾಗ ಆತ್ಮಾನುಭವವನ್ನು ಮಾಡಿಕೊಳ್ಳುತ್ತಿರುತ್ತಾನೆ. ಅದರಿಂದ ಯಥಾರ್ಥ ಆನಂದವನ್ನು ಪಡೆಯುತ್ತಾನೆ. ಈ ಉಪಾಯದಿಂದಲೇ ಸಾಧಕನು ಮೋಕ್ಷಮಾರ್ಗವನ್ನು ನಿಶ್ಚಯಿಸಿಕೊಳ್ಳುತ್ತಾ ಒಂದಲ್ಲೊಂದು ದಿವಸ ನಿರ್ವಾಣಲಕ್ಷ್ಮಿಯನ್ನು ಪಡೆಯುತ್ತಾನೆ.

ತತ್ವಾನುಶಾಸನದಲ್ಲಿ ಹೇಳಿರುತ್ತಾರೆ:

**ಸಮಾಧಿಸ್ಥೇನ ಯದ್ಯಾತ್ಮಾ ಬೋಧಾತ್ಮಾ ನಾನುಭೂಯತೇ ।**
**ತದಾ ನ ತಸ್ಯ ತದ್‌ಧ್ಯಾನಂ ಮೂರ್ಛಾವಾನ್ಮೋಹ ಏವಸಃ ॥೧೬೯॥**

**ತದೇವಾನುಭವಂಶ್ಚಾಯ ಮೇಕಾಗ್ರ್ಯಂ ಪರಮೃಚ್ಛತಿ ।**
**ತಥಾತ್ಮಾಧೀನಮಾನಂದಮೇತಿ ವಾಚಾಮಗೋಚರಂ ॥೧೭೦॥**

**ಭಾವಾರ್ಥ:** ಸಮಾಧಿಭಾವದಲ್ಲಿದ್ದು ಜ್ಞಾನಸ್ವರೂಪ ಆತ್ಮನ ಅನುಭವ ಆಗದಿದ್ದರೆ ಅದು ಧ್ಯಾನವಾಗದೆ ಅವನು ಮೋಹಿಯೆಂದೆನಿಸಿ ಕೊಳ್ಳು

ತ್ತಾನೆ. ಯಾವಾಗ ಧ್ಯಾನಗೈಯುತ್ತಾ ಆತ್ಮಾನುಭವ ಪ್ರಕಟವಾಗುವುದೋ ಆಗ ಪರಮ ಏಕಾಗ್ರತೆ ಪ್ರಾಪ್ತವಾಗಿ, ವಚನಾತೀತವಾದ ಆತ್ಮಾನಂದ ಸ್ವಾದ ವನ್ನು ಭೋಗಿಸುತ್ತಾನೆ.



## ಆತ್ಮಧ್ಯಾನವು ನಾಲ್ಕುವಿಧವಾಗಿದೆ

**ಜೋ ಪಿಂಡತ್ಥು ಪಯತ್ಥು ಬುಹ ರೂವತ್ಥು ವಿ ಜಿಣ-ಉತ್ತು ।**
**ರೂವಾತೀತು ಮುಣೇಹಿ ಲಹು ಜಿಮ ಪರು ಹೋಹಿ ಪವಿತ್ತು॥೯೮॥**

**ಅನ್ವಯಾರ್ಥ:** ಬುಹ-ಎಲೈ ಪಂಡಿತನೇ, ಜಿಣ-ಉತ್ತು ಜೋ ಪಿಂಡತ್ಥು ಪಯತ್ಥು ರೂವತ್ಥು ರೂವಾತೀತು ಮುಣೇಹಿ-ಜಿನಪ್ರಣೀತವಾದ ಪಿಂಡಸ್ಥ, ಪದಸ್ಥ, ರೂಪಸ್ಥ ಮತ್ತು ರೂಪಾತೀತ ಧ್ಯಾನಗಳನ್ನು ಮನನ ಮಾಡು. ಜಿಮ ಲಹು ಪರು ಪವಿತ್ತು ಹೋಹಿ-ಆದರಿಂದ ನೀನು ಬಹು ಬೇಗನೆ ಪವಿತ್ರನಾಗುವಿ.

**ಭಾವಾರ್ಥ:** ಯಾವ ಪ್ರಕಾರವಾಗಿ ಮಲಿನವಸ್ತ್ರವನ್ನು ಶ್ರದ್ಧೆಯಿಟ್ಟು ಉಜ್ಜುತ್ತಿದ್ದರೆ (ಒಗೆಯುತ್ತಿದ್ದರೆ) ಅದು ನಿರ್ಮಲವಾಗುವಂತೆ, ಈ ಅಶುದ್ಧ ಆತ್ಮನು ಆತ್ಮನ ಧ್ಯಾನದಿಂದ ಶುದ್ಧನಾಗುತ್ತಾನೆ. ಧ್ಯಾನಗೈಯ್ಯುವ ವಿಧಾನ ಗಳು ಮಾತ್ರ ಅನೇಕವಾಗಿವೆ. ಜ್ಞಾನಾರ್ಣವಗ್ರಂಥದಲ್ಲಿ ಪಿಂಡಸ್ಥ ಮೊದ ಲಾದ ನಾಲ್ಕು ಧ್ಯಾನಗಳನ್ನು ವಿಷದವಾಗಿ ವರ್ಣಿಸಿರುತ್ತಾರೆ. ಇಲ್ಲಿ ಸಂಕ್ಷೇಪ ವಾಗಿ ವರ್ಣಿಸಲಾಗುತ್ತದೆ.

**1) ಪಿಂಡಸ್ಥಧ್ಯಾನ:** ಶರೀರಕ್ಕೆ ಪಿಂಡವೆಂದು ಹೇಳುತ್ತಾರೆ. ಅದ ರಲ್ಲಿ ವಿರಾಜಮಾನನಾದ ಆತ್ಮನನ್ನು ಧ್ಯಾನಿಸುವುದೇ ಪಿಂಡಸ್ಥ ಧ್ಯಾನವೆಂದೆನಿ ಸಿಕೊಳ್ಳುತ್ತದೆ. ಇದರಲ್ಲಿ ಪೃಥ್ವಿ, ಅಗ್ನಿ, ಪವನ, ಜಲ, ತತ್ವರೂಪವತೀ ಎಂದು ಐದು ಧಾರಣೆಗಳಿವೆ.

೧) **ಪೃಥ್ವೀಧಾರಣೆ:** ಧ್ಯಾನಿಯು ಇಂತು ಧ್ಯಾನಿಸಬೇಕು: "ಮಧ್ಯಮ ಲೋಕವು ಕ್ಷೀರಸಮುದ್ರವಾಗಿರುತ್ತದೆ ಇದರ ಮಧ್ಯದಲ್ಲಿ ಜಂಬೂದ್ವೀಪ ಪ್ರಮಾಣ ಸಹಸ್ರದಳವುಳ್ಳ ಕಮಲವಿದೆ. ಈ ಕಮಲದ ಮಧ್ಯದಲ್ಲಿ ಮೇರು

ಪರ್ವತದೋಪಾದಿಯಲ್ಲಿ ಕರ್ಣಿಕೆ ಇದೆ. ಮೇರುಪರ್ವತದ ಪಾಂಡುಕವನದಲ್ಲಿ ಪಾಂಡುಕವೆಂಬ ನಾಮದೇಯವುಳ್ಳ ಶಿಲೆಯು ಇರುತ್ತದೆ. ಅದರ ಮೇಲೆ ಸ್ಪಟಿಕಮಣಿಯ ಸಿಂಹಾಸನವಿರುತ್ತದೆ. ನಾನು ಕರ್ಮಗಳನ್ನು ನಾಶಗೊಳಿಸುವುದಕ್ಕಾಗಿ ಅದರಲ್ಲಿ ಪದ್ಮಾಸನದಲ್ಲಿ ಕುಳಿತುಕೊಂಡಿದ್ದೇನೆ" ಎಂದು ಧ್ಯಾನ ಮಗ್ನನಾಗುವುದೇ ಪೃಥ್ವಿಧಾರಣೆಯಾಗಿದೆ.

೨) ಅಗ್ನಿಧಾರಣೆ: ಈ ಧ್ಯಾನಿಯು ಹೀಗೆಯೇ ಕುಳಿತುಕೊಂಡು ಚಿಂತಿಸಬೇಕು; "ನನ್ನ ನಾಭಿಮಂಡಲದಲ್ಲಿ ಹದಿನಾರು ದಳಗಳುಳ್ಳ ಕಮಲವಿದೆ. ಅದರ ಒಂದೊಂದು ದಳದಲ್ಲಿ 'ಅ ಆ ಇ ಈ ಉ ಊ ಋ ೠ ಲೃ ಲೄ ಏ ಐ ಓ ಔ ಅಂ ಅಃ' ಈ ಹದಿನಾರು ಸ್ವರಗಳು ಬರೆಯಲ್ಪಟ್ಟವೆ. ಕಮಲದ ನಡುವೆ 'ರ್ಹಂ' ಅಕ್ಷರ ಬರೆದಿದೆ. ಎರಡನೆಯ ಕಮಲ ಹೃದಯಸ್ಥಾನದಲ್ಲಿ ಕೆಳಗಿರುವ ಕಮಲದ ಮೇಲೆ ಕೆಳಮುಖವಾಗಿ ಇದೆ. ಅದು ಎಂಟುದಳ (ಎಸಳು) ಉಳ್ಳದ್ದಾಗಿದೆ. ಇವೇ ಜ್ಞಾನಾವರಣೀಯ ಎಂಟು ಕರ್ಮಗಳು. 'ರ್ಹಂ' ಎಂಬ ರೇಖೆಯಿಂದ ಧೂಮವು ಹೊರಟು ಮತ್ತೆ ಮುಂದೆ ಅಗ್ನಿಜ್ವಾಲೆಯು ಕರ್ಮರೂಪ ಕಮಲವನ್ನು ದಹಿಸುತ್ತಿದೆ. ಇದೇ ಅಗ್ನಿಯ ಒಂದು ಜ್ವಾಲೆಯ ಶಾಖೆಯು ಮಸ್ತಕದ ಮೇಲೆ ಬಂದು ಶರೀರದ ಎಲ್ಲಾ ಭಾಗಗಳಲ್ಲಿ ತ್ರಿಕೋಣ ರೂಪವಾಗಿ ಹರಡಿದೆ. ಈ ತ್ರಿಕೋಣದಲ್ಲಿ 'ರ ರ ರ ರ ರ ರ' ಅಕ್ಷರವು ಅಗ್ನಿಮಯವಾಗಿರುತ್ತದೆ. ಹೊರಗಿನ ಮೂರು ಕೋಣಗಳಲ್ಲಿ ಅಗ್ನಿಮಯ ಸ್ವಸ್ತಿಕ ಬರೆದಿದೆ. ಒಳಗಡೆ ಮೂರು ಕೋಣಗಳಲ್ಲಿ 'ಓಂ ರ್ಹಂ' ಎಂದು ಅಗ್ನಿಮಯವಾಗಿ ಬರೆದಿವೆ. ಈ ಹೊರಗಿನ ಅಗ್ನಿಯು ಶರೀರವನ್ನು ದಹಿಸುತ್ತಿದೆ. ಹೀಗೆ ಕರ್ಮ ಮತ್ತು ಶರೀರ ಸುಟ್ಟುಭಸ್ಮವಾಗುತ್ತಿದೆ" ಎಂದು ಧ್ಯಾನಿಸಬೇಕು.

೩) ಪವನಧಾರಣೆ: "ಗಾಳಿಯು ವೇಗದಿಂದ ನನ್ನ ನಾಲ್ಕು ಭಾಗದಲ್ಲಿ ಸುತ್ತುತ್ತಾ ಇದೆ. ಇದು ವೃತ್ತಾಕಾರವಾಗಿದೆ. ಅದರಲ್ಲಿ 'ಸ್ವಾಯ, ಸ್ವಾಯ, ಸ್ವಾಯ' ಎಂದು ಬರೆದಿದೆ. ಈ ಮಂಡಲದಲ್ಲಿನ ಧೂಳನ್ನು ಎಬ್ಬಿಸುತ್ತಿದೆ. ಇದರಿಂದ ಆತ್ಮನು ನಿರ್ಮಲನಾಗುತ್ತಿದ್ದಾನೆ". ಈ ರೀತಿ ಭಾವಿಸಬೇಕು.

೪) ಜಲಧಾರಣೆ: "ಕಾರ್ಮೋಡಗಳು ಮಳೆಯನ್ನು ಸುರಿಸುತ್ತಿವೆ. ಅರ್ಧಚಂದ್ರಾಕಾರವಾದ ಜಲಮಂಡಲವು ನನ್ನ ಮೇಲೆ ಸುರಿಯುತ್ತಿದೆ.

ಅದರಲ್ಲಿ ' ಪ ಪ ಪ ಪ ಪ ' ಎಂದು ಬರೆದಿದೆ. ಈ ಜಲಧಾರೆಯು ನನ್ನ ಆತ್ಮನನ್ನು ತೊಳೆಯುತ್ತಿದೆ. ಜಲವೆಲ್ಲಾ ದೂರವಾಗುತ್ತಿದೆ" ಎಂದು ವಿಚಾರಿಸಬೇಕು.

೫) ತತ್ವರೂಪವತೀ: "ಆತ್ಮನು ನಿರ್ಮಲನಾಗಿ ಸಿದ್ಧಾತ್ಮನಂತೆ ಪರಿಶುದ್ಧನಾಗಿದ್ದಾನೆ. ಪರಮಶುದ್ಧ ಶರೀರಪ್ರಮಾಣನಾದ ಆತ್ಮನನ್ನು ನೋಡುತ್ತಿದ್ದೇನೆ" ಎಂದು ಭಾವಿಸಬೇಕು. ಇವು ಐದು ಪಿಂಡಸ್ಥ ಧ್ಯಾನದ ಭೇದವಾಗಿರುತ್ತದೆ.

2) ಪದಸ್ಥಧ್ಯಾನ: ೧) ಪದಗಳ ಮೂಲಕ ಧ್ಯಾನಗೈಯುವುದು ಹೇಗೆಂದರೆ: 'ಓಂ ಮತ್ತು ಹ್ರಂ' ನ್ನು ಮಸ್ತಕದಲ್ಲಿಯೂ ಹುಬ್ಬುಗಳ ಮಧ್ಯದಲ್ಲಿಯೂ, ಮೂಗಿನ ತುದಿಯಲ್ಲಿಯೂ ಮುಖದಲ್ಲಿಯೂ, ಕಂಠದಲ್ಲಿಯೂ, ಹೃದಯದಲ್ಲಿ ಅಥವಾ ನಾಭಿಯಲ್ಲಿಯೂ ವಿರಾಜಮಾನ ಮಾಡಿಕೊಂಡು ಚಿಂತಿಸಬೇಕು ಮತ್ತು ಪಂಚಪರಮೇಷ್ಠಿಗಳ ಗುಣಗಳನ್ನು ವಿಚಾರಿಸುತ್ತಾ ಇರಬೇಕು.

೨) ಎಂಟು ದಳ ಉಳ್ಳ ಕಮಲವೊಂದು ಹೃದಯದಲ್ಲಿರುವುದೆಂದು ವಿಚಾರಿಸುತ್ತಾ, ಒಂದು ಎಸಳಿನಲ್ಲಿ ಣಮೋ ಅರಹಂತಾಣಂ, ಣಮೋ ಸಿದ್ಧಾಣಂ, ಣಮೋ ಆಇರಿಯಾಣಂ, ಣಮೋ ಉವಜ್ಝಾಯಾಣಂ, ಣಮೋ ಲೋಏ ಸವ್ವಸಾಹೂಣಂ, ಸಮ್ಯಗ್ದರ್ಶನಾಯ ನಮಃ, ಸಮಗ್ಜ್ಞಾನಾಯ ನಮಃ, ಸಮ್ಯಕ್ಚಾರಿತ್ರಾಯ ನಮಃ ಎಂಬ ಎಂಟು ಪದಗಳನ್ನು ವಿರಾಜಿಸಿಕೊಂಡು ಒಂದೊಂದು ಪದವನ್ನು ಕ್ರಮಕ್ರಮವಾಗಿ ಧ್ಯಾನಿಸಬೇಕು.

3) ರೂಪಸ್ಥಧ್ಯಾನ: ಅರಹಂತ ಪರಮಾತ್ಮನ ಸನ್ಮುಖದಲ್ಲಿ ತಾನು ವಿರಾಜಮಾನನಾಗಿರುವನೆಂದು ವಿಚಾರಿಸುತ್ತಾ, ಪರಮಾತ್ಮನು ಪದ್ಮಾಸನದಲ್ಲಿ ಪರಮ ಶಾಂತಪುಂಜನಾಗಿ ವಿರಾಜಿತನಾಗಿರುವನೆಂದು ಸ್ಮರಿಸುತ್ತಾ ವಂದನೆಗೈಯಬೇಕು ಅಥವಾ ಯಾವುದಾದರೊಂದು ಧ್ಯಾನಮಯ ಮುದ್ರಾಯುಕ್ತ ತೀರ್ಥಂಕರ ಪರಮದೇವರ ಪ್ರತಿಮೆಯನ್ನು ಮನಸ್ಸಿನಲ್ಲಿ ತಂದುಕೊಂಡು ಧ್ಯಾನಿಸಬೇಕು.

4) ರೂಪಾತೀತಧ್ಯಾನ: ಪುರುಷಾಕಾರನೂ, ಅಂತ್ಯಶರೀರಕ್ಕೆ ಸ್ವಲ್ಪ ಕಡಿಮೆ ಶರೀರಪ್ರಮಾಣವುಳ್ಳವನೂ, ಲೋಕಾಗ್ರ ನಿವಾಸಿಯೂ,

ಮೂರು ಲೋಕಕ್ಕೆ ಸ್ವಾಮಿಯೂ, ನಿತ್ಯನೂ, ನಿರಂಜನನೂ, ನಿರ್ಮಲನೂ, ಅಮೂರ್ತನೂ, ನಿಷ್ಕಂಲಕನೂ, ಜ್ಞಾನಾವರಣಾದಿ ಎಂಟು ಕರ್ಮಗಳಿಂದ ನಿರ್ಮುಕ್ತನೂ, ಸಮ್ಯಕ್ತ್ವ ಮೊದಲಾದ ಎಂಟು ಗುಣಗಳುಳ್ಳವನೂ ಆದ ಸಿದ್ಧಪರಮಾತ್ಮನ ಸ್ವರೂಪವನ್ನು ಧ್ಯಾನಿಸಬೇಕು. ಯಾವಾಗ ಮನಸ್ಸಿನಲ್ಲಿ ಏಕಾಗ್ರತೆಯಿಂದ ವೀತರಾಗತೆ ಪ್ರಕಟವಾಗಿ ಕರ್ಮಗಳು ಉದುರಿಹೋಗುವುವೋ ಆಗ ಆತ್ಮನು ಆತ್ಮಧ್ಯಾನದ ಉಪಾಯದಿಂದ ಪರಮ ಪವಿತ್ರ ಪರಮಾತ್ಮನಾಗುತ್ತಾನೆ.

ತತ್ತ್ವಾನುಶಾಸನದಲ್ಲಿ ಹೇಳಿರುತ್ತಾರೆ:

**ಯೇನ ಭಾವೇನ ಯದ್ರೂಪಂ ಧ್ಯಾಯತ್ಯಾತ್ಮಾನಮಾತ್ಮವಿತ್ ।**
**ತೇನ ತನ್ಮಯತಾಂ ಯಾತಿ ಸೋಽಪಾಧಿಃ ಸ್ಫಟಿಕೋ ಯಥಾ ॥೯೧॥**

**ಭಾವಾರ್ಥ:** ಸ್ಫಟಿಕ ಶಿಲೆಯು ಯಾವಬಣ್ಣದ ಸಂಬಂಧವನ್ನು ಹೊಂದುತ್ತದೆಯೋ, ಅದೇ ಬಣ್ಣದಂತೆ ಕಾಣುತ್ತದೆ. ಅದರಂತೆ ಆತ್ಮಜ್ಞಾನಿಯುಯಾವ ಭಾವನೆಯಿಂದ, ಯಾವ ರೂಪದಿಂದ ಆತ್ಮನನ್ನು ಧ್ಯಾನಿಸುತ್ತಾನೆಯೋ ಅದೇ ರೂಪದಲ್ಲಿ ತನ್ಮಯನಾಗುತ್ತಾನೆ.



## ಸಾಮಾಯಿಕ ಚಾರಿತ್ರಕಥನ

**ಸವ್ವೇ ಜೀವಾ ಣಾಣಮಯಾ ಜೋ ಸಮ-ಭಾವ ಮುಣೇಇ ।**
**ಸೋ ಸಾಮಾಇಉ ಜಾಣಿ ಫುಡು ಜಿಣವರ ಏಮ ಭಣೇಇ ॥೯೯॥**

**ಅನ್ವಯಾರ್ಥ:** ಸವ್ವೇ ಜೀವಾ ಣಾಣಮಯಾ–ಸಕಲಜೀವಗಳು ಜ್ಞಾನಮಯವಾಗಿರುವವೆಂಬ, ಜೋ ಸಮ-ಭಾವ ಮುಣೇಇ–ಯಾವ ಸಮಭಾವನೆಯನ್ನು ಉಂಟುಮಾಡಿಕೊಳ್ಳುವುದೋ, ಸೋ ಫುಡು ಸಾಮಾಇಉ ಜಾಣಿ–ಅದನ್ನೇ ಸಾಮಾಯಿಕವೆಂದು ತಿಳಿ. ಏಮ ಜಿಣವರ ಭಣೇಇ–ಎಂದು ಶ್ರೀ ಜಿನೇಂದ್ರದೇವರು ಹೇಳಿರುತ್ತಾರೆ.

**ಭಾವಾರ್ಥ:** ಸಮಭಾವನೆಯ ಪ್ರಾಪ್ತಿಗೆ ಸಾಮಾಯಿಕವೆಂದು ಹೇಳುತ್ತಾರೆ. ಈ ಪ್ರಪಂಚವನ್ನು ನಿಶ್ಚಯನಯದಿಂದಾಗಲಿ ಅಥವಾ ದ್ರವ್ಯಾರ್ಥಿಕ

ನಯದಿಂದಾಗಲಿ ನೋಡುವವನಿಗೆ ಈ ಪ್ರಕಾರದ ಭಾವನೆಯುಂಟಾಗುತ್ತದೆ. ಆಗ ಪರ್ಯಾಯಾರ್ಥಿಕ ಅಥವಾ ವ್ಯವಹಾರನಯದ ವಿಚಾರವನ್ನು ನಿಲ್ಲಿಸಬೇಕು. ಆಗ ಜಗತ್ತಿನಲ್ಲಿ ಪರ್ಯಾಯದ ದೃಷ್ಟಿಯಿಂದ ನಾನಾ ಭೇದಗಳು ದೃಷ್ಟಿಗೋಚರವಾಗುತ್ತವೆ. ನಾಲ್ಕುಗತಿ ನಾಮಕರ್ಮದ ಉದಯದಿಂದ ಜೀವನು ನಾರಕೀ, ಪಶು, ಮನುಷ್ಯ ಅಥವಾ ದೇವನೆಂದು ತೋರುತ್ತಾನೆ.

ಜಾತಿನಾಮಕರ್ಮದ ಉದಯದಿಂದ ಏಕೇಂದ್ರಿಯ, ದ್ವೀಂದ್ರಿಯ, ತ್ರೀಂದ್ರಿಯ, ಚತುರಿಂದ್ರಿಯ ಅಥವಾ ಪಂಚೇಂದ್ರಿಯವೆಂದೇ ತೋರುತ್ತದೆ. ಜೀವಿಗಳ ಅಂತರಂಗ ಮತ್ತು ಬಹಿರಂಗ ಅವಸ್ಥೆಗಳು ಎಂಟು ಕರ್ಮಗಳ ಉದಯದಿಂದ ವಿಚಿತ್ರ ಕಾಣುತ್ತವೆ. ಮೋಹನೀಯ ಕರ್ಮದ ಉದಯದಿಂದ ಜೀವ ಶರೀರಾಸಕ್ತನೆಂದೂ, ಕ್ರೋಧಿ, ಮಾನಿ, ಮಾಯಿ, ಲೋಭಿಯೆಂದೂ, ಹಾಸ್ಯಶೀಲನೆಂದೂ, ರತಿ, ಅರತಿಶಾಲಿಯೆಂದೂ, ಶೋಕಿಯೆಂದೂ, ಭಯಭೀತನೆಂದೂ, ಜುಗುಪ್ಸಿಯೆಂದೂ, ಸ್ತ್ರೀವೇದಿಯೆಂದೂ, ಪುಂವೇದಿಯೆಂದೂ, ನಪುಂಸಕವೇದಿಯೆಂದೂ, ತೀವ್ರಕಷಾಯಿಯೆಂದೂ, ಮಂದಕಷಾಯಿಯೆಂದೂ, ಪಾಪಿಯೆಂದೂ ಮತ್ತು ಪುಣ್ಯವಂತನೆಂದೂ ಹಿಂಸಕ-ಅಹಿಂಸಕನೆಂದೂ, ಅಸತ್ಯ-ಸತ್ಯವಾದಿಯೆಂದೂ, ಚೌರ್ಯ-ಅಚೌರ್ಯನೆಂದೂ, ಕುಶೀಲ-ಸುಶೀಲನೆಂದೂ, ಪರಿಗ್ರಹೀ-ಅಪರಿಗ್ರಹಿಯೆಂದೂ ತೋರುತ್ತದೆ ಈ ಮೊದಲಾದ ಅವಸ್ಥೆಗಳು ಮೋಹನೀಯ ಕರ್ಮದ ತೀವ್ರತೆಯಿಂದಲೋ ಅಥವಾ ಮಂದತೆಯಿಂದಲೋ ಭಾಸವಾಗುತ್ತದೆ. ಜ್ಞಾನಾವರಣೀಯಕರ್ಮದ ಕ್ಷಯೋಪಶಮದ ಹೀನಾಧಿಕತೆಯಿಂದ ಕೆಲವರು ಮಂದಜ್ಞಾನಿಗಳೂ ಕೆಲವರು ತೀವ್ರಜ್ಞಾನಿಗಳೂ ಕೆಲವರು ಶಾಸ್ತ್ರಗಳ ವಿಶೇಷ ಜ್ಞಾನಿಗಳೂ ಕೆಲವರು ಅಲ್ಪಜ್ಞಾನಿಗಳೂ ಕೆಲವರು ಶೀಘ್ರಸ್ಮರಣೆಯುಳ್ಳವರೂ ಮತ್ತು ಕೆಲವರು ಅಲ್ಪಸ್ಮರಣೆಯುಳ್ಳವರೂ ಆಗಿರುವರೆಂದು ತಿಳಿಯಲ್ಪಡುತ್ತದೆ.

ದರ್ಶನಾವರಣೀಯ ಕರ್ಮದ ಕ್ಷಯೋಪಶಮದಿಂದ ಕೆಲವರು ಮಂದದೃಷ್ಟಿಯುಳ್ಳವರಾಗಿಯೂ ಕೆಲವರು ತೀವ್ರದೃಷ್ಟಿಯುಳ್ಳವರಾಗಿಯೂ ಇರುವರೆಂದು ತಿಳಿಯಲ್ಪಡುತ್ತದೆ. ಅಂತರಾಯಕರ್ಮದ ಕ್ಷಯೋಪಶಮದಿಂದ ಕೆಲವರು ವಿಶೇಷ ಆತ್ಮಬಲವುಳ್ಳವರಾಗಿಯೂ, ಇನ್ನೂ ಕೆಲವರು ಕಡಿಮೆ ಬಲವುಳ್ಳವರಾಗಿಯೂ ಇರುವರೆಂದು ತಿಳಿಯಲ್ಪಡುತ್ತದೆ. ನಾನಾ ಜೀವಗಳ ನಾನಾ

ಪ್ರಕಾರದ ಪರಿಣಾಮಗಳಿಗೆ ಅಘಾತಿಕರ್ಮಗಳೇ ಕಾರಣಗಳೆಂದೇ ತೋರುತ್ತದೆ. ಆಯುಷ್ಯಕರ್ಮದ ಉದಯದಿಂದ ಕೆಲವರು ದೀರ್ಘಾಯುಳ್ಳವರಾಗಿಯೂ, ಇನ್ನೂ ಕೆಲವರು ಅಲ್ಪಾಯುಗಳಾಗಿಯೂ ಮತ್ತೆ ಕೆಲವರು ಜನಿಸಿದ ಕೂಡಲೇ ಸಾಯುವವರೂ ಆಗಿರುತ್ತಾರೆಂದು ತಿಳಿಯಲ್ಪಡುತ್ತದೆ. ನಾಮಕರ್ಮದ ಉದಯದಿಂದ ಕೆಲವರು ಸುಂದರರೂ, ಕೆಲವರು ಕುರೂಪಿಗಳೂ, ಕೆಲವರು ಬಲಿಷ್ಠರೂ, ಕೆಲವರು ಬಲಹೀನರೂ, ಕೆಲವರು ರೋಗಿಗಳೂ, ಕೆಲವರು ಆರೋಗ್ಯವಂತರೂ, ಕೆಲವರು ಸ್ತ್ರೀಯರೂ, ಕೆಲವರು ಪುರುಷರೂ, ಕೆಲವರು ಕುರುಡರೂ, ಕೆಲವರು ಕಿವುಡರೂ, ಕೆಲವರು ಒಂದೇಕಣ್ಣುಳ್ಳವರೂ, ಕೆಲವರು ಕುಂಟರೂ, ಕೆಲವರು ಸದಾಚಾರಿಗಳೂ, ಕೆಲವರು ದುರಾಚಾರಿಗಳೂ ಆಗಿರುತ್ತಾರೆಂದು ತಿಳಿದುಬರುತ್ತದೆ. ಗೋತ್ರಕರ್ಮದ ಉದಯದಿಂದ ಕೆಲವರು ಉಚ್ಚಕುಲದವರೂ, ಇನ್ನೂ ಕೆಲವರು ನೀಚಕುಲದವರೂ ಆಗಿರುತ್ತಾರೆಂದು ಕಂಡುಬರುತ್ತದೆ.

ವೇದನೀಯಕರ್ಮದ ಉದಯದಿಂದ ಕೆಲವರು ಧನವಂತರಾಗಿಯೂ, ಕೆಲವರು ಬಡವರಾಗಿಯೂ, ಕೆಲವರು ಅಧಿಕಕುಟುಂಬವುಳ್ಳವರಾಗಿಯೂ, ಕೆಲವರು ಕಡಿಮೆಕುಟುಂಬವುಳ್ಳವರಾಗಿಯೂ, ಕೆಲವರು ಇಂದ್ರಿಯಭೋಗಸಂಪನ್ನರಾಗಿಯೂ ಕೆಲವರು ಭೋಗರಹಿತರಾಗಿಯೂ, ಕೆಲವರು ವಿಶಾಲವೂ ಸುಂದರವೂ ಆದ ಭವನದಲ್ಲಿ ವಾಸಿಸುವವರೂ, ಕೆಲವರು ಮರದಡಿಯಲ್ಲೇ ವಾಸವಾಗಿರುವವರೂ, ಕೆಲವರು ವಸ್ತ್ರಾಭರಣಗಳಿಂದ್ಯುಕ್ತರಾಗಿಯೂ, ಕೆಲವರು ವಸ್ತ್ರಾಭರಣ ಇಲ್ಲದವರಾಗಿಯೂ, ಕೆಲವರು ಸುಖಿಗಳಾಗಿಯೂ ಅನೇಕರು ದುಃಖಿಗಳಾಗಿಯೂ ಇರುವರೆಂದು ತೋರುತ್ತದೆ. ಹೀಗೆ ಈ ಎಂಟು ಕರ್ಮಗಳ ಉದಯದಿಂದಲೇ ಈ ಪ್ರಪಂಚದ ನಾಟಕ ನಡೆಯುತ್ತಿರುತ್ತದೆ. ಜಗತ್ತಿನ ಪ್ರಾಣಿವರ್ಗವು ಇಂದ್ರಿಯ ವಿಷಯಗಳ ಲೋಲುಪಿಯಾಗಿಯೂ ಮತ್ತು ಆಹಾರ, ಭಯ, ಮೈಥುನ, ಪರಿಗ್ರಹಗಳೆಂಬ ನಾಲ್ಕು ಸಂಜ್ಞೆಗಳಿಂದ ದಿಙ್ಮೂಢರಾಗಿಯೂ ಇರುತ್ತವೆ. ಇದರಿಂದಲೇ ಇಷ್ಟವಸ್ತುಗಳಲ್ಲಿ ರಾಗವನ್ನೂ, ಅನಿಷ್ಟವಸ್ತುಗಳಲ್ಲಿ ದ್ವೇಷವನ್ನೂ ಮಾಡುತ್ತಿರುತ್ತಾರೆ.

ವ್ಯವಹಾರದೃಷ್ಟಿಯು ರಾಗದ್ವೇಷಗಳನ್ನುಂಟುಮಾಡುವ ನಿಮಿತ್ತಗಳನ್ನು ಸನ್ಮುಖದಲ್ಲಿಟ್ಟುಕೊಳ್ಳುತ್ತದೆ. ನಿಶ್ಚಯದೃಷ್ಟಿಯಿಂದ ಸಕಲ ಜೀವಿಗಳು, ಅವರು

ಸಿದ್ಧರಾಗಲಿ ಅಥವಾ ಸಂಸಾರಿಗಳಾಗಿರಲಿ ಸಮಾನವಾಗಿಯೇ ತೋರುತ್ತವೆ. ಕರ್ಮರಹಿತ, ಶರೀರರಹಿತ, ರಾಗ ದ್ವೇಷರಹಿತ ಜೀವಿಗಳೆಲ್ಲರೂ ಸಮಾನ ಜ್ಞಾನಿಗಳಾಗಿ, ಸುಖಿಗಳಾಗಿ, ಪರಮ ಸಂತೋಷಿಗಳಾಗಿ, ಪರಮ ಶುದ್ಧರಾಗಿ ಹೀಗೆ ಏಕಾಕಾರವಾಗಿಯೇ ತೋರುತ್ತವೆ. ಆತ್ಮನಲ್ಲಿ ಎಷ್ಟು ಗುಣಗಳಿರುವುವೋ ಅಷ್ಟೇ ಗುಣಗಳು ಎಲ್ಲಾ ಆತ್ಮರುಗಳಲ್ಲಿ ಸರಿಸಮಾನವಾಗಿರುತ್ತವೆ. ಎಲ್ಲಾ ಆತ್ಮರುಗಳ ಸತ್ತೆಯು ಭಿನ್ನವಾಗಿದ್ದರೂ ಸ್ವಭಾವದಿಂದ ಎಲ್ಲವೂ ಸಮಾನವೆಂದೇ ತೋರುತ್ತದೆ. ಪುದ್ಗಲಗಳೆಲ್ಲವೂ ಪರಮಾಣುರೂಪವಾಗಿಯೇ ತೋರುತ್ತವೆ. ಧರ್ಮ, ಅಧರ್ಮ, ಆಕಾಶ, ಕಾಲ ಈ ನಾಲ್ಕು ದ್ರವ್ಯಗಳು ಸ್ವಾಭಾವಿಕವಾಗಿಯೇ ಅಮೂರ್ತಗಳಾಗಿರುತ್ತವೆ ಮತ್ತು ಚಿಕ್ಕ-ದೊಡ್ಡ, ಸುಂದರ-ಅಸುಂದರ, ಸ್ವಾಮಿ-ಸೇವಕ, ಗುರು-ಶಿಷ್ಯ. ಪೂಜ್ಯ-ಪೂಜಕ ಮೊದಲಾದ ಭೇದಗಳು ದೂರವಾಗುವುವು.

ಯಾವನು ಹೀಗೆ ಏಕದೃಷ್ಟಿಯಿಂದ ನೋಡುತ್ತಾನೋ ಆವನ ರಾಗ ದ್ವೇಷವಿಕಾರಗಳು ದೂರವಾಗಿ ಅವನು ಸಮಭಾವದಲ್ಲಿ ಬರುತ್ತಾನೆ. ಈ ವಿಧದ ಸಮಭಾವವನ್ನು ತಂದುಕೊಂಡು ಯಾವನು ಧ್ಯಾನಿಸುವನೋ ಪರ ಜೀವಗಳಿಂದ ಉಪಯೋಗವನ್ನು ದೂರಗೊಳಿಸಿ ಕೇವಲ ತನ್ನ ಸ್ವಭಾವದಲ್ಲಿ ತನ್ಮಯಗೊಳಿಸುತ್ತಾನೆಯೋ ಆಗಲೇ ನಿಷ್ಚಲನಾಗಿ, ಆತ್ಮಸ್ಥನಾಗಿ ಮತ್ತು ಆತ್ಮಾನುಭವಿಯಾಗಿ ಆಗುತ್ತಾನೆ. ಆಗ ಪರಮ ನಿರ್ಜರೆಗೆ ಕಾರಣವಾದ ಸಾಮಾಯಿಕಚಾರಿತ್ರವು ಆವನಿಗೆ ಪ್ರಕಾಶಿಸುತ್ತದೆ. ವಿಕಲ್ಪರಹಿತವಾದ ಭಾವದಲ್ಲಿರುವುದೇ ಸಾಮಾಯಿಕವಾಗಿರುತ್ತದೆ. ಇದೇ ಮುನಿಪದವೂ ಇದೇ ಮೋಕ್ಷಮಾರ್ಗವೂ ಇದೇ ರತ್ನತ್ರಯಗಳ ಏಕತೆಯೂ ಆಗಿರುತ್ತದೆ.

ಶ್ರೀ ಯೋಗೀಂದ್ರದೇವರು ಅಮೃತಾಶೀತಿಯಲ್ಲಿ ಹೇಳಿರುತ್ತಾರೆ :

**ಸತ್ಸಾಮ್ಯಭಾವಗಿರಿಗಹ್ವರಮಧ್ಯಮೇತ್ಯ**
**ಪದ್ಮಾಸನಾದಿಕಮದೋಷಮಿದಂ ಚ ಬಧ್ವಾ |**
**ಆತ್ಮಾನಮಾತ್ಮನಿ ಸಖೇ ! ಪರಮಾತ್ಮರೂಪಂ**
**ತ್ವಂ ಧ್ಯಾಯ ವೇತ್ಸಿ ನನು ಯೇನ ಸುಖಂ ಸಮಾಧೇಃ ॥ ೨೮ ॥**

**ಭಾವಾರ್ಥ :** ಎಲೈಮಿತ್ರನೇ ! ಸತ್ಯವಾದ ಸಮಭಾವನೆಯೆಂಬ ಗುಹೆಯ ಮಧ್ಯದಲ್ಲಿ ಕುಳಿತುಕೊಂಡು, ನಿರ್ದೋಷವಾದ ಪದ್ಮಾಸನದಲ್ಲಿದ್ದು

ತನ್ನಾತ್ಮನಲ್ಲಿಯೇ ಪರಮಾತ್ಮಸ್ವರೂಪೀ ಆತ್ಮನನ್ನು ನೀನು ಧ್ಯಾನಿಸುತ್ತಾ ಸಮಾಧಿಸುಖದ ಅನುಭವವನ್ನು ಭೋಗಿಸು.



## ರಾಗದ್ವೇಷಗಳ ತ್ಯಾಗವೇ ಸಾಮಾಯಿಕ

**ರಾಯೆ-ರೋಸ ಬೇ ಪರಿಹರಿವಿ ಜೋ ಸಮುಭಾಉ ಮುಣೇಇ ।**
**ಸೋ ಸಾಮಾಇಉ ಜಾಣಿ ಫುಡು ಕೇವಲಿ ಏಮ ಭಣೇಇ ॥ ೧೦೦ ॥**

**ಅನ್ವಯಾರ್ಥ** : ಜೋ ರಾಯ-ರೋಸ ಬೇ ಪರಿಹರಿವಿ ಸಮುಭಾಉ ಮುಣೇಇ–ಯಾವನು ರಾಗದ್ವೇಷಗಳನ್ನು ತ್ಯಾಗಮಾಡಿ ಸಮಭಾವನೆಯನ್ನು ಭಾವಿಸುವನೋ, ಸೋ ಫುಡು ಸಾಮಾಇಉ ಜಾಣಿ-ಅವನಿಗೆ ಸಾಮಾಯಿಕವು ಪ್ರಕಟವಾಗುವುದೆಂದು ತಿಳಿ. ಏಮ ಕೇವಲಿ ಭಣೇಇ–ಎಂದು ಕೇವಲ ಭಗವಾನರು ಹೇಳಿರುತ್ತಾರೆ.

**ಭಾವಾರ್ಥ** : ರಾಗದ್ವೇಷಗಳ ತ್ಯಾಗವೇ ಸಾಮಾಯಿಕ. ಮಿಥ್ಯಾದೃಷ್ಟಿಯಾದ ಅಜ್ಞಾನಿ ಶರೀರ ಮತ್ತು ಇಂದ್ರಿಯಗಳ ವಿಷಯವಾಗಿ ರಾಗವುಳ್ಳವನಾಗಿ, ಅವುಗಳಿಂದಲೇ ತನ್ನ ಮನೋರಥ ಸಿದ್ಧಿಸುವುದೆಂದು ತಿಳಿದು, ಅವುಗಳಲ್ಲಿ ಪ್ರೀತಿಯನ್ನಿಡುತ್ತಾನೆ. ಅವುಗಳಿಗೆ ಯಾವುದಾದರಿಂದ ಬಾಧೆಯುಂಟಾಗುವ ಸಂಶಯವುಂಟಾದರೆ ಅವುಗಳಲ್ಲಿ ದ್ವೇಷವನ್ನುಮಾಡುತ್ತಾನೆ. ಇದರಿಂದ ಎಂದೆಂದಿಗೂ ರಾಗದ್ವೇಷಗಳಿಂದ ಬಿಡುಗಡೆಯಾಗಲಾರನು ಮತ್ತು ತಪಸ್ಸನ್ನು ಮಾಡುತ್ತಿದ್ದರೂ ಕೂಡ ಕಷಾಯಗಳೆಂಬ ಕಳಂಕದಿಂದ ಬಿಡುಗಡೆಯಾಗಲಾರನು.

ಸಮ್ಯಗ್ದೃಷ್ಟಿ ಜೀವನಭಾವನೆಗಳು ಮೇಲ್ಕಂಡ ಭಾವನೆಗಳಿಗೆ ವಿಪರೀತವಾದವುಗಳು. ಅವನು ಸಂಸಾರಸುಖದಲ್ಲಿ ಶ್ರದ್ಧೆಯನ್ನಿಡದೆ ಅತೀಂದ್ರಿಯವೂ, ಆತ್ಮೀಕವೂ ಆದ ಆನಂದದಲ್ಲಿ ಶ್ರದ್ಧೆಯನ್ನಿಟ್ಟುಕೊಳ್ಳುತ್ತಾನೆ. ಕೇವಲಸಿದ್ಧಾವಸ್ಥೆಯ ಪ್ರೇಮಿಯಾಗಿರುತ್ತಾನಲ್ಲದೆ, ಸಂಸಾರ ಶರೀರಭೋಗಗಳಿಂದ ಪೂರ್ಣರೀತ್ಯಾ ವೈರಾಗ್ಯಶಾಲಿಯಾಗಿರುತ್ತಾನೆ. ಆತನ ಅಂತರಂಗದಲ್ಲಿ ಸಾಂಸಾರಿಕ ವಿಷಯವಾಗಿ ತಿಲಮಾತ್ರವೂ ರಾಗಇರುವುದಿಲ್ಲ. ಪ್ರಪಂ

ಚದ ಅವಸ್ಥೆಗಳನ್ನು ಸಮಭಾವನೆಯಿಂದಲೇ ನೋಡುತ್ತಿರುತ್ತಾನೆ ಸಕಲ ಸಂಸಾರಿಜೀವಗಳ ಅಂತರಂಗದಲ್ಲಿ ಯಾವ ಅಂತರಂಗ ಮತ್ತು ಬಾಹ್ಯ ಅವಸ್ಥೆಗಳು ಪರಿವರ್ತನೆಯಾಗುತ್ತಿರುತ್ತವೆಯೋ, ಅವೆಲ್ಲವೂ ಅವುಗಳ ಸ್ವಯಂ ಪರಿಣಮನಶಕ್ತಿ ಮತ್ತು ಕರ್ಮಗಳ ಉದಯ, ಉಪಶಮ, ಕ್ಷಯ ಅಥವಾ ಕ್ಷಯೋಪಶಮಗಳ ಅಧೀನವಾಗಿರುತ್ತವೆ. ಅವುಗಳ ಅವಸ್ಥೆಗಳನ್ನು ಯಾವ ಅನ್ಯಜೀವಿಗಳು ಬಲತ್ಕಾರದಿಂದ ಬದಲಾಯಿಸುವುದಕ್ಕಾಗುವುದಿಲ್ಲ. ಆದರೆ ಪರಸ್ಪರ ಪರಿಣಮನದಲ್ಲಿ ಅವರು ನಿಮಿತ್ತಕಾರಣ ಮಾತ್ರ ಆಗಬಹುದು. ಹಾಗಾದರೂ ಅಂತರಂಗ ನಿಮಿತ್ತ ಮತ್ತು ಉಪಾದಾನವು ಪ್ರತಿಯೊಂದರಲ್ಲಿಯೂ ಸ್ವತಂತ್ರವಾಗಿರುತ್ತವೆ. ಹಾಗೆ ಪರವಸ್ತುಗಳ ಸ್ವಭಾವವನ್ನರಿತ ಜ್ಞಾನಿಯು ತನ್ನ ಜೀವನದಲ್ಲಿಯೂ ಮರಣದಲ್ಲಿಯೂ ದುಃಖದಲ್ಲಿಯೂ ಸುಖದಲ್ಲಿಯೂ ಅಥವಾ ಬೇರೆ ಯಾವ ಕಾರಣದಲ್ಲಿಯೂ ಸಮಭಾವನೆಯನ್ನಿಟ್ಟುಕೊಂಡು ಕರ್ಮಗಳ ಒಳ್ಳೆಯ ಅಥವಾ ಕೆಟ್ಟ ವಿಪಾಕಗಳನ್ನು ಸಮಭಾವನೆಯಿಂದಲೇ ಭೋಗಿಸುತ್ತಾನೆ.

ಬೇರೆಯವರ ಜೀವನ ಮರಣ ವಿಷಯದಲ್ಲಿಯೂ, ಸುಖದುಃಖಾದಿಗಳ ವಿಷಯದಲ್ಲಿಯೂ ಮತ್ತು ಬೇರೆ ಯಾವ ಕಾರ್ಯಗಳುಂಟಾದರೂ ಕೂಡ ಅವುಗಳಲ್ಲಿಯೂ ಸಮಭಾವನೆಯನ್ನೇ ಇಡುತ್ತಾನೆ. ಆದರೆ ರಾಗದ್ವೇಷವಾಡಿ ಆಕುಲಿತನಾಗುವುದಿಲ್ಲ. ಹೆಂಡತಿ, ಪುತ್ರ, ಪುತ್ರಿ ಮೊದಲಾದವರ ಮರಣವಾಗಲಿ ಅಥವಾ ಬೇರೆ ಯಾವ ಬಂಧು-ಮಿತ್ರರ ಮರಣವೋ ವಿಯೋಗವೋ ಆಗಲಿ, ಜ್ಞಾನಿಯು ಸಮಭಾವನೆಯಿಂದ ವಿಚಾರಿಸುತ್ತಾ ಶೋಕಾಕುಲಿತನಾಗುವುದಿಲ್ಲ. ಈ ಅವಸ್ಥೆಗಳೆಲ್ಲವೂ ತಮ್ಮ ತಮ್ಮ ಕರ್ಮಗಳ ಉದಯಕ್ಕನುಸಾರವೆಂದೂ, ಅವನ್ನು ಯಾರೂ ದೂರಗೊಳಿಸಲು ಸಾಧ್ಯವಾಗುವುದಿಲ್ಲವೆಂದೂ ತಿಳಿಯುತ್ತಾನೆ.

ತನ್ನ ಜೀವನದ ಮತ್ತು ಪರಜೀವಗಳ ಜೀವನದ ಸ್ಥಿತಿಗತಿಗಳನ್ನು ನೋಡಿ ರಾಗದ್ವೇಷಗಳನ್ನು ಪಡುವುದಿಲ್ಲ. ಹೇಗೆಂದರೆ : ಸೂರ್ಯನ ಉದಯವಾಗುವುದು, ಪ್ರಕಾಶವು ವ್ಯಾಪಿಸುವುದು, ಪ್ರಕಾಶವು ಕಡಿಮೆಯಾಗುವುದು, ಅಂಧಕಾರವು ವ್ಯಾಪಿಸುವುದು ಇವೆಲ್ಲವೂ ಸೂರ್ಯನ ಗಮನಾಗಮನ ಸ್ವಭಾವದ ಕಾರಣವಾಗಿರುತ್ತದೆ. ಜ್ಞಾನಿಯಾದವನು ಹಗಲಾದರೂ ಸರಿ, ರಾತ್ರಿಯಾ

ದರೂ ಸರಿ ಸೂರ್ಯನ ಪರಿಣಮನವನ್ನು ಸಮಭಾವನೆಯಿಂದಲೇ ನೋಡು ತ್ತಿರುತ್ತಾನೆ. ಇದೇ ಪ್ರಕಾರ ಜಗತ್ತಿನಲ್ಲಿ ಪರಮಾಣುಗಳಿಂದಲೇ ಸ್ಕಂಧಗಳು, ಸ್ಕಂಧಗಳಿಂದಲೇ ಅನೇಕ ಪರಮಾಣುಗಳು ಆಗುತ್ತಿರುತ್ತವೆ. ಪುದ್ಗಲ ಗಳ ಕಾರ್ಯವು ಅವುಗಳ ಸ್ವಭಾವಕ್ಕನುಗುಣವಾಗಿ ಆಗುತ್ತಿರುತ್ತವೆ. ಉದಾ: ನೀರಿನಿಂದ ಆವಿಯುಂಟಾಗುವುದು. ಆದರಿಂದ ಮೇಘಗಳ ನಿರ್ಮಾಣ ವಾಗುವುದು. ಅವುಗಳಿಂದ ವೃಷ್ಟಿ (ಮಳೆ) ಯುಂಟಾಗುವುದು. ಆದರಿಂದ ನದಿಗಳ ಉದ್ಭವವಾಗುವುದು. ಆದರಿಂದ ಮಣ್ಣು ಕೆಸರಾಗುವುದು. ಭೀಕರ ವಾದ ಗಾಳಿಯುಂಟಾಗುವುದು. ಭೂಕಂಪವಾಗುವುದು. ಮಿಂಚುಬರು ವುವು. ಪರ್ವತಗಳು ಭಿನ್ನಭಿನ್ನವಾಗುವುವು. ಮನೆಮಠಗಳು ಬೀಳುವುವು. ಕಾಡುಗಳಲ್ಲಿ ವೃಕ್ಷಗಳು ಬೆಳೆಯುವುವು. ಅರಣ್ಯಾದಿಗಳಿಗೆ ಬೆಂಕಿಹತ್ತುವುದು. ಇವೇ ಮೊದಲಾದ ಅನೇಕಕಾರ್ಯಗಳು ಪ್ರಕೃತಿಸ್ವಭಾವದಿಂದ ಆಗುತ್ತಿರು ತ್ತದೆ. ಅಂತಹ ಕಾರ್ಯಗಳಲ್ಲಿ ಜ್ಞಾನಿಯಾದವನು ರಾಗದ್ವೇಷವನ್ನುಂಟು ಮಾಡಿಕೊಳ್ಳದೆ ಸಮಭಾವನೆಯಿಂದಲೇ ನೋಡುತ್ತಿರುತ್ತಾನೆ ಮತ್ತು ವಿಚಾರಿ ಸುತ್ತಿರುತ್ತಾನೆ. ಜಗತ್ತಿನ ಚಾರಿತ್ರವು ಒಂದು ನಾಟಕದಂತಿದೆ. ಆ ನಾಟಕ ವನ್ನು ಜ್ಞಾನಿಯು ಸ್ವಾಮಿಯಾಗಿ ವಿಚಾರಿಸದೆ, ಜ್ಞಾತೃವಾಗಿ ದೃಷ್ಟನೂ ಮತ್ತು ದರ್ಶಕನೂ ಆಗಿ ನೋಡುತ್ತಾನೆ. ಈ ನಾಟಕದಲ್ಲುಂಟಾಗುವ ಹಾನಿ ಮತ್ತು ಲಾಭಗಳನ್ನು ಕಂಡು ಸಮಭಾವನೆಯಿಂದಿರುತ್ತಾನೆ. ಯಾವನು ಸಮಭಾವನೆಯಿಂದ ತನ್ನ ಪರಿಣಮನವನ್ನು ಮತ್ತು ಪರರ ಪರಿಣಮನವನ್ನು ನೋಡುತ್ತಾನೆಯೋ ಅವನ ಪೂರ್ವಬದ್ಧಕರ್ಮಗಳು ಫಲವನ್ನು ಕೊಟ್ಟು ಉದುರಿಹೋಗುವುದಲ್ಲದೆ, ನೂತನ ಕರ್ಮಗಳ ಬಂಧವು ಆಗಲಾರದು. ಒಂದು ವೇಳೆ ಆದರೂ ಬಹಳ ಅಲ್ಪವೇ ಆಗುತ್ತದೆ. ಅಂತಹ ಸಾಮಾಯಿಕ ಚಾರಿತ್ರವನ್ನು ಪಾಲಿಸುವ ಸಮಭಾವಧಾರೀ ಜ್ಞಾನೀ ಗೃಹಸ್ಥನು ಸಾಮಾ ಯಿಕ ಶಿಕ್ಷಾವ್ರತವನ್ನೂ ಹಾಗೆ ಮುನಿಯು ಸಾಮಾಯಿಕ ಚಾರಿತ್ರವನ್ನೂ ಪಾಲಿಸುವವನಾಗುತ್ತಾನೆ.

ಸಮಯಸಾರಕಲಶದಲ್ಲಿ ಹೇಳಿರುತ್ತಾರೆ.

ಇತಿ ವಸ್ತುಸ್ವಭಾವಂ ಸ್ವಂ ಜ್ಞಾನೀ ಜಾನಾತಿ ತೇನ ಸಃ।
ರಾಗಾದೀನ್ನಾತ್ಮನಃ ಕುರ್ಯಾನ್ನಾತೋ ಭವತಿ ಕಾರಕಃ ॥೧೪-೬॥

ಭಾವಾರ್ಥ : ಜ್ಞಾನಿಯು ಸಕಲ ವಸ್ತುಗಳ ಸ್ವಭಾವವನ್ನು ಮತ್ತು ತನ್ನನ್ನು ತಿಳಿಯುವುದರಿಂದ ರಾಗದ್ವೇಷಭಾವಗಳನ್ನು ತನ್ನಂತರಂಗದಲ್ಲಿ ತಂದುಕೊಳ್ಳುವುದಿಲ್ಲ. ಆದುದರಿಂದ ಅವನು ರಾಗದ್ವೇಷಗಳ ಕರ್ತೃವಲ್ಲ. ಚಾರಿತ್ರಮೋಹನೀಯ ಕರ್ಮದ ಉದಯದಿಂದುಂಟಾಗುವ ವಿಚಾರಗಳನ್ನು ಕರ್ಮಗಳ ಉದಯರೂಪ ಮಹಾರೋಗವೆಂದು ಪರಿಭಾವಿಸುತ್ತಾ ಅವೆಲ್ಲವುಗಳನ್ನು ಹೋಗಲಾಡಿಸಲು ಯಾವಾಗಲೂ ಉದ್ಯುಕ್ತನಾಗಿರುತ್ತಾನೆ.

## ಛೇದೋಪಸ್ಥಾಪನಾ ಚಾರಿತ್ರ

**ಹಿಂಸಾದಿಉ-ಪರಿಹಾರು ಕರಿ ಜೋ ಅಪ್ಪಾ ಹು ಠವೇಇ ।**
**ಸೋ ಬಿಯಉಊ ಚಾರಿತ್ತು ಮುಣಿ ಜೋ ಪಂಚಮ-ಗಇ ಣೇಇ**
**॥ ೧೦೧ ॥**

ಅನ್ವಯಾರ್ಥ : ಜೋ ಹಿಂಸಾದಿಉ-ಪರಿಹಾರು ಕರಿ ಅಪ್ಪಾ ಹು ಠವೇಇ-ಯಾರು ಹಿಂಸಾದಿ ಪಂಚಪಾಪಗಳನ್ನು ತ್ಯಜಿಸಿ ಆತ್ಮನನ್ನು ಸ್ಥಿರಗೊಳಿಸಿಕೊಳ್ಳುತ್ತಾನೆಯೋ. ಸೋ ಬಿಯಉಊ ಚಾರಿತ್ತು ಮುಣಿ-ಅವನು ಛೇದೋಪಸ್ಥಾನಧಾರಿಯೆಂದು ತಿಳಿ, ಜೋ ಪಂಚಮ-ಗಇ ಣೇಇ-ಇದು (ಈ ಚಾರಿತ್ರವು) ಪಂಚಮಗತಿಗೆ (ಸಿದ್ಧಪದವಿಗೆ) ಕಾರಣವಾಗಿರುತ್ತದೆ.

ಭಾವಾರ್ಥ : ಸಾಧುಗಳಿಂದ ಸಾಧಿಸಲು ಯೋಗ್ಯವಾದ ಐದು ಚಾರಿತ್ರಗಳಲ್ಲಿ ಎರಡನೆಯ ಚಾರಿತ್ರವಾದ ಛೇದೋಪಸ್ಥಾಪನೆಯ ಸ್ವರೂಪವನ್ನು ವರ್ಣಿಸುತ್ತಾರೆ. ಮೊದಲನೆಯ ಸಾಮಾಯಿಕ ಚಾರಿತ್ರವನ್ನು ಧರಿಸುವುದರಿಂದ ಸಾಧುವು ನಿರ್ವಿಕಲ್ಪಕಸಮಾಧಿಯಲ್ಲಿಯೂ ಮತ್ತು ಸಮಭಾವನೆಯಲ್ಲಿಯೂ ತನ್ಮಯನಾಗುತ್ತಾನೆ. ಅಲ್ಲಿ ಗ್ರಹಣ ಮತ್ತು ತ್ಯಾಗಗಳ ಪ್ರಶ್ನೆಯೇ ಉದ್ಭವಿಸುವುದಿಲ್ಲ.

ಸ್ವಾನುಭವದ ಪ್ರಾಪ್ತಿಯೇ ಸಾಮಾಯಿಕ. ಆದರೆ ಇದು ಒಂದು ಅಂತರ್ಮುಹೂರ್ತಕ್ಕಿಂತ ಅಧಿಕ ಆತ್ಮಜ್ಞಾನೀ ಛದ್ಮಸ್ಥನಿಗೇ ಉಂಟಾಗುವುದು ಅಸಂಭವವಾಗಿದೆ. ಉಪಯೋಗವು ಚಂಚಲವಾಗುವಾಗ ಅಶುಭಭಾವಗಳಿಂದ ರಕ್ಷಣೆಹೊಂದಲು ವ್ಯವಹಾರ ಚಾರಿತ್ರವನ್ನು ವಿಕಲ್ಪವನ್ನಾಗಿ

ಮಾಡಿಕೊಳ್ಳುತ್ತಾನೆ. ವ್ಯವಹಾರಚಾರಿತ್ರದ ಅವಲಂಬನೆಯಿಂದ ಸಾಧುವು ಮತ್ತೆ ಅಂತರ್ಮುಹೂರ್ತನಂತರ ಆತ್ಮನಲ್ಲಿ ತಲ್ಲೀನನಾಗುತ್ತಾನೆ. ಪ್ರಮತ್ತ ಭಾವದಲ್ಲಿಯೂ ಕೂಡ ಅಂತರ್ಮುಹೂರ್ತಕ್ಕಿಂತ ಅಧಿಕ ನಿಲ್ಲಲಾರನು.

ಸಾಮಾಯಿಕವು ಭೇದವಾದನಂತರ ಪುನಃ ಸಾಮಾಯಿಕದಲ್ಲಿ ಸ್ಥಿರ ನಾಗುವುದೇ ಛೇದೋಪಸ್ಥಾಪನಾ ಚಾರಿತ್ರವಾಗಿದೆ. ನಿಶ್ಚಯ ಚಾರಿತ್ರವೇ ಸಾಮಾಯಿಕ. ಆದರಿಂದ ಉಪಯೋಗಗಳು ದೂರವಾದನಂತರ ಯಾವ ವ್ಯವಹಾರ ಚಾರಿತ್ರದ ಮೂಲಕ ಪುನಃ ನಿಶ್ಚಯ ಚಾರಿತ್ರದಲ್ಲಿ ಬರುವುದೇ ಛೇದೋಪಸ್ಥಾಪನಾ ಚಾರಿತ್ರ. ಇದು ಸವಿಕಲ್ಪವಾಗಿರುತ್ತದೆ. ನಿಶ್ಚಯ ಚಾರಿತ್ರವು ನಿರ್ವಿಕಲ್ಪವಾಗಿರುತ್ತದೆ. ಈ ಭೇದರೂಪವಾದ ಚಾರಿತ್ರದಲ್ಲಿಯೇ ಸಾಧುವು ಇಪ್ಪತ್ತೆಂಟು ಮೂಲಗುಣಗಳನ್ನು ಸಂರಕ್ಷಿಸಿಕೊಳ್ಳಬಲ್ಲನು.

**ಅಹಿಂಸಾದಿ ಐದು ವ್ರತಗಳು :** 1) ಸಾಂಕಲ್ಪಿಕ ಮತ್ತು ಆರಂಭ ಹಿಂಸೆಯನ್ನು ಮನ, ವಚನ, ಕಾಯ, ಕೃತ, ಕಾರಿತ, ಅನುಮೋದನಗಳಿಂದ ಸಂಪೂರ್ಣವಾಗಿ ತ್ಯಜಿಸುವುದು, ಭಾವಗಳಲ್ಲಿ ರಾಗದ್ವೇಷಗಳು ಇಲ್ಲದಿರುವುದು ಮತ್ತು ಬಾಹ್ಯದಲ್ಲಿ ಪ್ರಾಣಿವರ್ಗವನ್ನು ಸಂರಕ್ಷಣೆಮಾಡಲುದ್ಯುಕ್ತನಾಗುವುದು ಅಹಿಂಸಾಮಹಾವ್ರತವಾಗಿರುತ್ತದೆ.

2) ತೀರ್ಥಂಕರ ಪರಮದೇವರ ವಚನಗಳಿಗೆ ಅವಿರೋಧವಾದ ಯಥಾರ್ಥವಚನವನ್ನಾಡುವುದು ಮತ್ತು ಧರ್ಮರಕ್ಷಣೆಗೈಯ್ಯುವುದು ಸತ್ಯಮಹಾವ್ರತ ವಾಗಿರುವುದು. ಪರಪೀಡಾಕಾರಿಯಾದ ಮತ್ತು ಆರಂಭಕಾರಿಯಾದ ಸಕಲ ವಚನಗಳಿಂದ ವಿರಕ್ತನಾಗುವುದೂ, ಅಹಿಂಸಾಪೋಷಕವೂ ಮತ್ತು ವೀತ ರಾಗತೆಯ ವರ್ಧಕವೂ ಆದ ವಚನವನ್ನಾಡುವುದೂ ಕೂಡ ಸತ್ಯಮಹಾವ್ರತ ವಾಗಿರುತ್ತದೆ.

3) ಪರರಿಂದ ಕೊಡದಿರುವ ಪರವಸ್ತುಗಳನ್ನು ಬುದ್ಧಿಪೂರ್ವಕವಾದ ಪ್ರಮಾದಭಾವನೆಯಿಂದ ಗ್ರಹಿಸದೆ ಇರುವುದು ಮತ್ತು ಕಳ್ಳತನ ಸಂಬಂಧ ವಾದ ವಚನದೋಷಗಳಿಂದ ರಕ್ಷಣೆಹೊಂದುವುದು ಅಚೌರ್ಯಮಹಾವ್ರತ ವಾಗಿರುತ್ತದೆ.

4) ಸ್ತ್ರೀ, ದೇವಿ, ಸ್ತ್ರೀ ಪಶು ಮತ್ತು ಚಿತ್ರಾಭಗಳೆಂಬ ಈ ನಾಲ್ಕು ವಿಧದ ಸ್ತ್ರೀಯರ ಸಂಬಂಧವಾದ ಮನವಚನಕಾಯ, ಕೃತಕಾರಿತಅನುಮೋದನ ಗಳಿಂದ ಕುಶೀಲವನ್ನು ತ್ಯಜಿಸಿ, ಸರಳವೂ ನಿರ್ವಿಕಾರವೂ ಆದ ಶೀಲಸ್ವಭಾವ ದಿಂದಿದ್ದು, ಕಾಮವಿಕಾರದ ಆಕ್ರಮಣೆಯಿಂದ ರಕ್ಷಣೆಪಡೆಯುವುದು ಬ್ರಹ್ಮ ಚರ್ಯ ಮಹಾವ್ರತವಾಗಿರುತ್ತದೆ.

5) ಚೇತನಾಚೇತನ ಮೊದಲಾದ ಸಕಲ ಪರಿಗ್ರಹಗಳನ್ನು ತ್ಯಜಿಸಿ, ಆಕಿಂಚನ್ಯ ಭಾವದಿಂದಿದ್ದು, ಎಲ್ಲಾ ವಿಧದ ಮಮತ್ವ ಪರಿಣಾಮವನ್ನು ತ್ಯಜಿ ಸುವುದು ಪರಿಗ್ರಹಮಹಾವ್ರತವಾಗಿರುತ್ತದೆ.

ಈ ಐದು ಮಹಾವ್ರತಗಳ ರಕ್ಷಣಾರ್ಥವಾಗಿ 5 ಸಮಿತಿ, 5 ಇಂದ್ರಿಯ ನಿಗ್ರಹ, 6 ಆವಶ್ಯಕ ನಿತ್ಯಕ್ರಿಯೆ, ಬೇರೆ 7 ಗುಣಗಳು ಒಟ್ಟು 5+5+6+7= 23 ಗುಣಗಳನ್ನು ಸಾಧುಗಳು ಪಾಲಿಸುತ್ತಾರೆ.

ಐದು ಸಮಿತಿ: ನಾಲ್ಕುಮೊಳದವರೆಗಿನ ಭೂಮಿಯನ್ನು ನೋಡಿ ಕೊಂಡು ಹಗಲಿನಲ್ಲಿ ಪ್ರಾಸುಕ ಭೂಮಿಯಲ್ಲಿ ನಡೆಯುವುದೇ ಈರ್ಯಾಸಮಿತಿ.

ಮಧುರವೂ ಹಿತಕಾರಿಯೂ ಸಭ್ಯವೂ ಆದ ವಚನಗಳನ್ನು ಆಡುವುದು. ಕರ್ಕಶವೂ ಮರ್ಮಭೇದಕವೂ ಆದ ವಚನಗಳನ್ನು ಆಡದಿರುವುದು–ಇವೇ ಭಾಷಾಸಮಿತಿ.

ದಾತೃಗಳಾದ ಶ್ರಾವಕರಿಂದ ಭಕ್ತಿಪ್ರೇಮಪೂರ್ವಕವಾಗಿ ಶುದ್ಧವಾದ ಆಹಾರವನ್ನು ಭಿಕ್ಷಾವೃತ್ತಿಯಿಂದ ಸಂತೋಷಪೂರ್ವಕ ಗ್ರಹಣೆಮಾಡುವುದೇ ಏಷಣಾಸಮಿತಿ.

ತನ್ನ ಶರೀರ, ತನ್ನಲ್ಲಿರುವ ಪಿಂಛಿ, ಕಮಂಡಲು ಮತ್ತು ಶಾಸ್ತ್ರಗ್ರಂಥ ಗಳನ್ನು ಸ್ಥಳವನ್ನು ನೋಡಿ, ಪರಿಶೋಧಿಸಿ ಇಡುವಿಕೆ ಮತ್ತು ತೆಗೆದುಕೊಳ್ಳು ವಿಕೆ–ಇವೇ ಆದಾನ ನಿಕ್ಷೇಪಣಾಸಮಿತಿ.

ಜೀವಜಂತುಗಳಿಲ್ಲದ ಸ್ಥಾನದಲ್ಲಿ ಮಲಮೂತ್ರಗಳನ್ನು ಬಿಡುವುದೇ ಉತ್ಸರ್ಗಸಮಿತಿ.

ಐದು ಇಂದ್ರಿಯನಿಗ್ರಹ: ಸ್ಪರ್ಶನ, ರಸನ, ಘ್ರಾಣ, ಚಕ್ಷು ಮತ್ತು ಶ್ರೋತ್ರ–ಈ ಐದು ಇಂದ್ರಿಯ ವಿಷಯಗಳ ಇಚ್ಛೆಯನ್ನು ತಡೆಯುವುದು,

ಇಂದ್ರಿಯ ಭೋಗಗಳಿಂದ ವಿರಕ್ತನಾಗುವುದು, ಸಮಭಾವನೆಯಿಂದ ಇಂದ್ರಿಯ ಗಳ ಕಾರ್ಯವನ್ನು ನಡೆಸುವುದು, ನಿರ್ವಿಕಾರಭಾವನೆಯಿಂದ ಇಂದ್ರಿಯಗಳ ಮೂಲಕ ಜ್ಞಾನಪ್ರಾಪ್ತ ಮಾಡಿಕೊಳ್ಳುವುದು-ಇವು ಇಂದ್ರಿಯನಿಗ್ರಹವಾಗಿರು ತ್ತದೆ.

**ಆರು ಆವಶ್ಯಕ ನಿತ್ಯಕ್ರಿಯೆ**

1) ಪ್ರತಿನಿತ್ಯವೂ ತ್ರಿಕಾಲಗಳಲ್ಲಿ ಸಾಮಾಯಿಕವನ್ನು ಮಾಡುವುದು-ಸಕಲಪ್ರಾಣಿಗಳಲ್ಲಿ ಸಮತಾಭಾವವನ್ನಿಡುವುದು ಸಾಮಾಯಿಕ (ಸಮತಾ)

2) ಮನ, ವಚನ, ಕಾಯಗಳಿಂದ ಸಂಭವಿಸಿದ ದೋಷಗಳ ನಿರಾ ಕರಣೆಯನ್ನು ಪ್ರಾತಃಕಾಲ ಮತ್ತು ಸಾಯಂಕಾಲಗಳಲ್ಲಿ ಮಾಡಿಕೊಳ್ಳುವುದು, ಪಶ್ಚಾತ್ತಾಪಮಾಡಿಕೊಳ್ಳುವುದು ಪ್ರತಿಕ್ರಮಣ.

3) ಮುಂದೆ ದೋಷಗಳುಂಟಾಗದಂತೆ ಭಾವನೆಗಳನ್ನು ಭಾವಿಸು ವುದು-ಸ್ವಾಧ್ಯಾಯವನ್ನು ಮಾಡುವುದು ಪ್ರತ್ಯಾಖ್ಯಾನ (ಸ್ವಾಧ್ಯಾಯ)

4) ತೀರ್ಥಂಕರ ಪರಮದೇವರ ಗುಣಗಳನ್ನು ಸ್ತುತಿಮಾಡುವುದು ಸ್ತವನ

5) ತೀರ್ಥಂಕರರಿಗೆ ತ್ರಿಕರಣ ಶುದ್ಧಿಯಿಂದ ಕೈಗಳನ್ನು ಜೋಡಿಸಿ ತಲೆಯನ್ನು ಬಗ್ಗಿಸಿ ನಮಸ್ಕಾರವನ್ನು ಮಾಡುವುದು ವಂದನೆ.

6) ಶರೀರ ಸಂಬಂಧವಾದ ಮಮತ್ವವನ್ನು ತ್ಯಜಿಸಿ ಶುಭಪರಿಣಾಮ ದಿಂದ ಅರ್ಹದಾದಿ ಪಂಚಪರಮೇಷ್ಠಿಗಳನ್ನು ನೆನೆವುದು ಅಥವಾ ನಿಂತು ಕೊಂಡು ಧ್ಯಾನವನ್ನು ಮಾಡುವುದು ಕಾಯೋತ್ಸರ್ಗ.

**ಬೇರೆ ಏಳು ಗುಣಗಳು**

1) ವಸ್ತ್ರಗಳನ್ನು ತ್ಯಜಿಸಿ ಬಾಲಕನೋಪಾದಿಯಲ್ಲಿ ನಗ್ನನಾಗಿರುವುದು (ವಸ್ತ್ರವಿಲ್ಲದಿರುವುದು-ದಿಗಂಬರತ್ವವನ್ನು ಧರಿಸುವುದು) ಅಚೇಲತ್ವ (ನಗ್ನತ್ವ).

2) ಎರಡು, ಮೂರು ಅಥವಾ ನಾಲ್ಕು ತಿಂಗಳಿಗೊಮ್ಮೆ ಉಪವಾಸ ದಿಂದಿದ್ದು, ಗಡ್ಡ, ಮೀಸೆ, ತಲೆಯ ಕೂದಲುಗಳನ್ನು ಕಿತ್ತುಕೊಳ್ಳುವುದು ಕೇಶಲೋಚ.

3) ಸ್ನಾನಮಾಡದಿರುವುದು ಅಸ್ನಾನ.

4) ಹಲ್ಲುಗಳನ್ನುಜ್ಜದಿರುವುದು ಅದಂತಧಾವನ.

5) ಸ್ವಚ್ಛವಾದ ಭೂಮಿಯಲ್ಲಿ ಮಲಗುವುದು ಭೂಮಿಶಯನ. (ಕ್ಷಿತಿ ಶಯನ-ಭೂಶಯನ-ಭೂಮಿಶಯ್ಯಾ)

6) ಹಗಲಿನಲ್ಲಿ (ಮಧ್ಯಾಹ್ನದಲ್ಲಿ) ಒಂದಾವರ್ತಿಮಾತ್ರ ಆಹಾರ ಸೇವಿಸುವುದು ಏಕಭುಕ್ತ. (ಏಕಭೋಜನ)

7) ನಿಂತುಕೊಂಡು ಆಹಾರವನ್ನು ಸೇವಿಸುವುದು (ಭೋಜನಮಾಡುವುದು) ಸ್ಥಿತಿಭೋಜನ (ಭೋಜನಮಾಡುವುದು).

ಹೀಗೆ ಈ ಇಪ್ಪತ್ತೆಂಟು ಮೂಲಗುಣಗಳನ್ನು ನಿರ್ದೋಷವಾಗಿ ಪಾಲಿಸುವುದು ಛೇದೋಪಸ್ಥಾಪನಾಚಾರಿತ್ರವಾಗಿರುತ್ತದೆ. ನಿಜವಾಗಿಯೂ ಆತ್ಮಸ್ಥನಾಗುವುದೇ ಚಾರಿತ್ರವೆಂದೆನಿಸುವುದು.

ತತ್ವಾರ್ಥಸಾರದಲ್ಲಿ ಹೇಳಿರುತ್ತಾರೆ :

**ಯತ್ರ ಹಿಂಸಾದಿಭೇದೇನ ತ್ಯಾಗಃ ಸಾವದ್ಯಕರ್ಮಣಃ ।**
**ವ್ರತಲೋಪೇ ವಿಶುದ್ಧಿರ್ವಾ ಛೇದೋಪಸ್ಥಾಪನಂ ಹಿ ತತ್ ॥೪೭-೬॥**

**ಭಾವಾರ್ಥ:** ಹಿಂಸಾದಿ ಪಂಚಪಾಪ ಕರ್ಮಗಳನ್ನು ತ್ಯಜಿಸುವುದು ಅಥವಾ ವ್ರತಗಳ ಭಂಗವಾದರೆ ಪ್ರಾಯಶ್ಚಿತ್ತಮಾಡಿಕೊಂಡು ಪುನಃ ವ್ರತಗಳನ್ನು ಸ್ವೀಕರಿಸುವುದೇ ಛೇದೋಪಸ್ಥಾಪನಾ ಚಾರಿತ್ರವಾಗಿರುತ್ತದೆ.



## ಪರಿಹಾರ ವಿಶುದ್ಧಿ ಚಾರಿತ್ರ

**ಮಿಚ್ಛಾದಿಲು ಜೋ ಪರಿಹರಣು ಸಮ್ಮದ್ದಂಸಣ-ಸುದ್ಧಿ ।**
**ಸೋ ಪರಿಹಾರವಿಸುದ್ಧಿ ಮುಣಿ ಲಹು ಪಾವಹಿ ಸಿವಸಿದ್ಧಿ ॥೧೦೨॥**

**ಅನ್ವಯಾರ್ಥ :** ಜೋ ಮಿಚ್ಛಾದಿಲು ಪರಿಹರಣು–ಮಿಥ್ಯಾತ್ವಾದಿಗಳನ್ನು ತ್ಯಜಿಸಿ, ಸಮ್ಮದ್ದಂಸಣ-ಸುದ್ಧಿ–ಸಮ್ಯಗ್ದರ್ಶನವನ್ನು ಶುದ್ಧಿಗೊಳಿಸುವುದು, ಸೋ ಪರಿಹಾರವಿಸುದ್ಧಿ ಮುಣಿ–ಅದನ್ನೇ ಪರಿಹಾರ ವಿಶುದ್ಧಿ ಸಂಯಮವೆಂದು

೩೪೨. ಲಹು ಸಿವ-ಸಿದ್ಧಿ ಪಾವಹಿ–ಅದರಿಂದ ಶೀಘ್ರವೇ ಮೋಕ್ಷ ಸಿದ್ಧಿಯಾಗುವುದು.

**ಭಾವಾರ್ಥ :** ವ್ಯವಹಾರದಲ್ಲಿ ಪರಿಹಾರವಿಶುದ್ಧಿ ಸಂಯಮದ ಸ್ವರೂಪವು ಪ್ರಚಲಿತವಾಗಿರುವುದೇನೆಂದರೆ : ಯಾರು ಮುವತ್ತು ವರ್ಷಗಳ ಪರ್ಯಂತರ ಮನೆಯಲ್ಲಿ ಸುಖವಾಗಿದ್ದು ಮತ್ತೆ ದೀಕ್ಷೆಯನ್ನು ಸ್ವೀಕರಿಸಿ ಎಂಟು ವರ್ಷಗಳ ತನಕ ತೀರ್ಥಂಕರರ ಸನ್ನಿಧಿಯಲ್ಲಿದ್ದು ಪ್ರತ್ಯಾಖ್ಯಾನ ಪೂರ್ವದ ಅಭ್ಯಾಸವನ್ನು ಮಾಡುವ ಸಾಧುವು ವಿಶೇಷ ಹಿಂಸೆಯ ತ್ಯಾಗಿಯಾಗಿ ಆರನೆಯ, ಏಳನೇಯ ಗುಣಸ್ಥಾನದವನಾಗುತ್ತಾನೆ. ಇಲ್ಲಿ ಮುನಿಯು ಆಧ್ಯಾತ್ಮ ದೃಷ್ಟಿಯಿಂದ ಶಬ್ದಾರ್ಥಗಳ ಪ್ರಕಾರ ಮಿಥ್ಯಾತ್ವಾದಿ ವಿಷಯಗಳನ್ನು ತ್ಯಜಿಸಿ, ಸಮ್ಯಗ್ದರ್ಶನವನ್ನು ವಿಶೇಷರೂಪವಾಗಿ ಶುದ್ಧಿಗೊಳಿಸುವುದೇ ಪರಿಹಾರ ವಿಶುದ್ಧಿಯಾಗಿರುತ್ತದೆ. ಅದು ವಿಶೇಷಸಂಯಮ ಸಾಧುವಿಗೆ ಮಾತ್ರ ಪ್ರಾಪ್ತವಾಗುತ್ತದೆ.

ಶುದ್ಧಾತ್ಮನ ನಿರ್ಮಲಾನುಭವವೇ ಮೋಕ್ಷಮಾರ್ಗವಾಗಿರುತ್ತದೆ. ಆದಕ್ಕೆ ಮಿಥ್ಯಾದರ್ಶನ, ಮಿಥ್ಯಾಜ್ಞಾನ ಮತ್ತು ಮಿಥ್ಯಾಚಾರಿತ್ರಗಳು ಬಾಧಕಗಳಾಗಿರುತ್ತವೆ. ಅನಂತಾನುಬಂಧೀ ಕಷಾಯಗಳು ಮತ್ತು ಮಿಥ್ಯಾದರ್ಶನ ಕರ್ಮಗಳ ಉಪಶಮ ಮತ್ತು ಕ್ಷಯದಿಂದ ಏಕಕಾಲದಲ್ಲಿ ಸಮ್ಯಗ್ದರ್ಶನ, ಸಮ್ಯಗ್ಜ್ಞಾನ ಮತ್ತು ಸಮ್ಯಕ್ಚಾರಿತ್ರಗಳು ಪ್ರಕಟವಾಗುತ್ತವೆ. ಈ ಮೂರು ರತ್ನಗಳು ಆತ್ಮನ ಗುಣಗಳಾಗಿರುತ್ತವೆ. ಜ್ಞಾನದರ್ಶನಚಾರಿತ್ರಗಳು ಏಕದೇಶದಲ್ಲಿ ಪ್ರಕಾಶಿಸುತ್ತವೆ. ಇದರ ಸಂಪೂರ್ಣ ಪ್ರಕಾಶವಾಗಬೇಕಾದರೆ ಅಪ್ರತ್ಯಾಖ್ಯಾನ, ಪ್ರತ್ಯಾಖ್ಯಾನ ಮತ್ತು ಸಂಜ್ವಲನ ಕಷಾಯಗಳ ಉಪಶಮ ಅಥವಾ ಕ್ಷಯಮಾಡಬೇಕಾಗಿ ಬರುತ್ತದೆ. ಹೇಗೆ ಹೇಗೆ ಸ್ವಾನುಭವದ ಅಭ್ಯಾಸವು ವೃದ್ಧಿಯಾಗುವುದೋ ಹಾಗೆ ಕಷಾಯಗಳ ಮಲಿನತೆ ಕಡಿಮೆ ಕಡಿಮೆಯಾಗುತ್ತಾ ಹೋಗುತ್ತದೆ.

ಆಗ ಜ್ಞಾನವು ನಿರ್ಮಲವಾಗುತ್ತಲೂ, ಚಾರಿತ್ರವು ವೃದ್ಧಿಯಾಗುತ್ತಲೂ ಹೋಗುತ್ತದೆ. ಶ್ರಾವಕ ಪದದಲ್ಲಿ ಏಕದೇಶಚಾರಿತ್ರವೂ, ಸಾಧುಪದದಲ್ಲಿ ಸಕಲ ಚಾರಿತ್ರವೂ ಆಗುತ್ತದೆ. ಸಾಧುವಿನ ಸ್ವಾನುಭವದ ತೀವ್ರತೆಯಿಂದ

ವೀತರಾಗತೆಯುಂಟಾಗುವಾಗ, ಬುದ್ಧಿಪೂರ್ವಕ ಕಷಾಯರೂಪ ಮಲದ ರುಚಿಯು ರುಚಿಸದೆ, ನಿರ್ಮಲ ಶುದ್ಧಸ್ವಾನುಭವವೇ ಪ್ರಕಾಶಿಸುತ್ತದೆ. ಅಂತಹವನ ಸಮ್ಯಗ್ದರ್ಶನವು ಗಾಢವಾಗಿಯೂ, ಜ್ಞಾನವು ನಿರ್ಮಲವಾಗಿಯೂ ಮತ್ತು ಚಾರಿತ್ರವು ಪರಿಶುದ್ಧವೂ ಆಗುತ್ತದೆ.

ರತ್ನತ್ರಯಗಳ ಶುದ್ಧತೆಯನ್ನು ಮಾಡಿಕೊಳ್ಳುವುದೆಂದರೆ ಮೋಕ್ಷದ ಹತ್ತಿರಕ್ಕೆ ಬರುವುದೆಂದರ್ಥ. ಆದ್ದರಿಂದ ಸಾಧುವು ನಿರ್ಗ್ರಂಥಪದದಲ್ಲಿದ್ದು, ವಿಶೇಷವಾಗಿ ಆತ್ಮಧ್ಯಾನದ ಅಭ್ಯಾಸವನ್ನು ಮಾಡುವುದು, ಮೋಹಮಲ್ಲನೊಡನೆ ಹೋರಾಡುವುದು, ಜ್ಞಾನ ಮತ್ತು ವೈರಾಗ್ಯವೆಂಬ ಖಡ್ಗವನ್ನು ತೀಕ್ಷ್ಣಮಾಡಿಕೊಳ್ಳುವುದು ಅತ್ಯಾವಶ್ಯಕವಾಗಿರುತ್ತದೆ. ಜ್ಞಾನಿಗೆ ಸಮ್ಯಗ್ದರ್ಶನದ ಪ್ರತಾಪದಿಂದ ಜಗತ್ತಿನ ಪದಾರ್ಥಗಳ ಯಥಾರ್ಥ ಪರಿಜ್ಞಾನವುಂಟಾಗುತ್ತದೆ. ಈ ಜಗತ್ತು ಆರು ದ್ರವ್ಯಗಳಿಂದ ಭರಿತವಾಗಿರುವುದೆಂದೂ, ಸಕಲ ಪದಾರ್ಥಗಳು (ದ್ರವ್ಯಗಳು) ತಮ್ಮ ತಮ್ಮ ಸ್ವಭಾವದಲ್ಲಿರುವುದೆಂದೂ, ಸಂಸಾರಿ ಜೀವಗಳು ಪುದ್ಗಲಗಳ ಸಂಯೋಗದಿಂದ ಅಶುದ್ಧಗಳಾಗಿ ನರ, ನಾರಕ, ತಿರ್ಯಂಚ, ದೇವ ಮೊದಲಾದ ಶರೀರಗಳಲ್ಲಿ ಸೇರಿಕೊಂಡು ನಾನಾ ಪ್ರಕಾರವಾದ ರೂಪದಲ್ಲಿ ಕಾಣುತ್ತಿವೆಯೆಂದೂ, ಆದರೆ ಆ ಎಲ್ಲಾ ಜೀವಗಳೂ ದ್ರವ್ಯಸ್ವಭಾವದಿಂದ ಶುದ್ಧವೂ, ಏಕರೂಪವೂ, ಜ್ಞಾನಾನಂದಿಯೂ, ಪರಮ ನಿರ್ವಿಕಾರಿಯೆಂದೂ ಜ್ಞಾನಿಯಾದವನು ನೋಡುತ್ತಾನೆ.

ಈ ಜ್ಞಾನನಿಮಿತ್ತದಿಂದ ಅವನಿಗೆ ಇವೆಲ್ಲವೂ ಆಶ್ಚರ್ಯವಾಗಿ ಭಾಸವಾಗುವುದಿಲ್ಲ. ಅವನು ಆರು ದ್ರವ್ಯಗಳ ಮೂಲಗುಣಗಳನ್ನು ಮತ್ತು ಪರ್ಯಾಯ ಸ್ವರೂಪವನ್ನು ಕೇವಲಜ್ಞಾನಿಯೋಪಾದಿಯಲ್ಲಿ ಶಂಕಾರಹಿತನಾಗಿ ತಿಳಿಯುತ್ತಾನೆ. ತನ್ನ ಆತ್ಮನ ಸತ್ತೆಯನ್ನು ಅನ್ಯ ಆತ್ಮರುಗಳ ಸತ್ತೆಗಿಂತ ಭಿನ್ನವೆಂದೇ ತಿಳಿಯುತ್ತಾನೆ. ಆದರೂ ಕೂಡ ಸ್ವಭಾವರೂಪವಾಗಿ ಸಕಲ ಆತ್ಮರುಗಳನ್ನು ತನ್ನಾತ್ಮನಂತೆ ಏಕರೂಪವಾಗಿಯೂ ಶುದ್ಧಗಳಾಗಿಯೂ ನೋಡುತ್ತಾನೆ. ಈ ಜ್ಞಾನದ ಪ್ರತಾಪದಿಂದ ಅವನಂತರಂಗದಲ್ಲಿ ಸಹಜ ವೈರಾಗ್ಯವುಂಟಾಗಿ “ತನ್ನ ಆತ್ಮೀಕ ಪದವೇ ಸಾರವಾದುದೂ ಉತ್ತಮವೂ ಮತ್ತು ಗ್ರಹಣಯೋಗ್ಯವೂ ಆಗಿರುತ್ತದೆ” ಎಂದು ತಿಳಿಯುತ್ತಾನೆ.

ಸಿದ್ಧಪದವಿಯ ಪ್ರಾಪ್ತಿಯನ್ನು ಮಾಡಿಕೊಳ್ಳಬೇಕು. "ನಾಲ್ಕುಗತಿ ಸಂಬಂಧವಾದ ಪದವಿ (ಸ್ಥಾನ) ಗಳು ಕ್ಷಣಿಕಗಳಾಗಿಯೂ, ಈ ಇಂದ್ರಿಯಸುಖ ಗಳು ಆಕುಲತಾರೂಪಗಳಾಗಿಯೂ, ಪರಾಧೀನಗಳಾಗಿಯೂ, ನಾಶಶೀಲ ಗಳಾಗಿಯೂ, ಪಾಪಬಂಧಕ್ಕೆ ಕಾರಣಗಳಾಗಿಯೂ, ಅತೃಪ್ತಿಕಾರಕಗಳಾಗಿಯೂ ಮತ್ತು ಹೇಯಗಳಾಗಿಯೂ ಇವೆ" ಎಂದು ಜ್ಞಾನಿಯು ತಿಳಿದಿರುತ್ತಾನೆ. ಆದ್ದರಿಂದ ಅವನು ಭೋಗವಿಲಾಸದ ನಿಮಿತ್ತದಿಂದ ಚಕ್ರವರ್ತಿಪದವಿ, ನಾರಾ ಯಣ ಪದವಿ, ಬಲಭದ್ರ ಪದವಿ, ಪ್ರತಿನಾರಾಯಣ ಪದವಿ, ರಾಜ ಪದವಿ, ಇಂದ್ರ ಪದವಿ ಮೊದಲಾದವುಗಳನ್ನು ಇಚ್ಛಿಸಲಾರನು. ಆತನ ಅಂತರಂಗದಲ್ಲಿ ವೈರಾಗ್ಯ ಭಾವನೆಯೂ, ಎಲ್ಲಾ ಕರ್ಮಗಳ ಸಂಯೋಗವನ್ನು ದೂರಗೊಳಿಸುವ ವಿಚಾರವೂ ಇರುತ್ತದೆ. ಸಕಲ ರಾಗಾದಿ ವಿಭಾವಗಳನ್ನು ತ್ಯಜಿಸಲು ಯೋಗ್ಯವೆಂದೂ ಮತ್ತು ಎಲ್ಲಾ ಶರೀರ ಮತ್ತು ಭೋಗಸಾಮಗ್ರಿಗಳ ಸಂಯೋ ಗವನ್ನು ದೂರೀಕರಿಸುವುದು ಯೋಗ್ಯವೆಂದೂ ತಿಳಿದಿರುವ ದೃಢವಾದ ಜ್ಞಾನ ವೈರಾಗ್ಯಧಾರೀ ಸಮ್ಯಗ್ದೃಷ್ಟಿಯು ಪೂರ್ವಕರ್ಮಗಳ ಉದಯದಿಂದ ಯದ್ಯಪಿ ಶ್ರಾವಕಸ್ಥಾನದಲ್ಲಿ ಗೃಹಸ್ಥನ ಕಾರ್ಯಗಳನ್ನೆಸಗುತ್ತಿದ್ದುದು ಕಂಡುಬರುತ್ತಿ ದ್ದರೂ ಅವನ್ನು ಆಸಕ್ತಭಾವನೆಯಿಂದ ಅನುಭವಿಸಲಾರನು (ಮಾಡಲಾರನು). ಆ ಸಮ್ಯಗ್ದೃಷ್ಟಿ ಶ್ರಾವಕನು ಮಹಾರೋಗದಂತಿರುವ ಕಷಾಯಗಳ ಉದಯ ವನ್ನು ನಾಶಗೊಳಿಸಲುದ್ಯುಕ್ತನಾಗುವುದರಿಂದ ಆತನ ವ್ಯವಹಾರಗಳು ನಿರ್ಮಲ ವಾಗುತ್ತಾ ಹೋಗುತ್ತವೆ. ಆದ್ದರಿಂದ ಸಮ್ಯಗ್ದರ್ಶನದ ಶುದ್ಧತೆ ಮೋಕ್ಷೋ ಪಾಯದ ಮೂಲಕಾರಣವಾಗಿರುತ್ತದೆ. ವೀತರಾಗ ಯಥಾಖ್ಯಾತಚಾರಿತ್ರ ಕೇವಲಜ್ಞಾನದ ಲಾಭಕ್ಕೆ ಮಹೋಪಾಯವಾಗಿರುತ್ತದೆ.

ತತ್ವಾರ್ಥಸಾರದಲ್ಲಿ ಹೇಳಿರುತ್ತಾರೆ.

**ವಿಶಿಷ್ಟಪರಿಹಾರೇಣ ಪ್ರಾಣಿಘಾತಸ್ಯ ಯತ್ರ ಹಿ ।**
**ಶುದ್ಧಿರ್ಭವತಿ ಚಾರಿತ್ರಂ ಪರಿಹಾರವಿಶುದ್ಧಿ ತತ್ ॥ ೪೭-೬ ॥**

**ಭಾವಾರ್ಥ :** ಸಕಲ ಪ್ರಾಣಿಗಳ ಘಾತತ್ಯಾಗ ಮತ್ತು ಚಾರಿತ್ರದ ಪರಮಶುದ್ಧಿ ಇವೇ ಪರಿಹಾರ ವಿಶುದ್ಧಿ ಚಾರಿತ್ರವಾಗಿರುತ್ತದೆ.



## ಯಥಾಖ್ಯಾತ ಸಂಯಮ

**ಸುಹುಮುಹಂ ಲೋಹಹಂ ಜೋ ವಿಲಲು ಜೋ ಸುಹುಮುು ವಿ**
**ಪರಿಣಾಮುು ।**
**ಸೋ ಸುಹುಮುು ವಿ ಚಾರಿತ್ತ ಮುಣಿ ಸೋ ಸಾಸಯ-ಸುಹ ಥಾಮುು**
**॥ ೧೦೩ ॥**

**ಅನ್ವಯಾರ್ಥ :** ಸುಹುಮುಹಂ ಲೋಹಹಂ ಜೋ ವಿಲಲು–ಸೂಕ್ಷ್ಮ ಲೋಭವು ಕ್ಷಯವಾಗಿ, ಜೋ ಸುಹುಮುು ವಿ ಪರಿಣಾಮುು–ಯಾವ ಸೂಕ್ಷ್ಮ ವೀತರಾಗಭಾವವುಂಟಾಗುವುದೋ, ಸೋ ಸುಹುಮುು ವಿ ಚಾರಿತ್ತ ಮುಣಿ–ಅದನ್ನು ಸೂಕ್ಷ್ಮ ಅಥವಾ ಯಥಾಖ್ಯಾತ ಚಾರಿತ್ರವೆಂದು ತಿಳಿ. ಸೋ ಸಾಸಯ-ಸುಹ ಥಾಮುು–ಅದನ್ನು ಪಡೆದವನು ಅವಿನಾಶೀ ಸುಖದ ಸ್ಥಾನನು.

**ಭಾವಾರ್ಥ :** ಆತ್ಮನ ಗುಣವು ಸುಖವಾಗಿರುತ್ತದೆ. ಅದನ್ನು ಮರೆ ಮಾಚುವುದು ಘಾತಿಕರ್ಮಗಳು. ಆದರೂ ಮುಖ್ಯವಾಗಿ ಮೋಹನೀಯ ಕರ್ಮವಾಗಿರುತ್ತದೆ. ಎಷ್ಟೆಷ್ಟು ಭಾಗ ಮೋಹವು ನಾಶವಾಗುವುದೋ ಅಷ್ಟಷ್ಟು ಸುಖದ ಪ್ರಕಾಶವುಂಟಾಗುತ್ತಾ ಹೋಗುತ್ತದೆ. ವೀತರಾಗಭಾವ ದಿಂದ್ಯುಕ್ತವಾದ ಈ ಸುಖವು ಪರಮ ನಿರ್ಮಲವಾಗಿರುತ್ತದೆ.

ಸಮ್ಯಗ್ದೃಷ್ಟೀ ಜೀವನು ಅನಂತಾನುಬಂಧೀ ನಾಲ್ಕು ಕಷಾಯಗಳನ್ನು ಮತ್ತು ದರ್ಶನ ಮೋಹನೀಯಗಳ ಮೂರು ಪ್ರಕೃತಿಗಳನ್ನು ಕ್ಷಯಗೊಳಿಸಿ ದೊಡನೆ ಕ್ಷಾಯಿಕ ಸಮ್ಯಕ್ತ್ವವು ಮತ್ತು ಸ್ವರೂಪಾಚರಣ ಚಾರಿತ್ರವು ಪ್ರಕಟ ವಾಗಿ ಕ್ಷಾಯಿಕ ಸಮ್ಯಗ್ದೃಷ್ಟಿ ಆಗುತ್ತಾನೆ. ಈ ಶಕ್ತಿಯು ಪ್ರಕಟವಾದೊಡನೆ ಒಂದೊಂದು ಸಲ ಜ್ಞಾನಿಯು ತನ್ನ ಉಪಯೋಗಗಳನ್ನು ತನ್ನಲ್ಲಿಯೇ ಸ್ಥಿರ ಗೊಳಿಸಿಕೊಳ್ಳುತ್ತಾನೆ. ಅದರಿಂದ ಸ್ವರೂಪಾನುಭವವುಂಟಾಗಿ ಅತೀಂದ್ರಿಯ ಆನಂದಾನುಭವವಾಗುತ್ತದೆ. ಅವಿರತ ಸಮ್ಯಗ್ದರ್ಶನವಾದ ನಾಲ್ಕನೆಯ ಗುಣಸ್ಥಾನದಲ್ಲಿಯೇ ಈ ಸುಖಾನುಭವದ ಪ್ರಕಾಶವು ಪ್ರಕಾಶಿಸುತ್ತದೆ. ಮತ್ತೆ ಈ ಕ್ಷಾಯಿಕ ಸಮ್ಯಕ್ತ್ವೀ ಮಹಾನುಭಾವನು ಎಷ್ಟೆಷ್ಟು ಸ್ವಾನುಭವದ ಅಭ್ಯಾಸವನ್ನು ಮಾಡುವನೋ ಅಷ್ಟಷ್ಟೇ ಕಷಾಯಗಳ ರಸೋದಯವನ್ನು ಕಡಿಮೆಮಾಡುತ್ತಾ ಹೋಗುತ್ತಾನೆ. ಆಗ ಅವನಿಗೆ ನಿರ್ಮಲ ಸುಖದ ಅನು

ಭವವು ಆಗುತ್ತದೆ. ಐದನೆಯ ದೇಶಸಂಯಮ ಗುಣಸ್ಥಾನದಲ್ಲಿ ಅಪ್ರತ್ಯಾಖ್ಯಾನ ಕಷಾಯಗಳ ಉದಯವಾಗುವುದಿಲ್ಲ. ಆಗ ನಾಲ್ಕನೆಯ ಗುಣಸ್ಥಾನದ ಅಪೇಕ್ಷೆಯಿಂದ ನಿರ್ಮಲ ಸುಖದ ಅನುಭವ ಇರುತ್ತದೆ. ಆರನೆಯ ಪ್ರಮತ್ತಗುಣಸ್ಥಾನದಲ್ಲಿ ಪ್ರತ್ಯಾಖ್ಯಾನ ಕಷಾಯಗಳ ಉದಯವಾಗುವುದಿಲ್ಲ. ಆಗ ಇನ್ನೂ ಹೆಚ್ಚು ನಿರ್ಮಲ ಸುಖದ ವೇದನೆಯಾಗುತ್ತದೆ. ಏಳನೆಯ ಅಪ್ರಮತ್ತ ಗುಣಸ್ಥಾನದಲ್ಲಿ ಸಂಜ್ವಲನ ಕಷಾಯದ ಉದಯವು ಮಂದವಾಗಿರುತ್ತದೆ. ಆಗ ಇನ್ನೂ ನಿರ್ಮಲ ಸುಖದ ಅನುಭವದ ಅಧಿಕತೆಯಾಗುತ್ತದೆ. ಎಂಟನೆಯ ಅಪೂರ್ವಕರಣ ಗುಣಸ್ಥಾನದಲ್ಲಿ ಸಂಜ್ವಲನ ಕಷಾಯದ ಉದಯವು ಅತಿ ಮಂದವಾಗಿರುತ್ತದೆ. ಆಗ ಮತ್ತಷ್ಟು ಸುಖದ ನಿರ್ಮಲತೆಯು ಹೆಚ್ಚಾಗುತ್ತದೆ. ಒಂಭತ್ತನೆಯ ಅನಿವೃತ್ತಿಕರಣ ಗುಣಸ್ಥಾನದಲ್ಲಿ ಅತಿಶಯ ಮಂದಕಷಾಯದ ಉದಯವಿರುತ್ತದೆ. ಆಗ ವೀತರಾಗ ಭಾವದ ಅಗ್ನಿಯು ಪ್ರಜ್ವಲಿಸುತ್ತದೆ. ಅದರಿಂದ ಯೋಗಿಯು ಅನಿವೃತ್ತಿಕರಣದ ಎರಡನೆಯ ಭಾಗದಲ್ಲಿ ಅಪ್ರತ್ಯಾಖ್ಯಾನ ಕಷಾಯ–೪, ಪ್ರತ್ಯಾಖ್ಯಾನಕಷಾಯ–೪ ಹೀಗೆ ಎಂಟು ಕಷಾಯಗಳ ಸತ್ತೆಯನ್ನು ನಾಶಗೊಳಿಸುತ್ತಾನೆ. ಮೂರನೆಯ ಭಾಗದಲ್ಲಿ ನಪುಂಸಕವೇದ, ನಾಲ್ಕನೆಯ ಭಾಗದಲ್ಲಿ ಸ್ತ್ರೀವೇದ, ಐದನೆಯ ಭಾಗದಲ್ಲಿ ಹಾಸ್ಯ, ರತಿ, ಅರತಿ, ಶೋಕ, ಭಯ, ಜುಗುಪ್ಸಾ ಈ ಆರು ನೋಕಷಾಯಗಳು, ಆರನೆಯ ಭಾಗದಲ್ಲಿ ಪುರುಷವೇದ, ಏಳನೆಯ ಭಾಗದಲ್ಲಿ ಸಂಜ್ವಲನ ಕ್ರೋಧ ಕಷಾಯ, ಎಂಟನೆಯ ಭಾಗದಲ್ಲಿ ಸಂಜ್ವಲನ ಮಾನಕಷಾಯ, ಒಂಭತ್ತನೆಯ ಭಾಗದಲ್ಲಿ ಸಂಜ್ವಲನ ಮಾಯಾಕಷಾಯ ಇವುಗಳನ್ನು ಕ್ಷಯಗೊಳಿಸುತ್ತಾನೆ. ಈ ಪ್ರಕಾರ ಅಪ್ರತ್ಯಾಖ್ಯಾನದ ಅಧಿಕ ಸುಖದ ಅನುಭವವಾಗುತ್ತದೆ. 10 ನೇ ಸೂಕ್ಷ್ಮಸಾಂಪರಾಯ ಗುಣಸ್ಥಾನದ ಕೊನೆಯಲ್ಲಿ ಸಂಜ್ವಲನ ಲೋಭದ ಕ್ಷಯವನ್ನು ಮಾಡುತ್ತಾನೆ. ಆಗ ಹನ್ನೆರಡನೇ ಕ್ಷೀಣಕಷಾಯ ಗುಣಸ್ಥಾನದಲ್ಲಿ ಯಥಾಖ್ಯಾತ ಚಾರಿತ್ರವನ್ನು ಪ್ರಕಟಗೊಳಿಸಿಕೊಂಡು ಶುದ್ಧಸುಖದ ಅನುಭವವನ್ನು ಮಾಡಿಕೊಳ್ಳುತ್ತಾನೆ. ಹೀಗೆ 7+20+1=28 ಪ್ರಕಾರದ ಮೋಹನೀಯ ಕರ್ಮಗಳನ್ನು ನಾಶಮಾಡುವುದರಿಂದ ಶಾಶ್ವತಸುಖ ಪ್ರಾಪ್ತಿಯಾಗುತ್ತದೆ.

ಯೋಗಿಯು ಹನ್ನೆರಡನೆಯ ಕ್ಷೀಣಕಷಾಯ ಗುಣಸ್ಥಾನದಲ್ಲಿ ಎರಡನೆಯ ಶುಕ್ಲಧ್ಯಾನದ ಬಲದಿಂದ ಜ್ಞಾನಾವರಣ, ದರ್ಶನಾವರಣ, ಅಂತರಾಯ ಈ ಮೂರು ಕರ್ಮಗಳನ್ನು ಸರ್ವಥಾ ಕ್ಷಯಮಾಡಿದನಂತರ ಹದಿಮೂರನೆಯ ಸಯೋಗಕೇವಲಿ ಗುಣಸ್ಥಾನದಲ್ಲಿ ಪರಮಾತ್ಮ ಅರಹಂತ ಜಿನದೇವನಾಗುತ್ತಾನೆ. ಆಗ ನಿಜಾತ್ಮನ ಪ್ರತ್ಯಕ್ಷ ದರ್ಶನದ ಅನುಭವವಾಗುತ್ತದೆ. ಇಷ್ಟರವರೆಗೆ ಶ್ರುತಜ್ಞಾನದ ಪರೋಕ್ಷ ಜ್ಞಾನವಿತ್ತು. ಈಗ ಕೇವಲಜ್ಞಾನ ಪ್ರಾಪ್ತಿಯಿಂದ ಪ್ರತ್ಯಕ್ಷ ಅಮೂರ್ತಿಕ ಆತ್ಮನ ಜ್ಞಾನ ಮತ್ತು ಅನುಭವ ಆಗುತ್ತದೆ. ಅಂತರಾಯ ಕರ್ಮದ ನಾಶದಿಂದ ಅನಂತವೀರ್ಯ ಪ್ರಕಟವಾಗುತ್ತದೆ ಇದರಿಂದ ಸುಖವು ಪರಮಶುದ್ಧವೂ ಯಥಾರ್ಥವೂ ಅನಂತಕಾಲದವರೆವಿಗೆ ಅನುಭವಕ್ಕೆ ಬರುವುದೂ ಆಗಿರುತ್ತದೆ. ಈ ಗುಣಸ್ಥಾನದಲ್ಲಿ ಅನಂತಸುಖವಿದೆಯೆಂದೂ ಹೇಳುತ್ತಾರೆ. ಈ ಸುಖವು ಎಂದೆಂದಿಗೂ ಕಡಿಮೆಯಾಗದೆ ನಿರಂತರ ಸಿದ್ಧಾತ್ಮರ ಅನುಭವಕ್ಕೆ ಬರುತ್ತಿರುತ್ತದೆ.

ತತ್ವಾರ್ಥಸಾರದಲ್ಲಿ ಹೇಳಿರುತ್ತಾರೆ :

**ಸಂಸಾರವಿಷಯಾತೀತಂ ಸಿದ್ಧಾನಾಮವ್ಯಯಂ ಸುಖಂ ।**
**ಅವ್ಯಾಬಾಧಮಿತಿಪ್ರೋಕ್ತಂ ಪರಮಂ ಪರಮರ್ಷಿಭಿಃ ॥೪೫॥**
**ಲೋಕೇ ತತ್ಸದೃಶೋ ಹ್ಯರ್ಥಃ ಕೃತ್ಸ್ನೇಽಪ್ಯನ್ಯೋ ನ ವಿದ್ಯತೇ ।**
**ಉಪಮೀಯೇತ ತದ್ಯೇನ ತಸ್ಮಾನ್ನಿರುಪಮಂ ಸ್ಮೃತಂ ॥೫೨-೮॥**

**ಭಾವಾರ್ಥ:** ಸಂಸಾರ ವಿಷಯಗಳ ಪರಾಧೀನತೆಯಿಂದ ರಹಿತರಾದ ಸಿದ್ಧರಿಗೆ ಅವಿನಾಶಿಯಾದ ಸುಖವು ಪ್ರಾದುರ್ಭವಿಸುವುದು. ಅದನ್ನು ನಿರ್ಬಾಧಸುಖವೆಂದು ಪರಮ ಮಹರ್ಷಿಗಳು ಮುಕ್ತಕಂಠದಿಂದ ಪ್ರಶಂಸಿಸಿರುತ್ತಾರೆ. ಜಗತ್ತಿನಲ್ಲಿ ಯಾವುದೂ ಕೂಡ ಆ ಸುಖಕ್ಕೆ ಸಮಾನವಾದುದೊಂದಿಲ್ಲ. ಯಾವುದಕ್ಕೆ ಆ ಸುಖದ ಉಪಮಾನ ಕೊಡಲ್ಪಟ್ಟಿದೆ? ಆದ್ದರಿಂದ ಆ ಸುಖವನ್ನು ಉಪಮಾನರಹಿತ ಅನುಪಮ ಸುಖವೆಂದಿದ್ದಾರೆ.



## ಆತ್ಮನೇ ಪಂಚಪರಮೇಷ್ಠಿಯು

**ಅರಹಂತು ವಿ ಸೋ ಸಿದ್ಧು ಫುಡು ಸೋ ಆಯರಿಉ ವಿಯಾಣಿ ।**
**ಸೋ ಉವಝಾಯಉ ಸೋ ಜಿ ಮುಣಿ ಣಿಚ್ಛಇಂ ಅಪ್ಪಾ ಜಾಣಿ**
**॥ ೧೦೪ ॥**

**ಅನ್ವಯಾರ್ಥ :** ಣಿಚ್ಛಇಂ-ನಿಶ್ಚಯನಯದಿಂದ, ಅರಹಂತು ವಿ ಅಪ್ಪಾ ಜಾಣಿ-ಆತ್ಮನನ್ನೇ ಅರಹಂತನೆಂದು ತಿಳಿ. ಸೋ ಫುಡು ಸಿದ್ಧು-ಅದೇ ಆತ್ಮನು ಸಿದ್ಧನೆಂದೂ, ಸೋ ಆಯರಿಉ ವಿಯಾಣಿ-ಅವನೇ ಆಚಾರ್ಯನೆಂದೂ, ಸೋ ಉವಝಾಯಉ-ಅವನೇ ಉಪಾಧ್ಯಾಯನೆಂದೂ, ಸೋ ಜಿ ಮುಣಿ-ಅವನೇ ಸಾಧುವೆಂದೂ ತಿಳಿ.

**ಭಾವಾರ್ಥ :** ನಿಶ್ಚಯ.ನಯದಿಂದ ಯಾವ ಆತ್ಮನು ತನ್ನಾತ್ಮಾನುಭವವನ್ನು ಪಡೆದಿರುವನೋ ಅವನೇ ಪಂಚಪರಮೇಷ್ಠಿಗಳ ಅನುಭವವನ್ನು ಮಾಡಿಕೊಳ್ಳುತ್ತಾನೆ. ಈ ಐದು ಸ್ಥಾನಗಳು ಆತ್ಮನಿಗೇನೇ ಸಂಬಂಧಪಟ್ಟವುಗಳಾಗಿವೆ. ವ್ಯವಹಾರನಯದಿಂದ ಅಥವಾ ಪರ್ಯಾಯ ದೃಷ್ಟಿಯಿಂದ ಆತ್ಮನಲ್ಲಿ ಐದು ಭೇದಗಳಾಗುತ್ತವಾದರೂ ನಿಶ್ಚಯನಯದಿಂದ ಆತ್ಮನು ಒಂದೇ ರೂಪನಾಗಿರುತ್ತಾನೆ.

ಆತ್ಮನಲ್ಲಿ ನಾಲ್ಕು ಘಾತಿಕರ್ಮಗಳ ನಾಶದಿಂದ ಅನಂತದರ್ಶನ, ಅನಂತಜ್ಞಾನ, ಅನಂತವೀರ್ಯ, ಅನಂತಸುಖ, ಕ್ಷಾಯಿಕಸಮ್ಯಕ್ತ್ವ, ಕ್ಷಾಯಿಕ ಚಾರಿತ್ರಗಳೆಂಬ ಮಹಾಗುಣಗಳು ಪ್ರಕಟವಾಗುತ್ತವೆ. ಆದರೂ ನಾಲ್ಕು ಅಘಾತಿಕರ್ಮಗಳ ಉದಯ ಮತ್ತು ಅವುಗಳ ಸತ್ತೆ ಆತ್ಮಪ್ರದೇಶದಲ್ಲಿರುತ್ತವೆ. ಆದುದರಿಂದ ಜೀವನ್ಮುಕ್ತ ಪರಮಾತ್ಮರು ನಾಲ್ಕು ಘಾತಿಕರ್ಮಗಳನ್ನು ನಾಶಪಡಿಸಿದವರು ಅಥವಾ ಅರಹಂತರು. ಅವರ ಧ್ಯಾನಗೈಯುತ್ತಾ ಅವರ ಪುದ್ಗಲಮಯ ಶರೀರದ ವಿಷಯದಕಡೆಗೂ, ಸಿಂಹಾಸನ, ಛತ್ರ, ಚಾಮರ ಮೊದಲಾದ ಎಂಟು ಪ್ರಾತಿಹಾರ್ಯಗಳ ವಿಷಯದಕಡೆಗೂ ಲಕ್ಷ್ಯವನ್ನಿಡದೆ ಅವರ ಆತ್ಮನ ಪರಿಶುದ್ಧತೆಯ ಕಡೆಗೆ ಲಕ್ಷ್ಯವನ್ನಿಟ್ಟು, ತನ್ನನ್ನು ಅವರಂತೆ ಆಗಬೇಕೆಂಬ ಭಾವನೆಯನ್ನು ಭಾವಿಸಬೇಕು.

ಆತ್ಮೀಕಭಾವನೆಯಿಂದ ಅರಹಂತರ ಆತ್ಮನನ್ನು ಧ್ಯಾನಿಸುತ್ತಾ ಏಕಾಗ್ರ ಮನಸ್ಕನಾಗುವುದೇ ಅರ್ಹಂತರ ಧ್ಯಾನವಾಗಿದೆ. ಎಂಟುಕರ್ಮಗಳು ನಾಶ ವಾದೊಡನೆ ಸಿದ್ಧತ್ವ ಅವಸ್ಥೆ ಪ್ರಕಟವಾಗುತ್ತದೆ. ಅಲ್ಲಿ ಶರೀರಾದಿ ಯಾವ ವಿಧದ ಪುದ್ಗಲಗಳ ಸಂಯೋಗ ಇರುವುದಿಲ್ಲ. ಪುರುಷಾಕಾರ ಅಮೂರ್ತಿಕ ಧ್ಯಾನಸ್ಥ ಆತ್ಮನಿಗೆ ಸಿದ್ಧಪರಮಾತ್ಮನೆಂದು ಹೇಳುತ್ತಾರೆ. ಅವರು ನಿರಂ ಜನರೂ ನಿರ್ವಿಕಾರಿಯೂ ಆಗಿರುತ್ತಾರೆ. ಸಮ್ಯಕ್ತ್ವ, ಜ್ಞಾನ, ದರ್ಶನ, ವೀರ್ಯ, ಅಗುರುಲಘುತ್ವ, ಅವ್ಯಾಬಾಧತ್ವ, ಸೂಕ್ಷ್ಮತ್ವ, ಅವಗಾಹನತ್ವ ಗಳೆಂಬ ಎಂಟು ಪ್ರಸಿದ್ಧಗುಣಗಳಿಂದ ವಿಭೂಷಿತರೂ, ಕೃತಕೃತ್ಯರೂ, ನಿಶ್ಚಲ ಪರಮಾನಂದಿಗಳೂ ಆಗಿರುತ್ತಾರೆ. ಅವರ ಸ್ವರೂಪವನ್ನು ತನ್ನಾತ್ಮನಲ್ಲಿ ವಿರಾಜಮಾನಮಾಡಿಕೊಂಡು ಏಕತ್ವನಾಗುವುದೇ ಸಿದ್ಧರ ಧ್ಯಾನವಾಗಿರುತ್ತದೆ.

ಆಚಾರ್ಯರ ಆತ್ಮನು ಪರಿಶುದ್ಧ ಸಮ್ಯಗ್ದರ್ಶನ, ಜ್ಞಾನ, ಚಾರಿತ್ರ, ತಪ ಮತ್ತು ವೀರ್ಯಗಳೆಂಬ ಪಂಚಾಚಾರಗಳಿಂದ ವಿಭೂಷಿತನಾಗಿದ್ದಾನೆ ಮತ್ತು ನಿಶ್ಚಯ ರತ್ನತ್ರಯಮಯ ಶುದ್ಧಾತ್ಮಾನುಭವದಿಂದ ಅಲಂಕೃತನಾಗಿ ರುತ್ತಾನೆ.

ಒಂದುವೇಳೆ ಆಚಾರ್ಯರು ಶಿಷ್ಯರ ಕಲ್ಯಾಣಕ್ಕಾಗಿ ಪರಪೋಪಕಾರ ಭಾವದಿಂದ ಅನುರಂಜಿತರಾಗಿರುವುದು ಪ್ರಮಾದಾವಸ್ಥೆಯಾಗಿರುತ್ತದೆ. ಅದನ್ನು ಲಕ್ಷ್ಯದಲ್ಲಿಡದೆ ಆಚಾರ್ಯರ ಕೇವಲ ಶುದ್ಧಾತ್ಮಾನುಭವಾವಸ್ಥೆ ಯನ್ನು ಲಕ್ಷ್ಯದಲ್ಲಿಟ್ಟುಕೊಂಡು ತನ್ನಾತ್ಮನಲ್ಲಿ ವಿರಾಜಮಾನಮಾಡಿಕೊಂಡು ತನ್ಮಯನಾಗುವುದೇ ಆಚಾರ್ಯ ಧ್ಯಾನವಾಗಿದೆ.

ಉಪಾಧ್ಯಾಯ ಮುನಿಗಳು ವ್ಯವಹಾರದಲ್ಲಿ ಅನೇಕ ಶಾಸ್ತ್ರಗಳ ಜ್ಞಾನ ದಿಂದ್ಯುಕ್ತರಾಗಿ ಪಠಣ, ಪಾಠಣಕಾರ್ಯದಲ್ಲಿ ಉದ್ಯುಕ್ತರಾಗಿರುವುದೇ ಅವರ ಪ್ರಮಾದ ಅವಸ್ಥೆಯಾಗಿರುತ್ತದೆ. ಅಪ್ರಮತ್ತ ಅವಸ್ಥೆಯಲ್ಲಿ ಅವರು ಸ್ವಾತ್ಮಾ ನುಭವದಲ್ಲಿ ಏಕಾಗ್ರರಾಗಿ ಆತ್ಮೀಕ ಆನಂದ ರಸಾಸ್ವಾದವನ್ನುಮಾಡಿಕೊಳ್ಳು ತ್ತಿರುತ್ತಾರೆ. ಈ ಆತ್ಮೀಕಭಾವವನ್ನು ಲಕ್ಷ್ಯದಲ್ಲಿಟ್ಟುಕೊಂಡು ಅವರ ಗುಣ ಗಳಲ್ಲಿ ತನ್ಮಯನಾಗುವುದೇ ಉಪಾಧ್ಯಾಯರ ಧ್ಯಾನವಾಗಿರುತ್ತದೆ.

ಸಾಧುಪರಮೇಷ್ಠಿಗಳು ವ್ಯವಹಾರದಲ್ಲಿ ಇಪ್ಪತ್ತೆಂಟು ಮೂಲಗುಣ ಗಳನ್ನು ಪಾಲಿಸುತ್ತಾರೆ. ನಿಶ್ಚಯನಯದಿಂದ ಶುದ್ಧ ಆತ್ಮೀಕಭಾವದಲ್ಲಿ

ಕ್ರೀಡಿಸುತ್ತಾ ಆತ್ಮಗುಪ್ತರಾಗಿ ನಿರ್ವಿಕಲ್ಪಸಮಾಧಿಯನ್ನು ಸಾಧಿಸುತ್ತಾರೆ. ತನ್ನಲ್ಲಿಯೇ ತನ್ನ ಕಡೆಯಿಂದ ತನ್ನಸಲುವಾಗಿ ತನ್ನನ್ನೇ ಧ್ಯಾನಮಾಡುತ್ತಾ ಪರಮಏಕಾಗ್ರಭಾವದಿಂದ ಆತ್ಮನಲ್ಲಿ ಮಗ್ನರಾಗುತ್ತಾರೆ. ಅವರ ಈ ಆತ್ಮೀಕ ಸ್ವರೂಪವನ್ನು ತನ್ನಲ್ಲಿ ಧರಿಸಿ ಏಕಾಗ್ರನಾಗುವುದೇ ಸಾಧುಪರಮೇಷ್ಠಿಗಳ ಧ್ಯಾನವಾಗಿರುತ್ತದೆ.

ಹೀಗೆ ಆತ್ಮಧ್ಯಾನದಲ್ಲಿಯೇ ಪಂಚಪರಮೇಷ್ಠಿಗಳ ಧ್ಯಾನವು ಗರ್ಭಿತವಾಗಿರುತ್ತದೆ. ಶರೀರಾದಿಗಳ ಕ್ರಿಯೆಗಳನ್ನು ಧ್ಯಾನಿಸುತ್ತಾ ಕೇವಲ ಅವರ ಆತ್ಮ ಆರಾಧನೆಮಾಡುವುದೇ ನಿಶ್ಚಯ ಆರಾಧನೆಯಾಗಿರುತ್ತದೆ.

ಸಮಯಸಾರಕಲಶದಲ್ಲಿ ಹೇಳಿರುತ್ತಾರೆ :

**ದರ್ಶನಜ್ಞಾನಚಾರಿತ್ರತ್ರಯಾತ್ಮಾ ತತ್ವಮಾತ್ಮನಃ |**
**ಏಕ ಏವ ಸದಾ ಸೇವ್ಯೋ ಮೋಕ್ಷಮಾರ್ಗೋ ಮುಮುಕ್ಷುಣಾ**
**|| ೪೬-೧೦ ||**

**ಭಾವಾರ್ಥ :** ಆತ್ಮಸ್ವರೂಪವು ಸಮ್ಯಗ್ದರ್ಶನ, ಸಮ್ಯಗ್ಜ್ಞಾನ ಮತ್ತು ಸಮ್ಯಕ್ಚಾರಿತ್ರಮಯ ಏಕರೂಪವಾಗಿರುತ್ತದೆ. ಇದೊಂದೇ ಮೋಕ್ಷವಾಗಿರುತ್ತದೆ. ಆದ್ದರಿಂದ ಮೋಕ್ಷಾರ್ಥಿಯು ಸ್ವಾನುಭವರೂಪ ಮೋಕ್ಷವನ್ನು ಸೇವಿಸುವುದುಚಿತವಾಗಿರುತ್ತದೆ.



## ಆತ್ಮನೇ ಬ್ರಹ್ಮ, ವಿಷ್ಣು, ಮಹೇಶನು

**ಸೋ ಸಿಉ ಸಂಕರು ವಿಣ್ಹು ಸೋ ಸೋ ರುದ್ದ ವಿ ಸೋ ಬುದ್ಧು |**
**ಸೋ ಜಿಣು ಈಸರು ಬಂಭು ಸೋ ಸೋ ಅಣಂತು ಸೋ ಸಿದ್ಧು**
**|| ೧೦೫ ||**

**ಅನ್ವಯಾರ್ಥ :** ಸೋ ಸಿಉ ಸಂಕರು ವಿಣ್ಹು ಸೋ–ಅವನೇ ಶಿವನೂ ಶಂಕರನೂ ಮತ್ತು ವಿಷ್ಣುವೂ ಆಗಿರುತ್ತಾನೆ. ಸೋ ರುದ್ದ ವಿ ಸೋ ಬುದ್ಧು–ಅವನೇ ರುದ್ರನೂ ಮತ್ತು ಬುದ್ಧನೂ ಆಗಿರುತ್ತಾನೆ. ಸೋ ಜಿಣು ಈಸರು ಬಂಭು ಸೋ–ಅವನೇ ಜಿನನೂ ಈಶ್ವರನೂ ಮತ್ತು ಬ್ರಹ್ಮನೂ ಆಗಿರುತ್ತಾನೆ.

ಸೋ ಅಣಂತು ಸೋ ಸಿದ್ಧು–ಅವನೇ ಅನಂತನೂ ಮತ್ತು ಅವನೇ ಸಿದ್ಧನೂ ಆಗಿರುತ್ತಾನೆ.

**ಭಾವಾರ್ಥ:** ಯಾವ ಪರಮಾತ್ಮನನ್ನು ನಾವು ಧ್ಯಾನಿಸುತ್ತೇವೆಯೋ ಅವನ ಅನೇಕ ಹೆಸರುಗಳು ಗುಣವಾಚಕಗಳಾಗಿರುತ್ತವೆ. ಅವನು ಕಲ್ಯಾಣ ವನ್ನುಂಟುಮಾಡುವುದರಿಂದ ಅವನನ್ನು ಶಿವನೆಂದು ಕರೆಯುತ್ತಾರೆ. ಅವ ನನ್ನು ಧ್ಯಾನಿಸುವುದರಿಂದ, ಆನಂದ ಉಂಟಾಗುವುದರಿಂದ ಅವನನ್ನು ಶಂಕರ ನೆಂದು ಕರೆಯುತ್ತಾರೆ. ಅವನು ಕೇವಲಜ್ಞಾನದ ಅಪೇಕ್ಷೆಯಿಂದ ಸರ್ವ ಲೋಕಗಳ ಜ್ಞಾತೃ ಆಗಿರುವುದರಿಂದ ಅವನನ್ನು ವಿಷ್ಣುವೆಂದು ಕರೆಯುತ್ತಾರೆ. ಆ ಪರಮಾತ್ಮನು ಕರ್ಮಗಳನ್ನು ಸುಟ್ಟುಹಾಕಿರುವುದರಿಂದ ರುದ್ರ ಅಥವಾ ಮಹಾದೇವನೆಂದು ಸಂಬೋಧಿಸುತ್ತಾರೆ. ಅವನು ಸಕಲ ತತ್ವಗಳ ಯಥಾರ್ಥ ಜ್ಞಾತೃವಾದ್ದರಿಂದ ಅವನನ್ನು ಬುದ್ಧನೆಂದು ಕರೆಯುತ್ತಾರೆ.

ಯಾವ ಪರಮಾತ್ಮನು ಧ್ಯಾನಿಸುವುದಕ್ಕೆ ಯೋಗ್ಯನೋ ಅವನು ರಾಗಾದಿ ಶತೃಗಳನ್ನು ಮತ್ತು ಜ್ಞಾನಾವರಣಾದಿ ಕರ್ಮಶತೃಗಳನ್ನು ಜಯಿ ಸಿರುವುದರಿಂದ ಅವನನ್ನು ಜಿನನೆಂದು ಕರೆಯುತ್ತಾರೆ. ಅವನು ಅವಿನಾಶಿಯೂ ಪರಮೈಶ್ವರ್ಯಧಾರಿಯೂ ಪರಮಾತ್ಮನೂ, ಕೃತಕೃತ್ಯನೂ, ಪರಮಸಂತೋ ಷಿಯೂ ಮತ್ತು ಸಕಲ ಇಚ್ಛೆಗಳಿಂದ ರಹಿತನೂ ಆಗಿರುವುದರಿಂದ ಅವನನ್ನು ಈಶ್ವರನೆಂದು ಕರೆಯುತ್ತಾರೆ; ಬ್ರಹ್ಮಸ್ವರೂಪದಲ್ಲಿ ಲೀನನೂ ತನ್ನ ಸ್ವರೂಪ ದಿಂದ ಯಥಾರ್ಥ ಮೋಕ್ಷಸ್ವರೂಪವನ್ನು ಪ್ರತಿಪಾದಿಸುವವನೂ ಆದ್ದರಿಂದ ಅವ ನನ್ನು ಬ್ರಹ್ಮನೆಂದು ಕರೆಯುತ್ತಾರೆ. ಅವನ ಸ್ವರೂಪದ ಧ್ಯಾನದಿಂದ ಸಂಸಾರೀ ಜೀವನು ಪರಮಾತ್ಮನಾಗುತ್ತಾನಾದ್ದರಿಂದ ಅವನೇ ಧರ್ಮಕರ್ತೃವು. ಲೋಕದಲ್ಲಿ ಬೇರೆ ಯಾವ ಬ್ರಹ್ಮ, ವಿಷ್ಣು, ಮಹೇಶ್ವರರು ಇಲ್ಲ. ಪರ ಮಾತ್ಮನು ಅನಂತದರ್ಶನ, ಅನಂತಜ್ಞಾನ, ಅನಂತಸುಖ, ಅನಂತವೀರ್ಯ, ಅನಂತಶಾಂತಿ, ಅನಂತಸಮ್ಯಕ್ತ್ವ ಇವೇ ಮೊದಲಾದ ಅನಂತಗುಣಗಳ ಧಾರಿಯಾಗಿರುತ್ತಾನಾದ್ದರಿಂದ ಅವನನ್ನು ಅನಂತನೆಂದು ಕರೆಯುತ್ತಾರೆ. ಅವನು ಶುದ್ಧಸ್ವರೂಪದ ಪ್ರಾಪ್ತಿಮಾಡಿಕೊಂಡು ಸಿದ್ಧತ್ವವನ್ನು ಸಾಧಿಸಿದವ ನಾದ್ದರಿಂದ ಅವನನ್ನು ಸಿದ್ಧನೆಂದು ಕರೆಯುತ್ತಾರೆ.

ಪರಮಾತ್ಮನ ಯಥಾರ್ಥಸ್ವರೂಪ ಪ್ರತಿಪಾದಕವಾದ ಸಾವಿರಾರು ಹೆಸರುಗಳನ್ನುಚ್ಚರಿಸುತ್ತಾ ಭಾವನೆಗೈಯ್ಯುವ ಭಾವನೆಗಳನ್ನು ಭಾವಿಸಬಹುದು. ನಾಮೋಚ್ಚಾರಣೆಯು ನಿಮಿತ್ತಮಾತ್ರವಾಗಿರುತ್ತದೆ. ಅದರ ನಿಮಿತ್ತದಿಂದ ಪರಮಾತ್ಮ ಧ್ಯಾನದಲ್ಲಿ ನಿಜತ್ವ ಬರಬೇಕು. ಯಥಾರ್ಥವಾಗಿ ಜೈನಸಿದ್ಧಾಂತದಲ್ಲಿ ಪರಮಾತ್ಮನಿಗೆ ಸಿದ್ಧರೆಂದು ಹೇಳುತ್ತಾರೆ. ಅವರಲ್ಲಿ ಯಾವ ವಿಧದ ಪರವಸ್ತುಗಳ ಸಂಯೋಗ ಇಲ್ಲದಿರುವುದರಿಂದಲೂ; ಜ್ಞಾನಾವರಣಾದಿ ಎಂಟು ಕರ್ಮಗಳೂ, ರಾಗಾದಿ ಭಾವಕರ್ಮಗಳೂ, ಶರೀರಾದಿ ನೋಕರ್ಮಗಳೂ ಇಲ್ಲದಿರುವುದರಿಂದಲೂ ಅವರು ಸ್ಫಟಿಕಮಣಿಯಂತೆ ಪರಮಶುದ್ಧ ನಿರ್ಮಲರೂ ಆಗಿರುತ್ತಾರೆ. ಸಕಲ ಜ್ಞಾತಾದೃಷ್ಟಾ ಮೊದಲಾದ ಸ್ವಭಾವದಿಂದ್ಯುಕ್ತರಾಗಿದ್ದರೂ ಅವರನ್ನು ಶತಮುಖಗಳಿಂದ ಪ್ರಶಂಶಿಸಿದರೂ ಸ್ತುತಿಸಿದರೂ ಅವರು ಪ್ರಸನ್ನರಾಗುವುದಾಗಲಿ, ನಿಂದಿಸಿದರೂ ಅಪ್ರಸನ್ನರಾಗುವುದಾಗಲಿ ಆಗುವುದಿಲ್ಲ. ಸದಾ ನಿರ್ವಿಕಾರರೂ ರಾಗವಿಲ್ಲದವರೂ ಆಗಿರುತ್ತಾರೆ. ಆದರೆ ಭಕ್ತರ ಪರಿಣಾಮವು ಅವರ ಸ್ತುತಿಯ ನಿಮಿತ್ತದಿಂದ ನಿರ್ಮಲವೂ ಶುಭಯುಕ್ತವೂ ಆಗುತ್ತದೆ. ಆಗ ಎಷ್ಟು ಭಾಗಗಳಲ್ಲಿ ವೀತರಾಗತ್ವವುಂಟಾಗುವುದೋ ಅಷ್ಟುಭಾಗ ಪುಣ್ಯಬಂಧಕ್ಕೆ ಕಾರಣವಾಗಿಯೂ, ನಿಂದಿಸುವವರ ಭಾವವು ಮಲಿನವಾಗುವಾಗ ಅಷ್ಟೇ ಭಾಗ ಪಾಪಬಂಧಕ್ಕೆ ಕಾರಣವಾಗಿಯೂ ಆಗುತ್ತದೆ.

ಪರಮಾತ್ಮರು ಪರಮ ವೀತರಾಗಿಯಾಗಿರುವುದರಿಂದ ಅಶುದ್ಧ ಭಾವಗಳ ಕರ್ತೃವಲ್ಲವು. ಅವರಲ್ಲಿ ಶುದ್ಧಪರಿಣಾಮವಿರುವುದರಿಂದ ಶುದ್ಧ ಆತ್ಮೀಕ ಭಾವಗಳ ಕರ್ತೃವಾಗಿರುತ್ತಾರೆ. ಹೇಗೆಂದರೆ ನಿರ್ಮಲವಾದ ಕ್ಷೀರಸಮುದ್ರದಲ್ಲಿ ನಿರ್ಮಲವಾದ ತೆರೆಮಾಲೆಗಳೇ ಉಂಟಾಗುವಂತೆ ಪರಮಾತ್ಮರಲ್ಲಿ ಸಕಲ ಪರಿಣಾಮಗಳು ಪರಮ ಪರಿಶುದ್ಧವೇ ಆಗಿರುತ್ತವೆ. ಅವರು ಸಾಂಸಾರಿಕ ಸುಖದುಃಖಾದಿಗಳ ಭೋಕ್ತೃ ಅಲ್ಲ. ಅವರು ಕೇವಲ ತಮ್ಮ ಆತೀಂದ್ರಿಯ ಪರಮಾನುಭವವನ್ನು ಭೋಗಿಸುವವರಾಗಿದ್ದಾರೆ. ಅವರು ಸುಖ, ಸತ್ತಾ, ಚೈತನ್ಯ ಮತ್ತು ಬೋಧಗಳೆಂಬ ನಾಲ್ಕು ಮುಖ್ಯ ಪ್ರಾಣಗಳಿಂದ ಸದಾಜೀವಿಸಿಕೊಂಡಿರುತ್ತಾರೆ. ಅವರಲ್ಲಿ ಕೇವಲದರ್ಶನ, ಕೇವಲಜ್ಞಾನಗಳೆಂಬ ಎರಡು ಉಪಯೋಗಗಳು ಏಕಕಾಲದಲ್ಲಿ ಉಂಟಾಗುತ್ತಿರುತ್ತವೆ.

ಪರಮಾತ್ಮರು ವರ್ಣ, ಗಂಧ, ರಸ, ಸ್ಪರ್ಶಗಳಿಂದ ರಹಿತ ಅಮೂರ್ತಿಕರಾಗಿ, ಜ್ಞಾನಮಯ ಪುರುಷಾಕಾರವುಳ್ಳವರಾಗಿ, ಪದ್ಮಾಸನ ಅಥವಾ ಕಾಯೋತ್ಸರ್ಗ ಮೊದಲಾದ ಆಸನದಿಂದ ರಹಿತರಾಗಿ ಇರುತ್ತಿದ್ದರೂ ಕೂಡ ಅಸಂಖ್ಯಾತ ಪ್ರದೇಶಿಯಾಗಿರುವುದರಿಂದ ಪರಮ ಆದರ್ಶರಾಗಿರುತ್ತಾರೆ. ಪ್ರತಿಯೊಂದು ಆತ್ಮರುಗಳು ನಿಶ್ಚಯವಾಗಿ ಪರಮಾತ್ಮರೆಂದೇ ತಿಳಿದು, ವೀತರಾಗಮಯ ಅಥವಾ ಸಮಭಾವದಲ್ಲಿ ಮಗ್ನರಾಗಿ ಸ್ವಾನುಭವವನ್ನು ಅಭ್ಯಾಸಿಸುವುದುಚಿತವಾಗಿದೆ. ಅದೇ ಪರಮಾತ್ಮಪದಪ್ರಾಪ್ತಿಯ ಮಹೋಪಾಯವಾಗಿದೆ.

ಸಮಾಧಿಶತಕದಲ್ಲಿ ಹೇಳಿರುತ್ತಾರೆ :

**ನಿರ್ಮಲಃ ಕೇವಲಃ ಸಿದ್ಧೋ ವಿವಿಕ್ತಃ ಪ್ರಭು ರಕ್ಷಯಃ।**
**ಪರಮೇಷ್ಠೀ ಪರಾತ್ಮೇತಿ ಪರಮಾತ್ಮೇಶ್ವರೋ ಜಿನಃ ॥೬॥**

**ಭಾವಾರ್ಥ :** ಪರಮಾತ್ಮನು ಕರ್ಮಮಲರಹಿತನಾಗಿರುವುದರಿಂದ ನಿರ್ಮಲನೂ, ಏಕಾಕಿಯಾಗಿರುವುದರಿಂದ ಕೇವಲನೂ ಆಗಿರುತ್ತಾನೆ. ಅವನೇ ಸಿದ್ಧಾತ್ಮನು. ಎಲ್ಲಾ ದ್ರವ್ಯಗಳ ಮತ್ತು ಅನ್ಯಆತ್ಮರುಗಳ ಸತ್ತೆಯಿಂದ ಭಿನ್ನನು; ವಿಮುಕ್ತನು. ಅನಂತವೀರ್ಯವುಳ್ಳವನಾಗಿರುವುದರಿಂದ ಪ್ರಭುವೂ, ಅವಿನಾಶಿಯೂ, ಪರಮಪದದಲ್ಲಿರುವುದರಿಂದ ಪರಮೇಷ್ಠಿಯೂ, ಉತ್ಕೃಷ್ಟನಾಗಿರುವುದರಿಂದ ಪರಮಾತ್ಮನೂ, ಸಕಲ ಇಂದ್ರಾದಿಗಳಿಂದ ಪೂಜ್ಯನಾದ ಈಶ್ವರನೂ, ರಾಗಾದಿಭಾವಗಳನ್ನು ಜಯಿಸಿರುವುದರಿಂದ ಜಿನದೇವನೂ ಆಗಿರುತ್ತಾನೆ.



## ಪರಮಾತ್ಮನು ತನ್ನ ದೇಹದಲ್ಲಿಯೇ ಇದ್ದಾನೆ

**ಏಕ ಹಿ ಲಕ್ಖಣ-ಲಕ್ಖಿಯಉ ಜೋ ಪರು ಣಿಕ್ಕಲು ದೇಉ।**
**ದೇಹಹಂ ಮಜ್ಝಹಿಂ ಸೋ ವಸಇ ತಾಸು ಣ ವಿಜ್ಜಇ ಭೇಉ ॥೧೦೬॥**

**ಅನ್ವಯಾರ್ಥ :** ಏಕ ಹಿ ಲಕ್ಖಣ-ಲಕ್ಖಿಯಉ ಜೋ ಪರು ಣಿಕ್ಕಲು ದೇಉ–ಈ ಪ್ರಕಾರವಾಗಿ ಮೇಲೆ ಹೇಳಲ್ಪಟ್ಟ ಲಕ್ಷಣಗಳಿಂದ ಕೂಡಿದ ಪರಮಾತ್ಮರು ನಿತ್ಯನಿರಂಜನರಾಗಿರುತ್ತಾರೆ. ದೇಹಹಂ ಮಜ್ಝಹಿಂ ಸೋ ವಸಇ–ಹಾಗೆಯೇ ತಮ್ಮ ಶರೀರದಲ್ಲಿ ವಾಸಿಸುವ ಆತ್ಮನೂ ಕೂಡ, ತಾಸು ಭೇಉ ಣ ವಿಜ್ಜಇ–ಇವರಿಬ್ಬರಲ್ಲಿಯೂ ಯಾವ ಭೇದ ಇರುವುದಿಲ್ಲ.

**ಭಾವಾರ್ಥ:** ತನ್ನ ಶರೀರದಲ್ಲಿಯೂ ಮತ್ತು ಅನ್ಯಪ್ರಾಣಿಗಳ ಶರೀರದಲ್ಲಿಯೂ ಆತ್ಮದ್ರವ್ಯವು ವ್ಯಾಪಿಸಿಕೊಂಡಿರುತ್ತದೆ. ಆತ್ಮದ್ರವ್ಯದ ಲಕ್ಷಣ ಸಿದ್ಧಪರಮಾತ್ಮನಂತಿರುತ್ತದೆ. ವ್ಯವಹಾರದೃಷ್ಟಿಯಿಂದಲೂ ಸಿದ್ಧಾತ್ಮರು ಮತ್ತು ಸಂಸಾರೀ ಆತ್ಮರುಗಳ ಸ್ವರೂಪಗಳ ಪ್ರಕಟತೆ ಮತ್ತು ಅಪ್ರಕಟತೆಯ ಕಾರಣಭೇದವೂ ಕೂಡ ಇದೆ. ಸಂಸಾರೀ ಆತ್ಮರುಗಳು ಕಾರ್ಮಣ ಮತ್ತು ತೈಜಸ ಶರೀರಗಳ ಪ್ರವಾಹದ ಅಪೇಕ್ಷೆಯಿಂದ ಅನಾದಿಕಾಲದಿಂದೊಡಗೂಡಿಕೊಂಡು ಬರುತ್ತಿವೆ. ಎಂಟುಕರ್ಮಗಳ ವಿಚಿತ್ರಭೇದಗಳ ಉದಯದಿಂದಲೂ ಅಥವಾ ವಿಪಾಕರಸದ ಆತ್ಮವಿಕಾಸದಿಂದಲೂ ಅನೇಕ ಭೇದಗಳು ದೃಷ್ಟಿಗೋಚರವಾಗುತ್ತವೆ. ಅವೆಲ್ಲವುಗಳನ್ನು ಸಂಗ್ರಹಿಸಿ ವಿಚಾರಿಸುವಾಗ ಹತ್ತೊಂಬತ್ತು ಜೀವ ಸಮಾಸಗಳು ಕೆಳಗೆ ವರ್ಣಿಸುವ ಪ್ರಕಾರವಿದೆ:

೧. ಪೃಥ್ವೀಕಾಯಿಕಸೂಕ್ಷ್ಮ ೨. ಪೃಥ್ವಿಕಾಯಿಕ ಬಾದರ ೩. ಜಲಕಾಯಿಕ ಸೂಕ್ಷ್ಮ ೪. ಜಲಕಾಯಿಕ ಬಾದರ ೫. ಅಗ್ನಿಕಾಯಿಕ ಸೂಕ್ಷ್ಮ ೬. ಅಗ್ನಿಕಾಯಿಕ ಬಾದರ ೭. ವಾಯುಕಾಯಿಕ ಸೂಕ್ಷ್ಮ ೮. ವಾಯುಕಾಯಿಕ ಬಾದರ ೯. ನಿತ್ಯನಿಗೋದ ಸಾಧಾರಣ ವನಸ್ಪತಿಕಾಯಿಕ ಸೂಕ್ಷ್ಮ ೧೦ ನಿತ್ಯನಿಗೋದ ಸಾಧಾರಣ ವನಸ್ಪತಿಕಾಯಿಕ ಬಾದರ ೧೧. ಇತರ ಅಂದರೆ ಚತುರ್ಗತಿ ನಿಗೋದ ಸಾಧಾರಣ ವನಸ್ಪತಿಕಾಯಿಕ ಸೂಕ್ಷ್ಮ ೧೨. ಇತರ ನಿಗೋದ ಸಾಧಾರಣ ವನಸ್ಪತಿಕಾಯಿಕ ಬಾದರ ೧೩. ಪ್ರತ್ಯೇಕ ವನಸ್ಪತಿಕಾಯಿಕ ಸಪ್ರತಿಷ್ಠಿತ (ನಿಗೋದಸಹಿತ) ೧೪. ಪ್ರತ್ಯೇಕ ವನಸ್ಪತಿಕಾಯಿಕ ಅಪ್ರತಿಷ್ಠಿತ (ನಿಗೋದರಹಿತ) ೧೫. ದ್ವೀಂದ್ರಿಯ ೧೬. ತ್ರೀಂದ್ರಿಯ ೧೭. ಚತುರಿಂದ್ರಿಯ ೧೮. ಪಂಚೇಂದ್ರಿಯ ಅಸಂಜ್ಞಿ ೧೯. ಪಂಚೇಂದ್ರಿಯ ಸಂಜ್ಞೀ–ಹೀಗೆ ಪ್ರತಿಯೊಂದರಲ್ಲಿ ಪರ್ಯಾಪ್ತ ಮತ್ತು ಅಪರ್ಯಾಪ್ತ ಭೇದಗಳು ಇರುತ್ತವೆ. ಈ ಕಾರಣದಿಂದ ೩೮ ಭೇದಗಳಾಗುತ್ತವೆ. ಲಬ್ಧ್ಯಪರ್ಯಾಪ್ತಕ ಮತ್ತು ನಿರ್ವೃತ್ಯ ಪರ್ಯಾಪ್ತಗಳ ಭೇದದಿಂದ ೫೭ ಜೀವ ಸಮಾಸಗಳಾಗುತ್ತವೆ.

ಸಂಜ್ಞಿ ಪಂಚೇಂದ್ರಿಯ ಮೊದಲಾದ ನಾರಕಿ, ದೇವ, ಮನುಷ್ಯರಲ್ಲಿ ಅನೇಕ ಭೇದಗಳಾಗುತ್ತವೆ. ಪಶುಗಳಲ್ಲಿ ಜಲಚರ, ಸ್ಥಲಚರ, ನಭಚರ ಭೇದಗಳು ಇರುತ್ತವೆ. ಕರ್ಮಗಳ ಉದಯನಿಮಿತ್ತದಿಂದ ಸಂಸಾರೀ ಜೀವ

ಗಳಲ್ಲಿ ಜ್ಞಾನ, ದರ್ಶನ ಮತ್ತು ವೀರ್ಯಗಳ ಪ್ರಕಟತೆ ಹೀನಾಧಿಕವಿರುತ್ತದೆ. ಕ್ರೋಧ, ಮಾನ, ಮಾಯಾ, ಲೋಭಕಷಾಯಗಳಿಂದ ಅನುರಂಜಿತವಾದ ಯೋಗಗಳ ಪ್ರವೃತ್ತಿ ಅಥವಾ ಲೇಶ್ಯೆಗಳು ಮುಖ್ಯವಾಗಿ ಆರು ಭೇದಗಳುಳ್ಳದ್ದಾಗಿದ್ದರೂ ಕೂಡ ಪ್ರತಿಯೊಂದರಲ್ಲಿ ಮಂದ, ಮಂದತರ, ತೀವ್ರ, ತಿವ್ರತರ ಶಕ್ತಿಗಳ ಅಪೇಕ್ಷೆಯಿಂದ ಅನೇಕ ಭೇದಗಳಿರುತ್ತವೆ. ಕೃಷ್ಣ, ನೀಲ, ಕಾಪೋತ ಈ ಲೇಶ್ಯೆಗಳ ಪರಿಣಾಮಗಳು ಅಶುಭವಾಗಿವೆ. ಈ ಭಾವನೆಗಳಿಂದಲೇ ಜೀವನು ಪಾಪಕರ್ಮಗಳನ್ನು ಬಂಧಿಸಿಕೊಳ್ಳುತ್ತಾನೆ. ಪೀತ, ಪದ್ಮ, ಶುಕ್ಲ ಲೇಶ್ಯೆಗಳ ಪರಿಣಾಮಗಳು ಶುಭವಾಗಿವೆ. ಇವುಗಳಿಂದ ಘಾತಿಕರ್ಮಬಂಧವು ಮಂದವಾಗುತ್ತದಲ್ಲದೆ ಅಘಾತಿಕರ್ಮಗಳಲ್ಲಿ ಕೇವಲ ಪುಣ್ಯಕರ್ಮಗಳ ಬಂಧವೇ ಆಗುತ್ತಿರುತ್ತದೆ. ಹೀಗೆ ಅಂತರಂಗ ಭಾವಗಳಲ್ಲಿಯೂ ಮತ್ತು ಬಾಹ್ಯ ಶರೀರಗಳ ಚೇಷ್ಟೆಯಲ್ಲಿಯೂ ಅತಿ ವಿಶೇಷ ಭೇದಗಳು ಕರ್ಮಗಳ ಉದಯದಿಂದಲೇ ಆಗುತ್ತಿರುತ್ತವೆ.

ಈ ಕಾರಣದಿಂದ ಸಂಸಾರೀ ಜೀವಗಳು ವಿಚಿತ್ರವಾಗಿಯೇ ತೋರುತ್ತವೆ. ರಾಗೀಜೀವನಿಗೆ ಇವೆಲ್ಲವುಗಳೂ ಇಂದ್ರಿಯ ವಿಷಯಗಳ ಸಾಧನೆಯಲ್ಲಿ ಅಲ್ಪಸಹಾಯವಾಗುವುದರಿಂದ ಇವುಗಳಲ್ಲಿ ಪ್ರೀತಿಯುಂಟಾಗುತ್ತದೆ. ಸಹಾಯವಾಗದಿದ್ದರೆ ದ್ವೇಷವುಂಟಾಗುತ್ತದೆ. ಆದರಿಂದ ಕರ್ಮಬಂಧವನ್ನು ಮಾಡಿಕೊಂಡು, ಅವುಗಳ ಫಲವನ್ನು ಭೋಗಿಸುತ್ತಾನೆ. ಈ ದೃಷ್ಟಿಯಿಂದ ವಿಚಾರಿಸುವ ವೀತರಾಗಿಗೆ ಬಂಧವು ಆಗುವುದಿಲ್ಲ.

ಸಮಭಾವನೆಯೇ ಮೋಕ್ಷೋಪಾಯವಾಗಿರುತ್ತದೆ. ಈ ಭಾವನೆಯನ್ನು ಸಾಧಿಸುವ ಸಾಧಕನಿಗೆ ವ್ಯವಹಾರ ದೃಷ್ಟಿಯ ಭೇದವು ಇರುವುದೆಂದು ತಿಳಿಯುತ್ತಿದ್ದರೂ ಮತ್ತು ಹೀಗೆ ಧರಿಸುತ್ತಿದ್ದರೂ ಇದನ್ನು (ಈ ವಿಚಾರವನ್ನು) ನಿಲ್ಲಿಸುತ್ತಾನೆ. ಈ ಸಾಧಕನಿಗೆ ನಿಶ್ಚಯನಯದಿಂದ ತನ್ನಾತ್ಮನು ಮತ್ತು ಸಂಸಾರೀ ಆತ್ಮರುಗಳು ಒಂದೇ ವಿಧವಾಗಿ ಶುದ್ಧವೂ, ನಿರಂಜನವೂ, ನಿರ್ವಿಕಾರವೂ, ಸಂಪೂರ್ಣಜ್ಞಾನ, ದರ್ಶನ, ವೀರ್ಯ, ಆನಂದಮಯವೂ, ಅಮೂರ್ತಿಕವೂ, ಅಸಂಖ್ಯಾತಪ್ರದೇಶೀ ಜ್ಞಾನಾಕಾರವೂ ಆಗಿರುವುದೆಂದು ತೋರುತ್ತದೆ. ಆಗ ಸಿದ್ಧಾತ್ಮರಲ್ಲಿಯೂ, ಸಂಸಾರೀ ಆತ್ಮರಲ್ಲಿಯೂ ಯಾವ ಭೇದದೃಷ್ಟಿಗೋಚರವಾಗುವುದಿಲ್ಲ.

ಈ ಸಮಭಾವನೆಯನ್ನು ಪ್ರಾಪ್ತಮಾಡಿಕೊಳ್ಳುವ ಧ್ಯಾತೃವು ನಿಶ್ಚಯ ನಯದಿಂದ ವಿಚಾರಿಸುತ್ತಾ, ರಾಗದ್ವೇಷಗಳನ್ನು ದೂರಗೊಳಿಸಿ, ಕೇವಲ ತನ್ನಾತ್ಮನನ್ನೇ ಪರಿಶುದ್ಧವೆಂದು ವಿಚಾರಿಸಬೇಕು; ಪರಮದೇವನೆಂದೂ ನೋಡಬೇಕು; ತಾನು ನಿರಂಜನನು ಮತ್ತು ಪರಮಾತ್ಮನು ಎಂಬ ಭಾವನೆಯನ್ನು ಭಾವಿಸುತ್ತಾ ಅದರಲ್ಲಿ ಉಪಯೋಗಗಳನ್ನು ಸ್ಥಿರಗೊಳಿಸಬೇಕು. ಆಗ ಆ ಭಾವನೆಗಳ ಪ್ರತಾಪದಿಂದ ಏಕಾಏಕೀ ಸ್ವಾನುಭವ ಪ್ರಾದುರ್ಭವಿಸುತ್ತದೆ; ಮೋಕ್ಷಮಾರ್ಗ ಪ್ರಕಟವಾಗುತ್ತದೆ ವೀತರಾಗಭಾವವೇ ಪರಮಾನುಭವಮಯವಾದ ಸ್ಥಾನವಾಗಿದೆ ಮತ್ತು ನಿರ್ಜರೆಗೆ ಕಾರಣವಾಗಿರುತ್ತದೆ.

ಸಮಾಧಿಶತಕದಲ್ಲಿ ಹೇಳಿರುತ್ತಾರೆ :

**ಪರಿತ್ರಾಹಮ್ಮತಿಸ್ವಸ್ಮಾಚ್ಚ್ಯುತೋಽಬದ್ನಾತ್ಯಸಂಶಯಂ ।**
**ಸ್ವಸ್ಮಿನ್ನಹಮ್ಮತಿಶ್ಚ್ಯುತ್ವಾ ಪರಸ್ಮಾನ್ಮುಚ್ಯತೇ ಬುಧಃ ॥೪೩॥**

**ದೃಶ್ಯಮಾನಮಿದಂ ಮೂಢಸ್ತ್ರಿಲಿಂಗ ಮವಬುಧ್ಯತೇ ।**
**ಇದಮಿತ್ಯವಬುದ್ಧಸ್ತು ನಿಷ್ಪನ್ನಂ ಶಬ್ದವರ್ಜಿತಂ ॥೪೪॥**

**ಭಾವಾರ್ಥ** : ಯಾರು ತನ್ನ ಶುದ್ಧಸ್ವರೂಪದ ಅನುಭವದಿಂದ ಬಿಡುಗಡೆಯಾಗಿ ಪರಭಾವಗಳಲ್ಲಿ ಬುದ್ಧಿಯನ್ನಿಡುವನೋ ಅವನು ತನ್ನಲ್ಲಿ ಕಷಾಯಭಾವಗಳನ್ನುಂಟುಮಾಡಿಕೊಳ್ಳುತ್ತಾನೆ, ಮಾತ್ರವಲ್ಲ ಕರ್ಮಗಳನ್ನು ಬಂಧಿಸಿಕೊಳ್ಳುತ್ತಾನೆ. ಆದರೆ ಪರಭಾವಗಳಿಂದ ಬಿಡುಗಡೆಯಾಗಿ ತನ್ನ ಶುದ್ಧಸ್ವರೂಪದಲ್ಲಿ ತನ್ನನ್ನು ಭಾವಿಸುವ ಜ್ಞಾನಿಯು ಕರ್ಮಮುಕ್ತನಾಗುತ್ತಾನೆ. ಅಜ್ಞಾನೀ ಬಹಿರಾತ್ಮನು ಕಾಣುವ ಜಗತ್ತಿನ ಪ್ರಾಣಿಗಳನ್ನು ಸ್ತ್ರೀಲಿಂಗ, ಪುಲ್ಲಿಂಗ, ನಪುಂಸಕಲಿಂಗದವರೆಂದೇ ನೋಡುತ್ತಾನೆ. ಆದರೂ ಜ್ಞಾನಿಯು ನಿಶ್ಚಯವಾಗಿ ಜಗತ್ತಿನ ಪ್ರಾಣಿಗಳನ್ನು ಒಂದೇ ರೂಪವಾಗಿಯೂ, ಶಬ್ದರಹಿತವಾಗಿಯೂ ಮತ್ತು ನಿಶ್ಚಲವಾಗಿಯೂ ನೋಡುತ್ತಾನೆ. ಅಂತಹವನಿಗೆ ಸಕಲ ಜೀವಗಳು ಸಮಾನವೂ ಶುದ್ಧವೂ ದೃಷ್ಟಿಗೋಚರವಾಗುತ್ತವೆ.



## ಆತ್ಮದರ್ಶನವೇ ಸಿದ್ಧನಾಗುವ ಉಪಾಯ

**ಜೇ ಸಿದ್ಧಾ ಜೇ ಸಿಜ್ಝಿಹಿಹಿಂ ಜೇ ಸಿಜ್ಝಹಿ ಜಿಣ-ಉತ್ತು ।**
**ಅಪ್ಪಾ-ದಂಸಣಿಂ ತೇ ವಿ ಫುಡು ಏಹಉ ಜಾಣಿ ಣಿಭಂತು ॥ ೧೦೭ ॥**

ಅನ್ವಯಾರ್ಥ : ಜಿಣ ಉತ್ತು–ಜಿನೇಶ್ವರನು ಉಪದೇಶವಿತ್ತಿರುತ್ತಾನೆ: ಜೇ ಸಿದ್ಧಾ–ಯಾರು ಸಿದ್ಧರಾಗಿರುವರೋ, ಜೇ ಸಿಜ್ಝಿಹಿಹಿಂ–ಯಾರು ಸಿದ್ಧರಾಗುವರೋ, ಜೇ ಸಿಜ್ಝಹಿ–ಯಾರು ಸಿದ್ಧರಾಗುತ್ತಿರುವರೋ, ತೇ ವಿ ಫುಡು ಅಪ್ಪಾ-ದಂಸಣಿಂ – ಅವರೆಲ್ಲರೂ ಆತ್ಮದರ್ಶನದಿಂದಲೇ. ಏಹಉ ಣಿಭಂತು ಜಾಣಿ–ಇದನ್ನು ನಿಃಸ್ಸಂದೇಹವಾಗಿ ನಂಬು.

ಭಾವಾರ್ಥ: ಗ್ರಂಥಕಾರರು ಮೇಲೆ ವರ್ಣಿಸಲ್ಪಟ್ಟ ಗಾಥೆಗಳಲ್ಲಿ ಸಿದ್ಧಪಡಿಸುವುದೇನೆಂದರೆ: ಮೋಕ್ಷೋಪಾಯ ಕೇವಲ ಆತ್ಮಾನುಭವವಾಗಿರುತ್ತದೆ. ಅದು ಆತ್ಮನ ಸಂಪೂರ್ಣ ಸ್ವಭಾವವಾಗಿರುತ್ತದೆ. ಆ ಸ್ವಭಾವದ ನಂಬಿಕೆಯುಂಟಾಗಬೇಕಾದರೆ ಜ್ಞಾನಿಗಳ ಮೂಲಕವೇ ಆಗುತ್ತದೆ. ತನ್ನ ಆತ್ಮನೇ ಸಾಧ್ಯ ಇದ್ದಾನೆ. ತನ್ನ ಆತ್ಮನೇ ಸಾಧಕ ಇದ್ದಾನೆ. ಉಪಾದಾನ ಕಾರಣ ಕಾರ್ಯರೂಪವಾಗಿಯೂ, ಪೂರ್ವಪರ್ಯಾಯ ಕಾರಣವಾಗಿಯೂ, ಉತ್ತರಪರ್ಯಾಯ ಕಾರ್ಯರೂಪವಾಗಿಯೂ ಆಗಿರುತ್ತದೆ.

ಬೆರಕೆ ಚಿನ್ನದಲ್ಲಿ ಪರಿಶುದ್ಧವಾದ ಅಪರಂಜಿ ಚಿನ್ನ ಮತ್ತು ಇತರ ಲೋಹ ಇರುತ್ತವೆ. ಹೇಗೆ ಬೆರಕೆಯಾದ ಚಿನ್ನಕ್ಕೆ ಅಗ್ನಿಯತಾಪ ತಾಗುವುದರಿಂದ ಇತರ ಲೋಹಗಳ ಸಂಬಂಧ ನಾಶವಾಗಿ ಅಪರಂಜಿ ಚಿನ್ನ ಪ್ರಕಾಶಕ್ಕೆ ಬರುತ್ತದೆ. ಅದರಂತೆ ಈ ಆತ್ಮನಿಗೆ ಮನ, ವಚನ, ಕಾಯಗಳ ಕ್ರಿಯೆಗಳ ಬುದ್ಧಿಪೂರ್ವಕವಾದ ನಿರೋಧದಿಂದ ತನ್ನ ಉಪಯೋಗಗಳು ಪಂಚೇಂದ್ರಿಯ ವಿಷಯಗಳಿಂದಲೂ ಮತ್ತು ಮನಸ್ಸಿನ ವಿಕಲ್ಪಗಳಿಂದಲೂ ದೂರವಾಗಿ ಆತ್ಮನು ತನ್ನಲ್ಲಿಯೇ ತನ್ಮಯನಾಗುತ್ತಾ ಆತ್ಮಸ್ಥನಾಗುತ್ತಾನೆ.

ಈ ಅವಸ್ಥೆಗೆ ಆತ್ಮದರ್ಶನ, ಆತ್ಮಸಾಕ್ಷಾತ್ಕಾರವೆಂದು ಹೇಳುವುದುಂಟು. ಇದೇ ಧ್ಯಾನಾಗ್ನಿಯು. ಇದು ಪ್ರಜ್ವಲಿಸುತ್ತಿದ್ದಂತೆ ವೀತರಾಗತೆಯುಂಟಾದಾಗ ಕೇವಲಿ, ಅರಹಂತ ಅಥವಾ ಸಿದ್ಧನೆಂದು ಹೇಳಿಸಿಕೊಳ್ಳುತ್ತಾನೆ.

ಆತ್ಮದರ್ಶನವೂ ಅಥವಾ ಆತ್ಮಾನುಭವರೂಪಮಾರ್ಗವೂ ಮೋಕ್ಷದ ಸಿದ್ಧಪರಮಾತ್ಮರ ಅರಮನೆಯವರೆಗೆ ಹೋಗಿರುತ್ತದೆ. ಅನ್ಯಮಾರ್ಗವೇ ಇಲ್ಲ. ಸಿದ್ಧಪದವಿಯು ಯಾವ ಭಕ್ತಿಯಿಂದಾಗಲಿ, ಬಾಹ್ಯ ತಪ, ಜಪ ಮತ್ತು ಚಾರಿತ್ರದಿಂದಾಗಲಿ ಸಿಕ್ಕಲಾರದು. ಅದು ಕೇವಲ ತನ್ನಾತ್ಮನ ಅನುಭವದಿಂದಲೇ ಸಾಧ್ಯವಾಗುತ್ತದೆ.

ಸಾಧಕನು ಸದ್ಗುರುವಿನಿಂದ ಮತ್ತು ಜಿನವಾಣಿಯ ಪ್ರಸಾದದಿಂದಲೇ ಆತ್ಮಜ್ಞಾನವನ್ನು ಮಾಡಿಕೊಳ್ಳಬೇಕಾಗುತ್ತದೆ. ಕಾರಣ ಇದು ಸ್ವತಂತ್ರ ದ್ರವ್ಯವಾಗಿರುತ್ತದೆ; 'ಸತ್' ಆಗಿರುತ್ತದೆ; ದ್ರವ್ಯಾಪೇಕ್ಷೆಯಿಂದ ನಿತ್ಯವಾಗಿದೆ; ಪ್ರತಿ ಸಮಯದಲ್ಲಿ ಪರಿಣಮನಶೀಲವಾಗಿರುವುದರಿಂದ ಅನಿತ್ಯವೂ ಆಗಿರುತ್ತದೆ. ಆದ್ದರಿಂದ ಪ್ರತಿಸಮಯದಲ್ಲಿಯೂ ಉತ್ಪಾದ, ವ್ಯಯ, ಧ್ರೌವ್ಯ ಸ್ವರೂಪನೂ ಅಥವಾ ಗುಣಪರ್ಯಾಯಮಯನೂ ಆಗಿರುತ್ತಾನೆ. ದ್ರವ್ಯವು ಗುಣಗಳ ಸಮುದಾಯವಾಗಿರುತ್ತದೆ. ಗುಣಗಳಲ್ಲಿ ಯಾವ ಪರಿಣಮನವಾಗುತ್ತಿರುವುದೋ ಅದಕ್ಕೆ ಪರ್ಯಾಯವೆಂದು ಹೇಳುತ್ತಾರೆ.

ಆತ್ಮನು ಸಂಪೂರ್ಣ ಜ್ಞಾನ, ದರ್ಶನ, ಸುಖ, ವೀರ್ಯ, ಸಮ್ಯಕ್ತ್ವ ಚಾರಿತ್ರಾದಿ ಪರಿಶುದ್ಧ ಗುಣಗಳಿಗೆ ಸಾಗರದಂತಿರುವವನೂ ಪರಮ ನಿರಾಕುಲನೂ ಪರಮ ವೀತರಾಗನೂ ಎಂಟು ಕರ್ಮ, ರಾಗಾದಿ ಭಾವಕರ್ಮ, ಶರೀರಾದಿ ನೋಕರ್ಮಗಳಿಂದ ಭಿನ್ನನೂ ಶುದ್ಧ ಚೈತನ್ಯ ಜ್ಯೋತಿರ್ಮಯನೂ ಪರಭಾವಗಳ ಅಕರ್ತೃವೂ ಮತ್ತು ಅಭೋಕ್ತೃವೂ ಸದಾ ತನ್ನ ಸ್ವಭಾವದಲ್ಲಿ ರಮಿಸುವ ಸ್ವಾನುಭೂತಿಮಾತ್ರನೂ ಆಗಿರುತ್ತಾನೆ. ಹೀಗೆ ತನ್ನಾತ್ಮನ ಶುದ್ಧ ಸ್ವಭಾವದ ಪ್ರತೀತಿಮಾಡಿಕೊಳ್ಳುವ ಸಾಧಕನು ಇದನ್ನೇ ಮನನಮಾಡಿಕೊಳ್ಳುತ್ತಿರುತ್ತಾನೆ.

'ತಾನು ಅಶುದ್ಧನಾಗಿದ್ದರೂ ಕೂಡ ತನ್ನನ್ನು ಕೆಸರಿಲ್ಲದ ನೀರಿನಂತೆ ಶುದ್ಧ' ಎಂದು ತಿಳಿದು ಆಗಾಗ ವಿಚಾರಿಸುವುದೇ ಭೇದವಿಜ್ಞಾನದ ಬಾಗಿಲಾಗಿದೆ. ಈ ವಿಧದ ಮನನ ಪ್ರತಾಪದಿಂದ ಜೀವನು ಪ್ರತಿಸಮಯದಲ್ಲಿ ವೃದ್ಧಿಹೊಂದುತ್ತಿರುವ ಅನಂತಗುಣ ವಿಶುದ್ಧತೆಯನ್ನು ಅಂತರ್ಮುಹೂರ್ತಪರ್ಯಂತರ ಪಡೆಯುತ್ತಾನೆ.

ಅಂತಹ ಪರಿಣಾಮಗಳ ಪ್ರಾಪ್ತಿಗೆ ಕರಣಲಬ್ಧಿಯೆಂದು ಹೇಳುತ್ತಾರೆ. ಆಗ ಅನಂತಾನುಬಂಧೀ ಕಷಾಯಗಳು ಮತ್ತು ದರ್ಶನ ಮೋಹನೀಯ ವಿಕಾರಗಳು ದೂರವಾಗುತ್ತವೆ. ಆಗ ಈ ಜೀವನು ಅವಿರತ ಸಮ್ಯಕ್ತ್ವಿಯಾಗುತ್ತಾನೆ. ಅದರ ಜೊತೆಯಲ್ಲಿ ಅಪ್ರತ್ಯಾಖ್ಯಾನ ವಿಕಾರವೂ ಕೂಡ ದೂರವಾಗುವುದರಿಂದ ದೇಶವಿರತಿ ಶ್ರಾವಕನಾಗುತ್ತಾನೆ. ಅನಂತರ ಪ್ರತ್ಯಾಖ್ಯಾನ ಕಷಾಯಗಳ ವಿಕಾರವೂ ದೂರವಾದೊಡನೆ ಅಪ್ರಮತ್ತವಿರತ ಸಾಧುವಾಗುತ್ತಾನೆ.

ನಾಲ್ಕನೆಯ ಅವಿರತ ಸಮ್ಯಕ್ತ್ವ ಗುಣಸ್ಥಾನದಲ್ಲಿ ಆತ್ಮಾನುಭವ ಪ್ರಾರಂಭವಾಗಿ ಅವನು ಬಿದಿಗೆಯ ಚಂದ್ರನೋಪಾದಿಯಲ್ಲಿ ಶೋಭಿಸುತ್ತಾನೆ. ಆ ಆತ್ಮಾನುಭವದ ಎಡಬಿಡದ ಅಭ್ಯಾಸದಿಂದ ಮೇಲೆ ಮೇಲಿನ ಗುಣಸ್ಥಾನ ಹತ್ತಲು ಯೋಗ್ಯನಾಗುತ್ತಾನೆ. ಗುಣಸ್ಥಾನಗಳನ್ನು ಏರಿದಂತೆಲ್ಲಾ ಆತ್ಮಾನುಭವದ ಪರಿಶುದ್ಧತೆ ಮತ್ತು ಸ್ಥಿರತೆ ಹೆಚ್ಚಾಗುತ್ತಾ ಹೋಗುತ್ತದೆ.

ಆತ್ಮಧ್ಯಾನಕ್ಕೆ ಧರ್ಮಧ್ಯಾನವೆಂದು ಹೇಳುತ್ತಾರೆ. ಅವನ ಕಷಾಯ ಮಲವು ದೂರವಾಗುವುದರಿಂದಲೇ ಶುಕ್ಲಧ್ಯಾನವುಂಟಾಗುತ್ತದೆ. ಇದರ ಪ್ರಭಾವದಿಂದ ನಾಲ್ಕು ಘಾತಿಕರ್ಮಗಳು ಕ್ಷಯವಾಗಿ ಆತ್ಮನು ಅರಹಂತದೇವನಾಗುತ್ತಾನೆ. ಬಾಕಿ ಉಳಿದ ನಾಲ್ಕು ಅಘಾತಿಕರ್ಮಗಳು ಕ್ಷಯವಾದಾಗ ಸಿದ್ಧಪದವಿಯನ್ನು ಪಡೆಯುತ್ತಾನೆ. ಇದೇ ಭೂತ, ಭವಿಷ್ಯತ್ ಮತ್ತು ವರ್ತಮಾನಗಳೆಂಬ ಮೂರುಕಾಲಗಳಲ್ಲಿ ಸಿದ್ಧನಾಗುವ ರಾಜಮಾರ್ಗವಾಗಿರುತ್ತದೆ.

ಯಾವ ಆತ್ಮನು ಯಥಾರ್ಥ ಆತ್ಮಾನುಭವವನ್ನು ಮಾಡಿಕೊಳ್ಳುವನೋ ಅವನು ಸಮ್ಯಗ್ದರ್ಶನ, ಸಮ್ಯಗ್ಜ್ಞಾನ ಮತ್ತು ಸಮ್ಯಕ್ಚಾರಿತ್ರಗಳನ್ನು ಏಕರೂಪವಾಗಿ ಹೊಂದುತ್ತಾನೆ. ಇವೇ ಮೋಕ್ಷಮಾರ್ಗದ ಸಾಧನವಾಗುತ್ತವೆ. ಈ ಮೋಕ್ಷಮಾರ್ಗವು ವರ್ತಮಾನದಲ್ಲಿಯೂ ಕೂಡ ಸಾಧಕನಿಗೆ ಆನಂದವನ್ನುಂಟುಮಾಡುವಂಥಾದ್ದಾಗಿದೆ. ಭವಿಷ್ಯದಲ್ಲಿ ಅನಂತ ಸುಖಕ್ಕೆ ಕಾರಣವಾಗುತ್ತದೆ. ಮುಮುಕ್ಷುವು ವ್ಯವಹಾರಧರ್ಮಗಳಾದ ಬಾಹ್ಯವಸ್ತುಗಳ ಅವಲಂಬನೆಯಿಂದ ನಿಶ್ಚಯಧರ್ಮದ ಅಥವಾ ಆತ್ಮಾನುಭವದ ಅಭ್ಯಾಸವನ್ನು ಮಾಡಿಕೊಳ್ಳುವುದು ಈ ಪರಮ ಗ್ರಂಥದ ಪರಮ ಕರ್ತವ್ಯವಾಗಿರುತ್ತದೆ.

ಸಮಯಸಾರಕಲಶದಲ್ಲಿ ಹೇಳಿರುತ್ತಾರೆ :

**ತ್ಯಕ್ತ್ವಾಽಶುದ್ಧಿವಿಧಾಯಿ ತತ್ಕಿಲ ಪರದ್ರವ್ಯಂ ಸಮಗ್ರಂ ಸ್ವಯಂ।**
**ಸ್ವದ್ರವ್ಯೇ ರತಿಮೇತಿ ಯಃ ಸ ನಿಯತಂ ಸರ್ವಾಪರಾಧಚ್ಯುತಃ॥**
**ಬಂಧಧ್ವಂಸಮುಪೇತ್ಯ ನಿತ್ಯಮುದಿತಃ ಸ್ವಜ್ಯೋತಿರಚ್ಛೋಚ್ಛಲ-**
**ಚ್ಚೈತನ್ಯಾಮೃತಪೂರಪೂರ್ಣಮಹಿಮಾ ಶುದ್ಧೋ ಭವನ್ಮುಚ್ಯತೇ**
**॥೧೨-೯॥**

**ಭಾವಾರ್ಥ :** ಅಶುದ್ಧತೆಯನ್ನುಂಟುಮಾಡುವ ಸಕಲ ಪರವಸ್ತುಗಳ ರಾಗವನ್ನು ತಾನು ತ್ಯಜಿಸಿ ಮತ್ತು ಎಲ್ಲಾ ಪರಭಾವಗಳಲ್ಲಿಯೂ ರತಿರೂಪ ಅಪರಾಧಗಳಿಂದ ನಿರ್ಮುಕ್ತನಾಗಿ, ತನ್ನ ಆತ್ಮೀಕ ದ್ರವ್ಯದಲ್ಲಿ ರತಿ, ಪ್ರೀತಿ, ಆಸಕ್ತಿ ಮತ್ತು ಏಕಾಗ್ರತೆಯನ್ನು ಪಡೆಯುವಾತನೇ ಕುಣಿಯುತ್ತಿರುವ ಆತ್ಮ ಪ್ರಕಾಶದಲ್ಲಿದ್ದು, ಕರ್ಮಬಂಧವನ್ನು ನಾಶಗೊಳಿಸಿ, ಚೈತನ್ಯರೂಪಿ ಅಮೃತ ದಿಂದ ಪರಿಪೂರ್ಣನೂ ಮತ್ತು ಪರಿಶುದ್ಧನೂ ಆಗಿ ಮೋಕ್ಷರೂಪ ಅಥವಾ ಸಿದ್ಧನಾಗುವನು.



## ಗ್ರಂಥಕರ್ತೃವಿನ ಅಂತಿಮ ಭಾವನೆ

**ಸಂಸಾರಹ ಭಯ-ಭೀಯಏಣ ಜೋಗಿಚಂದ-ಮುಣಿಏಣ।**
**ಅಪ್ಪಾ-ಸಂಬೋಹಣ ಕಯಾ ದೋಹಾ ಇಕ್ಕ-ಮಣೇಣ ॥೧೦೮॥**

**ಅನ್ವಯಾರ್ಥ :** ಸಂಸಾರಹ ಭಯ-ಭೀಯಏಣ–ಸಂಸಾರಪರಿಭ್ರಮ ಣೆಯಿಂದ ಭಯಭೀತನಾದ, ಜೋಗಿಚಂದ-ಮುಣಿಏಣ–ಯೋಗಿ ಚಂದ್ರಾ ಚಾರ್ಯ ಮುನಿಯು, ಅಪ್ಪಾ-ಸಂಬೋಹಣ–ಆತ್ಮನನ್ನು ಸಂಬೋಧಿಸಲು, ಇಕ್ಕ-ಮಣೇಣ–ಏಕಾಗ್ರಚಿತ್ತದಿಂದ, ದೋಹಾ ಕಯಾ–ಈ ಗಾಥೆಗಳ ರಚನೆ ಮಾಡಿರುತ್ತಾನೆ.

**ಭಾವಾರ್ಥ :** ಗ್ರಂಥಕರ್ತೃಗಳಾದ ಯೋಗಿಚಂದ್ರಾಚಾರ್ಯರು ತನ್ನ ಕಲ್ಯಾಣಕ್ಕಾಗಿ ಈ ಗಾಥೆಗಳನ್ನು ರಚಿಸಿರುತ್ತಾರೆ. "ನನಗೆ ಸಂಸಾರ ಪರಿ ಭ್ರಮಣತೆಯ ವಿಷಯವಾಗಿ ಬಹಳ ಭಯವಿರುತ್ತದೆ. ಸಂಸಾರದಲ್ಲಿ ಆತ್ಮ

ರುಗಳು ಅನೇಕ ಪ್ರಕಾರದ ಪ್ರಾಣಗಳನ್ನು ಧರಿಸಿ ಕಷ್ಟಗಳನ್ನು ಅನುಭವಿಸುತ್ತಾ ಪರಮ ನಿರಾಕುಲ ಸುಖದಿಂದ ವಂಚಿತರಾಗುತ್ತಿರುವರು" ಎಂದು ಹೇಳಿರುತ್ತಾರೆ.

ಜ್ಞಾನಾವರಣಾದಿ ಎಂಟು ಕರ್ಮಗಳ ಸಂಯೋಗವಿರುವವರೆಗೆ ಸಂಸಾರಾವಸ್ಥೆ ಇರುತ್ತದೆ. ಕರ್ಮಗಳ ಉದಯದ ಅಧೀನತೆಯಿಂದ ಅನಂತಜ್ಞಾನ, ಅನಂತದರ್ಶನ ಇವುಗಳು ಪ್ರಕಟವಾಗಲಾರವು ಮತ್ತು ಅನಂತವೀರ್ಯದ ಪ್ರಕಾಶ ಪ್ರಾದುರ್ಭವಿಸಲಾರದು. ಯಾಕೆಂದರೆ ಮಿಥ್ಯಾತ್ವವು ಗಾಢವಾಗಿರುವುದರಿಂದ ಪ್ರಾಣಿಯು ತನ್ನ ಆತ್ಮೀಕ ಅತೀಂದ್ರಿಯ ಸುಖವನ್ನು ಕಂಡುಹಿಡಿಯದೆ, ಇಂದ್ರಿಯ ಸುಖದ ಲೋಲುಪಿಯಾಗಿ ಇಷ್ಟವಸ್ತುಗಳ ಪ್ರಾಪ್ತಿಯ ತೃಷ್ಣೆಯಲ್ಲಿಯೇ ಸಿಲುಕಿಕೊಂಡು, ಅದಕ್ಕಾಗಿ ಮಾಯಾಚಾರವನ್ನೆಸಗುತ್ತಾನೆ. ಮಾತ್ರವಲ್ಲ ಅದರ ಪ್ರಾಪ್ತಿಗಾಗಿ ಬಾಧೆಯನ್ನುಂಟುಮಾಡಿಕೊಂಡು ಕ್ರೋಧೋದ್ದೀಪಿತನಾಗುತ್ತಿರುತ್ತಾನೆ.

ಮೋಹನೀಯ ಕರ್ಮದ ಉದಯದಿಂದ ನಾನಾವಿಧದ ಔಪಪಾದಿಕ ಭಾವಗಳಲ್ಲಿ ರಂಗಿತನಾಗುತ್ತಿರುತ್ತಾನೆ. ಇದರಿಂದ ನೂತನಕರ್ಮಗಳಿಗೆ ಬಲಿಯಾಗುತ್ತಾನೆ. ಎಷ್ಟರವರೆಗೆ ಘಾತಿಕರ್ಮಗಳ ಕ್ಷಯವಾಗುವುದಿಲ್ಲವೋ ಅಷ್ಟರವರೆಗೆ ಪರಮಾತ್ಮನಾಗಲಾರನು. ಆಯುಷ್ಯಕರ್ಮದ ಉದಯದಿಂದ ಸ್ಥೂಲ ಶರೀರದಲ್ಲಿ ಸಿಕ್ಕಿಕೊಂಡಿರುತ್ತಾನೆ. ನಾಮಕರ್ಮದ ಉದಯದಿಂದ ಶರೀರದ ರಚನೆ ಶುಭವಾಗಿಯೋ ಅಶುಭವಾಗಿಯೋ ಆಗಿರುತ್ತದೆ. ಗೋತ್ರಕರ್ಮದ ಉದಯದಿಂದ ನಿಂದನೀಯವೋ ಅಥವಾ ಆದರಣೀಯವೋ ಆದ ಕುಲದಲ್ಲಿ ಜನ್ಮತಾಳಿರುತ್ತಾನೆ. ವೇದನೀಯಕರ್ಮದ ಉದಯದಿಂದ ಸಾತಾಕಾರೀ ಅಥವಾ ಅಸಾತಾಕಾರೀ ಮೊದಲಾದ ಸಾಮಗ್ರಿಗಳ ನಿಮಿತ್ತಗಳೊದಗಿರುತ್ತವೆ. ನಾಲ್ಕು ಅಘಾತಿಕರ್ಮಗಳ ನಿಮಿತ್ತಗಳೆಂಬ ಬಾಹ್ಯಬಂಧನದಲ್ಲಿ ಬಂಧಿತನಾಗಿರುತ್ತಾನೆ.

ಈ ಸಂಸಾರೀ ಜೀವನು ನಾಲ್ಕುಗತಿಗಳಲ್ಲಿ ಸಿಲುಕಿ ದುಃಖಿತನಾಗುತ್ತಿರುತ್ತಾನೆ. ಯಾವ ಅಜ್ಞಾನೀ ಸಂಸಾರೀಜೀವನು ಇಂದ್ರಿಯಸಂಬಂಧವಾದ ಸುಖವನ್ನೇ ನಿಜವಾದ ಸುಖವೆಂದು ಭಾವಿಸುತ್ತಾನೋ ಅಂತಹ ಸುಖವನ್ನು

ಜ್ಞಾನಿಯು ದುಃಖವೆಂದೇ ಭಾವಿಸುತ್ತಾನೆ. ಎಷ್ಟರವರೆಗೆ ವಿಷಯಭೋಗ ಗಳನ್ನು ಭೋಗಿಸುವ ಆಕುಲತೆ ಇರುವುದಿಲ್ಲವೋ ಅಷ್ಟರವರೆಗೆ ವಿಷಯಭೋಗ ಗಳಲ್ಲಿ ಸಿಲುಕಲಾರನು. ಆಶೆಯುಂಟಾಗುವುದೇ ಒಂದು ವಿಧದ ದಾಹರೂಪ ರೋಗವಾಗಿರುತ್ತದೆ. ವಿಷಯಗಳನ್ನು ಭೋಗಿಸುವುದೇ ಈ ರೋಗದ ಶಮ ನದ ಮಾರ್ಗವಾಗದೆ ತೃಷ್ಣಾರೂಪರೋಗದ ವೃದ್ಧಿಗೆ ಉಪಾಯವಾಗಿದೆ. ಮಹಾನ್ ಮಹಾನ್ ಚಕ್ರವರ್ತಿಗಳು ಮೊದಲಾದ ರಾಜರುಗಳು ಈ ವಿಷಯ ಭೋಗಗಳಿಂದ ತೃಪ್ತರಾಗಿಲ್ಲ; ಇಂದ್ರಿಯ ಭೋಗಗಳ ಭೋಗದಿಂದ ಸಂತೃ ಪ್ತರಾಗಿಲ್ಲ. ಇಂದ್ರಿಯ ಭೋಗಗಳು ಪರಾಧೀನವಾಗಿಯೂ ಬಾಧಾಯುಕ್ತ ವಾಗಿಯೂ ನಾಶಶೀಲವಾಗಿಯೂ ಕರ್ಮಬಂಧಕ್ಕೆ ಕಾರಣವಾಗಿಯೂ ಮತ್ತು ಸಮಭಾವದ ಘಾತಕವಾಗಿಯೂ ಆಗಿರುತ್ತವೆ.

"ಸಂಸಾರವು ದುಃಖಮಯವಾಗಿದ್ದು ಇಂದ್ರಿಯ ಸುಖ ಬಹು ಅಲ್ಪ ವಾಗಿದ್ದರೂ ಕೂಡ ಈ ಸುಖದಿಂದ ಯಾರೂ ತೃಪ್ತರಾಗಿಲ್ಲ. ಆತ್ಮನು ಸ್ವಾಭಾವಿಕವಾಗಿ ಪರಮಾತ್ಮ ಸ್ವರೂಪನೂ ಜ್ಞಾನಾನಂದ ಸಾಗರನೂ ಪರಮ ನಿರಾಕುಲನೂ ಪರಮ ವೀತರಾಗನೂ ಆಗಿದ್ದರೂ ಕೂಡ ಎಂಟುಕರ್ಮಗಳ ಸಂಯೋಗದಿಂದ ದುಃಖಿಯೂ ದೀನನೂ ಮತ್ತು ತುಚ್ಛನೂ ಆಗಿರುತ್ತಾನೆ. ಆದರ ಸಂಗತಿಯಿಂದ ತನ್ನ ಸ್ವಭಾವವು ಕೆಟ್ಟುಹೋಗಿ ದುರ್ಗತಿಯನ್ನು, ಜನ್ಮ ಜರಾಮರಣ ಸಂಬಂಧ ಕಷ್ಟವನ್ನು ಹೊಂದಬೇಕಾಗುತ್ತದೆ" ಎಂದು ತಿಳಿದು ಅವುಗಳ ಸಂಯೋಗವನ್ನು (ಸಂಗತಿಯನ್ನು) ತ್ಯಜಿಸುವುದು ಯೋಗ್ಯವಾಗಿರು ತ್ತದೆ. ಈ ಎಲ್ಲಾ ಕರ್ಮಗಳ ಬಂಧಕ್ಕೆ ರಾಗದ್ವೇಷಗಳೇ ಕಾರಣಗಳು. ಆದುದರಿಂದ ರಾಗ, ದ್ವೇಷ ಮತ್ತು ಮೋಹಗಳು ಸಂಸಾರ ವೃಕ್ಷದ ಮೂಲ ಬೀಜಗಳಾಗಿವೆ.

ಇದರಿಂದಲೇ ಆಚಾರ್ಯವರ್ಯರು ಪ್ರಕಟಿಸಿರುವುದೇನೆಂದರೆ: "ನಾನು ಸಂಸಾರದ ದುಃಖದಿಂದ ಭಯಪಡುತ್ತಿರುವೆನು. ಅರ್ಥಾತ್: ರಾಗ, ದ್ವೇಷ ಮತ್ತು ಮೋಹಗಳ ವಿಕಾರದಿಂದ ಭಯಭೀತನಾಗಿರುತ್ತೇನೆ. ಇವು ಗಳ ಬಲೆಯಲ್ಲಿ ಸಿಲುಕಲು ಇಷ್ಟಪಡುವುದಿಲ್ಲ. ಹಾಗೆಯೇ ಹೊಸ ಕರ್ಮ ಗಳ ಸಂವರೆಮಾಡುವುದಕ್ಕಾಗಿಯೂ, ಪುರಾತನ ಕರ್ಮಗಳ ನಿರ್ಜರೆಮಾಡು ವುದಕ್ಕಾಗಿಯೂ, ನಾನು ನನ್ನಾತ್ಮನನ್ನು ವೀತರಾಗಭಾವದಲ್ಲಿಡಲು ಆತ್ಮನ

ಸಾರತತ್ವದ ಭಾವನೆಯನ್ನೇ ಭಾವಿಸುತ್ತಿರುತ್ತೇನೆ. ಈ ಆತ್ಮನು ನಿಶ್ಚಯ ನಯದಿಂದ ಸಂಸಾರಿಯಲ್ಲ. ಇವನಾದರೋ ಸ್ವಯಂ ಪರಮಶುದ್ಧ ಪರಮಾತ್ಮನಾಗಿರುತ್ತಾನೆ. ಇದರ ಅನುಭವವನ್ನು ಆಗಾಗ ಮಾಡಿಕೊಳ್ಳಬೇಕು; ಇದರಲ್ಲಿಯೇ ಕ್ರೀಡಿಸಬೇಕು. ಆತ್ಮಸಂಬಂಧವಾದ ಆನಂದಾಮೃತವನ್ನು ಆಸ್ವಾದಿಸಬೇಕು. ನಿರಾಕುಲ ಅತೀಂದ್ರಿಯ ಸುಖವನ್ನು ಭೋಗಿಸಬೇಕು. ಆತ್ಮದರ್ಶನಗೈಯ್ಯಬೇಕು. ಅಧ್ಯಾತ್ಮ ತತ್ವ ವಿವೇಚನೆಯೇ ಪರಮಹಿತ ಕಾರಿಯಾಗಿದೆ; ಆತ್ಮೀಕಭಾವನೆಯು ಹೇತುವಾಗಿರುತ್ತದೆ" ಎಂದು ಹೇಳಿದ್ದಾರೆ. ಈ ಪಾವನವಾದ ಗ್ರಂಥದಲ್ಲಿ ಆಚಾರ್ಯರು ಶುದ್ಧಾತ್ಮನ ಭಾವನೆಯನ್ನು ಭಾವಿಸಿ, ತನ್ನಾತ್ಮನ ಹಿತವನ್ನು ಮಾಡಿಕೊಂಡಿರುತ್ತಾರೆ.

ಈ ಗ್ರಂಥ ಕರ್ತೃವು ತನ್ನ ಉಪಕಾರಕ್ಕಾಗಿಯೇ ಈ ಪಾವನ ಗ್ರಂಥವನ್ನು ರಚಿಸಿದ್ದರೂ ಶಬ್ದಗಳಲ್ಲಿ ಭಾವನೆಗಳ ಸ್ಥಾಪನೆಮಾಡಿದ್ದರೂ ಮತ್ತು ಲಿಪಿಬದ್ಧಮಾಡಿದ್ದರೂ ಕೂಡ, ಪಾಠಕರಿಗೆ ಮಹದುಪಕಾರಮಾಡಿರುತ್ತಾರೆ. ಸಂಸಾರಬಂಧನದ ನಾಶಕ್ಕಾಗಿಯೂ, ಅರ್ಥಾತ್ : ಸಂಸಾರದ ಕಾರಣಗಳಾದ ಕರ್ಮಗಳ ಕರ್ಮಬಂಧದ ಕಾರಣಗಳ ಮತ್ತು ರಾಗ, ದ್ವೇಷ ಮತ್ತು ಮೋಹಭಾವಗಳ ನಾಶಕ್ಕಾಗಿಯೂ, ಮೋಕ್ಷಕ್ಕೆ ಕಾರಣಗಳಾದ ಸ್ವಾನುಭವದ ಲಾಭಕ್ಕಾಗಿಯೂ, ಈ ಗ್ರಂಥವನ್ನು ಓದಬೇಕು, ಮನನಮಾಡಬೇಕು.

ಪರಮಾತ್ಮ ತತ್ವಭಾವನೆ ಜಾಗೃತವಾಗಲಿ, ಆತ್ಮಾರಾಧನೆ ಇರಲಿ, ಸಮಭಾವನೆಯಲ್ಲಿಯೇ ಪ್ರವೃತ್ತಿ ಇರಲಿ, ಶಾಂತರಸದ ಪ್ರವಾಹ ಹರಿಯಲಿ, ಈ ಪ್ರವಾಹದಲ್ಲಿ ಮಗ್ನನಾಗಿರಲಿ, ಆನಂದಾಮೃತ ರಸದ ಪಾನಮಾಡುತ್ತಿರಲಿ, ಸಿದ್ಧಸುಖದ ಸದುದ್ದೇಶವೇ ಇರಲಿ, ಶಿವಾಲಯ (ಮೋಕ್ಷ) ದಲ್ಲಿ ಪ್ರವೇಶಿಸುವ ಭಾವನೆಯೇ ಉದ್ದೀಪಿತವಾಗಿರಲಿ.

ಈ ಭಾವನೆಯನ್ನೇ ಸಮಯಸಾರಕಲಶದಲ್ಲಿ ಅಮೃತಚಂದಾಚಾರ್ಯರು ಹೇಳಿರುತ್ತಾರೆ :

**ಪರಪರಿಣತಿಹೇತೋರ್ಮೋಹನಾಮ್ನೋಽನುಭಾವಾ-**
**ದವಿರತಮನುಭಾವ್ಯವ್ಯಾಪ್ತಿಕಲ್ಮಾಷಿತಾಯಾಃ ।**
**ಮಮ ಪರಮವಿಶುದ್ಧಿಃ ಶುದ್ಧಚಿನ್ಮಾತ್ರಮೂರ್ತೇ-**
**ರ್ಭವತು ಸಮಯಸಾರವ್ಯಾಖ್ಯಯೈವಾನುಭೂತೇಃ ॥ ೨ ॥**

ಭಾವಾರ್ಥ: ಆಚಾರ್ಯ ಶ್ರೀಯವರು ಹೇಳುತ್ತಾರೆ: ನಿಶ್ಚಯವಾಗಿ ನಾನು ಮಾತ್ರ ಶುದ್ಧಚೈತನ್ಯ ಮೂರ್ತಿಯನ್ನು ಧರಿಸಿದವನು. ಅದರೂ ಅನಾದಿಕಾಲದಿಂದ ನನ್ನ ಅನುಭೂತಿ ವಿಭಾವಪರಿಣಾಮಗಳ ಉತ್ಪತ್ತಿಗೆ ಕಾರಣಗಳಾದ ಮೋಹನೀಯಕರ್ಮಗಳ ಉದಯದ ಪ್ರಭಾವದಿಂದ ರಾಗ ದ್ವೇಷಗಳಿಂದ್ಯುಕ್ತನಾಗಿ ಸದಾ ಮಲಿನನಾಗುತ್ತಿರುವೆನು. ನಾನು ಈ ಸಮಯಸಾರಗ್ರಂಥದ ವ್ಯಾಖ್ಯಾನವನ್ನು ರಚಿಸಿದ್ದರಿಂದ ನನ್ನ ಅನುಭೂತಿಯು ಪರಮಶುದ್ಧವಾಗಲಿ, ವೀತರಾಗತೆಯುಂಟಾಗಲಿ, ಪರಮಶಾಂತಭಾವನೆಯು ಪ್ರಾಪ್ತವಾಗಲಿ, ಪರಮಸಮಭಾವದಲ್ಲಿ ತನ್ಮಯವಾಗಲಿ, ಸಂಸಾರಮಾರ್ಗದಿಂದ ಮೋಕ್ಷಮಾರ್ಗಿಯಾಗಲಿ ಎಂದು ಯಾಚಿಸುವೆನು.



ಪ್ರಣವಸ್ವರೂಪ ತೇ ನಮಃ। ರಣದೂರ ನಮೋ ನಮೋ ನಮೋಸ್ತು ಸ್ವಾಹಾ॥
ಗುಣಗುಣಿಯೋಗಾಯ ನಮೋ। ಮಣಿತ್ರಯ್ಯೈಕಾರ್ಥನೇ ಚಿದಂಬರಪುರುಷಾ॥
ಸಿದ್ಧಾಯ ನಮಃ ಸ್ವಾಹಾ। ಸಿದ್ಧಾಂತಾಮೃತಸಮುದ್ರಸಾರಾಯ ನಮಃ॥
ಸಿದ್ಧಪರಮೇಷ್ಠಿನೇ ನಮಃ। ಉದ್ಧೂತಮಲಾಯ ತೇ ನಿರಂಜನಸಿದ್ಧಾ॥

ಸಂಪೂರ್ಣಂ

